# ಸಂಸ್ಕೃತಕವಿಚರಿತೆ

## ದ್ವಿತೀಯ ಸಂಪುಟ

ಕ್ರಿ. ಶ. ೧ [illegible] ೧೭ ಶತಮಾನಗಳು

ಎಂ. ಎನ್ ಶ್ರೀನಿವಾಸ ಅಯ್ಯಂಗಾರ್

ಪ್ರಥಮ ಮುದ್ರಣ



ಬೆಂಗಳೂರು ಸಿಟಿ
ರಾಧಾ ಪವರ್ ಮುದ್ರಣಾಲಯದಲ್ಲಿ
ಮುದ್ರಿಸಲ್ಪಟ್ಟಿತು.
**1932**

**C. K. Venkata Ramaiya, Esqr, M.A , LL.B.,**
**Translator to Mysore Government.**

Bangalore,
3-8 1929.

Writes: -

I went through the book with keen interest........ which was indeed a long felt want in Kannada ........... I feel proud of you when I think that you have placed all the Kannadiga's under a deep obligation by writing the book in Kannada .......It is very intersting throughout which is by no means an easy achievement while handling certain subjects like the one you have chosen .......the Sanskrit Kavicharite is on the whole a great book and as such the reader expects the publication of the next Volume or Volumes so that he may consider to be the proud possessor of the same

ಸರಳಕವಿಸೂರಿ, ವಿದ್ಯಾಭೂಷಣ, ವಿದ್ಯಾವಾಚಸ್ಪತಿ, ಕಾವ್ಯವಿಶಾರದ
ಜ್ಞಾನಗುಣಾಕರ ಮಹಾವಿದ್ವಾನ್
**ಕೆ. ಆರ್. ಚಕ್ರವರ್ತಿಯವರು.**

ಬೆಂಗಳೂರು. ೧೫-೪-೧೯೨೯.

........ಪ್ರಾಚ್ಯಪ್ರತೀಚ್ಯ ಪಂಡಿತರ ವಾದ ವಿವಾದಗಳನ್ನು ವ್ಯಕ್ತಗೊಳಿಸಿ ಸ್ವಮತವನ್ನೂ ಸೂಚಿಸಿರುವರು. ಈ ದಿನದವರೆಗೆ ನಡೆದಿರುವ ಸಂಸ್ಕೃತ ಕವಿಗಳ ವಿಷಯದ ವಾದವಿವಾದಗಳೆಲ್ಲವನ್ನೂ ಈ ಗ್ರಂಥ ಒಂದರಲ್ಲಿಯೇ ಅನಾಯಾಸೇನ ನೋಡಬಹುದು.....................

Rajakaryaprasakta Rao Bahadur
M. Shama Rao, M.A., Retired Inspector General
of Education in Mysore.

Bangalore,
20th April 1929,

Writes:—

I have read in a general way Mr. M. N Srinivasa Iyengar's History of sanskrit literature This is the first work of its kind in the Kannada language and bears indications of considerable research and amazing industry on the part of the author. The work extends over a period of about ten centuries. The illustrative extracts given from the works of several authors throw some light on the prevailing ideas of the several periods. I hope the people of the Karnataka country will interest themselves in works of this kind and lend a helping hand to the lonely workers now in the field Mr. Keith has recently published an important and Scholarly History of Sanskrit Drama, under the auspices of the Oxford University. Similarly may we not hope that the uni versities in Southern India including Bombay which include Kannada among their languages will give encouragement to the author and enable him to continue his work. The Karnataka Sahitya Parishad will also, I hope will interest itself in the matter.

Arthashastra Visharada Vidyalankara,
Dr. R. Shama Sastry, B.A., Ph.D., M.R.A.S.,
Mysore.

Mysore,
7-3-1932

Writes: -

Dear Mr. Srinivasa Iyengar,

Pray accept my sincere thanks for the gift to me of a copy of your learned "Sanskrita Kavicharite" in Kanarese which I read with great profit and interest. I find that while in their respective histories of Sanskrit literature western scholars have confined their attention to the chronology of the poets coupled with a brief description of comparative merit of their literary works, you have taken great pains to collect in your work the traditional annecdotes about the lives of the poets, which, but for your timely attempt would have entirely disappeared. Your disagreement with western scholars in your account of the chronology of the poets necessitates a revision of Indian chronology as a whole. The sweet and elegant verses you have quoted from the poets in illustration of various points discussed afford a delightful and charming reading. Your treatment of the subject is admirably excellent. And I have no hesitation in saying that you have laid the Kannada reading public under a deep debt of gratitude to you. I wish you success in your laudable attempt at bringing the work to completion.

With renewed thanks

Prakatanavimarsha Vichakshana Rao Bahadur
R. Narasimhachar, M. A.,
Retired Director of Archaeology, in Mysore.

Malleswaram,
Bangalore,
12-4-1929.

Writes:—

I have glanced through the Samskrita Kavicharite or Lives of Sanskrit Poets, Volume 1, by Mr. M. N. Srinivasaiengar with much pleasure and interest The 1st volume which treats of the more prominent poets who flourished from the earliest times to the end of the 8th century, bears unmistakable testimony to the author's erudition and industry. The information is gathered from all the available sources and put together in a succinct and intelligable manner. The author deserves congratulations for the satisfactory performance of this self imposed task, involving much study and labour. Being the first work of its kind in Kannada it deserves every encouragement not only from the Mysore University and Education Department, but also from the general public of the Karnataka country.

ಮೈಸೂರು.
ತಾ|| ೧೨-೨ ೨೯

ಶ್ರೀಮದಭಿನವರಙ್ಗನಾಥ ಬ್ರಹ್ಮತನ್ತ್ರ ಪರಕಾಲಸ್ವಾಮಿಭಿರನುಗೃಹೀತಮ್:-- ಯಾದವಗಿರ್ಯಭಿಜನೇನ ಶ್ರೀನಿವಾಸಯ್ಯಂಗಾರ್ಯೇಣ ವಿರಚಿತಸ್ಯ ಸಂಸ್ಕೃತ ಕವಿ ಚರಿತಸ್ಯ ಪ್ರಥಮ ಸಂಪುಟೀಂ ಕಾಂಶ್ಚಿದ್ವಿಷಯಾ ನವಲೋಕಯಾಮ. ಅನೇನ ಚಿರಾದ್ಬಹೋಃ ಸಂಸ್ಕೃತ ಪ್ರಬನ್ಧಾನ್ ಅನ್ಯಾಂಶ್ಚ ಪಾಶ್ಚಾತ್ಯಾನಾಂ ಭಾರತೀಯಾನಾಂ ಚ ಗ್ರನ್ಥಾನ್ ಸಪಿಮರ್ಶಮವಲೋಕ್ಯತತ್ತತ್ಪ್ರಬನ್ಧ್ಯಣಾಮಾಶಯಾ ನನೂದ್ಯ ಸ್ವಾಭಿಪ್ರಾಯಃ ಪ್ರಕಾಶಿತಃ. ಸಂಸ್ಕೃತಗ್ರಂಥ ಪಿಷಯೈರ್ಜಟಿಲೋಯಂ ಪ್ರಬಂಧಃ ಅವಲೋಕಯಿತೄಣ್ ಆಂಗ್ಲಭಾಷಾನಭಿಜ್ಞಾನಪಿ ಸಂಸ್ಕೃತ ಕವಿ ಚರಿತ ಜಿಜ್ಞಾಸೂನ್ ಉಪಕರೋತೀತಿ ನಾನನ್ತ್ವಂ ವಯಂ ವಿಶ್ವಸಿಮಃ ||

ಶ್ರೀಮನ್ಮಹಾರಾಜ ಸಂಸ್ಕೃತಪಾಠಶಾಲಾ ಪ್ರಧಾನೋಪಾಧ್ಯಾಯಃ ಮಹಾಮಹೋಪಾಧ್ಯಾಯಃ ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯಃ —

ಮೈಸೂರು
ತಾ|| ೧೧ ೨-೨೯

ಶ್ರೀಮತಾ ಎಂ. ಎಸ್. ಶ್ರೀನಿವಾಸಯ್ಯಂಗಾರ್ಯವರ್ಯೇಣ ವಿರಚಿತಃ ಸಂಸ್ಕೃತಕವಿಚರಿತನಾಮಕಃ ಪ್ರಬನ್ಧಃ ಸಮ್ಯಗಾಮೂಲಾಗ್ರಂಸಾದರಮವಲೋಕಿತಃ । ಅಸ್ಮಿಂಶ್ಚ ಪ್ರಬನ್ಧೇ ಬಹೋಃ ಕಾಲಾತ್ ಬಹುಭಿಶ್ಚರ್ಚಿತಾಃ ಬಹವೋವಿಷಯಾಃ ಸಂಗೃಹೀತಾಸ್ಸನ್ತಿ । ಪ್ರತಿವಿಷಯ ಮತ್ರ ನಿರೂಪಿತಾ ಅಂಶಾಃ ಸಿದ್ಧಾನ್ತಾ........ವಿಮರ್ಶಕ ಪ್ರವರಾಣಾಂಬಹುನಾ ಪ್ರಕಾರೇಣ ಸಮುಪಕುರ್ಯುರಿತಿ ಸುದೃಢಂ ಪ್ರತೀಮಃ. ಅಪಿಚ ಆಂಗ್ಲೇಯಭಾಷಾ ಪರಿಚಯ ವಿಧುರಾಣಾಂ ಸಂಸ್ಕೃತ ಪಣ್ಡಿತಾನಾಂ ಕಾರ್ಣಾಟ ಪಂಡಿತಾನಾಂಚ ಅಶ್ರುತಚರಾಃ ಖಲ್ವಿಮೇವಿಷಯಾಃ ಪ್ರಜ್ಞಾವಿಸೇಕಂ ವಿಮರ್ಶಕ ಪ್ರಕ್ರಿಯಾಂಚ ಶಶ್ವತ್ ಸಮುದಂ ಚಯೇಯುರಿತ್ಯುಕ್ತಿಃ ನಖಲು ಭವತ್ಯತಿಶಯೋಕ್ತಿಃ ||

ಏತಾದೃಶಾಃ ಪ್ರಬನ್ಧಾಃ ಸಂಜಿಘೃಕ್ಷೂಣಾ ಮಾಸ್ಥಯಾ ಅವಸರೇಣಚ ಮಹತ್ತ್ವೇವಭಪಿತವ್ಯಂ । ಏತಾದೃಶ ಗುಣ ಸಂಪತ್ತಿ ಮತಃ ಏತಾದೃಶ ಪ್ರಬನ್ಧ ಕರ್ತುರ್ವಿಷಯೇ ಪ್ರಬಂಧ ಮಿಮಮುಪಯುಂಜಾನಾನಾಂ ವಿದುಷಾಂ ವಿದ್ಯಾರ್ಥಿನಾಂ ಚೋಪಕಾರ ಸ್ಮೃತಿಃ ಮಹತೀವಿದ್ಯೇತ ಇತಿಭೃಶಂ ವಿಶ್ವಸಿಮಃ ||

ಅಸ್ಮಿಂಶ್ಚ ಪ್ರಬನ್ಧೇ ವಾಕ್ಯಶೈಲೀ ರಚನಾ ಶೈಲೀಂಚ ಸುಶೋಭನೇತಿನಬಹ ವಕ್ತವ್ಯಂ ಅತಿರೋಹಿತೈವ ಪಾಠಕಾನಾಮಿತಿ । ಏವಮೇವ ಪ್ರಯತ್ನೋಯಂ ಸಮಗ್ರಸಫಲಶ್ಚ ಭೂಯಾದಿತ್ಯಾಶಾಸ್ಮಹೆ ಸನ್ಮಂಗಳಾನಿಭೂಯಾಂಸೀತಿ ||

ಶ್ರೀಃ

# ಸಂಸ್ಕೃತಕವಿಚರಿತೆ

(ಎರಡನೆಯ ಭಾಗ)



## ಒಂಭತ್ತನೆಯ ಶತಮಾನ

ಮುಗ್ಧಸ್ಮೇರರುಚಿವಿಲಸತ್
ಮುಖಜಲಜನ್ಯಸ್ತಮುರಲಿಕಾಸುಷಿರಂ ।
ಅಂಬುದರುಚಿ ಕಿಮಪಿ ತೇಜೋ
ಮುನಿಜನಹೃದಯಂಗಮಂ ಮುಹುಃ ಸ್ತೌಮಿ ॥



### ಉದ್ಭಟ

ಇವನಿಗೆ "ಭಟ್ಟೋದ್ಭಟ, ಉದ್ಭಟಾಚಾರ್ಯ" ಎಂಬ ಹೆಸರುಗಳೂ ಇದ್ದುದಾಗಿ ಗ್ರಂಥಾಂತರಗಳಿಂದ ತಿಳಿಯಬರುತ್ತದೆ.[1] ಇವನು ಬ್ರಾಹ್ಮಣನು. ಕಾಶ್ಮೀರದವನು. ಕ್ರಿ. ಶ. ೭೭೯ - ೮೧೩ ರ ವರೆಗೆ ಕಾಶ್ಮೀರದಲ್ಲಾಳಿದ ಜಯಾಪೀಡರಾಜನ ಆಸ್ಥಾನಪಂಡಿತನಾಗಿದ್ದನು.[2] ಆದುದರಿಂದ ಇವನು ಕ್ರಿ. ಶ. ೮ನೆಯ ಶತಮಾನದ ಉತ್ತರಾರ್ಧ ಅಥವಾ ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದವನೆಂದು ಹೇಳಬೇಕಾಗುವುದು. ಇವನು "**ಕಾವ್ಯಾಲಂಕಾರಸಂಗ್ರಹ**" ವೆಂಬ ಲಕ್ಷಣ ಗ್ರಂಥವನ್ನು ಬರೆದಿರುವನು. ಇದರಲ್ಲಿ ಆರು ಸರ್ಗಗಳಿರುವುವು. ಇದಕ್ಕೆ ಪ್ರತಿಹಾರೇಂದುರಾಜನು 'ಕಾವ್ಯಾಲಂಕಾರಸಾರಲಘುವೃತ್ತಿ' ಎಂಬ ಟೀಕೆಯನ್ನು ಬರೆದಿರುವನು. ಉದ್ಭಟನು ಕಾವ್ಯಾಲಂಕಾರಸಂಗ್ರಹವಲ್ಲದೆ 'ಕುಮಾರಸಂಭವ' ವೆಂಬ ಕಾವ್ಯವನ್ನೂ ಭಾಮಹನ ಅಲಂಕಾರಗ್ರಂಥಕ್ಕೆ ವಿವರಣೆಯನ್ನೂ ಬರೆದಿರುವುದಾಗಿ —

[1] ಉದ್ಭಟನ ಕಾವ್ಯಾಲಂಕಾರಸಂಗ್ರಹಪ್ರಸ್ತಾವನೆ.
[2] ರಾಜತರಂಗಿಣಿ IV 495.

"ಅನೇನ ಗ್ರಂಥಕೃತಾಸ್ವೋಪರಚಿತಕುಮಾರಸಂಭವೈಕದೇಶೋಽತ್ರ ಉದಾಹರಣತ್ವೇನೋಪನ್ಯಸ್ತಃ" ಎಂದೂ- "ವಿಶೇಷೋಕ್ತಿಲಕ್ಷಣೇ ಚ ಭಾಮಹವಿವರಣೇ ಭಟ್ಟೋದ್ಭಟೇನ ಏಕದೇಶಶಬ್ದ ಏವಂ ವ್ಯಾಖ್ಯಾತೋ ಯಥೇಹಾಸ್ಮಾಭಿರ್ನಿರೂಪಿತಃ" ಎಂದೂ ಲಘುವೃತ್ತಿಯಲ್ಲಿರುವುದರಿಂದ ವ್ಯಕ್ತವಾಗುವುದು.

ಉದ್ಭಟನು ಬರೆದುದಾದ 'ಕುಮಾರಸಂಭವ'ವೆಂಬ ಕಾವ್ಯದಿಂದ ಅನೇಕ ಲಾಕ್ಷಣಿಕರು ಶ್ಲೋಕಗಳನ್ನುದಾಹರಿಸಿಕೊಂಡಿರುವುದಾಗಿ ಪ್ರತಿಹಾರೇಂದುರಾಜನು ಹೇಳಿರುವನು. ಆದರೆ ಇವನು ಬರೆದಿರುವ ಕುಮಾರಸಂಭವ ಕಾವ್ಯವಾಗಲಿ, ಭಾಮಹವಿವರಣವೆಂಬ ಗ್ರಂಥವಾಗಲಿ ಉಪಲಬ್ಧವಿರುವುದಿಲ್ಲ.



## ರುದ್ರಟ

ಇವನು ಕಾಶ್ಮೀರದವನು ¹ ಭಟ್ಟವಾಮುಕನ ಮಗನು. ಇವನಿಗೆ ಶತಾನಂದಾಪರ ನಾಮವಿತ್ತೆಂಬುದು—

ಶತಾನಂದಾಪರಾಖ್ಯೇನ ಭಟ್ಟವಾಮುಕಸೂನುನಾ |
ಸಾಧಿತಂ ರುದ್ರಟೇನೇದಂ ಸಮಾಜಾಃ ಧೀಮತಾಂ ಹಿತಂ ||

ಎಂಬ ಶ್ಲೋಕದಿಂದ ವ್ಯಕ್ತವಾಗುತ್ತದೆ. ಇವನು ಕ್ರಿ. ಶ. ಒಂಭತ್ತನೆಯ ಶತಮಾನದವನು. ಇವನು "ಕಾವ್ಯಾಲಂಕಾರ"ವೆಂಬ ಲಕ್ಷಣ ಗ್ರಂಥವನ್ನು ಬರೆದಿರುವನು. ಇದಕ್ಕೆ ನೇಮಿಸಾಧು ಎಂಬವನು "ಕಾವ್ಯಾಲಂಕಾರಟಿಪ್ಪಣಿ" ಎಂಬ ಟೀಕೆಯನ್ನು ಬರೆದಿರುವುದಾಗಿ—

ಪೂರ್ವಮಹಾಮತಿವಿರಚಿತವೃತ್ತ್ಯನುಸಾರೇಣ ಕಿಮಪಿ ರಚಯಾಮಿ |
ಸಂಕ್ಷಿಪ್ತತರಂ ರುದ್ರಟಕಾವ್ಯಾಲಂಕಾರಟಿಪ್ಪಣಕಂ ||

Macdonell's History of sanskrit Literature P. 434

೧ ಕೆಲವರು ಸಮಾಜಾ ಎಂಬುದನ್ನು ಸಾಮಾಜಾ ಎಂದು ಹೇಳಿ ಸಾಮಾಜಿಗವರ್ಗವೆಂದು ಹೇಳುವರು. ಹೀಗೆ ಹೇಳುವುದು ಅನನ್ವಯವೆನಿಸುವುದು. ಹಾಗೆ ಹೇಳುವುದಕ್ಕಿಂತಲೂ 'ಸಮಂ ಅನಕ್ತೀತಿ ಸಮಾಜಾ: ತೇನ ಸಮಾಜಾ. ಅಜಗತಾವಿತ್ಯಸ್ಮಾತ್ ಧಾತೋಃ ಕ್ವಿಪ್ ಪ್ರತ್ಯಯಃ' ಎಂದು ಹೇಳುವುದಾದರೆ ಸಮಂಜಸವಾಗುವದು. ಸಮಾಜಾ ಎಂದರೆ ಇಲ್ಲಿ ಋಜು ಮಾರ್ಗಗಾಮಿಗಳಾದ ಪ್ರಾಚೀನಪ್ರಸಿದ್ಧ ಆಲಂಕಾರಿಕರೆಂದರ್ಥ.

ಎಂಬುದರಿಂದ ಸ್ಪಷ್ಟಪಡುತ್ತದೆ.[೧] ಈ ಟೀಕೆಯು ಕ್ರಿ. ಶ. ೧೦೬೯ರಲ್ಲಿ ಬರೆಯಲ್ಪಟ್ಟುದಾಗಿ ತಿಳಿಯಬರುತ್ತದೆ. ಕಾವ್ಯಾಲಂಕಾರಕ್ಕೆ ನೇಮಿಸಾಧುವಲ್ಲದೆ ವಲ್ಲಭದೇವನೆಂಬುವನೂ [೨] ಆಶಾಧರನೆಂಬುವನೂ [೩] ವ್ಯಾಖ್ಯಾನವನ್ನು ಬರೆದಿರುವರು. ಮಹಾಕವಿಗಳಾದ ಭೋಜನೂ ಮತ್ತು ಕ್ರಿ. ಶ. ಹತ್ತನೆಯ ಶತಮಾನದ ಪೂರ್ವಾರ್ಧದವನಾದ ಪ್ರತಿಹಾರೇಂದು ರಾಜನೂ ರುದ್ರಟನನ್ನು ಉದಾಹರಿಸಿಕೊಂಡಿರುವರು. ಕಾವ್ಯಾಲಂಕಾರ ಸರಣಿಯು ಕಾವ್ಯಾದರ್ಶವನ್ನು ಹೋಲುವದಾಗಿ ಹದಿನಾರು ಅಧ್ಯಾಯಗಳಾಗಿ ವಿಭಾಗಿಸಲ್ಪಟ್ಟು ಆರ್ಯಾವೃತ್ತದಲ್ಲಿ ಬರೆಯಲ್ಪಟ್ಟಿರುವುದು. ಶೈಲಿಯು ಸರಳವಾಗಿದ್ದು ಶ್ಲೋಕಗಳು ಮನೋರಂಜಕವಾಗಿರುವುವು. [೪] ಶೃಂಗಾರತಿಲಕಕಾರನಾದ ರುದ್ರಭಟ್ಟನನ್ನು ರುದ್ರಟನೆಂದು ಕೆಲವರು ತರ್ಕಿಸುವರು. ಈ ವಿಚಾರದಲ್ಲಿ "ಅನ್ಯೋ ಗ್ರಂಥಸ್ತು ರುದ್ರಟ ಕೃತೋ ನ ಪ್ರಾಪ್ಯತೆ. ಶೃಂಗಾರತಿಲಕ ಕರ್ತಾತು ರುದ್ರಭಟ್ಟಃ ನ ರುದ್ರಟಃ. ರುದ್ರಟಸ್ಯ ವಿಶೇಷ ವರ್ಣನಂತು ಡಾಕ್ಟರು ಪೀಟರ್ಸನಸ್ಯ ಪ್ರಥಮ ರಿಪೋರ್ಟಪುಸ್ತಕೇ ದೃಷ್ಟವ್ಯಂ"[೫] ಎಂದು ಹೇಳಿರುವುದರಿಂದ ರುದ್ರಟನೂ ಶೃಂಗಾರತಿಲಕಕಾರನೂ ಪರಸ್ಪರ ಭಿನ್ನರೆಂಬುದು ಸ್ಪಷ್ಟಪಡುತ್ತದೆ. ಯಾವುದೋ ವಿಪತ್ತಿಗೊಳಪಟ್ಟು ತನ್ನನಾಮಾಕ್ಷರಗಳಲ್ಲಿನ ಭಕಾರ ಒಂದನ್ನು ಸಾವಿರ ಹೊನ್ನಿಗೆ ಈಡುಮಾಡಿ ರುದ್ರಟನಾದ ಮತ್ತೊಬ್ಬ ರುದ್ರಭಟ್ಟನು ಅತ್ರಿಗೋತ್ರದ ಬ್ರಾಹ್ಮಣನು. ಕನ್ನಡಕವಿ.

ಎಡರೊಳ್ ನಿಜನಾಮಾಕ್ಷರ
ವಿಡೆಸಾಸಿರಪೊನ್ಗೆ ಕೊಟ್ಟು ಬಿಡಿಪನಿಕುದಿನಂ
ಪಡೆದಂ ರುದ್ರಟನೆಂಬೀ
ಪಡೆಮಾತಂ ರುದ್ರಭಟ್ಟನುರ್ವೀಜನದಿಂ [೬]

ಇವನಿಗೂ ಕಾವ್ಯಾಲಂಕಾರವನ್ನು ಬರೆದ ರುದ್ರಟನಿಗೂ ಯಾವ ಸಂಬಂಧವೂ ಇರದು. ಪ್ರಸಿದ್ಧರಾದ ಮಮ್ಮಟ, ಕಯ್ಯಟ, ಉವ್ವಟ, ಉದ್ಭಟ, ಭಲ್ಲಟರೇ ಮೊದಲಾದವರ ಹೆಸರಿನಂತೆ ರುದ್ರಟನ ಹೆಸರೆಂದು ಪುನಃ ಒತ್ತಿಹೇಳಬೇಕಾದುದಿಲ್ಲ.

---

೧ Sanskrit Kavicharitre of T. G. Kale P. 56

೨ ಸುಭಾಷಿತಾವಳಿಯನ್ನು ಬರೆದ ವಲ್ಲಭದೇವನು ಇವನಲ್ಲ.

೩ ಇವನು ಕವಲಯಾನಂದ ವ್ಯಾಖ್ಯಾನಕಾರನಲ್ಲ.

೪ Classical history of Sanskrit Literature P. 162

೫ Journal B. B. R. A. S. Vol XVI. No. XLI P. 14-20.

೬ ಶಾಸನ ಶಕ ೧೧೫೧ Journal B. B. R. A. S. Vol. X No. 29 Ins, VII P. 260

## ಮುಕುಳ

ಇವನು ಕಾಶ್ಮೀರದವನು, ಭಟ್ಟಕಲ್ಲಟನ ಮಗನು. ಇವನು ಕ್ರಿ. ಶ. ೮೫೫—೮೮೪ರಲ್ಲಿ ಕಾಶ್ಮೀರದಲ್ಲಾಳಿದ ಅವಂತಿವರ್ಮನ ಕಾಲದಲ್ಲಿದ್ದುದಾಗಿ ಕಲ್ಹಣನ ರಾಜತರಂಗಿಣಿಯಲ್ಲಿ (V 66) ಹೇಳಲ್ಪಟ್ಟಿದೆ. ಇದರಿಂದ ಇವನು ಕ್ರಿ. ಶ. ೯ನೆಯ ಶತಮಾನದವನೆಂದು ಹೇಳಬೇಕಾಗುವುದು. ಇವನು "**ಅಭಿದಾವೃತ್ತಿ ಮಾತೃಕಾ**" ಎಂಬ ಲಕ್ಷಣಗ್ರಂಥವನ್ನು ಬರೆದಿರುವನು.



## ಭಲ್ಲಟ

ಇವನು ಕಾಶ್ಮೀರದವನು. ಕ್ರಿ. ಶ. ೧೦ನೆಯ ಶತಮಾನದವನಾದ ಅಭಿನವಗುಪ್ತನು ತನ್ನ 'ಲೋಚನ' ಗ್ರಂಥದಲ್ಲಿಯೂ 'ಧ್ವನ್ಯಾಲೋಕವ್ಯಾಖ್ಯಾನ'ದಲ್ಲಿಯೂ ಇವನ ಶತಕದ ಶ್ಲೋಕಗಳನ್ನು ಉದಾಹರಿಸಿಕೊಂಡಿರುವುದರಿಂದ ಈ ಕವಿಯು ಅಭಿನವಗುಪ್ತನಿಗಿಂತ ಪ್ರಾಚೀನನೆಂದೂ ಕ್ರಿ. ಶ. ೯ನೆಯ ಶತಮಾನದವನೆಂದೂ ಸ್ಪಷ್ಟವಾಗುವುದು. ಇವನದಾಗಿ "**ಭಲ್ಲಟಶತಕ**" ವೆಂಬ ಗ್ರಂಥವು ಪ್ರಕೃತ ದೊರೆತಿರುವುದು. ಆದರೆ ಭಲ್ಲಟಶತಕಾಂತ್ಯದಲ್ಲಿ "ಇತಿ ರತ್ನತ್ರಯೀ ಭಲ್ಲಟಶತಕಂ ಸಮಾಪ್ತಂ" ಎಂದಿರುವುದರಿಂದ ರತ್ನತ್ರಯಗಳಲ್ಲಿ ಭಲ್ಲಟಶತಕವೆಂಬುದು ಹೊರತು ಉಳಿದ ಎರಡು ಗ್ರಂಥಗಳಿರಬೇಕೆಂದು ನಮಗೆ ತೋರುವುದು. ಭಲ್ಲಟಶತಕದ ಶ್ಲೋಕಗಳು ಮಮ್ಮಟನ ಕಾವ್ಯಪ್ರಕಾಶದಲ್ಲಿಯೂ ವಲ್ಲಭದೇವನ ಸುಭಾಷಿತಾವಳಿಯಲ್ಲಿಯೂ ಕ್ಷೇಮೇಂದ್ರನ ಗ್ರಂಥಗಳಲ್ಲಿಯೂ ಹೇರಳವಾಗಿ ದೊರೆಯುವುವು. ಈ ಶತಕದ ಪ್ರಾರಂಭ ಶ್ಲೋಕವಾದ.—

> ಯುಷ್ಮಾಕಮಂಬರಮಣೇಃ ಪ್ರಥಮೇ ಮಯೂಖಾ
> ಸ್ತೇ ಮಂಗಲಂ ವಿದಧತೂದಯರಾಗಭಾಜಃ ।
> ಕುರ್ವಂತಿ ಯೇ ದಿವಸಜನ್ಮಮಹೋತ್ಸವೇಷು
> ಸಿಂದೂರಪಾಟಲಮುಖೀರಿವ ದಿಕ್ಪುರಂಧ್ರೀಃ ॥

ಎಂಬುದು ಸುಭಾಷಿತಾವಳಿಯಲ್ಲಿ 'ಭಾಗವತಾಮೃತದತ್ತ'ನ ಹೆಸರಿನಲ್ಲಿ ಬರೆಯಲ್ಪಟ್ಟಿರುವುದು. ‡ ಇದಲ್ಲದೆ ಅಲ್ಲಲ್ಲಿ ಪಾಠಾಂತರಗಳೂ ಇರುವುವಾಗಿ ತೋರುತ್ತದೆ. ಭಲ್ಲಟಶತಕದ ೫ನೆಯ ಶ್ಲೋಕದಲ್ಲಿ 'ನಿಶಿದೀಪಿಕಾ' ಎಂದಿರುವುದು. ಸುಭಾಷಿತಾ

History of Sanskrit Poetics P. 76.

‡ ವಲ್ಲಭದೇವನ ಸುಭಾಷಿತಾವಳಿ ಪು ೧೨ ಶ್ಲೋ ೭೩

ವಳಿಯಲ್ಲಿ 'ನಿಶಿದೀಪಕಃ' ಎಂದಿದೆ. ಹೀಗೆ ಇನ್ನೂ ದೊರೆಯುವುವು. ಭಲ್ಲಟಶತಕದ ಕೊನೆಯ ಶ್ಲೋಕವಾದ,

ಅಯಂ ವಾರಾಮೇಕೋ ನಿಲಯ ಇತಿ ರತ್ನಾಕರ ಇತಿ
ಶ್ರಿತೋಽಸ್ಮಾಭಿಸ್ತೃಷ್ಣಾತರಲಿತ ಮನೋಭಿರ್ಜಲನಿಧಿಃ |
ಕ ಏವಂ ಜಾನೀತೇ ನಿಜಕರಪುಟೀ ಕೋಟರಗತಂ
ಕ್ಷಣಾದೇವಂ ತಾಮ್ಯತ್ತಿಮಿಮಕರಮಾಪಾಸ್ಯತಿ ಮುನಿಃ ||

ಎಂಬುದು ಶಾರ್ಙ್ಧರಪದ್ಧತಿಯಲ್ಲಿ 'ಮಾಲವರುದ್ರ'ನೆಂಬುವನ ಹೆಸರಿನಲ್ಲಿ ಹೇಳಲ್ಪಟ್ಟಿದೆ. § ಅನೇಕ ಲಾಕ್ಷಣಿಕರು ಇವನ ಶತಕದ ಶ್ಲೋಕಗಳನ್ನು ಉದಾಹರಿಸಿಕೊಂಡಿರುವುದು ಈ ಶತಕದ ಪ್ರಾಶಸ್ತ್ಯವನ್ನು ತೋರಿಸುತ್ತದೆ. ಈ ಶತಕವು ವಿವಿಧ ನೀತಿಗಳನ್ನು ತಿಳಿಸುವುದಾಗಿಯೂ ಪ್ರಾಪಂಚಿಕ ಜ್ಞಾನದಾಯಕವಾದುದಾಗಿಯೂ ಸುಲಭಶೈಲಿಯುಳ್ಳದ್ದಾಗಿಯೂ ಇರುವುದು. ಉದಾಹರಣೆಗಾಗಿ ಕೆಲವು ಶ್ಲೋಕಗಳು.--

(೧) ಅತುಳೈಶ್ವರ್ಯಭೋಗಸಂಪನ್ನನಾಗಿ ಬಾಹ್ಯಾಡಂಬರನಾಮಶೀಲನಾಗಿ ಯಾರಿಗೂ ಯಾವ ವಿಧದಲ್ಲಿಯೂ ಉಪಕಾರಿಯಾಗದೆ ಸ್ವಾರ್ಥಪರನಾಗಿರುವವನ ಬಳಿಗೆ ಬಂದ ಆಶ್ರಿತನೊಬ್ಬನು ನಿರಾಶನಾಗಿ ಅನ್ಯಾಪದೇಶದಿಂದ ಹೇಳುವಿಕೆ—

ಗ್ರಾವಾಣೋ ಮಣಯೋ ಹರಿರ್ಜಲಚರೋ ಲಕ್ಷ್ಮೀಃ ಪಯೋಮಾನುಷೀ
ಮುಕ್ತೌಘಾಃ ಸಿಕತಾಃ ಪ್ರವಾಳಲತಿಕಾ ಶೈವಾಲಮಂಭಃ ಸುಧಾ |
ತೀರೇ ಕಲ್ಪಮಹೀರುಹಾಃ ಕಿಮಪರಂ ನಾಮ್ನಾಪಿ ರತ್ನಾಕರೋ
ದೂರೇ ಕರ್ಣರಸಾಯನಂ ನಿಕಟತಸ್ತೃಷ್ಣಾಪಿ ನೋ ಶಾಮ್ಯತಿ || ೫೦ ||

ಎಲೈ ಸಮುದ್ರನೇ! ನಿನ್ನಲ್ಲಿರುವ ಕಲ್ಲುಗಳೇ ಅಮೂಲ್ಯರತ್ನಗಳು, ಮಹಾವಿಷ್ಣುವೇ ಜಲಚರನು, ಸೌಭಾಗ್ಯದಾಯಿನಿಯಾದ ಲಕ್ಷ್ಮಿಯೇ ನಿನ್ನ ಮಗಳು, ಮರಳುರಾಶಿಗಳೇ ಮುತ್ತುಗಳು, ಪಾಚಿಯೇ ಹವಳದ ಬಳ್ಳಿಗಳು, ನೀರೇ ಅಮೃತವು, ದಡದಲ್ಲಿ ಎಲ್ಲೆಲ್ಲಿಯೂ ಕಲ್ಪವೃಕ್ಷಗಳೇ! ಹೆಚ್ಚೇಕೆ? ನಿನ್ನಹೆಸರು ಕೂಡಾ ರತ್ನಾಕರನೆಂದೇ ಹೇಳುವುದಾದರೂ ನಿನ್ನ ವಿಚಾರವು ಕೇವಲ ಕೇಳುವುದಕ್ಕೆ ಆನಂದವೇ ಹೊರ್ತು ದಾಹಗೊಂಡು ನಿನ್ನ ಬಳಿಗೆ ಬಂದವನ ನೀರಡಿಕೆಯನ್ನು ಅಡಗಿಸುವ ಯೋಗ್ಯತೆಯೂ ನಿನ್ನಲ್ಲಿಲ್ಲ. (ಇಂತಹ ನಿನಗೆ ಇಷ್ಟು ಆಡಂಬರವೇಕೆ?)

§ ಶಾರ್ಙ್ಧರಪದ್ಧತಿ ಪು ೧೭೬ ಶ್ಲೋ. ೧೧೯೧.

(೨) ಹೊರಗಡೆ ಜನರಲ್ಲಿ ತಾನು ಅತ್ಯಂತ ಸಾಧುವೃತ್ತಿಯಲ್ಲಿರುವವನಂತೆ ನಟಿಸುತ್ತಾ ಒಳಗಡೆ ಮಹಾಕ್ರೂರನೂ ದುರ್ಮಾರ್ಗಗತನೂ ಆಗಿರುವವನನ್ನು ತಿಳಿದವನು ಅನ್ಯಾಪದೇಶದಿಂದ ಹೇಳುವಿಕೆ—

ಮೌಳೌ ಸನ್ಮಣಯೋ ಗೃಹಂ ಗಿರಿಗುಹಾಃ ತ್ಯಾಗಃ ಕಿಲಾತ್ಮತ್ವಚೋ
ನಿರ್ಯತ್ನೋಪನತೈಃ ಸ್ವವೃತ್ತಿರನಿಲೈರೇಕತ್ರ ಚರ್ಯೇದೃಶೀ ।
ಅನ್ಯತ್ರಾನೃಜುವರ್ತ್ಮ ವಾಗ್ದ್ವಿರಸನಾ ದಂಷ್ಟ್ರಾವಿಷಂ ದೃಶ್ಯತೇ
ಯಾದೃಕ್ತ್ವಾಮನು ದೀಪಕೋ ಜ್ವಲತಿ ಸೋಽ ಭೋಗಿನ್! ಸಖೇ ಕಿನ್ನ್ವಿದಂ ? ॥೬॥

ಎಲೈ ಪನ್ನಗನೇ ! ನಿನ್ನ ತಲೆಯುಲ್ಲಿ ದಿವ್ಯವಾದ ಮಣಿಗಳಿರುವುವು. ಗಿರಿ ಕಂದರವೇ ನಿನ್ನ ವಾಸಸ್ಥಳವು. ನೀನಾದರೋ ಸ್ವದೇಹದ ಚರ್ಮವನ್ನೇ ತ್ಯಾಗ ಮಾಡುವ ಶೀಲವುಳ್ಳವನು, ಸ್ವಲ್ಪವೂ ಪ್ರಯಾಸವಿಲ್ಲದೆ ತಾನಾಗಿ ಬರುವ ಗಾಳಿಯೇ ಜೀವನಾಧಾರವಾಗಿ ಉಳ್ಳವನು. ಒಂದು ವಿಧದಲ್ಲಿ ನೋಡಿದರೆ ನಿನ್ನ ಚರ್ಯೆಯು ಈರೀತಿ ಪವಿತ್ರವೂ ಗಂಭೀರವೂ ಶಾಂತವೂ ಆಗಿರುವುದಾಗಿ ತೋರಿಬರುವುದಾದರೂ ಮತ್ತೊಂದು ವಿಧದಲ್ಲಿ ಕುಟಿಲಚರ್ಯೆಯುಳ್ಳವನೂ ದ್ವಿಜಿಹ್ವತೆಯಿಂದ ವಚನಭ್ರಷ್ಟನೂ ವಿಷಮಿಶ್ರಿತರದನವುಳ್ಳವನೂ ಆಗಿ ಕಾಣುತ್ತಿರುವ ಬಗೆ ಹೇಗೆಂಬುದನ್ನು ತಿಳಿಸುವನಾಗು.

(೩) ಆಬದ್ಧಕೃತ್ರಿಮಸಟಾಜಟಿಲಾಂಸಭಿತ್ತಿ
ರಾರೋಪಿತೋ ಮೃಗಪತೇಃ ಪದವೀಂ ಯದಿ ಶ್ವಾ ।
ಮತ್ತೇಭಕುಂಭತಟಪಾಟನಲಂಪಟಸ್ಯ
ನಾದಂ ಕರಿಷ್ಯತಿ ಕಥಂ ಹರಿಣಾಧಿಪಸ್ಯ ॥ ೬೬ ॥

ನಾಯಿಯ ಕೊರಳಿಗೆ ಸಿಂಹಕೇಸರದಂತಹ ಕೇಸರಗಳನ್ನು ಕಟ್ಟಿ ಮೃಗಪತಿಯ ಪದವಿಗೆ ಏರಿಸಿದ ಮಾತ್ರಕ್ಕೆ ಅದು ಮದಿಸಿದ ಆನೆಯ ಕುಂಭಸ್ಥಳವನ್ನು ಸೀಳುವಂತಹ ಮೃಗರಾಜನ ಹಾಗೆ ಗರ್ಜಿಸಬಲ್ಲುದೇ ?



## ಹ ರಿ ಚಂ ದ್ರ

ಸಂಸ್ಕೃತ ಸಾಹಿತ್ಯದಲ್ಲಿ ಈ ಹೆಸರಿನವರು ನಾಲ್ವರು ದೊರೆಯುವರು.

(೧) ಕ್ರಿ. ಶ. ೭ನೆಯ ಶತಮಾನದಲ್ಲಿದ್ದ ಮಹಾಕವಿಬಾಣನು ತಾನು ಬರೆದಿರುವ ಹರ್ಷಚರಿತಾಂತ್ಯದಲ್ಲಿ—

ಪದಬಂಧೋಜ್ಜ್ವಲೋ ಹಾರೀ ಕೃತವರ್ಣಕ್ರಮಸ್ಥಿತಿಃ |
ಭಟ್ಟಾರಹರಿಚಂದ್ರಸ್ಯ ಗದ್ಯಬಂಧೋ ನೃಪಾಯತೇ ||

ಎಂದು ಹೇಳಿರುವ (ಭಟ್ಟಾರ) ಹರಿಚಂದ್ರನೊಬ್ಬ.

(೨) ಧರ್ಮಶರ್ಮಾಭ್ಯುದಯಕಾವ್ಯಕಾರನಾದ ಹರಿಚಂದ್ರನೊಬ್ಬ.

(೩) ಪರಮಾರರಾಜನಾದ ನವಸಾಹಸಾಂಕನ ಮಂತ್ರಿ ಮತ್ತು ವೈದ್ಯನಾಗಿದ್ದ ಹರಿಚಂದ್ರನೊಬ್ಬ. ಇವನು ಚರಕಸಂಹಿತೆಗೆ ಟೀಕೆಯನ್ನು ಬರೆದಿರುವುದಾಗಿ ವಿಶ್ವಕೋಶಕಾರನಾದ ಮಹೇಶ್ವರನು—

ಶ್ರೀಸಾಹಸಾಂಕನೃಪತೇರನವದ್ಯವಿದ್ಯ |
ವೈದ್ಯಾಂತರಂಗಪದಪದ್ಧತಿಮೇವ ಬಿಭ್ರತ್ ||
ಯಶ್ಚಂದ್ರಚಾರುಚರಿತೋ ಹರಿಚಂದ್ರನಾಮಾ |
ಸ್ವವ್ಯಾಖ್ಯಯಾ ಚರಕತಂತ್ರಮಲಂಚಕಾರ ||

ಎಂದು ಹೇಳಿರುವನು. ವಾಗ್ಭಟನ 'ಅಷ್ಟಾಂಗಹೃದಯ' ವೆಂಬ ವೈದ್ಯಗ್ರಂಥಕ್ಕೆ 'ಆಯುರ್ವೇದರಸಾಯನ' ವೆಂಬ ಟೀಕೆಯನ್ನು ಬರೆದಿರುವ ಹೇಮಾದ್ರಿಯು ತಾನು ಬರೆದಿರುವ ಟೀಕೆಯಲ್ಲಿ.—

ಚರಕೇ ಹರಿಚಂದ್ರಾದ್ಯೈಃ ಸುಶ್ರುತೇ ಜೇಜ್ಜಟಾದಿಭಿಃ |
ಟೀಕಾಕಾರೈರ್ನ ನಿರ್ಣೀತಂ ಇಹ ಹೇಮಾದ್ರಿಣೋದಿತಂ ||

ಎಂದು ಹೇಳಿರುವನು.

(೪) ಜೀವಂಧರಚಂಪೂಕಾರಹರಿಚಂದ್ರನೊಬ್ಬ.

ಬಾಣಭಟ್ಟನು ಹೇಳುವ ಭಟ್ಟಾರಹರಿಚಂದ್ರನ ವಿಚಾರವು ಹಿಂದೆಯೇ ಹೇಳಲ್ಪಟ್ಟಿರುವುದು. ಈಗ ಎರಡನೆಯ ಹರಿಚಂದ್ರನ ವಿಚಾರವು ಬರೆಯಬೇಕಾಗಿರುವುದು ಇವನ ತಂದೆಯ ಹೆಸರು ಆರ್ದ್ರದೇವ, ತಾಯಿಯ ಹೆಸರು ರಾಥೆ. ಇವನು ದಿಗಂಬರಜೈನನು. ಕಾಯಸ್ಥನು.‡ ಇದೇ ವಿಚಾರವಾಗಿ ಧರ್ಮಶರ್ಮಾಭ್ಯುದಯದಲ್ಲಿ ಹೇಳಿರುವ ಗ್ರಂಥಕರ್ತೃಪ್ರಶಸ್ತಿಯಲ್ಲಿ:—

ಶ್ರೀಮಾನಮೇಯಮಹಿಮಾಸ್ತಿ ಸ ನೋಮಕಾನಾಂ
ವಂಶಃ ಸಮಸ್ತಜಗತೀವಲಯಾವತಂಸಃ |
ಹಸ್ತಾವಲಂಬನಮವಾಪ್ಯ ಯಮುಲ್ಲಸಂತೀ
ವೃದ್ಧಾಪಿ ನ ಸ್ಖಲತಿ ದುರ್ಗಪಥೇಷು ಲಕ್ಷ್ಮೀಃ || ೧ ||
ಮುಕ್ತಾಫಲಸ್ಥಿತಿರಲಂಕೃತಿಷು ಪ್ರಸಿದ್ಧ

‡ Dictionary of Jaina Biography Addenda P. 15

ಸ್ತತ್ರಾರ್ದ್ರದೇವ ಇತಿ ನಿರ್ಮಲಮೂರ್ತಿರಾಸೀತ್ ।
ಕಾಯಸ್ಥ ಏವ ನಿರವದ್ಯಗುಣಗ್ರಹಃ ಸ
ನ್ನೇಕೋऽಪಿ ಯಃ ಕುಲಮಶೇಷಮಲಂ ಚಕಾರ ॥ ೨ ॥
ಲಾವಣ್ಯಾಂಬುನಿಧಿಃ ಕಲಾಕುಲಗೃಹಂ ಸೌಭಾಗ್ಯಸದ್ಭಾಗ್ಯಯೋಃ
ಕ್ರೀಡಾವೇಶ್ಮ ವಿಲಾಸವಾಸವಲಭೀ ಭೂಷಾಸ್ಪದಂ ಸಂಪದಾಂ ।
ಶೌಚಾಚಾರವಿವೇಕವಿಸ್ಮಯಮಹೀ ಪ್ರಾಣಪ್ರಿಯಾ ಶೂಲಿನಃ
ಶರ್ವಾಣೀವ ಪತಿವ್ರತಾ ಪ್ರಣಯಿನೀ ರಥ್ಯೇತಿ ತಸ್ಯಾಭವತ್ ॥ ೩ ॥
ಅರ್ಹತ್ಪದಾಂಭೋರುಹಚಂಚರೀಕಸ್ತಯೋಃ ಸುತಃ ಶ್ರೀಹರಿಚಂದ್ರ ಆಸೀತ್ ।
ಗುರುಪ್ರಸಾದಾದಮಲಾ ಬಭೂವುಃ ಸಾರಸ್ವತೇ ಸ್ರೋತಸಿ ಯಸ್ಯ ವಾಚಃ ॥೪॥ *

ಎಂದಿದೆ. ಮೇಲೆ ಹೇಳಿರುವುದರಲ್ಲಿ ಆರ್ದ್ರದೇವನ ಹೆಂಡತಿಯು ಹೆಸರು ರಾಧೆಯೆಂದು ಹೇಳಿದೆ. ಗ್ರಂಥಕರ್ತೃಃ ಪ್ರಶಸ್ತಿಯಂತೆ "ರಥ್ಯಾ" ಎಂದು ಸ್ಪಷ್ಟವಾಗಿ ಹೇಳಬೇಕಾಗುತ್ತದೆ. ಇವೆರಡರಲ್ಲಾವುದು ಸರಿಯೆಂದು ಹೇಳಲಾಗದಾಗಿದೆ. ರಥ್ಯಾ ಎಂದರೆ ರಾಧೆಯೆಂದು ಅರ್ಥಮಾಡುವದು ಬಹು ಸಾಹಸದ ಕೆಲಸ.

ಕಾಲ:—ಕ್ರಿ. ಶ. ಹತ್ತನೆಯ ಶತಮಾನದ ಆದಿಭಾಗದಲ್ಲಿದ್ದ ಮಹಾಕವಿ ರಾಜಶೇಖರನು 'ಕರ್ಪೂರಮಂಜರಿ' ಯ ಮೊದಲನೆಯ ಅಂಕದಲ್ಲಿ ಇವನನ್ನು ಹೇಳಿರುವುದರಿಂದ ರಾಜಶೇಖರನಿಗಿಂತ ಹರಿಚಂದ್ರನು ಪ್ರಾಚೀನನಾಗಿರಬೇಕೆಂದೂ ಕ್ರಿ. ಶ. ೯ನೆಯ ಶತಮಾನದಲ್ಲಿದ್ದಿರಬೇಕೆಂದೂ ವ್ಯಕ್ತವಾಗುವುದು.

ಗ್ರಂಥ:—ಇವನು '**ಧರ್ಮಶರ್ಮಾಭ್ಯುದಯು**' ವೆಂಬ ಚಂಪೂಮಹಾಕಾವ್ಯವನ್ನು ಬರೆದಿರುವನು. ಇದರಲ್ಲಿ ೨೧ ಸರ್ಗಗಳಿರುವುವು. ೨೪ ಮಂದಿ ತೀರ್ಥಂಕರರಲ್ಲಿ ೧೫ನೆಯವನಾದ ಧರ್ಮನಾಥನಜನ್ಮಾರಭ್ಯ ನಿರ್ವಾಣಪರ್ಯಂತದ ಚರಿತೆಯು ವರ್ಣಿಸಲ್ಪಟ್ಟಿರುವುದು. ಕಾವ್ಯಶೈಲಿಯು ಶಿಶುಪಾಲವಧಕಾವ್ಯವನ್ನು ಹೋಲುವುದಾಗಿದೆ. ಪ್ರತಿಸರ್ಗಾಂತ್ಯದಲ್ಲಿಯೂ "ಇತಿ ಮಹಾಕವಿಶ್ರೀ ಹರಿಚಂದ್ರ ವಿರಚಿತೇ ಧರ್ಮಶರ್ಮಾಭ್ಯುದಯೇ ಮಹಾಕಾವ್ಯೇ" ಎಂದಿರುವುದು.

**ಕಥಾಸಾರಾಂಶ**—ಸುಪ್ರಸಿದ್ಧವಾದ ಭರತಖಂಡದಲ್ಲಿ ಉತ್ತರಕೋಸಲವೆಂಬ ದೇಶಕ್ಕೆ "ರತ್ನಪುರ"ವೆಂಬ ರಾಜಧಾನಿಯು ಇದ್ದಿತು. ಇದನ್ನು ಮಹಾಸೇನನೆಂಬ ರಾಜಚೂಡಾಮಣಿಯು ಆಳುತ್ತಿದ್ದನು. ಇವನಿಗೆ ಸುವ್ರತೆ ಎಂಬ ಪಟ್ಟದ ರಾಣಿಯು ಇದ್ದಳು. ಬಹುಕಾಲದವರೆಗೂ ಇವರಿಗೆ ಸಂತಾನವಿಲ್ಲದೆ ಚಿಂತಿಸುತ್ತಿರಲು ಹಠಾತ್ತಾಗಿ ರಾಜೋದ್ಯಾನದಲ್ಲಿ ಪ್ರಾಚೇತಸನೆಂಬ ಋಷಿಪುಂಗ

* ಧರ್ಮಶರ್ಮಾಭ್ಯುದಯ ಪುಟ ೧೬೩.

ವನು ಶಿಷ್ಯಸಮೂಹದೊಡನೆ ಬಂದಿರುವ ಸಮಾಚಾರವನ್ನು ಕೇಳಿ ಆತನ ಸಂದರ್ಶನಾರ್ಥಿಯಾಗಿ ಹೊರಟು ಆತನನ್ನು ಪೂಜಿಸಿದನಂತರ ಸತ್ಕೃತನಾಗಿ ಕುಳಿತುಕೊಂಡು ಮನದ ಬಯಕೆಯನ್ನು ತಿಳುಹಿಸಲು ಮುನಿವರನು ರಾಜಮಹಾಸೇನ! ಚಿಂತೆಯನ್ನು ಬಿಡು. ಚತುರ್ವಿಂಶತಿತೀರ್ಥಂಕರರಲ್ಲಿ ೧೫ನೆಯ ತೀರ್ಥಂಕರನಾದ ಧರ್ಮನಾಥನು ನಿನ್ನ ಉದರದಲ್ಲ ಜನಿಸಿ ನಿಮ್ಮ ಕುಲವನ್ನುದ್ಧರಿಸನೆಂದು ಹೇಳ ು ರಾಜನು ಮುದಿತಪ್ಪದಯನಾಗಿ ಆ ಋಷಿಪುಂಗವನನ್ನು ಕುರಿತು ಮಹಾತ್ಮ! ಪರಮ ಪವಿತ್ರನಾದ ಧರ್ಮನಾಥನು ಗರ್ಭಕ್ಲೇಶವನ್ನು ಅನುಭವಿಸಬೇಕಾದ ಕಾರಣವೇನು? ನಮ್ಮ ಉದರದಲ್ಲಿ ಜನ್ಮಿಸುವ ಕಾರಣವು ಹೇಗೆ? ಆತನ ಪೂರ್ವಜನ್ಮ ವೃತ್ತಾಂತವೇನು? ಎಂದು ಬೆಸಗೊಳ್ಳಲು ಮುನಿವರನು ಇಂತೆಂದನು: —

ಕೇಳು ಭೂಪಾಲ ! ಪಂಚಾಶತ್ಕೋಟಿಯೋಜನ ವಿಸ್ತೀರ್ಣವಾದ ಈ ಭೂಮಂಡಲದಲ್ಲಿ ಧಾತಕೀಖಂಡವೆಂಬ ದ್ವೀಪವು ಇರುವುದು. ಇದರ ಒಂದು ಭಾಗದಲ್ಲಿ ಮೇರುಪರ್ವತವಿರುವುದು. ಇದರ ದಕ್ಷಿಣಭಾಗದಲ್ಲಿ ವಿದೇಹವೆಂಬ ರಾಜ್ಯವೂ ಅದಕ್ಕೆ ಅಲಂಕಾರಭೂತವಾದ ವತ್ಸದೇಶವೂ ಇರುವುದು. ಇದನ್ನುಮಹಾ ಭುಜಬಲಪರಾಕ್ರಮಿಯಾದ ದಶರಥನೆಂಬುವನು ಧರ್ಮದಿಂದ ರಾಜ್ಯಪರಿಪಾಲನವನ್ನು ಮಾಡುತ್ತ ಅನೇಕ ಅಂತಃಪುರಜನರಿಂದೊಡಗೂಡಿ ಶೈಲಾರಾಮವನನದೀತೀರಗಳಲ್ಲಿ ಮನಬಂದಂತೆ ವಿಹರಿಸುತ್ತ ಅವರಿಂದ ಸೇವಿತನಾಗಿರಲು ಒಂದಾನೊಂದು ಚಂದ್ರಗ್ರಹಣದ ದಿವಸ ರಾಹುಗ್ರಸ್ತನಾದ ಚಂದ್ರನನ್ನು ನೋಡಿ ಅಹಹ! ಇದೆಂತಹ ಅಚ್ಚರಿ! ಮಹಾಮಹಿಮರಾದ ದೇವತೆಗಳಿಂದ ಮಾನ್ಯನಾಗಿ ಸುಖಶಾಂತಿದಾಯಕನಾದ ಲೋಕಪೂಜ್ಯನಾದ ಚಂದ್ರನಿಗೇ ಇಂತಹ ವಿಪತ್ತು ಸಂಭವಿಸುವುದಾದರೆ ನಮ್ಮಂತಹ ಹುಲುಮಾನವರ ಪಾಡೇನು? ಆಯುಷ್ಯವಾದರೋ ಛಿದ್ರಘಟದಲ್ಲಿನ ನೀರಿನಂತೆ ಕಳೆದು ಹೋಗುತ್ತಿರುವುದು. ಅಭಿಮಾನಪುರಸ್ಸರವಾದ ಯೌವನವು ಗಳಿತವಾಗಿ ಹೋಗಿ ಜರಾಂಗನೆಯ ಪ್ರಹರಗಳಿಗೆ ಸಿಲುಕಿ ದೇಹವು ಜರ್ಜರಿತವಾಗಿಯೇ ಹೋಗುವುದು. ಹುಟ್ಟಿದವನಿಗೆ ಸಾವು ತಪ್ಪದು. ಒಂದು ದಿವಸವಿಲ್ಲದಿದ್ದರೆ ಮತ್ತೊಂದು ದಿನಸ ಸಾಯಲೇಬೇಕಾಗುವುದು. ಆದುದರಿಂದ ಈ ನಶ್ವರವಾದ ಭೋಗಗಳನ್ನು ತೊರೆದು ವಿಷಯೋಪಲಾಲಸತೆಯನ್ನು ಮರೆತು ಇಂದ್ರಿಯ ಪಾಟವವು ಸುಸ್ಥುವಾಗಿರುವಾಗಲೇ ಪರಮಾರ್ಥಸಿದ್ಧಿಗಾಗಿ ಯತ್ನಿಸುವುದು ಪ್ರತಿಯೊಬ್ಬ ವಿವೇಕಿಯ ಕರ್ತವ್ಯವೆಂದು ಯೋಚಿಸಿ ದೃಢಮನಸ್ಕನಾಗಿ ತನ್ನ ಮಗನಾದ ಅತಿರಥನಿಗೆ ರಾಜ್ಯಾಭಿಷೇಕವನ್ನು ಮಾಡಿ ತಪೋವನಕ್ಕೆ ಹೋಗಿ ಅಲ್ಲಿ ಸಿದ್ಧಪುರುಷರನ್ನು ಸೇವಿಸಿ ಸರ್ವಸಂನ್ಯಾಸದಿಂದ ಈ ಕಳೇಬರವನ್ನು ಬಿಟ್ಟು ಸರ್ವಾರ್ಥಸಿದ್ಧಿಯನ್ನು ಹೊಂದಿದನು. ಇಂತಹ ಪೂತಚರಿತನು ಧರ್ಮರಕ್ಷಣಾ

ರ್ಥವಾಗಿ ನಿನ್ನುದರದಲ್ಲಿ ಜನಿಸುವನು ಎಂದನು. ಕಾಲಕ್ರಮದಲ್ಲಿ ಸಾಕ್ಷಾದ್ಭಗವಂತನಾದ ಪರಮ ಜಿನೇಶ್ವರನು ಸುವ್ರತೆಯ ಉದರದಲ್ಲಿ ಮಾನವಲೀಲೆಗೆ ತಕ್ಕಂತೆ ಜನಿಸಿದುದನ್ನು ನೋಡಿ ಇಂದ್ರನು ಭಗವಂತನಾದತೀರ್ಥಂಕರನಿಗೆ ಮೇರು ಶಿಖರದಲ್ಲಿ ಜನ್ಮಾಭಿಷೇಕಮಹೋತ್ಸವವನ್ನು ಮಾಡಬೇಕೆಂದೆಣಿಸಿ ಮಹಾಸವಾರಾಧನೆಯನ್ನು ನಡೆಯಿಸಿ, **ಧರ್ಮನಾಥ**ನೆಂದುನಾಮಕರಣವನ್ನು ಮಾಡಿ ತಾಯಿಯಾದ ಸುವ್ರತೆಯ ಬಳಿಯಲ್ಲಿ ಮಲಗಿಸಿ ತನ್ನ ಲೋಕವನ್ನು ಕುರಿತು ತೆರಳಿದನು. ಧರ್ಮನಾಥನು ಬಾಲ್ಯವನ್ನು ಕಳೆದು ಚತುಃಷಷ್ಟಿಕಲಾಪ್ರವೀಣನಾಗಿ ಗುರುದಕ್ಷಿಣೆಯನ್ನು ಕೊಟ್ಟು ಯೋಗ್ಯಕಾಲದಲ್ಲಿ ವಿದರ್ಭರಾಜನ ಕುವರಿಯಾದ ಶೃಂಗಾರವತಿಯನ್ನು ವಿವಾಹಮಾಡಿಕೊಂಡು ಮಾತಾಪಿತೃಗಳ ಆಜ್ಞೆಯಂತೆ ನಡೆದುಕೊಳ್ಳುತ್ತಿರಲು ಮಹಾಸೇನನು ಧರ್ಮನಾಥನಿಗೆ ರಾಜ್ಯಭಾರವನ್ನು ವಹಿಸಿ ರಾಜನೀತಿಗಳನ್ನು ಹೇಳಿ ತಪೋಯೋಗ್ಯವಾದ ದಿವ್ಯದೇಶವನ್ನು ಕುರಿತು ಹೊರಟುಹೋದನು. ಧರ್ಮನಾಥನು ಧರ್ಮದಿಂದ,ಬಹುಕಾಲ ರಾಜ್ಯಪರಿಪಾಲನವನ್ನುಮಾಡಿ ಕೊನೆಗೆ ವಿರಕ್ತನಾಗಿ ಜಿನದೀಕ್ಷೆಯನ್ನು ವಹಿಸಿ ತೀರ್ಥಂಕರತ್ವವನ್ನು ಹೊಂದಿದನು. ಇದೇ ಇವನ ಕಥೆ. ಇದರಲ್ಲಿ ಮಹಾಸೇನನು ಧರ್ಮನಾಥನಿಗೆ ಮಾಡಿದ ರಾಜನೀತಿಯ ಸಾರಾಂಶವು ಹೀಗಿರುವುದು: –

ಧರ್ಮನಾಥ! ಸುಗುಣಗಳಿಗೆ ಆಕರನಾದ ನೀನು ನಿನ್ನ ಸದ್ಗುಣಪ್ರಕಟನದಿಂದ ಹೆದೆಯಿಂದ ಕೂಡಿರುವ ಕೋದಂಡದಂತೆ ಸಕಲಕಾರ್ಯಗಳಲ್ಲಿಯೂ ಕೀರ್ತಿಯುನ್ನುಗಳಿಸಿ ಪ್ರಶಂಸಾರ್ಹನಾಗುವೆ. ನೀನು ಸರ್ವಸಮೃದ್ಧಿಯಿಂದಿರುವನಾದರೂ ಸನ್ಮಂತ್ರಿಗಳ ಸಾಮೀಪ್ಯವನ್ನೆಂದಿಗೂ ಬಿಡದಿರು. ಚಪಲಳಾದ ಲಕ್ಷ್ಮಿಯಿಂದ ಮತ್ತನಾಗಬೇಡ. ಯಾವಾಗಲೂ ಕೋಶವನ್ನು ವೃದ್ಧಿಹೊಂದಿಸುತ್ತಿರುವನಾಗು. ಏಕೆಂದರೆ ವಿಪುಲಧನಸಮೃದ್ಧನಾಗಿರುವ ರಾಜನನ್ನುಯಾರೂ ಜೈಸಲಾರರು. ಆಶ್ರಿತಸಂರಕ್ಷಣದಿಂದ ಅವರ ಪ್ರೀತಿಯನ್ನು ಸಂಪಾದಿಸುವನಾಗು. ಇಲ್ಲದಿದ್ದರೆ ಅವರು ನಿನ್ನನ್ನು ಪ್ರೀತಿಸುವ ಬದಲು ಪ್ರತಿಭಟಿಸುವರು. ಅನಂತರ ಅವರನ್ನು ಅಡಗಿಸುವುದು ಅತಿಕಷ್ಟವಾಗುವದು. ಆದುದರಿಂದ ನಿನ್ನ ಸಮೀಪವರ್ತಿಗಳಾದ ಜನರಿಗೆ ಜಿಹಾಸಾಸ್ಪದನಾಗದಿರು. ಪಾತ್ರಾಪಾತ್ರವನ್ನರಿತು ಅವರನ್ನು ತಕ್ಕ ಕೆಲಸಗಳಲ್ಲಿ ನಿಯೋಗಿಸು. ಅಮೂಲ್ಯವಾದ ಮಣಿಯನ್ನು ಅತ್ಯಂತ ಹೇಯವಾದ ಸೀಸದಲ್ಲಿ ಮೆಟ್ಟಿದ ಹಾಗೆ ಯೋಗ್ಯರಾದವರನ್ನು ಅಯುಕ್ತಕಾರ್ಯಗಳಲ್ಲಿ ನಿಯಮಿಸದಿರು. ರಾಜನು ಯಾವಾಗಲೂ ಪ್ರಜಾಪಕ್ಷನಾಗಿದ್ದುಕೊಂಡು ಸರಿಯಾದ ಬೆಂಬಲದಿಂದ ಕೂಡಿ ಶತ್ರುನಿಗ್ರಹವನ್ನು ಮಾಡತಕ್ಕದ್ದು. ಆದುದರಿಂದ ಮೊದಲು ಅಂತಃಶತ್ರುಗಳನ್ನುಸರಿಪಡಿಸಿಕೊಂಡು ಅಥವಾ ನಿರ್ಮೂಲವಮಾಡಿ ಅನಂತರ ಇತರ ಶತ್ರುಗಳನ್ನು ಜಯಿಸಲು ಹವಣಿಸಬೇಕು. ಲೋಕದಲ್ಲಿ ರಾಜ್ಯವನ್ನು ಗಳಿಸಿ

ದುದಕ್ಕೆ ಸುಖಪಡುವದೇ ಪ್ರಯೋಜನವಾಗಿರುವದು. ಇಂತಹ ಸುಖ ಫಲವು ಅರ್ಥಮೂಲವಾಗಿರುವದು. ಇವೆರಡನ್ನು ಬಿಟ್ಟು ಧರ್ಮವಾತ್ರವನ್ನೇ ಕೋರುವ ನಿಗೆ ಈ ರಾಜ್ಯವು ನಿರರ್ಥಕವಾಗಿಹೋಗುವುದು. ಗುರುಹಿರಿಯರಲ್ಲಿ ವಿನೀತ ನಾಗಿರು. ಈ ಲೋಕದಲ್ಲಿ ರಾಜನಾದವನು ಪ್ರಜೆಗಳಿಗೆ ಬುದ್ಧಿಯನ್ನು ಕಲಿಸಿ ಅವರನ್ನು ವಿನಯಸಂಪನ್ನರನ್ನಾಗಿ ಮಾಡುವುದಕ್ಕಿಂತಲೂ ಬೇರೆ ಕಾರ್ಯವಾ ವುದೂ ಇಲ್ಲ. ಹಣವನ್ನು ಕೊಟ್ಟು ಎಲ್ಲರನ್ನೂ ತೃಪ್ತಿಗೊಳಿಸಲಾಗುವದಿಲ್ಲ. ಹಾಗೆ ಆಗುವದೆಂದು ತೋರುವುದಾದರೂ ಆ ತೃಪ್ತಿಯು ಕ್ಷಣಮಾತ್ರವಿರುವುದು. ಆದುದ ರಿಂದ ಪ್ರಜೆಗಳಿಗೆ ವಿದ್ಯಾವಿನಯಸಂಪತ್ತುಗಳನ್ನುಂಟುಮಾಡಬೇಕು. ನೀನು ಯಾವಾಗಲೂ ಸರ್ವರನ್ನೂ ತನ್ನವರು ಪರರೆನ್ನದೆ ಸಮದೃಷ್ಟಿಯಿಂದ ಕಾಪಾಡುವ ನಾಗು. ಧನಪಿಶಾಚಗ್ರಸ್ತನಾಗಿ ಪ್ರಜೆಗಳ ಆದಾಯವನ್ನರಿಯದೆ ತೆರಿಗೆಗಳನ್ನು ಹೆಚ್ಚಿಸಿ ತೆರಿಸಿ ಹಿಂಸಿಸುತ್ತ ರಾಜಭಕ್ತಿ ಪರಾಙ್ಮುಖರನ್ನಾಗಿ ಮಾಡಬೇಡ. ಯಾವಾ ಗಲೂ ತಾಳ್ಮೆಯಿಂದಿರು. ಅರಿಷಡ್ವರ್ಗಗಳಿಗೆಡೆಗೊಡದಿರು. ದುಷ್ಟನಿಗ್ರಹ ಶಿಷ್ಟ ಪರಿಪಾಲನೆಯು ರಾಜನಕರ್ತವ್ಯವೆಂಬುದನ್ನು ಮರೆಯದಿರು. ದುರೂಹ ವಿಷಯಗ ಳನ್ನು ಜ್ಞಾನವೃದ್ಧರಾದ ಮಂತ್ರಿಗಳೊಡನೆ ಆಲೋಚಿಸಿ ನಡೆಯಿಸು. ಒಂದುವೇಳೆ ಕೈಗೊಳ್ಳುವ ವಿಷಯವು ನಿನಗೆ ತಿಳಿದುದಾಗಿರುವುದಾದರೂ ರಾಜ್ಯಕ್ಕೆ ಹಿತಾಕಾಂಕ್ಷಿಗ ಳಾದ ಮಂತ್ರಿಗಳಿಗೆ ತಿಳಿಸದೆ ಸ್ವತಂತ್ರಿಸಿ ಮಾಡದಿರು. ನಿಜವಾದ ಹಿತೋಕ್ತಿಗಳನ್ನು ಹೇಳುವರನ್ನು ಧಿಕ್ಕರಿಸಬೇಡ. ನಟವಿಟಗಾಯಕರ ಮೋಹಕ್ಕೆ ಸಿಲುಕದಿರು. ಲಕ್ಷ್ಮೀಮದವು ಎಂತಹ ವಿವೇಕಿಯನ್ನೂ ಅವಿವೇಕಿಯನ್ನಾಗಿ ಮಾಡದಿರದು. ಮದಾಂಧನಿಗೆ ಪ್ರಪಂಚವು ಕಾಣಿಸದು. ಗುರುಹಿರಿಯರು ಕಿರಿಯರಾಗಿ ತೋರು ವರು. ವಿವೇಕವು ಹೋಗಿ ಅವಿವೇಕಮಾರ್ಗವು ತಲೆದೋರಿ ಜನ್ಮವನ್ನು ಅಸಾರ್ಥ ಕಪಡಿಸುವದು. ಸನ್ಮಿತ್ರರನ್ನು ಯಾವಾಗಲೂ ಸಂತೋಷಗೊಳಿಸುತ್ತಿರು. ಪ್ರಜೆಗ ಳನ್ನುವೃಥಾ ಪಾತಕಕ್ಕೆ ಗುರಿಗೊಳಿಸದಿರು. ಭೃತ್ಯರನ್ನು ಅರ್ಥಸಂಪತ್ತಿಯಿಂದ ತುಷ್ಟಿ ಗೊಳಿಸು. ಪಂಡಿತರು ಯಾವಾಗಲೂ ತಮ್ಮ ಸೂಕ್ತಿಗಳಿಂದ ನಮ್ಮ ಕೀರ್ತಿಯನ್ನು ನೆಲೆಗೊಳಿಸುವರಾದುದರಿಂದ ಅವರನ್ನು ಎಲ್ಲರಿಗಿಂತಲೂ ಹೆಚ್ಚಾಗಿ ಗೌರವಿಸು. ಪ್ರಪಂಚವು ಸ್ಥಿರವೇದೂ ರಾಜಭೋಗವು ಸ್ಥಿರವೆಂದೂ ರಾಜಭೋಗಭಾಗ್ಯವು ಸ್ಥಿರ ವೆಂದೂನಂಬಿ ಧರ್ಮದಿಂದ ಪ್ರಮತ್ತನಾಗದಿರು. ಮುಖ್ಯವಾಗಿ ನೀನು ಸಕಲ ಕಲ್ಯಾಣಗುಣಾಪ್ರಯನಾಗಿದ್ದು ಪ್ರಜೆಗಳಿಗೂ ಇತರರಿಗೂ ಮಾರ್ಗದರ್ಶಕನಾಗಿ ಶಾಶ್ವತವಾದ ಕೀರ್ತಿಯನ್ನು ಪಡೆಯುವನಾಗು.

ಶೃಂಗಾರವತಿಯು ಚಿತ್ರಪಟದ ಕೆಳಗೆ ಬರೆದಿರುವುದೆಂದು ಹೇಳುವ ಶ್ಲೋಕವು ಹೀಗಿರುವುದು.--

ಧರ್ಮಶರ್ಮಾಭ್ಯುದಯ ಸರ್ಗ೧೮ ಶ್ಲೋಕ ೧೫-೧೦೦.

ಅಸ್ಯಾಃ ಸ್ವರೂಪಂ ಕಥಮೇಣಚಕ್ಷುಷೋ
ಯಥಾವದಸ್ಮೋ ಲಿಖಿತುಂ ಪ್ರಗಲ್ಭತಾಂ ||
ಧಾತಾಪಿ ಯಸ್ಯಾಃ ಪ್ರತಿರೂಪನಿರ್ಮಿತೌ
ಘುಣಾಕ್ಷರನ್ಯಾಯ ಕೃತಾ ಕೃತೇರ್ಜಡಃ || ೯—೩೫

೯೦ ಇದನ್ನು ಓದುವವರಿಗೆ ಭವಭೂತಿಯ ಮಾಲತೀಮಾಧವದಲ್ಲಿ ಕಥಾನಾಯಕನಾದ ಮಾಧವನು ಸುಂದರಳಾದ ಮಾಲತಿಯನ್ನು ಚಿತ್ರಿಸಿ ಅದರ ಕೆಳಗಡೆ ಹೇಳಿರುವ—

ಜಗತಿ ಜಯಿನಸ್ತೇ ತೇ ಭಾವಾ ನವೇಂದುಕಲಾದಯಃ
ಪ್ರಕೃತಿಮಧುರಾಃ ಸಂತ್ಯೇವಾನ್ಯೇ ಮನೋ ಮದಯಂತಿ ಯೇ ||
ಮಮ ತು ಯದಿಯಂ ಯಾತಾ ಲೋಕೇ ವಿಲೋಚನಚಂದ್ರಿಕಾ
ನಯನವಿಷಯಂ ಜನ್ಮನ್ಯೇಕಃ ಸ ಏವ ಮಹೋತ್ಸವಃ || ೧ -೨೯

ಎಂಬ ಶ್ಲೋಕವು ಜ್ಞಾಪಕಕ್ಕೆ ಬಾರದಿರದು. ಶೃಂಗಾರವತಿಯು ಪ್ರತೀಹಾರಿ ಮುಖ್ಯರೊಡನೆ ಸ್ವಯಂವರ ಮಂಟಪವನ್ನು ಪ್ರವೇಶಿಸಿ ರಾಜಕುಮಾರರ ಗುಣ ವರ್ಣನವನ್ನು ಕೇಳುತ್ತ ಧರ್ಮನಾಥನನ್ನು ನೋಡುವ ತವಕದಿಂದ ಮುಂದುವರಿಯುವ ವಿಚಾರವು ಕಾಳಿದಾಸನ ರಘುವಂಶದಲ್ಲಿ ಹೇಳಿರುವ ಇಂದುಮತಿಯ ಸ್ವಯಂವರ ವಿಚಾರವನ್ನು ಅಚ್ಚುಳಿಯದೆ ಹೋಲುವುದಾಗಿದೆ.

ಈ ಕಾವ್ಯದ ಕೆಲವು ಶ್ಲೋಕಗಳನ್ನು ಮಾದರಿಗಾಗಿ ಒರೆಯುವೆವು.—

ವನೇsಪ್ರ ಪಾಕೋಲ್ಬಣದಾಡಿಮೀ ಫಲಪ್ರಕಾಶಮಾಕಾಶಮಣಿಂ ನವೋದಿತಂ
ಜಿಘೃಕ್ಷವೋsಮೀ ನಿಪತಂತಿ ವಾನರಾ ಅನೂರುದಂಡಾಗ್ರನಿವಾರಿತಾ ಅಪಿ||೧೦—೪೧

ಈ ವಿಂಧ್ಯಾಚಲದಲ್ಲಿರುವ ವಾನರಗಳು ಆಕಾಶದಲ್ಲಿ ಪ್ರಕಾಶಿಸುತ್ತಿರುವ ನೂತನೋದಯ ಸೂರ್ಯನನ್ನು ನೋಡಿ ದಾಡಿಮೀಫಲಭ್ರಾಂತಿಯಿಂದ ಅದನ್ನು ಹೊಂದಲು ಅರುಣನ ದಂಡಾಘಾತವನ್ನೂ ಲೆಕ್ಕಿಸದೆ ಮೇಲಕ್ಕೆ ಎಗರಿ ಎಗರಿ ಕೆಳಕ್ಕೆ ಬೀಳುತ್ತಿವೆ. ಎಂದರೆ ವಿಂಧ್ಯಾಚಲದ ಶೃಂಗಗಳು ಗಗನತಲಚುಂಬಿತಗಳಾಗಿದ್ದ ವೆಂದು ಭಾವವು.

ದೂರೇಣ ದಾವಾನಲಶಂಕಯಾ ಮೃಗಾ ಸ್ತ್ಯಜಂತಿ ಶೋಣೋಪಲ ಸಂಚಯದ್ಯುತೀಃ
ಇಹೋಚ್ಛಲಚ್ಛೀಕರಸಿಕ್ತ ನಿರ್ಝರಾಶಯಾ ಲಿಹಂತಿ ಚ ಪ್ರೀತಿಜುಷಃ ಕ್ಷಣಂ ಶಿವಾಃ || ೧೦—೪೪

---

ಘುಣ ಎಂಬ ಹುಳು ಮರವನ್ನೋ ಅಥವಾ ಯಾವುದಾದರೊಂದು ಪುಸ್ತಕವನ್ನೋ ಕೊರೆದುದನ್ನು ಯಾವುದಾದರೊಂದು ಅಕ್ಷರದ ರೂಪವನ್ನಾಗಿ ಹೋಲಿಸುವುದಕ್ಕೆ ಘುಣಾಕ್ಷರನ್ಯಾಯವೆನ್ನುವರು

ಈ ವಿಂಧ್ಯಾಚಲದ ಗೈರಿಕಾದಿಧಾತು ಸಮಾಯುಕ್ತವಾದ ಕೆಂಗಲ್ಲುಗಳ ಮೇಲೆ ಸೂರ್ಯನ ಕಿರಣಗಳು ಬಿದ್ದು ಥಳಥಳಗುಟ್ಟುವುದನ್ನು ಮೃಗಗಳು ದೂರದಿಂದ ನೋಡಿ ಉರಿಯೆಂದುಭಾವಿಸಿ ದೂರ ದೂರಸಾಗುತ್ತವೆ. ಹೀಗೆ ಥಳಥಳಗುಟ್ಟುತ್ತಿರುವ ಶೋಣೋಪಲ (ಕೆಂಗಲ್ಲು) ಗಳನ್ನು ನೋಡಿ ಜಂಬುಕಗಳು ರಕ್ತಪ್ರವಾಹವೆಂಬ ಭ್ರಾಂತಿಯಿಂದ ಆ ಕಲ್ಲುಗಳನ್ನು ನೆಕ್ಕುತ್ತವೆ.

ಸತೀ ಚ ಸೌಂದರ್ಯವತೀ ಚ ಪುಂವರ ಪ್ರಸೂಶ್ಚ ಸಾಕ್ಷಾದಿಯಮೇವ ಭೂತ್ರಯೀ
ಇತೀವ ರೇಖಾತ್ರಯಮುಕ್ತ ತಸ್ಮಯೋ ವಿಧಿಸ್ಸ ಕಾರತ್ರ ವಲಿತ್ರಯಚ್ಛಲಾತ್ ||೨-೪೫||

ಲೋಕದಲ್ಲಿ ಯಾವುದಾದರೊಂದು ಮುಖ್ಯ ವಿಷಯವನ್ನು ಸಮರ್ಥಿಸಿ ಹೇಳಬೇಕಾದಾಗ ಅದನ್ನು ಒತ್ತಿಹೇಳುವುದೂ, ಬರೆಯಬೇಕಾದಾಗ ಆ ಮುಖ್ಯವಿಷಯದ ಕೆಳಗೆ ರೇಖೆಯನ್ನೆಳೆದು ಗುರ್ತಿಸುವ ವಾಡಿಕೆಯಂತೆ ಬ್ರಹ್ಮನು ಸುವ್ರತಾ ದೇವಿಯಲ್ಲಿ ಸತೀತ್ವವೂ ಸೌಂದರ್ಯವೂ ಪುಂವರಪ್ರಸೂತ್ವವೂ ಈ ಮೂರೂ ಏಕೀಭವಿಸಿರುವುದನ್ನು ಲೋಕಕ್ಕೆ ತಿಳಿಯಹೇಳುವುದಕ್ಕಾಗಿ ರೇಖೆಯನ್ನೆಳದು ಗುರ್ತಿಸಿರುವನೋ ಎಂಬಂತೆ ತ್ರಿವಳಿಗಳೊಪ್ಪಿದ್ದವು.

ಯತ್ಸಂಸಕ್ತಂ ಪ್ರಾಣಿನಾಂ ಕ್ಷೀರನೀರನ್ಯಾಯೇನೋಚ್ಚೈ ರಂಗಮುಪ್ಯಂತರಂಗಂ
ಆಯುಶ್ಛೇದೈರ್ಯಾತಿ ಭೇತತ್ತದಾಸ್ಥಾ ಕಾ ಬಾಹ್ಯೇಷು ಸ್ತ್ರೀತನೂಜಾದಿಕೇಷು ||೨೦ ೧೨||

ಹಾಲಿಗೆ ನೀರನ್ನು ಬೆರಸಿದರೆ ಯಾವರೀತಿ ಭೇದವು ತೋರುವುದಿಲ್ಲವೋ ಹಾಗೆಯೇ ಮನುಷ್ಯನ ಅಂಗವೂ, ಅಂತರಂಗವೂ ಒಂದೇ ಆಗಿದ್ದು ಆಯುಷ್ಯವು ಮುಗಿದನಂತರ ಪರಸ್ಪರ ಬೇರೆ ಬೇರೆಯಾಗುವಂತೆ ಜೀವಿಸಿರುವವರೆಗೂ ಏಕಪ್ರಕಾರವಾಗಿ ಸಂಸಾರಸೌಖ್ಯವನ್ನು ಅನುಭವಿಸಿ ಆಯುಷ್ಯವು ಮುಗಿದಕೂಡಲೇ ಅಂಗ ಮತ್ತು ಅಂತರಂಗದಿಂದ ಬೇರೆಯಾಗುವರಾದ ಈ ಪತ್ನೀಪುತ್ರರಿಂದೇನು ತಾನೇ ಪ್ರಯೋಜನ? ಎಂದರೆ ಯಾವಪ್ರಯೋಜನವೂ ಇಲ್ಲವೆಂದು ಭಾವವು.

ಬಾಲಂ ವರ್ಷೀಯಾಂಸಮಾಢ್ಯಂ ದರಿದ್ರಂ ಧೀರಂ ಭೀರುಂ ಸಜ್ಜನಂ ದುರ್ಜನಂಚ
ಅಶ್ನಾತ್ಯೇಕಃ ಕೃಷ್ಣವರ್ತ್ಮೇವ ಕಕ್ಷಂ ಸರ್ವಗ್ರಾಸೀ ನಿರ್ವಿವೇಕಃ ಕೃತಾಂತಃ ||೨೦-೨೦||

ಯಾವುದಾದರೊಂದು ಒಣಗಿದ ಸ್ಥಳದಲ್ಲಿರುವ ಹುಲ್ಲಿನಮೇಲೆ ಬಿದ್ದ ಬೆಂಕಿಯು ಆ ಸ್ಥಳದಲ್ಲಿರುವ ಸರ್ವಸ್ವವನ್ನೂ ವಿವೇಚನೆ ಇಲ್ಲದೆ ನಿರ್ಮೂಲಮಾಡುವಂತೆ ವಿವೇಕಶೂನ್ಯನೂ ಸರ್ವಗ್ರಾಸಿಯೂ ಆದ ಕಾಲನು ಶಿಶುವಾಗಲಿ, ವೃದ್ಧನಾಗಲಿ, ಧನಿಕನಾಗಲಿ, ದರಿದ್ರನಾಗಲಿ, ಧೀರನಾಗಲಿ, ಭೀರುವಾಗಲಿ, ಸಜ್ಜನನಾಗಲಿ ಅಥವಾ ದುರ್ಜನನಾಗಲಿ ಯಾರೇ ಆಗಲಿ ಯಾವುದೇ ಆಗಲಿ ಲಕ್ಷ್ಯವಿಡದೆ

ಸರ್ವಸ್ವವನ್ನೂ ನಾಶಮಾಡಿಯೇ ಬಿಡುವನು. ಎಂದರೆ ಸರ್ವವೂ ಕಾಲಾಧೀನ ವೆಂದೂ ಯಾರೂ ಯಾವುದೂ ಸ್ಥಿರವಲ್ಲವೆಂದು ಭಾವವು.

ವಿತ್ತಂ ಗೇಹಾದಂಗಮುಚ್ಚೈಶ್ಚಿತಾಗ್ರೇ ಪರ್ಯಾವರ್ತಂತೇ ಬಾಂಧವಾಶ್ಚ ಶ್ಮಶಾನಾತ್
ಏಕಂ ನಾನಾಜನ್ಮವಲ್ಲೀನಿದಾನಂ ಕರ್ಮ ದ್ವೇಧಾ ಯಾತಿ ಜೀವೇನ ಸಾರ್ಧಂ ||೨೦-೨೨||

ಮನುಷ್ಯನು ಬದುಕಿರುವಾಗ ಸಂಪಾದಿಸಿದ್ದ ಧನಕನಕ ಧಾನ್ಯಾದಿಗಳೆಲ್ಲವೂ ಸತ್ತನಂತರ ಅವನನ್ನು ಹಿಂಬಾಲಿಸದೆ ಮನೆಯಲ್ಲಿ ಉಳಿದುಹೋಗುವುದು. ಇದು ವರೆಗೆ ಸುಂದರವೆನಿಸಿಕೊಂಡಿದ್ದ ಶರೀರವನ್ನು ಸತ್ತನಂತರ ಬೆಂಕಿಯಲ್ಲಿ ಸುಟ್ಟುಬಿಡು ವರು. ಅನುವರ್ತಿಸಿಕೊಂಡಿದ್ದ ಮಿತ್ರಬಾಂಧವರೆಲ್ಲರೂ ಶ್ಮಶಾನದಿಂದ ಹಿಂತಿರುಗು ವರು. ಜರಾಮರಣರೂಪವಾದ ಅನೇಕ ಜನ್ಮಗಳಿಗೆ ಕಾರಣಭೂತವಾಗಿರುವ ಪಾಪಪುಣ್ಯಗಳ ಹೊರತು ಮತ್ತಾವುದೂ ಇವನ ಜೊತೆಯಲ್ಲಿ ಹೋಗುವುದಿಲ್ಲ.



## ರು ದ್ರ ಭ ಟ್ಟ

ಭಟ್ಟಶಬ್ದಪ್ರಯೋಗದಿಂದ ಇವನು ಬ್ರಾಹ್ಮಣನಾಗಿರಬೇಕೆಂದು ಬೋಧೆ ಯಾಗುತ್ತದೆ. ಇವನನ್ನು ರುದ್ರನೆಂದೂ ಕರೆಯುವ ವಾಡಿಕೆ. ಇವನು ಎಲ್ಲಿಯ ವನೆಂಬುದಾಗಲಿ ಜನನೀಜನಕರಾರೆಂಬುದಾಗಲಿ ತಿಳಿಯದು.

**ಕಾಲ** :—ಪ್ರೊ. ಮ್ಯಾಕಡಾನಲ್ಲರವರು ಶೃಂಗಾರತಿಲಕವನ್ನು ಬರೆದ ರುದ್ರ ಭಟ್ಟನು ಕ್ರಿ. ಶ. ೯ನೆಯ ಶತಮಾನದವನೆಂದು ಹೇಳಿರುವುದರಿಂದಲೂ§ ದಾಮೋ ದರಗುಪ್ತನು ಬರೆದಿರುವ 'ಕುಟ್ಟನೀಮತ'ದ.- -

"ಪರ ..ಕಸಾ . ಮನೋಹರಂ ಸದನಂ"

ಎಂಬ ಶ್ಲೋಕವು ಶೃಂಗಾರತಿಲಕದಲ್ಲಿ ಕಂಡುಬರುವುದರಿಂದ ಇವನು ದಾಮೋದರಗುಪ್ತನಿಗಿಂತ ಈಚಿನವನು. ಕ್ರಿ. ಶ. ೯ನೆಯ ಶತಮಾನದವನು ಎಂದು ಹೇಳಬೇಕಾಗುವುದು.

**ಗ್ರಂಥಗಳು** :—ಇವನು '**ಶೃಂಗಾರತಿಲಕ**' ವೆಂಬ ಲಕ್ಷಣ ಗ್ರಂಥವನ್ನೂ '**ತ್ರಿಪುರವಧಾ**' ಎಂಬ ಮತ್ತೊಂದು ಗ್ರಂಥವನ್ನೂ ಬರೆದಿರುವುದಾಗಿ.—

* ಭಾವವಿಲಾಸವನ್ನು ಬರೆದಿರುವ ಕವಿಯು ಇವನಲ್ಲ.

§ History of Sanskrit Literature P. 143.

ತ್ರಿಪುರವಧಾದೇವ ಗತಾ
　ಮುಲ್ಲಾಸಮುಮಾಂ ಸಮಸ್ತದೇವನತಾಂ |
ಶೃಂಗಾರತಿಲಕವಿದಿನಾ
　ಪುನರಪಿರುದ್ರಃ ಪ್ರಸಾದಯತಿ ||

ಎಂಬ ಆರ್ಯಾಶ್ಲೋಕದಿಂದ ಸೂಚಿತವಾಗುತ್ತದೆ. "ತ್ರಿಪುರವಧಾ" ಎಂಬ ಹೆಸರಿನಿಂದ ಕಾವ್ಯವೆಂದೂಹಿಸಬಹುದಾಗಿದೆ. ಶೃಂಗಾರತಿಲಕಕಾರನು ರುದ್ರಟನೆಂದು ಬಹುಜನರು ಭ್ರಮಿಸುವರು. ಕೆಲವು ಪುಸ್ತಕಗಳಲ್ಲಿ ಹಾಗೂ ಬರೆಯಲ್ಪಟ್ಟಿರುವುದಾಗಿ ಕಂಡುಬರುತ್ತದೆ. ಆದರೆ ಮೇಲಣ ಶ್ಲೋಕದಿಂದ ರುದ್ರಟನಲ್ಲವೆಂಬುದು ಸ್ಪಷ್ಟವಾಗುವುದು. ಇದರ ಟೀಕಾಕಾರನಾದ ಗೋಪಾಲಭಟ್ಟನು ಟೀಕಾ ಪ್ರಾರಂಭದಲ್ಲಿ.—"ಆಶೀರೂಪಂ ಮಂಗಳಂ ನಿಬಧ್ನಾತಿ ರುದ್ರಕವಿಃ" ಎಂದು ಹೇಳಿರುವುದರಿಂದಲೂ ಶೃಂಗಾರತಿಲಕ ಗ್ರಂಥಾರಂಭದಲ್ಲಿ, "ಶ್ರೀರುದ್ರಭಟ್ಟ ಕೃತಂ ಶೃಂಗಾರತಿಲಕಂ" ಎಂದೂ, ಗ್ರಂಥಾಂತ್ಯದಲ್ಲಿ, "ಇತಿ ಶ್ರೀರುದ್ರಭಟ್ಟ ವಿರಚಿತೇ ಶೃಂಗಾರತಿಲಕಾಭಿಧಾನೇ ಕಾವ್ಯಾಲಂಕಾರೇ" ಎಂದೂ ಇರುವುದರಿಂದ ರುದ್ರ(ಭಟ್ಟ) ನೆಂಬವನೇ ಶೃಂಗಾರತಿಲಕಗ್ರಂಥಕಾರನೆಂದೂ ರುದ್ರಟನಲ್ಲವೆಂದೂ ಖಂಡಿತವಾಗುವುದು.

ಶೃಂಗಾರತಿಲಕದಲ್ಲಿ (೧) ಸಂಭೋಗಶೃಂಗಾರ, (೨) ವಿಪ್ರಲಂಭಶೃಂಗಾರ (೩) ಹಾಸ್ಯಾದಿರಸನಿರೂಪಣವೆಂದು ಮೂರು ಪರಿಚ್ಛೇದಗಳಿರುವುವು. ಇದರ ಶ್ಲೋಕಗಳು ಶಾರ್ಙ್ಗಧರಪದ್ಧತಿಯಲ್ಲಿಯೂ ಸೂಕ್ತಿಮುಕ್ತಾವಳಿಯಲ್ಲಿಯೂ ಸಾಹಿತ್ಯದರ್ಪಣದಲ್ಲಿಯೂ ಕಂಡುಬರುವುವು. ಇವನ ಕವಿತಾಧೋರಣೆಯು ಸುಲಭವಾದುದಾಗಿ ಹೃದಯಂಗಮವಾಗಿರುವುದು. ಇದರ ಪ್ರಾರಂಭ ಶ್ಲೋಕವು ಹೀಗಿರುವುದು.—

ಶೃಂಗಾರೀ ಗಿರಿಜಾನನೇ ಸಕರುಣೋ ರತ್ಯಾಂ ಪ್ರವೀರಃ ಸ್ಮರೇ
　ಬೀಭತ್ಸೋಽಸ್ಥಿಭಿರುತ್ಫಣೀ ಚ ಭಯಕೃನ್ಮೂರ್ತ್ಯಾದ್ಭುತಸ್ತುಂಗಯಾ |
ರೌದ್ರೋ ದಕ್ಷವಿಮರ್ದನೇ ಚ ಇಸಕೃನ್ನಗ್ನಃ ಪ್ರಶಾಂತಶ್ಚಿರಾ
　ದಿತ್ಥಂ ಸರ್ವರಸಾಶ್ರಯಃ ಪಶುಪತಿರ್ಭೂಯಾತ್ಸತಾಂ ಭೂತಯೇ ||

ಗೋಪಾಲಭಟ್ಟನು ಬರೆದಿರುವ ಇದರ ಟೀಕೆಗೆ 'ರಸತರಂಗಿಣೀ' ಎಂದು ಹೆಸರು, ಕವಿಯು ತನ್ನ ಗ್ರಂಥವಿಚಾರದಲ್ಲಿ ಹೀಗೆ ಹೇಳಿರುವನು.—

ಶೃಂಗಾರತಿಲಕಾ ನಾಮ ಗ್ರಂಥೋಽಯಂ ಗ್ರಥಿತೋ ಮಯಾ
　ವ್ಯುತ್ಪತ್ತಯೇ ನಿಷೇವಂತು ಕವಯಃ ಕಾಮಿನಶ್ಚ ಯೇ ||

ಕಾನ್ತಾ ಕಾವ್ಯಕಥಾ ಕೀದೃಗ್ವೈದಗ್ಧೀ ಕೋ ರಸಾಗಮಃ |
ಕಿಂ ಗೋಷ್ಠೀಮಂಡನಂ ಹಂತ ಶೃಂಗಾರತಿಲಕಂ ವಿನಾ ||*



## ಅಭಿನಂದ (೧)

ಇವನು ಬ್ರಾಹ್ಮಣನು ಕಾಶ್ಮೀರದವನು. ನ್ಯಾಯಮಂಜರೀಕಾರನಾದ ಜಯಂತಭಟ್ಟನ ಮಗನು. ಕಾಲಕ್ರಮದಲ್ಲಿ ಕಾಶ್ಮೀರವನ್ನು ಬಿಟ್ಟು ಗೌಡದೇಶಕ್ಕೆ ಬಂದು ನೆಲಸಿದುದಾಗಿ ತೋರುತ್ತದೆ.

**ಕಾಲ**; –ಅಭಿನವಗುಪ್ತನು ಇವನನ್ನು ಹೇಳಿಕೊಂಡಿರುವುದರಿಂದ ಇವನಿಗೆ ಪ್ರಾಚೀನನೂ ಕ್ರಿ. ಶ. ೯ನೆಯ ಶತಮಾನದವನೆಂದು ಹೇಳಬೇಕಾಗುವುದು. ಬಂಗಾಳದ ಪಾಲವಂಶೀಯನಾದ ಯುವರಾಜ ಹರವರ್ಷನ ಆಶ್ರಯದಲ್ಲಿದ್ದುದಾಗಿ ಯಂ. ಕೃಷ್ಣಮಾಚಾರ್ಯರವರು ಒಕ್ಕಣಿಸಿರುವರು.† ಹಾಗೆ ಒಂದುವೇಳೆ ಇದ್ದುದಾಗಿ ದ್ದರೆ ರಾಮಚರಿತೆಕಾರನಾದ ಅಭಿನಂದನು ಈ ಅಭಿನಂದನನ್ನು ತನ್ನ ಸಮಕಾಲೀನ ನೆಂದು ಎಲ್ಲಿಯಾದರೂ ಒಕ್ಕಣಿಸಬಹುದಾಗಿದ್ದಿತೆಂಬುದು ನಮ್ಮ ನಂಬುಗೆ. ಅಲ್ಲದೆ ಒಂದೇ ಹೆಸರಿನ ಇಬ್ಬರು ಕವಿಗಳು ಒಬ್ಬರಾಜನ ಆಶ್ರಯದಲ್ಲ ಏಕಿರಬಾರ ದೆಂಬ ವಿಚಾರವು ತೋರಿಬರುವುದು.

**ಗ್ರಂಥಗಳು**;—ಇವನು ಬಾಣನ ಕಾದಂಬರೀ ಕಥೆಯನ್ನು ತೆಗೆದು ಕೊಂಡು ಶ್ಲೋಕರೂಪದಲ್ಲಿಬರೆದು ಅದನ್ನು "**ಕಾದಂಬರೀ ಕಥಾಸಾರ**" ವೆಂದು ಕರೆದಿರುವನು. ಧ್ವನ್ಯಾಲೋಕಲೋಚನದಲ್ಲಿ ಇವನ ಗ್ರಂಥದ ಶ್ಲೋಕಗಳು ದೊರೆ ಯುವುವು. ಇವನು ಬರೆದುದಾಗಿ ಹೇಳುವ "**ಯೋಗವಾಶಿಷ್ಟಸಾರ**" ಯಾವು ದೆಂಬುದು ನಮಗೆ ತಿಳಿಯದು.§ ಕವೀಂದ್ರವಚನಸಮುಚ್ಚಯಕಾರನು ಈ ಇಬ್ಬರು ಅಭಿನಂದರ ವ್ಯತ್ಯಾಸ ತೋರಾಣಿಕೆಗೆ ರಾಮಚರಿತೆಕಾರನನ್ನು "ಅಭಿ ನಂದನ" ಎಂದೂ ಕಾದಂಬರೀಕಥಾಸಾರಕಾರನನ್ನು "ಅಭಿನಂದ" ಎಂದೂ ವ್ಯವಹರಿಸಿಕೊಂಡಿರುವನು.‖

* ಶೃಂಗಾರತಿಲಕ—ಕಾವ್ಯಮಾಲೆ ಪು. ೧೫೨.

† History of Classical Sanskrit Literature by M. Krishnamacharya P. 38 39.

§ Kavindravachana Samuchaya P. 20.

‖ Ibid . . . P. 20

# ಭ ಟ್ಟ ಮು ರಾ ರಿ

ಇವನು ಬ್ರಾಹ್ಮಣನು. ತಂತುಮತೀ ಮತ್ತು ವರ್ಧಮಾನಭಟ್ಟನ ಪುತ್ರನು. ಮೌದ್ಗಲ್ಯ ಗೋತ್ರದವನು ಎಂಬುದು " ಅಸ್ತಿಮೌದ್ಗಲ್ಯ ಗೋತ್ರಸಂಭವಸ್ಯ ಮಹಾ ಕವೇರ್ಭಟ್ಟ ಶ್ರೀವರ್ಧಮಾನ ತನುಜನ್ಮನಃ ತಂತುಮತೀನಂದನಸ್ಯ ಮುರಾರೇಃ .... .... .... " ಎಂಬುದರಿಂದ ಗೊತ್ತಾಗುತ್ತದೆ.* ಇವನು ನರ್ಮದಾತೀರವಾಸಿ ಯಾಗಿರಬಹುದು. ನರ್ಮದಾ ನದಿಯ ತೀರದಲ್ಲಿ ಈಗಣ ಮಾಂಧಾತವೆಂದು ಪ್ರಸಿದ್ಧವಾಗಿರುವ ಮಾಹಿಷ್ಮತೀ ನಗರದ ಕಲಚೂರಿವಂಶದ ಅರಸರು ಈತನ ಆಶ್ರ ಯದಾತರೆಂದು ಹೇಳುತ್ತಾನೆ† ಇವನು ದೇಶಾಟನವನ್ನು ಮಾಡಿ ವಿಶೇಷ ಪಾಂಡಿತ್ಯ ವನ್ನೂ ವಿಪುಳಧನವನ್ನೂ ಸಂಪಾದಿಸಿರಬಹುದಾಗಿ ತೋರುತ್ತದೆ. ತಾನು ಸಂಚರಿ ಸಿದ ದೇಶಗಳನ್ನು ಬಹುಮಟ್ಟಿಗೆ ವರ್ಣಿಸಿರುವದು ಅಲ್ಲಲ್ಲಿ ಕಂಡುಬರುತ್ತದೆ. ಇವ ನಲ್ಲಿ ಸ್ವತಂತ್ರಕವಿತಾ ಸಾಮರ್ಥ್ಯವೂ ಉದ್ದಾಮ ಪಾಂಡಿತ್ಯವೂ ಇದ್ದುದಾದರೂ ಇವನ ಕವಿತೆಯು ಇತರರ ಕವಿತ್ವದಂತೆ ಇಲ್ಲದುದರಿಂದ "ಮುರಾರೇಸ್ತೃತೀಯಃ ಪಂಥಾಃ" ಎಂದು ಲೋಕವು ಕರೆದಿರಬೇಕಾಗಿ ತೋರುತ್ತದೆ. ಇವನು ತನ್ನ ಗ್ರಂಥ ದಲ್ಲಿ 'ಮಹಾಕವಿ'ಯೆಂದೂ "ಬಾಲವಾಲ್ಮೀಕಿ" ಎಂಬ ಹೆಸರನ್ನು ಆರೋಪಿಸಿಕೊಂಡಿ ರುವನಲ್ಲದೆ "ಆಪಾತಾಳಸಿಮಗ್ನಪೀವರತನುಃ ಜಾನಾತಿಮಂಥಾಚಲಃ" ಎಂಬ ಉಪಮೇಯಪ್ರಯೋಗದಿಂದ ವಿದ್ಯಾವಂತರ ಸಾರ ಕೌಶಲ ವಿಚಾರವು ತನಗೆಮಾತ್ರ ಗೊತ್ತಿರುವುದು ಹೊರ್ತು ಇತರರಿಗೆ ತಿಳಿಯದೆಂದು ಅಭಿಮಾನ ಪುರಸ್ಸರವಾಗಿ ಒಕ್ಕಣಿಸಿಕೊಂಡಿರುವನು. ಮುರಾರಿಯ ವಿಚಾರವಾಗಿ,

(೧) ದೇವೀಂ ವಾಚಮುಪಾಸತೇಹಿ ಬಹವಸ್ಸಾರಂತು ಸಾರಸ್ವತಂ
ಜಾನೀತೇ ನಿತರಾಮಸೌ ಗುರುಕುಲಕ್ಲಿಷ್ಟೋ **ಮುರಾರಿಃ** ಕವಿಃ
ಎಂದೂ

(೨) "**ಮುರಾರಿ**ಪದಚಿಂತಾಚೇತ್ತ ಥಾಮಾಘೇಮತಿಂಕುರು" ಎಂದೂ

(೩) **ಮುರಾರಿ**ಪದಚಿಂತಾಯಾಂ ಭವಭೂತೇಸ್ತುಕಾಕಥಾ
ಮುರಾರಿ ಮುರರೀಕೃತ್ಯ ಭವಭೂತಿಂಪರಿತ್ಯಜ ||

ಎಂಬ ಲೋಕ ಹೇಳಿಕೆಯು ಬಳಕೆಯಲ್ಲಿರುವುದು.

**ಕಾಲ** :—ಇವನ ಕಾಲವನ್ನು ನಿರ್ಣಯಿಸಿ ಹೇಳಲಾಗದಿದ್ದರೂ ಮುರಾರಿಯು ಮಹಾಕವಿಭವಭೂತಿಯ ಉತ್ತರ ರಾಮಚರಿತದ ಶ್ಲೋಕಗಳನ್ನು ಹೇಳಿಕೊಂಡಿರು

* ಅನರ್ಘರಾಘವ ಪ್ರಸ್ತಾವನೆ. ಪು. ೨.

† A. B. Keith's The Sanskrit Drama P. 226.

ವುದರಿಂದ ಭವಭೂತಿಗಿಂತ ಈಚಿನವನೂ ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದವನಾದ ರತ್ನಾಕರನು ಮುರಾರಿಯನ್ನು ಅನುಸಂಧಿಸಿ ಹರವಿಜಯದಲ್ಲಿ ಹೇಳಿಕೊಂಡಿರುವುದರಿಂದ ರತ್ನಾಕರನಿಗೆ ಪ್ರಾಚೀನನೂ ಕ್ರಿ, ಶ. ೯ನೆಯ ಶತಮಾನದ ಆದಿಭಾಗದವನೆಂದೂ ಹೇಳುವುದಾದರೆ ನ್ಯೂನತೆಯಾಗದು.

**ಗ್ರಂಥ:**—ಇವನು ಬರೆದುದಾದ "ಅನರ್ಘರಾಘವ" ಎಂಬ ಏಳು ಅಂಕಗಳುಳ್ಳ ನಾಟಕವು ಮಾತ್ರ ಪ್ರಕೃತ ದೊರೆತಿರುವುದು. ಇದರಲ್ಲಿ ದಶರಥನು ವಿಶ್ವಾಮಿತ್ರನ ಯಜ್ಞರಕ್ಷಣಾರ್ಥವಾಗಿ ರಾಮಲಕ್ಷ್ಮಣರನ್ನು ಕಳುಹಿದುದನ್ನು ಮೊದಲುಮಾಡಿಕೊಂಡು ರಾವಣ ವಧೆಯನ್ನು ಮಾಡಿ ಅನಂತರ ಅಯೋಧ್ಯೆಗೆ ಹಿಂತಿರುಗಿ ಶ್ರೀರಾಮನು ಪಟ್ಟಾಭಿಷಿಕ್ತನಾದನೆಂಬವರೆಗಿನ ರಾಮಾಯಣ ಕಥೆಯನ್ನು ತೆಗೆದುಕೊಂಡು ವರ್ಣಿಸಿರುವನು. ನಾಟಕವು ಶೋಭಿಸಬೇಕಾದರೆ ಶೃಂಗಾರ ಮತ್ತು ವೀರರಸಗಳಿಂದ ಕೂಡಿರಬೇಕೆಂದೂ ಭೀಭತ್ಸ ರೌದ್ರ ಭಯಾನಕಾದಿ ಇತರ ರಸಗಳು ಕಳೆಕಟ್ಟಲರಿಯವೆಂದೂ ರುಚಿಸದೆಂದೂ ಹೇಳಿರುವುದು ಹೊರ್ತು ಇವನು ಆರಿಸಿಕೊಂಡು ಹೇಳಿರುವ ಈ ನಾಟಕವು ಮಹಾಕವಿ ಭವಭೂತಿಗಿಂತಲೂ ಮುರಾರಿಯು ಉತ್ತಮಕವಿಯಲ್ಲದುದರಿಂದ ಫಲಕಾರಿಯಾಗಲಿಲ್ಲವೆಂದು ನಮಗೆನಿಸುತ್ತದೆ. ಮಹಾ ವೀರಚರಿತೆಯಲ್ಲಿರುವಂತೆಯೇ ಇದರಲ್ಲಿಯೂ ಕಥಾವಸ್ತುಗಳು ಕಾಣಬರುತ್ತವೆಯಾದುದರಿಂದ ಅವು ಮುರಾರಿಯಿಂದ ಆದರಿಸಲ್ಪಟ್ಟವುಗಳೆಂದು ಹೇಳಬಹುದಾಗಿದೆ.

(೧) ಕಥೆಯನ್ನು ಬರೆದು ಹೇಳುವುದರಲ್ಲಿ ಕಾಲವ್ಯತ್ಯಾಸವನ್ನು ತೋರಿಸದೆ ಹೇಳಿರುವನು. (೨) ನಾಟಕಪ್ರಕ್ರಮದಲ್ಲಿ ಉದ್ದೇಶಭಂಗವು ತೋರುತ್ತದೆ. ಮಧ್ಯಾಹ್ನ ವರ್ಣನವನ್ನು ಮಾಡಿದಕೂಡಲೆ ರಾತ್ರಿಯವರ್ಣನೆ ಚಂದ್ರೋದಯ ವರ್ಣನೆಗಳು ಇರುತ್ತವೆ. (೩) ಶ್ರೀರಾಮ ಸಂಬಂಧದ ಕಥೆಯನ್ನು ಆರಿಸಿತೆಗೆದು ಬರೆದಿದ್ದರೂ ಇತರರಂತೆ ಉತ್ತಮವಾಗಿಲ್ಲ. (೪) ಇದರಲ್ಲಿನ ಪಾತ್ರಗಳು ಅಚ್ಚಿನ ಬೊಂಬೆಗಳಂತೆ ಕಾಣಬರುತ್ತವೆ. (೫) ಪಾತ್ರರಚನೆಯಲ್ಲಿ ವ್ಯಕ್ತಿತ್ವವು ಕಾಣಬರುವುದಿಲ್ಲ. ಇದರಲ್ಲಿ ಅತಿಶಯೋಕ್ತಿ ಉತ್ಪ್ರೇಕ್ಷೆ ಇವು ಹೇರಳವಾಗಿವೆ. ಹೀಗೆ ಇರುವುದಾದರೂ ಶೈಲಿ ಮತ್ತು ಶಬ್ದರಚನೆಯಲ್ಲಿ ಅತ್ಯಂತ ಕೌಶಲವು ತೋರ್ಪಡುವುದಾದರೂ ಸಂದರ್ಭಕ್ಕೆ ಮೀರಿ ಅರ್ಥವನ್ನುಂಟುಮಾಡುವುದಲ್ಲದೆ ರಚನಾಕ್ರಮದಲ್ಲಿಯೂ ವ್ಯಾಕರಣ ವಿಷಯಗಳಲ್ಲಿ ತನ್ನ ಪೌಢಿಮೆಯನ್ನೆಲ್ಲಾ ವೆಚ್ಚಮಾಡಿರುವನು. ಇವನ ಗ್ರಂಥದ ವ್ಯಾಕರಣ ವಿಷಯಗಳನ್ನು ಅನೇಕ ವೈಯ್ಯಾಕರಣರು ಉದಾಹರಿಸಿಕೊಂಡಿರುವರು. ವೃತ್ತಗಳು ಬಹಳ ದೊಡ್ಡವು. ಕೆಲವು ವರ್ಣನೆಗಳು ಬಹು ಚೆಲುವಾಗಿವೆ.

ಯೇಃಶಬ್ದಶಾಸ್ತ್ರನಿಷ್ಣಾತಾ ಯೇ ಶೀಲಿತನಿಘಂಟುವಃ
ತೇಷಾಮೇವಾಧಿಕಾರೋಽಸ್ತಿ **ಮುರಾರಿ** ಕೃತನಾಟಕೇ ||

ಎಂದು ಹೇಳುವ ಕೇವಲ ಶಬ್ದಶಾಸ್ತ್ರಾಧೀತಸಂಪನ್ನರಿಗೆ ನ್ಯಾಯವಾಗಿ ನಾಟಕಕ್ಕೆ ಇರಬೇಕಾದ ಶೈಲಿಯಮಾರ್ದ್ರವ, ರಚನಾಕೌಶಲ, ವಿಷಯಸಮರ್ಥನ, ಪಾತ್ರಗಳ ಗಂಭೀರತೆ ಇವೆಲ್ಲವೂ ಕ್ಲಿಷ್ಟಪದಜೋಡಣೆಯಾಗಿ ನಾಟಕ ಸೌಂದರ್ಯವು ಮಾರ್ಪಟ್ಟು ಹೋಗಿರುವುದು ಕಾಣಿಸದು. ಒಟ್ಟಿನಲ್ಲಿ ಈ ನಾಟಕವು ಪ್ರಥಮ ಶ್ರೇಣಿಯದೆಂದೆನಲಾಗುವುದಿಲ್ಲ. ಇದಕ್ಕೆ ಶ್ರೀರಾಮಾನಂದಾಶ್ರಮಮುನಿವಿರಚಿತ "ಇಷ್ಟಾರ್ಥಕಲ್ಪವಲ್ಲಿ" ಶ್ರೀವಿಷ್ಣುಭಟ್ಟವಿರಚಿತ 'ಪಂಚಿಕಾ' ಶ್ರೀಹರಿಹರದೀಕ್ಷಿತ ವಿರಚಿತ 'ಅನಾಮಿಕಾ' ಎಂಬ ಮೂರು ವ್ಯಾಖ್ಯಾನಗಳಿರುವುವು.

ಮಾದರಿಗಾಗಿ ಕೆಲವು ಶ್ಲೋಕಗಳು :--

ಯಾಂತಿನ್ಯಾಯ ಪ್ರವೃತ್ತಸ್ಯ
ತಿರ್ಯಂಚೋಽಪಿ ಸಹಾಯತಾಂ
ಅಪಂಥಾನಂತುಗಚ್ಛಂತಂ
ಸೋದರೋಽಪಿ ವಿಮುಂಚತಿ ||

ನ್ಯಾಯಮಾರ್ಗಪ್ರವೃತ್ತಕನಿಗೆ ಕೇವಲ ತಿರ್ಯಕ್ಪ್ರಾಣಿಗಳೂ ಸಹಾಯವನ್ನು ಮಾಡುತ್ತವೆ. ದುರ್ಮಾರ್ಗಗಾಮಿಯನ್ನು ಸಹೋದರನಾದರೂ ತ್ಯಜಿಸಿಬಿಡುವನು (ಇಲ್ಲಿ ನ್ಯಾಯಪ್ರವೃತ್ತಕನಾದ ಶ್ರೀರಾಮನಿಗೆ ತಿರ್ಯಕ್ಪ್ರಾಣಿಗಳಾದ ಕಪಿಗಳೂ ಸಹಾಯವನ್ನು ಮಾಡಿದವೆಂತಲೂ ದುರ್ಮಾರ್ಗ ಗಾಮಿಯಾದ ರಾವಣನನ್ನು ವಿಭೀಷಣನು ಸಹೋದರನಾಗಿದ್ದರೂ ಲೆಕ್ಕಿಸದೆ ತ್ಯಜಿಸಿದನೆಂಬರ್ಥವನ್ನು ಹೇಳುವುದಾಗಿದೆ.)

ಧನುರ್ಭಂಗವನ್ನು ಮಾಡಿದ ಶ್ರೀರಾಮನನ್ನು ನೋಡಿ ಪರಶುರಾಮನ ಪರಿಹಾಸ.

ಅರೇ ! ಅನಾತ್ಮಜ್ಞ ! ಕ್ಷತ್ರಿಯವಟೋ !

ತಚ್ಛಾಪಮಿಶಕರಪೀಡನವೀತಸಾರಂ
ಪ್ರಾಗಸ್ಯಭಜ್ಯತಭವಾಂಸ್ತು ನಿಮಿತ್ತಮಾತ್ರಂ
ರಾಜನ್ಯಕಪ್ರಧನಸಾಧನ ಮಸ್ಮದೀಯ
ಮಾಕರ್ಷಕಾರ್ಮುಕಮಿದಂಗುರುವಧ್ರಜನ್ಯ || ೪—೫೫

ಸ್ವಸ್ವರೂಪವನ್ನರಿಯದ ಎಲೈ ! ಕ್ಷತ್ರಿಯ ವಟುವೆ (ನೀನೇನು ಮಹಾಧನುರ್ಭಂಗವನ್ನು ಮಾಡಿದುದು) ಈಶ್ವರನ ಮುಷ್ಟಿಘರ್ಷಣದಿಂದ ನಿಸ್ಸಾರವಾಗಿ ಹೋಗಿದ್ದ ಆ ಧನಸ್ಸು ನಿನ್ನ ಶಕ್ತಿಯನ್ನು ತೋರಿಸುವುದಕ್ಕೆ ಮುಂಚೆಯೇ ತಾನಾಗಿ ಮುರಿದುಹೋದುದು. ಆದರೆ ನೀನು ಕಾರಣಮಾತ್ರವಲ್ಲದೆ ಬೇರೆ

ಇಲ್ಲ. ಅನೇಕ ರಾಜರೊಡನೆ ಯುದ್ಧವನ್ನು ಮಾಡಿ ಅತ್ಯಂತ ಕಠಿಣವಾಗಿರುವ ಈ ವೈಷ್ಣವ ಧನುಸ್ಸನ್ನು ಎತ್ತಿ ಹೆದೆಯನ್ನು ಕಟ್ಟಿ ಎಳೆ ನೋಡೋಣ !

ಪ್ರಾಣಾಯಾಮೋಪದೇಷ್ಟಾ ಸರಸಿರುಹಮುನೇರ್ಯೌವನೋದ್ದಾಮಲೀಲಾ
ಗೋಷ್ಠೀನಾಂ ಪೀಠಮರ್ದಸ್ತ್ರಿಭುವನವನಿತಾನೇತ್ರಯೋಃ ಪ್ರಾತರಾಶಃ
ಕುಮಾಯುಷ್ಯೋಮಯಜ್ಞಾಪಮಿತಕುಮುದಿನೀ ಮೌನಮುದ್ರಾವತಾರಃ
ಶೃಂಗಾರಾದ್ವೈತವಾದೀ ಸಭವತಿ ಭಗವಾನೇಷ ಪೀಯೂಷ ಭಾನುಃ|| ೭—೬೧

ಕಮಲವೆಂಬ ತಪೋಧನನಿಗೆ ಪ್ರಾಣಾಯಾಮವನ್ನು ಉಪದೇಶಿಸುವನಾಗಿಯೂ, ಯೌವನವೆಂಬ ಕಾಮವಿಲಾಸ ಪ್ರಸಂಗಗಳಿಗೆ ಸಹಾಯಕ (ಎಂದರೆ ನಾಯಕನಿಗೆ ನಾಯಿಕಾನುಸರಣದಲ್ಲಿ ಸಹಾಯಭೂತ) ನಾಗಿಯೂ, ತ್ರಿಭುವನದಲ್ಲಿರತಕ್ಕ ಸ್ತ್ರೀಯರಿಗೆ ಸಿದ್ಧಾನ್ನ ಪ್ರಾಯನಾಗಿಯೂ, ಮನ್ಮಥನ ಆಯುರ್ವೃದ್ಧಿಯಲ್ಲಿ ಬದ್ಧದೀಕ್ಷಿತನಾಗಿಯೂ ಕುಮುದಿನಿಯರ ಮೌನಮುದ್ರೆಯನ್ನು ಭಂಗಪಡಿಸುವುದರಲ್ಲಿ ಅನುರಾಗಯುಕ್ತನಾಗಿಯೂ ಶೃಂಗಾರರಸ ಪ್ರಾಮುಖ್ಯತೆಯನ್ನು ಸಾರುವನಾದ (ಎಂದರೆ ಶೃಂಗಾರರಸಹೊರ್ತು ಬೇರೆ ರಸವಿಲ್ಲವೆಂದು ಹೇಳುವನಾದ) ಚಂದ್ರನು ಪ್ರಕಾಶಿಸುತ್ತಿರುವನು.



## ಶಂಕುಕ

ಇವನು ಕಾಶ್ಮೀರದವನು. ಇವನು ಕ್ರಿ. ಶ. ೮೧೩ರಲ್ಲಿ ಕಾಶ್ಮೀರದಲ್ಲಿ ಆಳಿದ ಅಜಿತಾಪೀಡನ ಕಾಲದಲ್ಲಿ '**ಭುವನಾಭ್ಯುದಯು**' ವೆಂಬ ಕಾವ್ಯವನ್ನು ಬರೆದುದಾಗಿ. —

ಕವಿರ್ಬುಧಮನಃ ಸಿಂಧುಶಶಾಂಕಃ ಶಂಕುಕಾಭಿಧಃ |
ಯಮುದ್ದಿಶ್ಯ ಕರೋತ್ಕಾವ್ಯಂ "ಭುವನಾಭ್ಯುದಯಾ"ಭಿದಂ||

ಎಂಬ ರಾಜತರಂಗಿಣಿಯ ಶ್ಲೋಕದಿಂದ ತಿಳಿಯಬರುತ್ತದೆ.*

ಪಂಡಿತ ಜಿ. ಯೆ. ಜಾಕೋಬರವರು ಇವನ ಕಾಲವನ್ನು ಕ್ರಿ. ಶ, ೮೧೬ ಎಂದು ನಿರ್ಧರಿಸಿರುವರು.§ ಇದರಿಂದ ಇವನು ಕ್ರಿ. ಶ. ೯ನೆಯ ಶತಮಾನದವ

* ರಾಜತರಂಗಿಣೀ ೧. ೪—೭೦೫.

§ G. A. Jacob Notes on Alamkara Literature in J. R. A S. New Series Vol. 29 (1897) P. 287, or General Introduction to the Sanskrit Poems of Mayura by G. P. Quackenbos P. 51

ನೆನ್ನಬೇಕಾಗುವುದು. ಶಂಕುಕರೆಂಬುವರು ಸಂಸ್ಕೃತಸಾಹಿತ್ಯದಲ್ಲಿ ಮೂರು ಜನರು ದೊರೆಯುವರು.—

(೧) ಶಾರ್ಙ್ಗಧರಪದ್ಧತಿಯಲ್ಲಿ.—

ದುರ್ವಾರಾಃ ಸ್ಮರಮಾರ್ಗಣಾಃ . . . ಸರ್ವೇಽಗ್ರ್ಯಯೋ ದುಸ್ಸಹಾಃ ||

ಎಂಬ ಶ್ಲೋಕವನ್ನು ಬರೆದು "ಮಯೂರಸೂನೋಃ ಶಂಕುಕಸ್ಯ" ಎಂದು ಹೇಳಿಕೊಂಡಿರುವನೊಬ್ಬ.

(೨) ಭುವನಾಭ್ಯುದಯಕಾವ್ಯವನ್ನು ಬರೆದ ಶಂಕುಕನೊಬ್ಬ.

(೩) ಜ್ಯೋತಿರ್ವಿದಾಭರಣವೆಂಬ ಜ್ಯೋತಿಷಗ್ರಂಥದಲ್ಲಿ "ಧನ್ವಂತರಿಃ ಕ್ಷಪಣಕಾಮರಸಿಂಹ ಶಂಕು" ಎಂದು ಹೇಳಿರುವ ವಿಕ್ರಮಾರ್ಕ (?) ನ ಸಭೆಯ ನವರತ್ನಗಳಲ್ಲೊಬ್ಬ.

ಈ ಮೂವರಲ್ಲಿ ಶಾರ್ಙ್ಗಧರಪದ್ಧತಿಯಲ್ಲಿ ಹೇಳಲ್ಪಟ್ಟಿರುವ ಶಂಕುಕನು ಕ್ರಿ. ಶ. ೭ನೆಯ ಶತಮಾನದವನು. ಇವನು ಯಾವ ಗ್ರಂಥವನ್ನು ಬರೆದಿರುವನೆಂಬುದು ತಿಳಿಯದು.

ವಿಕ್ರಮಾರ್ಕನ (?) ನವಮಣಿಗಳಲ್ಲೊಬ್ಬನೆಂದು ಹೇಳಲ್ಪಟ್ಟಿರುವ ಶಂಕುವು ಕವಿಮಾಲೆಯಲ್ಲಿ ಸೇರಿಸಲ್ಪಟ್ಟಿರುವುದರಿಂದ ಕವಿಯೆಂದು ಹೇಳಬೇಕಾಗಿರುವುದೇ ಹೊರತು ಇವನು ಬರೆದುದಾಗಿರುವ ಗ್ರಂಥವು ಯಾವುದೆಂಬುದು ತಿಳಿಯದು.



## ರ ತ್ನಾ ಕ ರ

ಇವನು ಕಾಶ್ಮೀರದವನು. ಅಮೃತಭಾನುವಿನ ಮಗನು ಎಂಬುದು ಈ ಶ್ಲೋಕದಿಂದ ವ್ಯಕ್ತವಾಗುವುದು.

ಶ್ರೀದುರ್ಗದತ್ತನಿಜವಂಶಹಿಮಾದ್ರಿಸಾನು
ಗಂಗಾಹ್ವದಾಶ್ರಯಸುತಾಮೃತಭಾನುಸೂನುಃ ।
ರತ್ನಾಕರೋ ಲಲಿತಬಂಧಮಿದಂ ವ್ಯಧತ್ತ
ಚಂದ್ರಾರ್ಧಚೂಡಚರಿತಾಶ್ರಯಚಾರುಕಾವ್ಯಂ ॥

—(ಹರವಿಜಯಗ್ರಂಥಕರ್ತೃಃಪ್ರಶಸ್ತಿ ಪುಟ ೭೦೭ ಶ್ಲೋಕ ೧)

ಇವನನ್ನು ರಾಜಾನಕರತ್ನಾಕರನೆಂದೂ, ಸೂರ್ಯಚಂದ್ರರನ್ನು ತಾಳಗಳಿಗೆ ಹೋಲಿಸಿ ಹೇಳಿರುವನಾದುದರಿಂದ ತಾಳರತ್ನಾಕರನೆಂಮೂ ಕರೆಯುವರು.

ಅಸ್ತಾವಲಂಬಿರವಿಬಿಂಬತಯೋದಯಾದ್ರಿ
ಚೂಡೋನ್ನಿಷತ್ಸಕಲಚಂದ್ರತಯಾ ಚ ಸಾಯಂ ।
ಸಂಧ್ಯಾಪ್ರನೃತ್ತಹರವಾದ್ಯಗೃಹೀತಕಾಂಸ್ಯ
ತಾಲದ್ವಯೇವ ಸಮಲಕ್ಷ್ಯತ ನಾಕಲಕ್ಷ್ಮೀಃ ॥
—ಹರವಿಜಯ ೧೯—೫

ಅಸ್ತಾದ್ರಿಯನ್ನಡರುತ್ತಿರುವ ಸೂರ್ಯನನ್ನೂ ಪೂರ್ವಾದ್ರಿಯಲ್ಲಿ ಅವತರಿಸುತ್ತಿರುವ ಚಂದ್ರನನ್ನೂ ನೋಡಿದರೆ ನಾಕಲಕ್ಷ್ಮಿಯು ಸಂಧ್ಯಾಸಮಯದ ಪರಶಿವನ ತಾಂಡವ ಸಮಯದಲ್ಲಿನ ವಾದ್ಯಗಳಲ್ಲಿ ತಾನೂ ಭಾಗಿಯಾಗಿರಬೇಕೆಂದು ಆಶಿಸಿ ಸೂರ್ಯಚಂದ್ರರೆಂಬ ತಾಳಗಳನ್ನು ಹಿಡಿದು ನಿಂತಿರುವಂತೆ ಕಾಣುವುದು.)

ಇವಲ್ಲದೆ ಇವನಿಗೆ 'ವಾಗೀಶ್ವರಾಂಕ' 'ವಿದ್ಯಾಧಿಪತಿ' ಎಂಬ ಉಪನಾಮಗಳಿದ್ದುವಾಗಿ.—

"ಇತಿಶ್ರೀಬಾಲಬೃಹಸ್ಪತ್ಯನುಜೀವಿನೋ ವಾಗೀಶ್ವರಾಂಕಸ್ಯ ವಿದ್ಯಾಧಿಪತ್ಯಪರನಾಮ್ನೋ ಮಹಾಕವೇ ರಾಜಾನಕಶ್ರೀರತ್ನಾಕರಸ್ಯಕೃತೌ"

ಎಂದು ಕವಿಯು ಪ್ರತಿಸರ್ಗಾಂತ್ಯದಲ್ಲಿ ಹೇಳಿಕೊಂಡಿರುವುದರಿಂದ ಗೊತ್ತಾಗುವುದು. ಇವನ ಆಶ್ರಯದಾತನಾದ ಚಿಪ್ಪಟಜಯಾಪೀಡನಿಗೆ 'ಬೃಹಸ್ಪತಿ' 'ಬಾಲಬೃಹಸ್ಪತಿ' ಎಂಬ ಹೆಸರುಗಳು ಇದ್ದುವಾಗಿ ರಾಜತರಂಗಿಣಿ ಯಿಂದ ತಿಳಿದುಬರುತ್ತದೆ.

**ಕಾಲ:**—(೧) ಇವನು ಕ್ರಿ. ಶ. ೮೫೫-೮೮೪ರಲ್ಲಿ ಕಾಶ್ಮೀರದಲ್ಲಿ ಆಳಿದ ಅವಂತಿವರ್ಮನ ಕಾಲದವನೆಂದು.—

ಮುಕ್ತಾಕಣಶಿವಸ್ವಾಮೀ ಕವಿರಾನಂದವರ್ಧನಃ ।
ಪ್ರಥಾಂ ರತ್ನಾಕರಶ್ಚಾಗಾತ್ಸಾಮ್ರಾಜ್ಯೇಽವಂತಿವರ್ಮಣಃ ॥

ಎಂದು ಕಲ್ಹಣನು ರಾಜತರಂಗಿಣಿಯಲ್ಲಿ ಬರೆದುಕೊಂಡಿರುವನು.† ಇದರಿಂದ ರತ್ನಾಕರನು ಕ್ರಿ. ಶ. ೯ನೆಯ ಶತಮಾನದ ಉತ್ತರಾರ್ಧದಲ್ಲಿದ್ದನೆಂಬುದು ಸ್ಪಷ್ಟವಾಗುವುದು.

* ರಾಜತರಂಗಿಣೀ ೪—೬೮೦.

† Ibid P. 5—35.

(೨) ಯಂ. ಕೃಷ್ಣಮಾಚಾರ್ಯರವರು ರತ್ನಾಕರನ ಹರವಿಜಯದ ವಿಚಾರ ವಾಗಿ ಬರೆಯುವಾಗ ಜಯಾಪೀಡನ ಆಳಿಕೆಯು ಕ್ರಿ. ಶ. ೭೭೯-೮೧೩ರ ವರೆಗೆಂದು ಬರೆದಿರುವರು.‡

(೩) ಕವಿಯು "ಬಾಲಬೃಹಸ್ಪತ್ಯಪರನಾಮಾ ಚಿಪ್ಪಟಜಯಾಪೀಡಮಹೀಪತಿರ್ನವಮಶತಕಪ್ರಾರಂಭ ಏವ ಕಾಶ್ಮೀರದೇಶಂ ಶಶಾಸ" ಎಂದು§ ಹೇಳಿರುವುದರಿಂದ ಕವಿಯು ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದವನೆಂಬುದು ಸ್ಪಷ್ಟವಾಗುವುದು.

(೪) ಪ್ರೊ. ಮ್ಯಾಕಡಾನಲ್ಲರವರು ಕಲ್ಹಣಪಂಡಿತನ ಅಭಿಪ್ರಾಯವನ್ನು ಅನುಮೋದಿಸಿ ರತ್ನಾಕರನು ಕ್ರಿ. ಶ. ೯ನೆಯ ಶತಮಾನದವನೆಂದು ಹೇಳಿರುವರು. $

ಹೀಗೆ ನವಮಶತಕ ಪೂರ್ವಾರ್ಧವೆಂಬ ಗ್ರಂಥಕಾರನ ಹೇಳಿಕೆಯೂ ಉತ್ತರಾರ್ಧವೆಂಬ ಕಲ್ಹಣಾದಿ ಚಾರಿತ್ರಕರ ಅಭಿಪ್ರಾಯವೂ ಭಿನ್ನವಿಸಿರುವುವು. ಇವುಗಳೆಲ್ಲವನ್ನೂ ಸಮದೃಷ್ಟಿಯಿಂದ ವಿವೇಚಿಸುವವರಿಗೆ ಈ ಕೆಳಗಿನ ವಿಷಯಗಳು ಸಮರ್ಥಿತವಾಗುವುವು.

(೧) ಕ್ರಿ. ಶ. ೭೫೫ ೭೮೬ರ ವರೆಗೆ ಕಾಶ್ಮೀರದಲ್ಲಿ ಆಳಿದ ಜಯಾಪೀಡನಿಗೂ ಕ್ರಿ. ಶ. ೮೫೫-೮೮೪ರ ವರೆಗೆ ಕಾಶ್ಮೀರದಲ್ಲಿ ಆಳಿದ ಅವಂತಿವರ್ಮನಿಗೂ ಇರುವ ಒಂದು ನೂರುವರ್ಷಗಳ ಅಂತರಕಾಲದಲ್ಲಿ ಆಳಿಹೋದ ರಾಜರುಗಳಲ್ಲಿ ಮುಖ್ಯನಾಗಿಯೂ, ಮೊದಲನೆಯವನಾಗಿಯೂ ಕ್ರಿ. ಶ. ೯ನೆಯ ಶತಮಾನ ಪ್ರಾರಂಭದ ಕೆಲವು ವರ್ಷಗಳ ವರೆಗೆ ಎಂದರೆ ಕ್ರಿ· ಶ. ೮೧೩ರ ವರೆಗೆ ಆಳಿದ ಚಿಪ್ಪಟಜಯಾಪೀಡನ ಆಶ್ರಯದಲ್ಲಿ ರತ್ನಾಕರನಿದ್ದಿರಬೇಕೆಂದು ಬೋಧೆಯಾಗುವುದು.

(೨) ಯಂ. ಕೃಷ್ಣಮಾಚಾರ್ಯರವರು ಹೇಳುವ ಜಯಾಪೀಡನೇ ಚಿಪ್ಪಟಜಯಾಪೀಡನಾಗಿರಬೇಕೆಂದೂ ಕ್ರಿ. ಶ. ೭೭೯ರಿಂದ ಕ್ರಿ. ಶ. ೭೮೬ರ ವರೆಗೆ ೭ ವರ್ಷಗಳು ಚಿಪ್ಪಟಜಯಾಪೀಡನು ಯುವರಾಜಪದವಿಯನ್ನಲಂಕರಿಸಿದ್ದಿರಬೇಕೆಂದೂ ಚಿಪ್ಪಟಜಯಾಪೀಡನ ಕಾಲವು ಕ್ರಿ. ಶ. ೭೭೯-೮೧೩ರವರೆಗೆಂದೂ ಬೋಧೆಯಾಗುವುದು.

‡ History of Classical Sanskrit Literature P, 40.

§ ಹರವಿಜಯದ ಆಮುಖ ಪುಟ ೧

$ History of Sanskrit Literature P· 330·

(೩) ಕ್ರಿ. ಶ. ೮೫೫ರಿಂದ ಅವಂತಿವರ್ಮನ ಆಳ್ವಿಕೆಯಾರಂಭವಾದ ಕ್ರಿ. ಶ. ೮೫೫ರ ವರೆಗಾಗುವ ೪೨ ವರ್ಷಗಳ ಕಾಲದಲ್ಲಿ ಎಷ್ಟೋ ಜನರು ಆಳಿ ಅಳಿದಿರಬಹುವಾಗಿ ತೋರಿಬರುವುದರಿಂದ ಮೇಲೆ ಹೇಳಿರುವ ಕಲ್ಹಣನ ಶ್ಲೋಕದಂತೆ ರತ್ನಾಕರನು ಅವಂತಿವರ್ಮನ ಕಾಲದವನಾಗನೆಂದೂ.

(೪) ಕವಿಯು ಹೇಳಿರುವುದನ್ನು ಬಿಟ್ಟು ಕಲ್ಹಣನು ಹೇಳುವಂತೆ ಕ್ರಿ. ಶ. ೯ನೆಯಶತಮಾನದ ಉತ್ತರಾರ್ಧದವನೆನ್ನುವುದು ಅಸಂಗತವಾಗಿ ತೋರುವುದರಿಂದ ರತ್ನಾಕರನು ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದಲ್ಲಿದ್ದವನೆಂದು ಹೇಳಿದರೆ ತಪ್ಪಾಗದು.

**ಗ್ರಂಥಗಳು:—ರತ್ನಾಕರನು** (೧) **ಹರವಿಜಯ** (೨) **ವಕ್ರೋಕ್ತಿಪಂಚಾಶಿಕಾ** (೩) **ಧ್ವನಿಗಾಥಾಪಂಚಿಕಾ** ಎಂಬ ಮೂರು ಗ್ರಂಥಗಳನ್ನು ರಚಿಸಿದುದಾಗಿ ತಿಳಿಯಬರುತ್ತದೆ.

ಹರವಿಜಯವೆಂಬುದು ಮಹಾಕಾವ್ಯವಾಗಿದ್ದು ೫೦ ಸರ್ಗಗಳಿರುವುವು. ಕಥೆಯನ್ನು ಸ್ಕಾಂದಪುರಾಣದಿಂದ ಆರಿಸಿಕೊಂಡಿರುವನು. ಶಿವನು ಅಂಧಕಾಸುರನನ್ನು ಸಂಹರಿಸಿ ದೇವತೆಗಳನ್ನು ಸಂತೋಷಗೊಳಿಸಿದನೆಂಬುದೇ ಈ ಮಹಾ ಕಾವ್ಯ ಕಥಾಸಾರಾಂಶವಾಗಿರುವುದು. ಈ ಕಾವ್ಯಕ್ಕೆ ರಾಜಾನಕ ಅಲಕನೆಂಬುವನು ವ್ಯಾಖ್ಯಾನವನ್ನು ಬರೆದಿರುವನು.

ಎರಡನೆಯದಾದ 'ವಕ್ರೋಕ್ತಿಪಂಚಾಶಿಕಾ' ಎಂಬುದು ಈಶ್ವರ ಮತ್ತು ಪಾರ್ವತಿಯರ ವ್ಯಂಗ್ಯಾರ್ಥಕೌಶಲರೂಪವಾದ ಭಾಷಣಗಳನ್ನೊಳಗೊಂಡಿರುವುದು.

ಮೂರನೆಯದಾದ 'ಧ್ವನಿಗಾಥಾಪಂಚಿಕಾ' ಎಂಬುದು ನಮಗೆ ದೊರೆತಿರುವುದಿಲ್ಲ.

ವಸಂತತಿಲಕವೃತ್ತದ ಶ್ಲೋಕಗಳುಳ್ಳ ಅನೇಕ ಸರ್ಗಗಳು ಹರವಿಜಯದಲ್ಲಿ ದೊರೆಯುವುವು.

ಕ್ಷೇಮೇಂದ್ರನು ಸುವೃತ್ತತಿಲಕವೆಂಬ ತನ್ನ ಗ್ರಂಥದಲ್ಲಿ.—

ವಸಂತತಿಲಕಾರೂಢಾ ವಾಗ್ವಲ್ಲೀ ಗಾಢಸಂಗಿನೀ ।
ರತ್ನಾಕರಸ್ಯೋತ್ಕಲಿಕಾ ಚಕಾಸ್ತ್ಯಾನನಕಾನನೇ ॥ ೩—೩೨

* ಹರವಿಜಯ ಪುಟ ೧.

ಎಂದು ಒಕ್ಕಣಿಸಿರುವನು. ಹರವಿಜಯದ ಅನೇಕ ಶ್ಲೋಕಗಳು ಮಮ್ಮಟನ ಕಾವ್ಯಪ್ರಕಾಶದಲ್ಲಿ ಕಂಡುಬರುವುವು. ತನ್ನ ಕವಿತಾವಿಚಾರವಾಗಿ ಗ್ರಂಥಕಾರನು ಹೀಗೆ ಬರೆದುಕೊಂಡಿರುವನು.

ಲಲಿತಮಧುರಾಃ ಸಾಲಂಕಾರಾಃ ಪ್ರಸಾದಮನೋರಮಾ
ವಿಕಟಯಮಕಶ್ಲೇಶೋದ್ಗಾರಪ್ರಬಂಧನಿರರ್ಗಲಾಃ ।
ಅಸದೃಶಗತಿಶ್ಚಿತ್ರೇ ಮಾರ್ಗೇ ಮಮೋದ್ಗಿರತೋ ಗಿರೋ
ನ ಖಲು ನೃಪತೇ ಚೇತೋ ವಾಚಸ್ಪತೇರಪಿ ಶಂಕತೇ ॥
(ಹರವಿಜಯ ಗ್ರಂಥಕರ್ತುಃ ಪ್ರಶಸ್ತಿ ಶ್ಲೋಕ ೨)

ಎಂದೂ ಹರವಿಜಯಮಹಾಕಾವ್ಯವನ್ನು ಓದುವುದರಿಂದ ಕಾಲಕ್ರಮದಲ್ಲಿ ದೊಡ್ಡ ಕವಿಯಾಗಬಹುದೆಂದೂ.—

ಹರವಿಜಯಮಹಾಕವೇಃ ಪ್ರತಿಜ್ಞಾಂ
ಶೃಣುತ ಕೃತಪ್ರಣಯೋ ಮಮ ಪ್ರಬಂಧೇ ।
ಅಪಿ ಶಿಶುರಕವಿಃ ಕವಿಃಪ್ರಭಾವಾತ್
ಭವತಿ ಕವಿಶ್ಚ ಮಹಾಕವಿಃ ಕ್ರಮೇಣ॥ ಗ್ರಂಥಕರ್ತುಃ ಪ್ರಶಸ್ತಿ ಶ್ಲೋಕ ೬

ಎಂದು ಹೇಳಿಕೊಂಡಿರುವನು.

ಹರವಿಜಯದಲ್ಲಿ ಹೇಳಿರುವ.—

ನಂದೀಶನಿರ್ದಯಕರಾಹತಪುಷ್ಕರೇಷು
ಮಂದ್ರಂ ಧ್ವನತ್ಸು ಮುರಜೇಷು ವಿಭಜ್ಯ ತಂಡುಃ
ಆಸಾರಿತೇಷು ಪರಿಕಲ್ಪಿತಸಪ್ತಭೇದ
ಪರ್ಯಾಪ್ತ ಶೋಭಮಥ ತಾಂಡವಮಭ್ಯಗಾಯತ್ ॥

ಎಂಬ ಶಿವತಾಂಡವವರ್ಣನವು ಮಹಾಕವಿಭವಭೂತಿಯ.—

ಸಾನಂದಂ ನಂದಿಹಸ್ತಾಹತಮುರಜರವಾಹೂತಕೌಮಾರಬರ್ಹಿ
ತ್ರಾಸಾನ್ನಾಸಾಗ್ರರಂಧ್ರಂ ವಿಶತಿ ಫಣಿಪತೌ ಭೋಗಸಂಕೋಚಭಾಜಿ ।
ಗಂಡೋಡ್ಡೀನಾಳಿಮಾಲಾಮುಖರಿತಕಕುಭಸ್ತಾಂಡವೇ ಶೂಲಪಾಣೇಃ
ವೈನಾಯಕ್ಯಶ್ಚಿರಂ ವೋ ವದನ ವಿಧುತಯಃ ಪಾಂತು ಚೀತ್ಕಾರವತ್ಯಃ ॥

ಎಂಬ ಈ ಶ್ಲೋಕವನ್ನು ನೆನಪುಕೊಡುವುದು.

ವಕ್ರೋಕ್ತಿಪಂಚಾಶಿಕೆಯ ಮಾದರಿಯ ಶ್ಲೋಕವು ಹೀಗಿರುವುದು.—

ತ್ವಂ ಹಾಲಾಹಲಭೃತ್ಕರೋಷಿ ಮನಸೋ ಮೂರ್ಛಾಂಮಮಾಲಿಂಗಿತೋ
ಹಾಲಾಂ ನೈವ ಬಿಭರ್ಮಿ ನೈವ ಚ ಹಲಂ ಮುಗ್ಧೇ ಕಥಂ ಹಾಲಿಕಃ ।

(೩) ಕ್ರಿ. ಶ. ೮೫೩ರಿಂದ ಅವಂತಿವರ್ಮನ ಆಳ್ವಿಕೆಯಾರಂಭವಾದ ಕ್ರಿ. ಶ. ೮೫೫ರ ವರೆಗಾಗುವ ೪೨ ವರ್ಷಗಳ ಕಾಲದಲ್ಲಿ ಎಷ್ಟೋ ಜನರು ಆಳಿ ಅಳಿದಿರಬಹುದಾಗಿ ತೋರಿಬರುವುದರಿಂದ ಮೇಲೆ ಹೇಳಿರುವ ಕಲ್ಹಣನ ಶ್ಲೋಕದಂತೆ ರತ್ನಾಕರನು ಅವಂತಿವರ್ಮನ ಕಾಲದವನಾಗನೆಂದೂ.

(೪) ಕವಿಯು ಹೇಳಿರುವುದನ್ನು ಬಿಟ್ಟು ಕಲ್ಹಣನು ಹೇಳುವಂತೆ ಕ್ರಿ. ಶ. ೯ನೆಯಶತಮಾನದ ಉತ್ತರಾರ್ಧದವನೆನ್ನುವುದು ಅಸಂಗತವಾಗಿ ತೋರುವುದರಿಂದ ರತ್ನಾಕರನು ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದಲ್ಲಿದ್ದವನೆಂದು ಹೇಳಿದರೆ ತಪ್ಪಾಗದು.

**ಗ್ರಂಥಗಳು:**—ರತ್ನಾಕರನು (೧) **ಹರವಿಜಯ** (೨) **ವಕ್ರೋಕ್ತಿಪಂಚಾಶಿಕಾ** (೩) **ಧ್ವನಿಗಾಥಾಪಂಚಿಕಾ** ಎಂಬ ಮೂರು ಗ್ರಂಥಗಳನ್ನು ರಚಿಸಿದುದಾಗಿ ತಿಳಿಯಬರುತ್ತದೆ.

ಹರವಿಜಯವೆಂಬುದು ಮಹಾಕಾವ್ಯವಾಗಿದ್ದು ೫೦ ಸರ್ಗಗಳಿರುವುವು. ಕಥೆಯನ್ನು ಸ್ಕಾಂದಪುರಾಣದಿಂದ ಆರಿಸಿಕೊಂಡಿರುವನು. ಶಿವನು ಅಂಧಕಾಸುರನನ್ನು ಸಂಹರಿಸಿ ದೇವತೆಗಳನ್ನು ಸಂತೋಷಗೊಳಿಸಿದನೆಂಬುದೇ ಈ ಮಹಾ ಕಾವ್ಯ ಕಥಾಸಾರಾಂಶವಾಗಿರುವುದು. ಈ ಕಾವ್ಯಕ್ಕೆ ರಾಜಾನಕ ಅಲಕನೆಂಬುವನು ವ್ಯಾಖ್ಯಾನವನ್ನು ಬರೆದಿರುವನು.

ಎರಡನೆಯದಾದ 'ವಕ್ರೋಕ್ತಿಪಂಚಾಶಿಕಾ' ಎಂಬುದು ಈಶ್ವರ ಮತ್ತು ಪಾರ್ವತಿಯರ ವ್ಯಂಗ್ಯಾರ್ಥಕೌಶಲರೂಪವಾದ ಭಾಷಣಗಳನ್ನೊಳಗೊಂಡಿರುವುದು.

ಮೂರನೆಯದಾದ 'ಧ್ವನಿಗಾಥಾಪಂಚಿಕಾ' ಎಂಬುದು ನಮಗೆ ದೊರೆತಿರುವುದಿಲ್ಲ.

ವಸಂತತಿಲಕವೃತ್ತದ ಶ್ಲೋಕಗಳುಳ್ಳ ಅನೇಕ ಸರ್ಗಗಳು ಹರವಿಜಯದಲ್ಲಿ ದೊರೆಯುವುವು.

ಕ್ಷೇಮೇಂದ್ರನು ಸುವೃತ್ತತಿಲಕವೆಂಬ ತನ್ನ ಗ್ರಂಥದಲ್ಲಿ.—

ವಸಂತತಿಲಕಾರೂಢಾ ವಾಗ್ವಲ್ಲೀ ಗಾಢಸಂಗಿನೀ ।
ರತ್ನಾಕರಸ್ಯೋತ್ಕಲಿಕಾ ಚಕಾಸ್ತ್ಯಾನನಕಾನನೇ ॥ ೩—೩೨

* ಹರವಿಜಯ ಪುಟ ೧.

ಎಂದು ಒಕ್ಕಣಿಸಿರುವನು. ಹರವಿಜಯದ ಅನೇಕ ಶ್ಲೋಕಗಳು ಮಮ್ಮಟನ ಕಾವ್ಯಪ್ರಕಾಶದಲ್ಲಿ ಕಂಡುಬರುವುವು. ತನ್ನ ಕವಿತಾವಿಚಾರವಾಗಿ ಗ್ರಂಥಕಾರನು ಹೀಗೆ ಬರೆದುಕೊಂಡಿರುವನು.

ಲಲಿತಮಧುರಾಃ ಸಾಲಂಕಾರಾಃ ಪ್ರಸಾದಮನೋರಮಾ
ವಿಕಟಯಮಕಶ್ಲೇಷೋದ್ಗಾರಪ್ರಬಂಧನಿರರ್ಗಲಾಃ ।
ಅಸದೃಶಗತಿಶ್ಚಿತ್ರೇ ಮಾರ್ಗೇ ಮಮೋದ್ಗಿರತೋ ಗಿರೋ
ನ ಖಲು ನೃಪತೇ ಚೇತೋ ವಾಚಸ್ಪತೇರಪಿ ಶಂಕತೇ ॥
(ಹರವಿಜಯ ಗ್ರಂಥಕರ್ತುಃ ಪ್ರಶಸ್ತಿ ಶ್ಲೋಕ ೨)

ಎಂದೂ ಹರವಿಜಯಮಹಾಕಾವ್ಯವನ್ನು ಓದುವುದರಿಂದ ಕಾಲಕ್ರಮದಲ್ಲಿ ದೊಡ್ಡ ಕವಿಯಾಗಬಹುದೆಂದೂ.—

ಹರವಿಜಯಮಹಾಕವೇಃ ಪ್ರತಿಜ್ಞಾಂ
ಶೃಣುತ ಕೃತಪ್ರಣಯೋ ಮಮ ಪ್ರಬಂಧೇ ।
ಅಪಿ ಶಿಶುರಕವಿಃ ಕವಿಃಪ್ರಭಾವಾತ್
ಭವತಿ ಕವಿಶ್ಚ ಮಹಾಕವಿಃ ಕ್ರಮೇಣ॥ ಗ್ರಂಥಕರ್ತುಃ ಪ್ರಶಸ್ತಿ ಶ್ಲೋಕ ೭

ಎಂದು ಹೇಳಿಕೊಂಡಿರುವನು.

ಹರವಿಜಯದಲ್ಲಿ ಹೇಳಿರುವ.—

ನಂದೀಶನಿರ್ದಯಕರಾಹತಪುಷ್ಕರೇಷು
ಮಂದ್ರಂ ಧ್ವನತ್ಸು ಮುರಜೇಷು ವಿಭಜ್ಯ ತಂಡುಃ
ಆಸಾರಿತೇಷು ಪರಿಕಲ್ಪಿತಸಪ್ತಭೇದ
ಪರ್ಯಾಪ್ತ ಶೋಭಮಥ ತಾಂಡವಮಭ್ಯಗಾಯತ್ ॥

ಎಂಬ ಶಿವತಾಂಡವವರ್ಣನವು ಮಹಾಕವಿಭವಭೂತಿಯ.—

ಸಾನಂದಂ ನಂದಿಹಸ್ತಾಹತಮುರಜರವಾಹೂತಕೌಮಾರಬರ್ಹಿ
ತ್ರಾಸಾನ್ನಾಸಾಗ್ರರಂಧ್ರಂ ವಿಶತಿ ಫಣಿಪತೌ ಭೋಗಸಂಕೋಚಭಾಜಿ ।
ಗಂಡೋಡ್ಡೀನಾಳಿಮಾಲಾಮುಖರಿತಕಕುಭಸ್ತಾಂಡವೇ ಶೂಲಪಾಣೇಃ
ವೈನಾಯಕ್ಯಶ್ಚಿರಂ ವೋ ವದನ ವಿಧುತಯಃ ಪಾಂತು ಚೀತ್ಕಾರವತ್ಯಃ ॥

ಎಂಬ ಈ ಶ್ಲೋಕವನ್ನು ನೆನಪುಕೊಡುವುದು.

ವಕ್ರೋಕ್ತಿಪಂಚಾಶಿಕೆಯ ಮಾದರಿಯ ಶ್ಲೋಕವು ಹೀಗಿರುವುದು.—

ತ್ವಂ ಹಾಲಾಹಲಭೃತ್ಕರೋಷಿ ಮನಸೋ ಮೂರ್ಛಾಂಮಮಾಲಿಂಗಿತೋ
ಹಾಲಾಂ ನೈವ ಬಿಭರ್ಮಿ ನೈವ ಚ ಹಲಂ ಮುಗ್ಧೇ ಕಥಂ ಹಾಲಿಕಃ ।

ಸಖ್ಯಂ ಹಾಲಿಕತ್ಯೈವ ತೇ ಸಮುಚಿತಾ ಸಕ್ತಸ್ಯ ಗೋವಾಹನೇ
ವಕ್ರೋಕ್ತ್ಯೇತಿ ಜಿತೋ ಹಿಮಾದ್ರಿಸುತಯಾ ಸ್ಮೇರೋ ಹರಃ ಪಾತು ವಃ ||

ಹರವಿಜಯದ ಎರಡು ಶ್ಲೋಕಗಳನ್ನು ಮಾದರಿಗಾಗಿ ಬರೆಯುವೆವು.

ತರಳಪಲ್ಲವತಾಮ್ರಕರಾ ಬಭೌ
ಸಮಧುಮುಲ್ಲಸಿತಭ್ರಮರೋತ್ಪಲಂ |
ಕುಸುಮಕೋಷಮಿವಾರ್ಪಯಿತುಂ ಲತಾ
ವಿವಲಿತಾ ಬಲಿತಾಪಹೃತಸ್ತರೋಃ || ೩—೧೮

ಮಧುಮಾಸದ ಸಮಾಗಮದಿಂದ ಪ್ರಫುಲ್ಲವಾದ ಬಾಲಲತೆಗಳು ಆರಕ್ತ ವರ್ಣವಾಗಿರುವ ಪಲ್ಲವಗಳೆಂಬ ತಮ್ಮ ಕರಗಳಲ್ಲಿ ಮಕರಂದದಿಂದ ಪೂರ್ಣವಾದ ಪುಷ್ಪಗಳೆಂಬ ಪಾನಪಾತ್ರೆಗಳನ್ನು ಹಿಡಿದುಕೊಂಡು ತರುಣಿಯರು ತಮ್ಮ ಮನ ದನ್ನರಿಗೆ ಮದಿರಾಪೂರ್ಣವಾದ ಪಾನಪಾತ್ರೆಯನ್ನು ಕೊಡುವಂತೆ ವೃಕ್ಷಗಳಿಗೆ ಸಮರ್ಪಿಸುತ್ತಿರುವುವು.

ಏಷಾ ವಿಶಾಲವಿಶಿಖಾಮುಖವಿಪ್ರಕೀರ್ಣ
ಹರ್ಮ್ಯೋಪಕಾರಕುಸುಮಪ್ರವಣಾಳಿಪಙ್ಕ್ತಿಃ ||
ಅಭ್ಯೇತ್ಯ ಬಂಧುಜನತೇವ ನಿಶಾಂಧಕಾರ
ಮರ್ಕಾಂಶುಭಿನ್ನಮನುಶೋಚತಿ ತಾರನಾದೈಃ || ೨೯—೫೩

ನಿಶಾಂಧಕಾರವು ಪ್ರಪಂಚದಲ್ಲೆಲ್ಲಾ ನಿರಂಕುಶಪ್ರಭುತ್ವವನ್ನು ಮಾಡು ತ್ತಿರಲು ಹಠಾತ್ತಾಗಿ ಚಂಡಕಿರಣನು ಬಂದು ಕತ್ತಲೆಯನ್ನು ಬೆಳ್ತಲೆಯನ್ನಾಗಿ ಮಾಡಲೋಸುಗ ಪ್ರಪಂಚವನ್ನಾಕ್ರಮಿಸಲು ದಿಕ್ಕಾಪಾಲಾಗಿ ಬಹಳ ಅನರ್ಥಕ್ಕೆ ಸಿಲ್ಕಿ ಕಂಗಾಲಾಗಿ ಹೋಗಿರುವ ಅಂಧಕಾರವನ್ನು ಕಷ್ಟಕಾಲದಲ್ಲಿ ಸಮಾಧಾನ ಪಡಿಸುವುದಕ್ಕಾಗಿ ಬಂದ ಬಂಧುಜನರಂತೆ ಭ್ರಮರಗಳು ಝೇಂಕಾರವೆಂಬ ರೋದನಧ್ವನಿಯಿಂದ ಸಂತೈಸುವಂತೆ ಕಾಣುವುದು.



## ಭಟ್ಟ ಶಿವಸ್ವಾಮಿ

ಹೆಸರಿನಿಂದ ಇವನು ಬ್ರಾಹ್ಮಣನಾಗಿರಬೇಕೆಂದು ತೋರುತ್ತದೆ. ಇವನು ಕ್ರಿ. ಶ. ೮೫೫-೮೮೪ರಲ್ಲಿ ಕಾಶ್ಮೀರದಲ್ಲಿ ಆಳಿದ ಅವಂತಿವರ್ಮನ ಆಶ್ರಯದಲ್ಲಿ "**ಕಪ್ಪಣಾಭ್ಯುದಯ**" ವೆಂಬ ಮಹಾಕಾವ್ಯವನ್ನು ಬರೆದುದಾಗಿ ತಿಳಿಯಬರು ತ್ತದೆ. ಇದು ಇದುವರೆಗೂ ಮುದ್ರಿತವಾಗದೆ ಇನ್ನೂ ಹಸ್ತಲಿಖಿತಪ್ರತಿಯಲ್ಲಿರು ವುದು. ಕಲ್ಹಣನ ರಾಜ ತರಂಗಿಣಿಯಲ್ಲಿ.—

ಮುಕ್ತಾಕಣಶಿವಸ್ವಾಮೀ . . . . . ಸಾಮ್ರಾಜ್ಯೇವಂತಿವರ್ಮಣಃ
ಎಂಬ ಶ್ಲೋಕದಲ್ಲಿ ಹೇಳಿರುವ ಶಿವಸ್ವಾಮಿಯು ಇವನೆ. ಇವನ ಶ್ಲೋಕಗಳು ವಲ್ಲಭದೇವನ ಸುಭಾಷಿತಾವಳಿಯಲ್ಲಿ ಕಂಡುಬರುವುವು. ಕಾವ್ಯಶೈಲಿಯು ಮಾಘಕಾವ್ಯವನ್ನು ಹೋಲುವುದಾಗಿದೆ.*



## ಅ ಭಿ ನಂ ದ ನ (೨)

ಇವನು ಬ್ರಾಹ್ಮಣನು. ಶತಾನಂದನ ಮಗನು.

**ಕಾಲ:**—ಇವನು ಕ್ರಿ. ಶ. ೯ನೆಯ ಶತಮಾನದಲ್ಲಿದ್ದ ಯುವರಾಜನಾದ ಹಾರವರ್ಷನ ಆಶ್ರಯದಲ್ಲಿದ್ದನು.

**ಗ್ರಂಥ:**—ಇವನು ರಾಮಚರಿತವೆಂಬ ೪೦ ಸರ್ಗಗಳುಳ್ಳ ಮಹಾಕಾವ್ಯವನ್ನು ಬರೆದಿರುವನು. ಇದರಲ್ಲಿ ೩೬ ಸರ್ಗಗಳು ಅಭಿನಂದನೇ ಬರೆದುದು. ಉಳಿದ ನಾಲ್ಕು ಸರ್ಗಗಳನ್ನು ಭೀಮಕವಿಯೆಂಬವನು ಬರೆದು ಮುಗಿಸಿರುವನು.

ಸೀತಾವಿಯೋಗಾನಂತರ ಚಿಂತಾಕುಲಿತನಾದ ಶ್ರೀರಾಮನು ವರ್ಷಾಕಾಲವು ಮುಗಿಯುತ್ತಿರುವುದನ್ನು ನೋಡಿ ರಾವಣನು ಇರುವ ಸ್ಥಳವನ್ನು ಹುಡುಕಿಕೊಂಡು ಬರಲು ಕಳುಹಿಸಿಕೊಡಬೇಕೆಂದು ಸುಗ್ರೀವನ ಆಗಮನ ನಿರೀಕ್ಷಣೆಯಲ್ಲಿದ್ದ ವಿಚಾರವು ವರ್ಣಿತವಾಗಿರುವುದು. ಕವಿಯು ತನಗೆ ಆಶ್ರಯದಾತನಾದ ಯುವರಾಜ ಹಾರವರ್ಷನ ವಿಚಾರವಾಗಿ ತಾನು ಬರೆದ ರಾಮಚರಿತದಲ್ಲಿ ಹೀಗೆಂದಿರುವನು.—

(೧) ಏತೇ ನಿಕಾಮಶಿಸಿಕಸ್ಯ ಜಯಂತಿ ಪಾದಾಃ
**ಶ್ರೀಹಾರವರ್ಷಯುವರಾಜ** ಮಹೀತಲೇಂದೋಃ
ಯೈರ್ದ್ವಾರದಶಾರ್ಕಕಿರಣೋತ್ಕರದುರ್ನಿವಾರಃ
ಸ್ಪಷ್ಟೋಽಭಿನಂದಕುಮುದಸ್ಯ ಮಹಾವಿಕಾಸಃ ‖ ೧—೭

(೨) ಪಾಲಾನ್ವಯಾಂಬುಜವನೈಕವಿರೋಚನಾಯ
ತಸ್ಮೈ ನಮೋಽಸ್ತು **ಯುವರಾಜ** ನರೇಶ್ವರಾಯ
ಕೋಟಿಪ್ರದಾನ ಘಟಿತೋಜ್ಜ್ವಲಕೀರ್ತಿಮೂರ್ತಿಃ
ಯೇನಾಮರತ್ವಪದವೀಂ ಗಮಿತೋ**ಭಿನಂದಃ** ‖ ೨—೭ ೧೪—೩೫

(೩) ನಮಃ **ಶ್ರೀಹಾರವರ್ಷಾಯ** ಯೇನ ಹಾಲಾದನಂತರಂ
ಸ್ವಕೋಶಃ ಕವಿಕೋಶಾನಾಮಾವಿರ್ಭಾವಾಯ ಸಂಭೃತಃ ‖ ೫—೮ ೧೦—೧೨

* History of classical Sanskrit Literature P. 40.

(೪) ಶ್ಯಾಮಃ ಸಿತಾಸಿತನಿರಾಯತಪಕ್ಷ್ಮಲಾಕ್ಷಃ
ಕ್ಷಾಮೋದರಃ ಕಠಿನಕಾಂತಭುಜಾಂತರಾಲಃ
ಸರ್ವಾಂಗಪಲ್ಲವಿತ ಯೌವನಲಾಂಛನಶ್ರೀಃ
**ಶ್ರೀಹಾರವರ್ಷ** ಇವ ಕುತ್ರ ಪತಿಃ ಪೃಥಿವ್ಯಾಃ ॥ ೯

(೫) ಯೇನಾದ್ಯ ರಾಮಚರಿತಂ ಚರಿತಾದ್ಭುತೇನ
ಸ್ವೇನಾಧರೀಕೃತಮತೀವ ಮಹೀತಲೇಽಸ್ಮಿನ್
ತೇನೈವ **ಪಾಲಕುಲ** ಚಂದ್ರಮಸಾ ಕದಿತ್ಥ
ಮುತ್ಥಾಪಿತಂ ಜಗತಿ ಪಶ್ಯತ ಚಿತ್ರಮೇತತ್ ॥ ೧೦

(೬) ದೀಪಃ ಸತಾಂ ಸ ಖಲು ಪಾಲಕುಲಪ್ರದೀಪಃ
**ಶ್ರೀಹಾರವರ್ಷ** ಇತಿ ಯೇನ ಕವಿಪ್ರಿಯೇಣ
ಸದ್ಯಃ ಪ್ರಸಾದಭರದತ್ತಮಹಾಪ್ರತಿಷ್ಠೇ
ನಿಷ್ಠಾಪಿತಃ ಪಿಶುನವಾಕ್ಪ್ರಸರೋಽ**ಭಿನಂದೇ**॥ ೧೧

(೭) ಸುದೃಢವಿಪುಲಗಾತ್ರಃ ಶತ್ರುಕೀಟಾಂತಕಾರೀ
ಸತತಮುಪಚಿತಾಯಾಂ ಸನ್ನಿವಿಷ್ಟೋ ದಶಾಯಾಂ
ಜಗದಮಲಮುದಸ್ತ ಶೇಷದೋಷಾಂಧಕಾರಂ
ಜನಯತಿ **ಯುವರಾಜಃ** ಪಾಲವಂಶಪ್ರದೀಪಃ ॥ ೨೬

ಎಂಬುದರಿಂದ ಪಾಲವಂಶೀಯನಾದ ಯುವರಾಜ ಹಾರವರ್ಷನಾಶ್ರಯದಲ್ಲಿ ನಮ್ಮ ಕವಿಯು ಇದ್ದುದಾಗಿ ಸ್ಪಷ್ಟಪಡುವುದು. ಆದರೆ ಈ ಪಾಲವಂಶವು ಯಾವುದು ? ಯುವರಾಜನಾರು ? ಹಾರವರ್ಷನಾರು ? ಇವರೀರ್ವರೂ ಭಿನ್ನವ್ಯಕ್ತಿಗಳೇ ಅಲ್ಲವೇ ಎಂಬುದನ್ನೂ ಬಂಗಾಳದಲ್ಲಿ ಆಳಿದ ಪಾಲವಂಶದ ಧರ್ಮಪಾಲನ ಮಗ ದೇವಪಾಲನಿಗೂ ಈ ಹಾರವರ್ಷನಿಗೂ ಏನಾದರೂ ಸಂಬಂಧವಿರಬಹುದೆ ಹೇಗೆಂಬುದನ್ನು ಪ್ರಕೃತ ಬರೆಯಬೇಕಾಗಿರುವುದು.

ಬಂಗಾಳದಲ್ಲಿ ಆಳಿದ ಪಾಲವಂಶವು ಅತ್ಯಂತ ಪ್ರಸಿದ್ಧವಾದುದರಿಂದಲೇ ಪ್ರಾಚೀನ ಹಿಂದುಸ್ಥಾನ ಚರಿತಕಾರನಾದ ವಿನ್ಸೆಂಟ್ ಏ. ಸ್ಮಿತ್ತನು 'ಪಾಲಾನ್ವಯ' ವೆಂಬುದು ಬಂಗಾಳದಲ್ಲಾಳಿದ ಪ್ರಸಿದ್ಧವಾದ ಪಾಲವಂಶವೆಂದೇ ಒಕ್ಕಣಿಸಿರುವನು* ಈ ಪಾಲವಂಶಚರಿತವು ಕ್ರಮವರಿತು ಬರೆಯಲ್ಪಟ್ಟಿರುವುದಿಲ್ಲವಾದುದರಿಂದ ಹೀಗೆ ಸರಿಯೆಂದು ನಿಶ್ಚಯಿಸಿ ಹೇಳಲಾಗದಿದ್ದರೂ ಮೇಲಣ ರಾಮಚರಿತ ಕಾವ್ಯಾಧಾರದಿಂದ ಕೊಂಚಮಟ್ಟಿಗೆ ಹೇಳಬಹುದಾಗಿದೆ. ಪಾಲವಂಶಚರಿತವು ಎರಡು ವಿಧವಾಗಿ ಹೇಳಲ್ಪಟ್ಟಿದೆ. (೧) ಟಿಬೆಟಿಯನ್ನರ ಹೇಳಿಕೆ (೨) ಶಾಸನ

* Vincent A. Smith's Early History of India P. 413.

ಪ್ರಮಾಣ. ಟಿಬೆಟಿಯನ್ನರ ಹೇಳಿಕೆಯು ಪ್ರಕಾರ ಪಾಲವಂಶದ ಮೂಲಪುರುಷನಾದ ಗೋಪಾಲನ ಆಳ್ವಿಕೆಯು ಕ್ರಿ. ಶ. ೬೬೦ರಿಂದ ಪ್ರಾರಂಭವಾಗುವುದು. ಇವನ ಅನಂತರ ೧೮ ಜನರು ಆಳಿದರು. ಇವರಲ್ಲಿ ಕೊನೆಯವನು ಕ್ರಿ. ಶ. ೧೧೩೯ರಲ್ಲಿ ಆಳಿದುದಾಗಿ ತಿಳಿಯುಬರುತ್ತದೆ.† ಟಿಬೆಟಿಯನ್ನರ ಹೇಳಿಕೆಗೂ ಶಾಸನಕ್ರಮಕ್ಕೂ ಹೆಚ್ಚು ಅಂತರವಿರುವುದು. ಧರ್ಮಪಾಲನಿಂದ ಕೊಡಲ್ಪಟ್ಟುದಾದ ಖಾಲಿಮಪುರ ದಾನಶಾಸನ (grant) ಮತ್ತು ದೇವಪಾಲನಿಂದ ಕೊಡಲ್ಪಟ್ಟುದಾದ ಮಾಂಘೀರದ ದಾನಶಾಸನದಂತೆ ಪಾಲವಂಶದ ಮೊದಲನೆಯವನು ಗೋಪಾಲ. ಎರಡನೆಯವನು ಇವನಮಗ ಧರ್ಮಪಾಲ. ಮೂರನೆಯವನು ಇವನ ಮಗ ದೇವಪಾಲನೆಂಬುವನು.

ಧರ್ಮಪಾಲನು ಕೆನೂಜಿನಲ್ಲಿ ಕ್ರಿ. ಶ. ೭೮೩ರಲ್ಲಿ ಆಳಿದ ಇಂದ್ರಾಯುಧನೆಂಬ ರಾಜನ ಸಮಕಾಲೀನನಾಗಿದ್ದುದಾಗಿ ಹೇಳಲ್ಪಟ್ಟಿದೆ.* ಈ ಆಧಾರದಮೇಲೆ ಗೋಪಾಲನ ಆಳ್ವಿಕೆಯು ಕ್ರಿ. ಶ. ೮ನೆಯ ಶತಮಾನದ ಪೂರ್ವಾರ್ಧವಾಗಿರಬೇಕೆಂದೂ ಧರ್ಮಪಾಲನ ಆಳ್ವಿಕೆಯು ಕಾಲವು ಕ್ರಿ. ಶ. ೮ನೆಯ ಶತಮಾನದ ಉತ್ತರಾರ್ಧವೆಂದೂ ಹೇಳಬಹುದಾಗಿದೆ. ಪಾಲವಂಶವು ಕ್ರಿ. ಶ. ೧೨ನೆಯ ಶತಮಾನದವರೆಗೆ ಅಭಿವೃದ್ಧಿಸ್ಥಿತಿಯಲ್ಲಿದ್ದು ಕಾಲಕ್ರಮದಲ್ಲಿ ಸೇನರಾಜರ (Sena Kings) ಮತ್ತು ಮುಹಮ್ಮದೀಯರ ಅಭ್ಯುದಯವಾದಹಾಗೆಲ್ಲಾ ನಿರ್ನಾಮವಾದುದಾಗಿ ತೋರುತ್ತದೆ. ಪಾಲವಂಶದ ರಾಜರು ಯಾವಾಗಲೂ ಕಾವ್ಯಪ್ರಿಯರಾದ ವಿದ್ವನ್ಮಣಿಗಳಾಗಿಯೂ ಕವಿಜನಾಶ್ರಯರಾಗಿಯೂ ಸಕಲಮತ ಸುಹೃದರಾಗಿಯೂ ಬಾಳುತ್ತಿದ್ದರು. ಆದರೆ ಪಾಲವಂಶದಲ್ಲಿ ಹೇಳಲ್ಪಟ್ಟಿರುವ ರಾಜರಲ್ಲಿ ಹಾರವರ್ಷನೆಂಬ ರಾಜನೊಬ್ಬನು ಆಳಿದುದಾಗಿಯೂ ಅವನು ರಾಮಚರಿತಕಾರನಾದ ಅಭಿನಂದನನ ಆಶ್ರಯದಾತನಾಗಿದ್ದುದಾಗಿ ಹೇಳಿರುವಂತೆ ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಪಾಲವಂಶದ ಕೆಲವು ರಾಜರಿಗೆ ಮಾತ್ರ ಯುವರಾಜನೆಂಬ ಹೆಸರು ಇದ್ದುದಾಗಿ ತೋರುತ್ತದೆ.§

ಯುವರಾಜನೆಂಬ ಹೆಸರು ಸಿಂಹಾಸನಕ್ಕೆ ಬಾಧ್ಯನೆಂಬರ್ಥಮಾತ್ರದ ರೂಢಿಯು ಇದೆ. ಅಭಿನಂದನನ ರಾಮಚರಿತಾಧಾರದಿಂದ ಹಾರವರ್ಷನು ಆಗ ಆಳುತ್ತಿದ್ದ ದೊರೆಯೆಂದೂ ಸಿಂಹಾಸನಕ್ಕೆ ಕಾದಿರಲಿಲ್ಲವೆಂದೂ ಅವನೇ ಯುವರಾಜ

† Histcry of Indian Logic P. 517 by Mabamahopadhyaya Satis Chandra Sen.

* Palas of Bengal M. A. S. B Vol V. P. 50.

§ Epigraphica Indica Vol IV P. 249 and Indian Antiquary Vol XXI P. 258.

ನೆಂದೂ ಸಿಂಹಾಸನಕ್ಕೆ ಬಾಧ್ಯನೆಂಬ ಅರ್ಥದಲ್ಲಿ ಹೇಳಿರುವುದಿಲ್ಲವೆಂದೂ ವ್ಯಕ್ತ ಪಡುತ್ತದೆ. ಇದೇ ವಿಚಾರವು ಉದಯಸುಂದರೀ ಕಥಾಕಾರನಾದ ಸೋಢ್ಢಲ (ಸೋಟ್ಟಲ) ನಿಂದಲೂ ಸ್ಪಷ್ಟಪಡಿಸಲ್ಪಟ್ಟದೆ. ಉದಯಸುಂದರೀ ಕಥೆಯಲ್ಲಿ ಯುವ ರಾಜನು ಅಭಿನಂದನನ (ರಾಮಚರಿತಕಾರ) ಆಶ್ರಯದಾತನೆಂದೂ ಯುವ ರಾಜನು ಆಗ ಆಳುತ್ತಿದ್ದ ದೊರೆಯೆಂದೂ ಹೇಳಲ್ಪಟ್ಟದೆ. ಅದು ಹೀಗಿರುವುದು.

ಶ್ರೀವಿಕ್ರಮೋ ನೃಪತಿರತ್ನಪತಿಃ ಸಭಾನಾ
ಮಾಸೀತ್ಸ ಕೋಽಪ್ಯಸದೃಶಃ ಕವಿಮಿತ್ರನಾಮಾ
ಯೋ ವಾರ್ಥಮಾತ್ರಮುದಿತಃ ಕೃತಿನಾಂ ಗೃಹೇಷು
ದತ್ವಾ ಚಕಾರ ಕರಟೀಂದುಘಟಾಂಧಕಾರಂ||

ಹಾಲೇ ಗತೇ ಗುಣಿನಿ ಶೋಕಶರಾದ್ಧಭೂವು *
ರುಚ್ಛಿನ್ನವಾಂಗ್ಯವುಜಡಾಃ ಕೃತಿನಸ್ತಥಾಮಿ
ಯತ್ತಸ್ಯ ನಾಮ ನೃಪತೇರನಿಶಂ ಸ್ಮರಂತೋ
ಹೇತ್ಯಕ್ಷರಂ ಪ್ರಥಮಮೇವ ಪರಂ ವಿದಂತಿ ||

ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು
ನಾಮ್ನೈವ ಕೇವಲಮುಜಾಯತ ವಸ್ತುತಸ್ತು
ಶ್ರೀಹರ್ಷ ಏಷ ನಿಜಸಂಸದಿ ಯೇನ ರಾಜ್ಞಾ
ಸಂಪೂಜಿತಃ ಕನಕಕೋಟಿಶತೇನ ಬಾಣಃ ||

ಸ್ವಪ್ನಂ ಯದತ್ತ **ಯುವರಾಜ** ನರೇಶ್ವರೇಣ
ಯದ್ಭೂಷ್ಯರಂ ಕಿಮಪಿ ಯೇನಗಿರಃ ಶ್ರಿಯಶ್ಚ
ಪ್ರತ್ಯಾಯನಂ ಸ್ಫುಟಮಕಾರಿ ನಿಜೇ ಕವೀಂದ್ರ
ಮೇಕಾಸನೇ ಸಮುಪವೇಶಯತಾ **ಭಿನಂದಂ** *

ಇದಲ್ಲದೆ

ಶ್ರೀಧರ್ಮಪಾಲಕುಲಕೈರವಕಾನನೇಂದೂ
ರಾಜಾ ವಿಲಾಸಕೃತಿ ಪಂಕಜಿನೀ ವಿವಸ್ವಾ
ಸರ್ವಾಭಿರಾಮ ಗುಣಪತ್ರರಥವ್ರಜಿ ಕ್ಷ್ಮಾ
ನೀಡದ್ರುಮೋ ವಿಜಯತೇ **ಯುವರಾಜ** ದೇವಃ $

ಎಂಬುದರಿಂದಲೂ ಯುವರಾಜನೆಂಬುದು ರಾಜನ ಹೆಸರೆಂದೂ ಸಿಂಹಾಸ ನಕ್ಕೆ ಬಾಧ್ಯನೆಂಬ ಅರ್ಥದಲ್ಲಿ ಯುವರಾಜಶಬ್ದವು ಉಪಯೋಗಿಸಲ್ಪಟ್ಟಿರುವುದಿಲ್ಲ ವೆಂದೂ ಖಂಡಿತವಾದುದು.

---

* ಉದಯಸುಂದರೀಕಥಾ ಪುಟ ೨-೩.

$ ರಾಮಚರಿತ ೨೭

ಧರ್ಮಪಾಲನು ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದಲ್ಲಿ ಆಳಿದು ದಾಗಿ ಹೇಳಲ್ಪಟ್ಟದೆ. ಇವನ ಅನಂತರದ ಕಾಲವೇ ಯುವರಾಜನದು. ಪಾಲ ವಂಶೀಯರಲ್ಲಿ ಪ್ರಸಿದ್ಧ ವಿದ್ಯಾವಂತರೂ, ಪರಾಕ್ರಮಿಗಳೂ, ಕವಿಪೋಷಕರಾದ ದೇವ ಪಾಲ, ವಿಗ್ರಹಪಾಲ, ನಾರಾಯಣಪಾಲ ಮತ್ತು ಒಂದನೆಯ ಮಹೀಪಾಲ ಈ ನಾಲ್ವರು ಮುಖ್ಯರು. ಇವರು ರಾಜ್ಯವಾಳಿ ಕೀರ್ತಿಶೇಷರಾಗಿರುವರು. ಇದಲ್ಲದೆ ಯುವರಾಜರೆಂಬ ಇಬ್ಬರು ದೊರೆಯುವರು. (೧) ಧರ್ಮಪಾಲನ ಮೊದಲನೆಯ ಮಗ ತ್ರಿಭುವನಪಾಲ (೨) ದೇವಪಾಲನ ಮಗ ರಾಜ್ಯಪಾಲ. ಇವರಿಬ್ಬರೂ ಯುವರಾಜ ಪದವಿಯನ್ನು ಹೊಂದಿ ಸಿಂಹಾಸನಕ್ಕೆ ಬಾಧ್ಯರೆನಿಸಿಕೊಂಡಿದ್ದರೇ ಹೊರ್ತು ಯುವರಾಜರೆಂಬ ಹೆಸರಿನಿಂದ ರಾಜ್ಯವಾಳಿದವರಲ್ಲ. ಅಲ್ಲದೆ ಇವರು ಯಾವಾಗಲಾದರೂ ಈ ಹೆಸರಿನಿಂದ ಆಳುವ ಸಂಭವವಿದ್ದುದೇ ಹೇಗೆ? ಎಂಬ ವಿಚಾರದಲ್ಲಿ ಚರಿತ್ರೆಯು ಕುಂಠಿತವಾಗಿರುವುದು. ರಾಮುಚರಿತದ ಶ್ಲೋಕಗಳನ್ನು ಭೋಜನೂ ಮಮ್ಮಟನೂ ಕ್ಷೇಮೇಂದ್ರನೂ ಅಭಿನವಗುಪ್ತನೂ ಹೇರಳವಾಗಿ ಉದಾ ಹರಿಸಿಕೊಂಡಿರುವರು. ಈ ಉದಾಹರಣೆಗಳೆಲ್ಲವನ್ನೂ ನೋಡಿ ಕೆಲವರು ಅಭಿ ನಂದನು ಕ್ರಿ. ಶ. ೯೭೮-೧೦೩೦ರವರೆಗೆ ಆಳಿದ ಮಹೀಪಾಲನ ಆಸ್ಥಾನ ಪಂಡಿತ ನಾಗಿದ್ದಿರಬೇಕೆಂದು ತರ್ಕಿಸಬಹುದು. ಆದರೆ ಸೋಡ್ಡಲನುವರ್ಣಿಸಿಕೊಂಡಿರುವ ಪ್ರಾಚೀನ ಕವಿವರ್ಣನಾವಸರದಲ್ಲಿ ಆದಿಕವಿಯಾದ ವಾಲ್ಮೀಕಿಯನ್ನು ಮೊದಲು ಗೊಂಡು ಹೇಳುವಾಗ ಅಭಿನಂದನನು ರಾಜಶೇಖರನಿಗಿಂತ ಪ್ರಾಚೀನನೆಂದಿರು ವನು. "ಇವನು ವಾಲ್ಮೀಕಿ ವ್ಯಾಸ, ಭರ್ತ್ರಮೆಂಠ, ಗುಣಾಢ್ಯ, ಕಾಲಿದಾಸ (?) ಭವಭೂತಿ, ವಾಕ್ಪತಿರಾಜ, ಅಭಿನಂದ, ಯಾಯಾವರ (ರಾಜಶೇಖರ) ನನ್ನು ಕ್ರಮ ವಾಗಿ ಹೇಳಿರುವನು. ಅವನು ಹೇಳುವ ಕೊನೆಯ ಶ್ಲೋಕವು ಹೀಗಿರುವುದು.

ವಂದ್ಯಃಂ ಸ ವಿದ್ವಾನ **ಭಿನಂದ** ನಾಮಾ  
ವಿಸ್ರಂಭಪಾತ್ರಂ ವಚನಾಧಿದೇವ್ಯಾಃ  
**ಯಾಯಾವರಃ** ಪ್ರಾಜ್ಞವರೋ ಗುಣಜ್ಞೈ  
ರಾಶಂಸಿತಃ ಸೂರಿಸಮಾಜವರ್ಯೈಃ ||

ರಾಜಶೇಖರನು ಕನೂಜಿನ ಮಹೇಂದ್ರಪಾಲನ ಗುರುವಾಗಿದ್ದನು. ಆದುದ ರಿಂದ ಇವನು ಕ್ರಿ. ಶ. ೧೦ನೆಯ ಶತಮಾನಾರಂಭದಲ್ಲಿದ್ದವನು. ಅಭಿನಂದನು ಮಹೀಪಾಲನ ಆಶ್ರಯದಲ್ಲಿದ್ದು ಅವನ ಸಮಕಾಲೀನನೆನ್ನುವುದಾದರೆ ವಾಲ್ಮೀಕಿ ಕಾಳಿದಾಸ ಬಾಣನೇ ಮೊದಲಾದ ಕವಿಪುಂಗವರ ಜೊತೆಯಲ್ಲಿ ಸೇರಿ ಹೆಗ್ಗಳಿಕೆ ಯನ್ನು ಹೊಂದುವ ಇಂತಹ ಕಾವ್ಯರಚನೆಗೂ ಪ್ರಸಿದ್ಧಿಗೂ ಅವಕಾಶವಿಲ್ಲದಂತಾ

[1] Vincent A. Smith's Early History of India P. 394.

ಗುವುದು. ಅಲ್ಲದೆ ಗ್ರಂಥದಲ್ಲಿ ಎಲ್ಲಿಯೂ ಹೇಳಿಕೊಂಡಿರುವುದಿಲ್ಲವಾದುದರಿಂದ ಯುವರಾಜನ ಆಶ್ರಯದಲ್ಲಿದ್ದವನನ್ನು ಮಹೀಪಾಲನ ಆಶ್ರಯದವನೆನ್ನುವುದು ಸರ್ವಥಾ ಅಸಮಂಜಸವಾದುದು. ಆದುದರಿಂದ ಸೋಡ್ಢಲನು ಹೇಳುವ ಹಾಗೆ ಕ್ರಿ. ಶ. ೧೦ನೆಯ ಶತಮಾನಕ್ಕೆ ಮುಂಚೆ ಯುವರಾಜನ ಆಶ್ರಯದಲ್ಲಿ ಅಭಿನಂದನು ಇದ್ದಿರಬೇಕು. ಎಂದರೆ ಕ್ರಿ. ಶ. ೯ನೆಯ ಶತಮಾನದಲ್ಲಿದ್ದವನೆಂದು ಖಂಡಿತವಾಗಿ ಹೇಳಬಹುದು.

ರಾಮಚರಿತದಲ್ಲಿ ಯುವರಾಜ ಹಾರವರ್ಷನ ತಂದೆಯು ವಿಕ್ರಮಶೀಲನೆಂದು ಹೇಳಲ್ಪಟ್ಟಿದೆ. ಅದು ಹೀಗಿರುವದು.

ಕಿಮಿಂದುನಾ ಚಂದನವಾರಿಣಾಪಿ
ಕಿಮಬ್ಜಕಂದೈರಭಿನಂದವತ್ಸಲಃ
ವಿಚಿಂತ್ಯತಾಮಾಂತರತಾಪಶಾಂತಯೇ
ಸ ಕೇವಲಂ **ವಿಕ್ರಮಶೀಲನಂದನಃ** || ೭
ನಿರ್ಮತ್ಸರಃ ಕವಿರಪಿ ಪ್ರಭುರಪ್ಯವಾಮಃ
ಪೃಥ್ವೀಪತಿರ್ಜಯತಿ **ವಿಕ್ರಮಶೀಲಜನ್ಮಾ** ||

ಎಂದಿರುವುದು. ಈ ವಿಕ್ರಮಶೀಲನಾರೆಂಬ ವಿಚಾರವು ಎಲ್ಲಿಯೂ ತಿಳಿಯು ವಂತಿಲ್ಲ. ಚರಿತ್ರೆಯೂ ಹೇಳುವುದಿಲ್ಲ. ಸರಿಯಾದ ಪ್ರಮಾಣಗಳಿಲ್ಲದೆ ಹೇಳು ವುದೂ ಸುಲಭಸಾಧ್ಯವಲ್ಲ. ವಿಕ್ರಮಶೀಲನೆಂಬುದು ನಿಜವಾದ ಹೆಸರೇ ಅಥವಾ ವ್ಯಕ್ತಿಯುಗುಣ ಕಥನವೇ ಹೇಗೆಂಬುದು ತಿಳಿಯದಾಗಿದೆ.

ವಿಕ್ರಮಶಿಲೆಯು ಸರ್ವ ಕಲಾಕೇಂದ್ರವಾಗಿದ್ದುದಲ್ಲದೆ ಪ್ರಾಚೀನಬೌದ್ಧರ ವಿಹಾರಸ್ಥಳವಾಗಿದ್ದಿತೆಂದೂ ಇದನ್ನು ಧರ್ಮಪಾಲನು ಕಟ್ಟಿಸಿದುದಾದ ವಿಚಾರ ವನ್ನು ಮಾತ್ರ ಚರಿತ್ರೆಯು ಹೇಳುತ್ತದೆ. ಹಾಗಾದರೆ ಧರ್ಮಪಾಲನೆಂದು ಕರೆ ಯುವ ಬದಲು ಅವನು ಕಟ್ಟಿಸಿದ ವಿಕ್ರಮಶೀಲ (ವಿಕ್ರಮಶಿಲಾ) ಎಂಬ ಹೆಸರಿ ನಿಂದ ಕರೆದಿರಬಹುದೇ ಹೇಗೆ? ಎಂದು ಕೆಲವರು ಅನುಮಾನಿಸುವರು. ಮತ್ತೆ ಕೆಲವರು ಹಾಗೆ ಇದ್ದರೂ ಇರಬಹುದು. ಎಂದು ಸಮಾಧಾನಗೊಂಡು " ಸ್ರಗ್ಧರಾ ಸ್ತೋತ್ರಟೀಕಾ " ಎಂಬ ಗ್ರಂಥಾಂತ್ಯದಲ್ಲಿರುವ,

" ಶ್ರೀಮದ್ವಿಕ್ರಮಶೀಲ ದೇವಮಹಾವಿಹಾರೀಯ ರಾಜಗುರುಪಂಡಿತಭಿಕ್ಷು ಶ್ರೀಜನರಕ್ಷಿತ ಕೃತಾಬಾಲಾರ್ಕಸ್ತುತಿ ಟೀಕಾಸಮಾಪ್ತಾ " ಎಂಬುದರಿಂದ ಸಿದ್ಧ ವಾಗುವುದೆಂದೂ ಹೇಳುವರು. ಈ ಹೇಳಿಕೆಯ ಪರಿಶೀಲನದಿಂದ ಅಭಿನಂದನ

[k] Vincent A. Smith's Early History of India P. 414.

ನ ಆಶ್ರಯದಾತನಾದ ಹಾರವರ್ಷ (ಯುವರಾಜ)ನನ್ನು ವಿಕ್ರಮಶೀಲಾಪರನಾಮಕನಾದ ಧರ್ಮಪಾಲನ ಮಗ ದೇವಪಾಲನಾಗಿರಬೇಕೆಂದೂ ಇವನೇ ಹಾರವರ್ಷ ಯುವರಾಜಾಂಕಿತನೆಂದೂ ರಾಮಚರಿತದಲ್ಲಿ ವರ್ಣಿತವಾಗಿರುವ ಹಾರವರ್ಷನ ದಾನಶೌಂಡತೆಯ ವಿಚಾರದ ಶ್ಲೋಕಗಳು ಇದೇ ವಿಷಯವನ್ನು ಸಮರ್ಥಿಸುವುವೆಂದೂ ಹೇಳಬೇಕಾಗಿದೆ. ಇದು ಬರೀ ಊಹೆಯತ್ರಾಣವಾದುದರಿಂದಲೂ ಚರ್ಚಾಸ್ಪದ ವಿಷಯಗಳಾದುದರಿಂದ ಸರಿಯಾದ ಪ್ರಮಾಣಗಳು ದೊರೆಯದೇ ಹೇಳುವುದು ಚಾರಿತ್ರಕ ಮತವಲ್ಲವೆಂದು ನಮಗೆನಿಸುತ್ತದೆ. ಇಲ್ಲಿ ಮತ್ತೊಂದು ಪ್ರಶ್ನೆಯು ಸಹಜವಾಗಿ ಹುಟ್ಟುವುದು. ಏನೆಂದರೆ ಪಾಲವಂಶದ ರಾಜರೆಲ್ಲರೂ "ಪಾಲ" ಎಂಬ ಹೆಸರನ್ನು ಕೊನೆಯಲ್ಲಿ ಸೇರಿಸಿಕೊಂಡು ಹೇಳಿಕೊಳ್ಳುತ್ತಿರುವಾಗ ಇದಕ್ಕೆ ವಿರುದ್ಧವಾಗಿ "ವರ್ಷ" ಎಂದು ಕೊನೆಯಲ್ಲಿ ಸೇರಿಸಿ ಕರೆಯಿಸಿಕೊಂಡ ಬಗೆ ಹೇಗೆಂದು ಕೆಲವರು ವಿಚಾರಪರರಾಗಬಹುದು. ಇದರ ಸಾಧನೆಗೆ ಬಹುದೂರ ಹೋಗಬೇಕಾದುದಿಲ್ಲ. ಹೇಗೆಂದರೆ ಧರ್ಮಪಾಲನು ರಾಷ್ಟ್ರಕೂಟದ ಅರಸುಕನ್ಯೆಯಾದ ರನ್ನಾ'ದೇವಿ ಯೆಂಬವಳನ್ನು ಮದುವೆಯಾದುದು ಚರಿತ್ರೆಯನ್ನೋದುವ ಪ್ರತಿಯೊಬ್ಬನಿಗೂ ತಿಳಿದ ವಿಷಯವಾಗಿರುವುದು. ರಾಷ್ಟ್ರಕೂಟದ ಅರಸರು ತಮ್ಮ ಹೆಸರಿನ ಕೊನೆಯಲ್ಲಿ 'ವರ್ಷ' ಎಂದು ಸೇರಿಸಿ ಕರೆಯಿಸಿಕೊಳ್ಳುವ ರೂಢಿಯು ಇದ್ದುದಾಗಿದೆ. ಅದರಂತೆ ದೇವಪಾಲನು ತನ್ನ ಸೋದರಮಾವನ ಮನೆಯಲ್ಲಿದ್ದಾಗ ಹಾರವರ್ಷನೆಂದು ಕರೆಯಿಸಿಕೊಂಡಿರಬೇಕೆಂದೂ ಸ್ಪಷ್ಟಪಡಿಸಬಹುದಾಗಿದೆ ‡ ಚೇದಿದೇಶದ ಕಲಚೂರಿ ಅರಸರಲ್ಲಿ ಎರಡನೆಯವನ ಹೆಸರು ಯುವರಾಜನೆಂದಿದೆ. ಇವನಿಗೂ ಹಾರವರ್ಷ (ಯುವರಾಜ) ನಿಗೂ ಯಾವ ಸಂಬಂಧವೂ ಇರದು.

ಡಾ|| ಬುಹಲರವರು (Buhler) ಅಭಿನಂದನನು ಕಾದಂಬರೀಕಥಾಸಾರ ಮತ್ತು ರಾಮಚರಿತವೆಂಬೆರಡು ಗ್ರಂಥಗಳನ್ನು ಬರೆದಿರುವುದಾಗಿ ಏಕಕರ್ತೃತ್ವವನ್ನು ಸ್ಥಾಧಿಸಿರುವರು$ ಆದರೆ ಕಾದಂಬರೀಕಥಾಸಾರಕಾರನು ಜಯಂತಭಟ್ಟನ ಮಗನೆಂದೂ ರಾಮಚರಿತಕಾರನು ಶತಾನಂದನನ ಮಗನೆಂದೂ ಹೇಳಿಕೊಂಡಿರುವುದರಿಂದ ಭಿನ್ನಕರ್ತೃತ್ವವು ಏರ್ಪಡುವುದು. ಮಾದರಿಗೆ ಮೇಲಣ ಶ್ಲೋಕಗಳೇ ಸಾಕಾಗಿರುವುವು.



* Indian Antiquary Vol. XYI P. 257.

‡ Journal of oriental research Vol. III Pt. 1. P. 57 67

$ Indian antiquary Vol. P. 102.

## ಧನಂಜಯ (೧)*

ಇವನ ಮಾತಾಪಿತೃಗಳಾರೆಂಬುದಾಗಲಿ ಎಲ್ಲಿಯವನೆಂಬುದಾಗಲಿ ತಿಳಿಯದು. ಇವನಿಗೆ ದ್ವಿಸಂಧಾನಕವಿಯೆಂಬಾಪರನಾಮವೂ ಇದ್ದಿತು. ಇವನು ಅಕಳಂಕ ಮತ್ತು ಪೂಜ್ಯಪಾದ ಜೈನಪ್ರಭೃತಿಗಳೊಡನೆ ಸೇರಿಸಿ ಹೇಳಲ್ಪಟ್ಟಿರುವುದರಿಂದ ಜಿನ ಧರ್ಮಾನುಯಾಯಿಯೆಂದು ತೋರುತ್ತದೆ. ಆದರೆ ಇವನ ಮಂಗಳಾಚರಣವಾದ.-

> ಕೀರ್ತ್ಯಾ ನಿರ್ಮಲಯಂದಿಶೋ ದಶರಥಶ್ಲಾಘೀ ಸಮುದ್ಭೋದ್ಭವಃ
> ಸಂಗ್ರಾಮಪ್ರಕಟೀಕೃತಾರ್ಜುನಯಶಃ ಶತ್ರುಘ್ನವೀರಾದೃತಃ
> ವಲ್ಗಜ್ಜಾಂಬವತಾ ಪ್ರಶಂಸಿತಮಹಾಃ ಪ್ರೌಢಾಂಗದೋದ್ಭಾಸಿತಃ
> ಶ್ರೀಮನ್ನೀಲರುಚಿಃ ಶಿವಂ ದಿಶತುವೋ ರಾಮೋಽಥಕೃಷ್ಣೋಽಥವಾ||

ಎಂಬ ಶ್ಲೋಕದಲ್ಲಿ ರಾಮ ಮತ್ತು ಕೃಷ್ಣ ಶಬ್ದಪ್ರಯೋಗವಿರುವುದರಿಂದ ಇವನನ್ನು ಬ್ರಾಹ್ಮಣ ಕವಿಯೆಂದು ಕೆಲವರು ತರ್ಕಿಸುವರು. ಗ್ರಂಥಪರಿಶೀಲನ ದಿಂದ ರಾಮಾಯಣ ಮತ್ತು ಭಾರತ ಕಾರಣರಾದ ರಾಮಕೃಷ್ಣರ ಹೆಸರುಗಳನ್ನು ಪದ್ಧತಿಯನ್ನನುಸರಿಸಿ ಮಂಗಳಾಚರಣದಲ್ಲಿ ಸೂಚಿಸಿರುವನೆಂದೂ ಶ್ಲೇಷಸಾಧನದ ಮೂಲಕ ಗುಣವಿಶೇಷವನ್ನು ಹೇಳುವುದಕ್ಕಾಗಿ ಇಂತಹ ಪ್ರಯೋಗವಿರುವುದೆಂದೂ ಇವನು ಜಿನಧರ್ಮದವನೆಂಬುದಕ್ಕೆ ಈ ಕಾವ್ಯದ ಮೊದಲನೆಯ ಶ್ಲೋಕದಲ್ಲಿ ಇಪ್ಪತ್ತ ನೆಯ ತೀರ್ಥಂಕರನಾದ ಸುವ್ರತನನ್ನು ಕೊಂಡಾಡಿರುವನೆಂದೂ ಇದು ಜೈನಕಾವ್ಯ ವಾಗಿರದೆ ಇದ್ದರೆ ವಿನಯಚಂದ್ರನ ಶಿಷ್ಯನಾದ ನೇಮಿಚಂದ್ರನು ವಿಸ್ತೃತಟೀಕೆ ಯನ್ನು ಬರೆಯುತ್ತಿರಲಿಲ್ಲವೆಂದೂ ಹೇಳಬೇಕಾಗಿದೆ.

**ಕಾಲ:**—ಇವನಾವಕಾಲದವನೆಂಬ ವಿಚಾರವಾಗಿ ಹೀಗೆಯೇ ಸರಿಯೆಂದು ನಿರ್ಧರಿಸಿ ಹೇಳಲಾಗದಿದ್ದರೂ ಬಾಹ್ಯಪ್ರಮಾಣಂಗಳಿಂದ ಸಾಧಿಸಬಹುದಾಗಿದೆ. ಹೇಗೆಂದರೆ ಧ್ವನ್ಯಾಲೋಕಕಾರನಾದ ಆನಂದವರ್ಧನನು ಇವನನ್ನು ಹೇಳಿರುವುದ ರಿಂದಲೂ ಪ್ರಸಿದ್ಧಾಲಂಕಾರಿಕನಾದ ವಾಮನನು ಇವನನ್ನು ಹೇಳದೆ ಇರುವುದ ರಿಂದ ಕ್ರಿ. ಶ. ೮ನೆಯ ಶತಮಾನದವನಾದ ವಾಮನನಿಗಿಂತ ಈಚಿನವನೂ ಕ್ರಿ. ಶ. ೯ನೆಯ ಶತಮಾನದವನಾದ ಆನಂದವರ್ಧನನಿಗಿಂತ ಪ್ರಾಚೀನನೂ ಎಂದರೆ ಕ್ರಿ. ಶ. ೯ ನೆಯ ಶತಮಾನದ ಪೂರ್ವಾರ್ಧದವನೂ ಎಂದು ಹೇಳುವುದಾದರೆ ತಪ್ಪಾಗದು.

**ಗ್ರಂಥ:**—ಇವನು ದ್ವಿಸಂಧಾನಕಾವ್ಯ, ನಾಮಮಾಲಾ ಎಂಬೆರಡು ಗ್ರಂಥ ಗಳನ್ನು ಬರೆದಿರುವುದಾಗಿ:—

* ವಿಷಾಪಹರಣಸ್ತೋತ್ರಕಾರನಾದ ಧನಂಜಯನು ಇವನಲ್ಲ.

ದ್ವಿಸಂಧಾನೇ ನಿಪುಣತಾಂ ಸ ತಾಂ ಚಕ್ರೇ **ಧನಂಜಯಃ**
ಯಯಾಜಾತಂಫಲಂ ತಸ್ಯ ಸತಾಂ ಚಕ್ರೇ **ಧನಂಜಯಃ**
ಕವೇರ್ಧನಂಜಯಸ್ಯೇಯಂ ಸತ್ಕವೀನಾಂ ಶಿರೋಮಣಿಃ
ಪ್ರಮಾಣಂನಾಮಮಾಲೇತಿ ಶ್ಲೋಕಾನಾಂಚ ಶತದ್ವಯಂ ॥ †

ಎಂಬ ಈ ಶ್ಲೋಕಗಳಿಂದ ಸ್ಪಷ್ಟಪಡುತ್ತದೆ.

"ಇತಿ ಶ್ರೀಧನಂಜಯವಿರಚಿತೇ.................. ...ರಾಘವಪಾಂಡವೀಯಾ‡ಪರನಾಮ್ನಿದ್ವಿಸಂಧಾನಕಾವ್ಯೇ.. ............" ಎಂಬ ಪ್ರತಿಸರ್ಗಾಂತಗದ್ಯದಿಂದ ಈ ದ್ವಿಸಂಧಾನಕಾವ್ಯಕ್ಕೆ ರಾಘವಪಾಂಡವೀಯಾಪರನಾಮವಿದ್ದಿತಾಗಿ ಸ್ಪಷ್ಟಪಡುತ್ತದೆ. ಇದರಲ್ಲಿ ಹದಿನೆಂಟು ಸರ್ಗಗಳಿರುವವು.

ದ್ವಿಸಂಧಾನ ಕಾವ್ಯವೆಂಬ ಹೆಸರಿನ ಬೇರೊಂದು ಕಾವ್ಯವನ್ನು ದಂಡಿಯೊಬ್ಬನು ಬರೆದಿರುವುದಾಗಿಯೂ ಇದರ ಶ್ಲೋಕಗಳನ್ನು ಭೋಜರಾಜನು ತಾನು ಬರೆದಿರುವ ಶೃಂಗಾರ ಪ್ರಕಾಶದಲ್ಲಿ ಉದಾಹರಿಸಿಕೊಂಡಿರುವುದಾಗಿಯೂ ತಿಳಿಯಬರುತ್ತದೆ.$ ಈ ಕಾವ್ಯವು ಯಾವುದೆಂಬುದು ತಿಳಿಯದು.

ಸಭಂಗಾಭಂಗಶ್ಲೇಷ ಪ್ರಧಾನವಾದ ಈ ಕಾವ್ಯವನ್ನು ರಾಮಾಯಣ ಮತ್ತು ಭಾರತ ಕಥೆಗಳನ್ನು ಅನುಸಂಧಾನಮಾಡಿ ಅರ್ಥಕೆಡದಂತೆ ಶ್ಲೇಷೆಯನ್ನು ಕಲ್ಪಿಸಿ ಉಪಮಾನೋಪಮೇಯಗಳ ಮೂಲಕಸಾಧಿಸಿರುವನಾದುದರಿಂದ ದ್ವಿಸಂಧಾನಕಾವ್ಯವೆಂಬ ಹೆಸರು ಬಂಗಂತೆಯೂ ಇದಕ್ಕೆ ಬದರೀನಾಥನು ಸಂಕ್ಷೇಪ ಟೀಕೆಯನ್ನು ಬರೆದಿರುವುದಾಗಿಯೂ ತಿಳಿಯಬರುತ್ತದೆ.

ರಾವಣನ ವಧೆಯಾದ ಅನಂತರ ರಾಮನು ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದನೆಂಬ ವರೆಗಿನ ರಾಮಾಯಣ ಕಥೆಯನ್ನೂ ಜರಾಸಂಧನ ವಧೆಯಾದನಂತರ ಕೃಷ್ಣನು ಧನಂಜಯನೊಡನೆ ಹಸ್ತಿನಾಪುರಕ್ಕೆ ಬಂದು ಕೌರವರನ್ನು ಹತಮಾಡಿ ಪಾಂಡವರು ಪಟ್ಟಾಭಿಷಿಕ್ತರಾದರೆಂಬ ಭಾರತದ ಕಥೆಯನ್ನೂ ತೆಗೆದುಕೊಂಡು ಧನಂಜಯಶಬ್ದಕ್ಕೆ (ಧನಂಜಯಃ) ರಾಮ ಮತ್ತು ಅರ್ಜುನ (ಧನಂಜಯ) ಎಂಬ ಅರ್ಥವನ್ನು ಕಲ್ಪಿಸಿ ಹೇಳಿರುವನು. ಹೀಗೆ ಹೇಳುವುದರಲ್ಲಿ ತಾನು ಹೇಳಬೇಕೆನ್ನುವ ಶ್ಲೇಷಪೋಷಣೆಗೆ ತಕ್ಕುದಾದ ವಿಷಯಸಮರ್ಥನ ಮಾತ್ರವೇ ಕಂಡು

---

ಜಲ್ಹಣನಸೂಕ್ತಿಮುಕ್ತಾವಳಿ ಮತ್ತು ಸುಭಾಷಿತರತ್ನಹಾರಾವಳಿ.

† ದ್ವಿಸಂಧಾನಕಾವ್ಯದ ಮುನ್ನುಡಿ ಪು. ೧.

‡ ಕವಿರಾಜಕೃತರಾಘವಪಾಂಡವೀಯವು ಇದಲ್ಲ

$ The Mythic Society Journal Vol. XIII P. 6.

ಬಂದು ಕಥಾಸವಿಂಧಾನ ಚತುರತೆಯೂ ಶೈಲಿಯಮಾರ್ದ್ರವವೂ ಶ್ಲೇಷಶ್ಲಿಷ್ಟತೆಯಿಂದ ರಸಮಾಧುರ್ಯವೂ ಜಾರಿದಂತಾಗಿದೆ. ಶ್ಲೇಷೆಯ ಸಂಧಾನವೂ ಅಷ್ಟು ಹಿರಿಯದೆನಿಸಿರುವುದಿಲ್ಲ. ಕಥಾನಕ ಪೋಷಣೆಯೂ ಕ್ರಮವರಿತಿಲ್ಲ. ಏಕಾಕ್ಷರ ದ್ವ್ಯಕ್ಷರ ತ್ರ್ಯಕ್ಷರ ಶ್ಲೇಷಾರ್ಥಸಾಧನದಲ್ಲಿ ಗ್ರಂಥವೆಲ್ಲವನ್ನೂ ಮುಗಿಸಿರುವನು.

ದ್ವಿಸಂಧಾನ ಕಾವ್ಯದ ಮುನ್ನುಡಿಯಲ್ಲಿ ಹೇಳಿರುವುದಾದ: —

ಪ್ರಮಾಣಮಕಲಂಕಸ್ಯ ಪೂಜ್ಯಪಾದಸ್ಯಲಕ್ಷಣಂ
ದ್ವಿಸಂಧಾನಕವೇಃ ಕಾವ್ಯಂ ರತ್ನತ್ರಯಮಕಂಟಕಂ ||

ಎಂಬ ಶ್ಲೋಕವು ಧನಂಜಯ ನಿಘಂಟುವಿನಲ್ಲಿ ಕಂಡುಬರುವುದರಿಂದಲೂ ಕವಿಯ ಹೇಳಿಕೆಯಂತೆ ಅದರಲ್ಲಿ ಇನ್ನೂರು ಶ್ಲೋಕಗಳಿರುವುದರಿಂದ ದ್ವಿಸಂಧಾನ ಕಾವ್ಯಕಾರನೇ ಈ ನಿಘಂಟುವಿನ ಕರ್ತೃವಾಗಿರಬೇಕೆಂದೂ ನಾಮಮಾಲಾ ಎಂಬುದಕ್ಕೆ ಬದಲು ಧನಂಜಯ ನಿಘಂಟುವೆಂದು ಕರೆದಿರಬೇಕೆಂದೂ ಸ್ಪಷ್ಟವಾಗುತ್ತದೆ. ಇವನು ಮತ್ತಾವುದಾದರೂ ಗ್ರಂಥಗಳನ್ನು ಬರೆದಿರುವನೆಂಬುದು ತಿಳಿಯದು.

ದ್ವಿಸಂಧಾನಕಾವ್ಯದ ಮಾದರಿಯ ತೋರಾಣಿಕೆಗಾಗಿ ಎರಡು ಶ್ಲೋಕಗಳನ್ನು ಬರೆಯುವೆವು.

ಪ್ರಭಾವಿರಾಮಸ್ಯ ಸಪತ್ನಸಂತತೇಃ
ಶರಾಸನಾಭ್ಯಾಸಪದಂ ಕಿರೀಟಿನಃ
ಬಹಿರ್ಗತೋಽದ್ಯಾಪಿ ನಿಚಾಯ್ಯದೂರಗಂ
ಮದಂ ವಿಮುಂಚಂತಿ ಶರಂ ನ ಧನ್ವಿನಃ || ೧—೧೭
ಕೋ ವಾಕವಿಃ ಪುರಮಿಮಾಂ ಪರಮಾರ್ಥವೃತ್ತ್ಯಾ
ಶಕ್ನೋತಿ ವರ್ಣಯಿತುಮತ್ರ ವಿನಿರ್ಣಯೇನ
ನಿತ್ಯಂ ವಿಧಿಃ ಸತತಸಂನಿಹಿತೋ ವಿಭೂತಿ
ಮನ್ಯಾದೃಶಂ ಸೃಜತಿ ಯತ್ರ ಧನಂಜಯಾಯ || ೧—೫೨"



## ಆ ನಂ ದ ವ ರ್ಧ ನ

ಇವನು ಬ್ರಾಹ್ಮಣನು. ಕಾಶ್ಮೀರದವನು. ನೋಣೋಪಾಧ್ಯಾಯನಮಗನು. ಕೆಲವುಕಡೆ ಜೋಣೋಪಾಧ್ಯಾಯನೆಂದಿರುವುದು. ದೇವೀಶತಕಕ್ಕೆ ವ್ಯಾಖ್ಯಾನವನ್ನು ಬರೆದಿರುವ ಹೇಮಚಂದ್ರನು "ನೋಣಸುತಃ ಶ್ರೀಮದಾನಂದವರ್ಧನೋನಾಮ"

ಎಂದೂ, ಕಯ್ಯಟನು 'ನೋಣಸುತಃ' ಎಂದು ಹೇಳಿರುವುದರಿಂದ ಇವನು ನೋಣೋಪಾಧ್ಯಾಯನಮಗನೆಂಬುದೇ ಸ್ಪಷ್ಟವು!

**ಕಾಲ:**—ಇವನು ಕ್ರಿ. ಶ. ೮೫೫-೮೮೪ ರವರೆಗೆ ಕಾಶ್ಮೀರದಲ್ಲಿ ಆಳಿದ ಅವಂತಿವರ್ಮನ ಸಮಕಾಲೀನನೂ ಮತ್ತು ಆಸ್ಥಾನಪಂಡಿತನೂ ಆಗಿದ್ದನು.$

**ಗ್ರಂಥಗಳು** :—ಇವನು (೧) ಧ್ವನ್ಯಾಲೋಕ (೨) ವಿಷಮಬಾಣಲೀಲಾ (೩) ಅರ್ಜುನಚರಿತ (೪) ದೇವೀಶತಕ (೫) ತತ್ತ್ವಾಲೋಕ ಎಂಬ ಗ್ರಂಥಗಳನ್ನು ಬರೆದಿರುವನು. ಇವಲ್ಲದೆ ಹರವಿಜಯ, ಮತಪರೀಕ್ಷಾ ಎಂಬ ಗ್ರಂಥಗಳನ್ನು ಬರೆದಿರುವುದಾಗಿ ಕಾವ್ಯಾಲೋಕದಲ್ಲಿ ಹೇಳಲ್ಪಟ್ಟಿರುವುದಲ್ಲದೆ ಮೂರನೆಯ ಉದ್ಯೋತದಲ್ಲಿ 'ಮಧುಮಥನವಿಜಯ' ಎಂಬ ಕಾವ್ಯದಿಂದ " ತದ್ಯಥಾಮಧುಮಥನವಿಜಯೇ ಪಾಂಚಜನ್ಯೋಕ್ತಿಷು " ಎಂದು ಹೇಳಿಕೊಂಡಿರುವ ಉದಾಹರಣೆಯೊಂದು ದೊರಕುವುದು.

ಧ್ವನ್ಯಾಲೋಕ ವ್ಯಾಖ್ಯಾನಕಾರನಾದ ಅಭಿನವಗುಪ್ತನು ಧ್ವನ್ಯಾಲೋಕವನ್ನು ಕಾವ್ಯಾಲೋಕ ಅಥವಾ ಸಹೃದಯಾಲೋಕವೆಂದು ಕರೆದಿರುವನು.

ಧ್ವನ್ಯಾಲೋಕವನ್ನು 'ಕಾರಿಕೆ' ಎಂತಲೂ 'ವೃತ್ತಿ' ಎಂತಲೂ ಎರಡು ಭಾಗಗಳನ್ನಾಗಿ ಮಾಡಿಕೊಂಡು ಇವುಗಳೆರಡರ ಕರ್ತೃವು ಬೇರೆ ಬೇರೆಯೆಂದು ಹೇಳುವರು. ಕಾರಿಕೆ ಎಂದರೆ ಶ್ಲೋಕಗಳನ್ನು ಹೇಳಿ ಧ್ವನಿಯೇ ಮುಖ್ಯವೆಂದು ಹೇಳುವುದು. 'ವೃತ್ತಿ' ಎಂದರೆ ಸಾಧಾರಣವಾಗಿ ಗದ್ಯರೂಪದಲ್ಲಿ ಎಲ್ಲರಿಗೂ ತಿಳಿಯುವಂತೆ ಉದಾಹರಣೆಗಳ ಮೂಲಕ ಸ್ಪಷ್ಟಗೊಳಿಸುವುದು. ಮಹಾವ್ಯಾಖ್ಯಾತೃವಾದ ಅಭಿನವಗುಪ್ತನು ಕಾರಿಕಾಕಾರನೇ ಬೇರೆ ವೃತ್ತಿಕಾರನೇ ಬೇರೆ ಎಂದು ಹೇಳಿರುವನು.

ಪ್ರೊ. ಜಾಕೋಬಿಯವರು ಕಾರಿಕೆಗಳ ಕರ್ತೃವಾದ ಧ್ವನಿಕಾರನು ಆನಂದವರ್ಧನನಗಿಂತ ಪ್ರಾಚೀನನಾಗಿರಬೇಕೆಂದೂ ಆನಂದವರ್ಧನನು ವೃತ್ತಿಕಾರನೆಂದೂ ಹೇಳುವರು.x

---

ಇವನು ಮಹಾಭಾಷ್ಯವ್ಯಾಖ್ಯಾತೃವಾದಕಯ್ಯಟನಲ್ಲ.

! S. K. De's Sanskrit Poetics P. 117.

$ ರಾಜತರಂಗಿಣೀ ೫-೩೪.

x Sanskrit Poetics P. 107 –108

ಅಭಿನವಗುಪ್ತನು ಬೇರೊಂದೆಡೆಯಲ್ಲಿ ಕಾರಿಕಾಕಾರನು ಹೇಳದೆ ಇರುವ ಕೆಲವು ಅಂಶಗಳನ್ನು 'ವೃತ್ತಿ'ಕಾರನು ಹೇಳಿರುವನೆಂದೂ ವೃತ್ತಿಕಾರನ ಕೆಲವು ಅಂಶಗಳು 'ಕಾರಿಕಾ'ಕಾರನಲ್ಲಿ ಕಂಡುಬರುವದಿಲ್ಲವೆಂದೂ ಒಕ್ಕಣಿಸಿರುವನು ಇದರಿಂದ ಕಾರಿಕಾಕಾರನು ಬೇರೆ ಯಾವನೋ ಇರಬೇಕೆಂದೂ, ಆನಂದವರ್ಧನನು ವೃತ್ತಿಯನ್ನು ಬರೆಯುವುದಕ್ಕಾಗಿ ಅಲ್ಲಲ್ಲಿ ದೊರೆತುದಾದ ಕಾರಿಕೆಗಳನ್ನು ಜೊತೆಗೂಡಿಸಿ ವಿಶದವಾಗಿ ತಿಳಿಯುವಂತೆ ವೃತ್ತಿಗಳನ್ನು ಬರೆದಿರಬಹುದಾಗಿಯೂ ಕಾಲಕ್ರಮದಲ್ಲಿ ಕಾರಿಕಾಕಾರನು ಮರೆಯಲ್ಪಟ್ಟು ಧ್ವನಿಯ ವಿಚಾರವನ್ನು ಕಾರಿಕೆಯೊಡನೆ ವಿಶದೀಕರಿಸಿ ಹೇಳಿದ ಆನಂದವರ್ಧನನನ್ನೇ ಧ್ವನಿಕಾರನೆನ್ನುವುದು ರೂಢಿಯಲ್ಲಿ ಬಂದಹಾಗೆ ತೋರುತ್ತದೆ ಇದರಿಂದ ಧ್ವನಿಯೇ ಕಾವ್ಯಾತ್ಮಕವೆನ್ನುವ ಜಿಜ್ಞಾಸುಗಳು ಆನಂದವರ್ಧನನಿಗೆ ಪ್ರಾಚೀನರಾಗಿರಬೇಕೆಂದೂ ಭಿನ್ನಾಭಿಪ್ರಾಯಗಳಿದ್ದ ಆ ಕಾಲದಲ್ಲ ಸಕಲವನ್ನೂ ದೂರೀಕರಿಸಿ ಧ್ವನಿಯೇ ಮುಖ್ಯವೆಂದು ಸಿದ್ಧಾಂತಗೊಳಿಸಿದ ಆನಂದವರ್ಧನನನ್ನೇ ಧ್ವನಿಕಾರನೆಂದು ಹೇಳಲಾದುದಾಗಿ ಬೋಧೆಯಾಗುತ್ತದೆ

ಜಲ್ಹಣನೂ ಮತ್ತು ಸಮುದ್ರಬಂಧನೂ ಆನಂದವರ್ಧನನ್ನೇ ಧ್ವನಿಕಾರನೆಂದಿರುವರು

ವ್ಯಕ್ತಿವಿವೇಕಕಾರನಾದ ಮಹಿಮಭಟ್ಟನು 'ಧ್ವನಿಕಾರ' ನೆಂಬ ಸಾಮಾನ್ಯಶಬ್ದಪ್ರಯೋಗದಿಂದ ಆನಂದವರ್ಧನನನ್ನು ಹೇಳಿರುವನು ಈಚಿನ ಲಾಕ್ಷಣಿಕರೆಲ್ಲರೂ ಒಬ್ಬರನ್ನೊಬ್ಬರು ಅನುಸರಿಸಿ ಹೇಳಿರುವ ಹಾಗೆ ತೋರುತ್ತದೆ.

ಪ್ರೊ‍। ಜಾಕೋಬಿಯವರು ಧ್ವನ್ಯಾಲೋಕಕ್ಕೆ ಬರೆದಿರುವ ಪ್ರಸ್ತಾವನೆಯಲ್ಲಿ ಕಾವ್ಯಕ್ಕೆ ಧ್ವನಿಯೇ ಆತ್ಮವೆಂದಿರುವುದರ ಹೊರ್ತು ನಿಜವಾದ ಧ್ವನಿಕಾರನು ಯಾರು ? ಯಾವಕಾಲದವನೆಂಬುದನ್ನು ನಿಷ್ಕರ್ಷೆಮಾಡಿ ಹೇಳಿರುವುದಿಲ್ಲ ಅಭಿನವಗುಪ್ತನೂ ಹೇಳಿರುವುದಿಲ್ಲ ಕಲ್ಹಣನ ರಾಜತರಂಗಿಣಿಯಲ್ಲಿ ಈ ಧ್ವನಿಕಾರನು ಮನೋರಥನ ಸಮಕಾಲೀನನೆಂದು

ಮನೋರಥಃ ಶಂಖದತ್ತಃ
  ಚಟಕಸ್ಸಂಧಿಮಾಂಸ್ತಥಾ
ಬಭೂವುಃ ಕವಯಸ್ತಸ್ಯ
  ವಾಮನಾದ್ಯಾಶ್ಚ ಮಂತ್ರಿಣಃ ||[1] ಎಂದು ಹೇಳಲ್ಪಟ್ಟಿದೆ.

ಧ್ವನ್ಯಾಲೋಕದಲ್ಲಿ ಕಂಡುಬರುವುದಾದ —

[1] ರಾಜತರಂಗಿಣೀ ೪—೪೯೭

ಯಸ್ಮಿನ್ನಸ್ತಿ ನ ವಸ್ತು ಕಿಂಚನ ಮನಃ ಪ್ರಹ್ಲಾದಿ ಸಾಲಂಕೃತಿ
ವ್ಯುತ್ಪನ್ನೈ ರಚಿತಂ ಚ ನೈವ ವಚನೈರ್ವಕ್ರೋಕ್ತಿಶೂನ್ಯಂ ಚ ಯತ್
ಕಾವ್ಯಂ ತದ್ಧ್ವನಿನಾ ಸಮನ್ವಿತಮಿತಿ ಪ್ರೀತ್ಯಾ ಪ್ರಶಂಸಂಜಡೋ
ನೋ ವಿದ್ಮೋಽಭಿದದಾತಿ ಕಿಂ ಸುಮತಿನಾ ಪೃಷ್ಟಃ ಸ್ವರೂಪಂ ಧ್ವನೇಃ ||

ಎಂಬ ಶ್ಲೋಕಕ್ಕೆ ಅಭಿನವಗುಪ್ತನು ವ್ಯಾಖ್ಯಾನವನ್ನು ಬರೆಯುವಾಗ "ತಥಾಚಾನ್ಯೇನೇತಿ ಗ್ರಂಥಕೃತ್ಸಮಾನಕಾಲ ಭಾವಿನೈವ ಮನೋರಥ ನಾಮ್ನಾಕವಿನಾ" ಎಂದು ಹೇಳಿರುವನು. ಇದರಿಂದ ಮನೋರಥನೆಂಬ ಕವಿಯು ಆನಂದವರ್ಧನನ ಸಮಕಾಲೀನನೆಂದೂ ಈ ಶ್ಲೋಕವು ಮನೋರಥನ ದೆಂದೂ ಸ್ಪಷ್ಟಪಡಿಸಿದಂತಾಗುವುದು.

ಡಾ|| ಎಸ್. ಕೆ. ಡೇಯವರು ಮನೋರಥನೆಂಬುವನು ಧ್ವನ್ಯಾಲೋಕ ಕಾರನಾದ ಆನಂದವರ್ಧನನ ಸಮಕಾಲೀನನೆಂದು ಹೇಳುವುದರ ಮೂಲಕ ಮೇಲಣ ಅಭಿನವಗುಪ್ತನ ಅಭಿಪ್ರಾಯವನ್ನೇ ಸಮರ್ಥಿಸಿ ಬರೆದಿರುವರು.§

ಮೇಲೆ ಹೇಳಿದ ಶ್ಲೋಕಾಧಾರದಿಂದ ಮನೋರಥರಿಬ್ಬರೆಂದು ಕೆಲವರು ತರ್ಕಿಸುವರು. ಅದು ಸಮಂಜಸನೆನಲಾಗುವುದಿಲ್ಲ. ಏಕೆಂದರೆ ಅಭಿನವಗುಪ್ತನು "ತಥಾಚಾನ್ಯೇನೇತಿ ಗ್ರಂಥಕೃತ್ಸಮಾನಕಾಲಭಾವಿನೈವ ಮನೋರಥನಾಮ್ನಾ ಕವಿನಾ" ಎಂದು ಮೇಲೆ ಹೇಳಿರುವನಲ್ಲವೆ! 'ಗ್ರಂಥಕೃತ್' ಎಂಬುದಕ್ಕೆ ಅಭಿನವ ಗುಪ್ತನ ಅಭಿಪ್ರಾಯವು ಆನಂದವರ್ಧನನೆಂದೂಹಿಸುವುದಾದರೆ ಮನೋರಥನು ಆನಂದವರ್ಧನನ ಸಮಕಾಲೀನನೂ ಕ್ರಿ. ಶ. ೯ನೆಯ ಶತಮಾನದಲ್ಲಿದ್ದವನೆಂದೂ ಹೇಳಬೇಕಾಗುವುದು. ಇದರಿಂದ ಕಲ್ಹಣನು ಹೇಳುವ ಕಾಲಕ್ಕಿಂತ ಕೊಂಚಕಾಲ ವಿಳಂಬವಿರಬೇಕೆಂದೂ ಮನೋರಥನೆಂಬ ಹೆಸರಿನ ಇಬ್ಬರೆನ್ನುವುದಕ್ಕೆ ಬದಲು ಏಕವ್ಯಕ್ತಿತ್ವವನ್ನು ಹೇಳಿದಂತಾಗುವುದು.

"ಧ್ವನಿಕಾರಿಕಾ" ಕಾರನೂ ಮತ್ತು "ವೃತ್ತಿ" ಕಾರನೂ ಆನಂದವರ್ಧನ ನೆಂದು ಅಭಿನವಗುಪ್ತನು ಹೇಳಿರುವ ಭರತನ ನಾಟ್ಯಶಾಸ್ತ್ರವ್ಯಾಖ್ಯಾನವಾದ "ಅಭಿನವಭಾರತೀ" ಎಂಬ ಗ್ರಂಥದಿಂದ ಸ್ಪಷ್ಟಪಡುತ್ತಾದುದರಿಂದ ಕಾರಿಕಾ ಕಾರನೂ ವೃತ್ತಿಕಾರನೂ ಭಿನ್ನ ಭಿನ್ನವ್ಯಕ್ತಿಗಳೆಂದು ಹೇಳುವ ಪ್ರೊ. ಜಾಕೋಬಿ ಯವರ ಮತವನ್ನು ಪುಷ್ಟೀಕರಿಸಲಾಗುವುದಿಲ್ಲ.

ಜಯಾಪೀಡನ ಕಾಲದಲ್ಲಿ ಮನೋರಥನೆಂಬ ಕವಿಯು ಇದ್ದುದಾಗಿ ಕಲ್ಹಣನು ಒಕ್ಕಣಿಸಿಕೊಂಡಿರುವನು. ಪ್ರೊ. ಸ್ಟೇಕೊನೋ (Prof. Sten Konow)

§ S. K. De's Sanskrit Poetics Vol 1 P. 112-113.

ರವರು ಜಯಾಪೀಡನ ಕಾಲವನ್ನು ಕ್ರಿ. ಶ. ೭೭೬-೮೧೭ರ ವರೆಗೆಂದಿರುವರು. ಈ ಮನೋರಥನೇ ಕ್ರಿ. ಶ. ೮೧೭-೮೯೯ರವರೆಗೆ ಜಯಾಪೀಡನ ಅನಂತರ ಆಳಿದ ಲಲಿತಾಪೀಡನ ಆಳ್ವಿಕೆಯಲ್ಲಿ ಮಂತ್ರಿಪದವಿಗೆ ಏರಿಸಲ್ಪಟ್ಟಿದ್ದು ಕೊನೆಗೆ ಲಲಿತಾ ಪೀಡನ ದುಷ್ಟತನಕ್ಕೆ ಮನನೊಂದು ಮಂತ್ರಿಪದವಿಯನ್ನು ಬಿಟ್ಟು ಬಿಟ್ಟುದಾಗಿ ಹೇಳಲ್ಪಟ್ಟಿದೆ. ಈ ವಿಚಾರವಾಗಿ ಕಲ್ಹಣನು.—

ಮಾನೀ ಮನೋರಥೋ ಮಂತ್ರೀ
ಪರಂ ಪರಿಜಹಾರ ತಂ
ಅಶಕ್ನುವನ್ ಯಮಯಿತುಂ
ಮಧ್ಯಪಾತಪರಾಙ್ಮುಖಃ ॥$

ಎಂದು ಹೇಳಿರುವನು. ಆನಂದವರ್ಧನನು ಕ್ರಿ. ಶ. ೮೫೫-೮೮೪ರಲ್ಲಿ ಆಳಿದ ಅವಂತಿವರ್ಮನ ಆಶ್ರಯದಲ್ಲಿದ್ದುದಾಗಿ ತಿಳಿದುಬರುತ್ತದೆ. ಕ್ರಿ. ಶ. ೭೭೬-೮೯೯ ರ ವರೆಗೆ ಆಳಿದ ಜಯಾಪೀಡ ಮತ್ತು ಲಲಿತಾಪೀಡನ ಸಮಕಾಲೀನನಾದ ಮನೋರಥನೇ ಕ್ರಿ. ಶ. ೮೫೫-೮೮೪ ರವರೆಗೆ ಆಳಿದ ಅವಂತಿವರ್ಮನ ಆಳ್ವಿಕೆ ಯಲ್ಲಿದ್ದ ಆನಂದವರ್ಧನನ ಸಮಕಾಲೀನನೆಂದು ಹೇಳುವುದು ಸಾಧುವಾದ ವಾಗಿ ತೋರುತ್ತದೆ ಹೇಗೆಂದರೆ ಮನೋರಥಕವಿಯ ಸಮಕಾಲೀನನಾದ ಜಯಾ ಪೀಡನ ಕಾಲವು ಕ್ರಿ ಶ. ೮೧೭ ಕ್ಕೆ ಮುಕ್ತಾಯವಾಗುತ್ತದೆ. ಈ ಹೊತ್ತಿಗೆ ಮನೋ ರಥನ ವಯಸ್ಸು ಸುಮಾರು ಮುವ್ವತ್ತುವರ್ಷಗಳಾದರೂ ಆಗಿರಬೇಕು. ಹೀಗೆ ಇದು ೮೧೭-೮೯೯ ರವರೆಗೆ ಆಳಿದ ಲಲಿತಾಪೀಡನ ಕಾಲದಲ್ಲಿ ಮಂತ್ರಿಪದವಿಯಲ್ಲಿದ್ದು ನಿವೃತ್ತನಾಗಿರಬೇಕಾದರೆ ಮನೋರಥನಿಗೆ ೪೨ವರ್ಷಗಳಾಗಿರಬೇಕು. ಅನಂತರ ತನಗೆ ೭೦-೭೫ ವರ್ಷಗಳಾಗುವವರೆಗೂ ರಾಜಕೀಯಪರಿಸ್ಥಿತಿಯನ್ನು ಬಿಟ್ಟುಬಿಟ್ಟು ಧರ್ಮಮಾರ್ಗೈಕರತನಾಗಿದ್ದು ಶೇಷಾಯುಷ್ಯಮಂಕಳೆದಿರಬೇಕು. ಅಥವಾ ಅವಂತಿವರ್ಮನು ರಾಜ್ಯಕ್ಕೆ ಬಂದುದನ್ನು ನೋಡಿ ಕೆಲವುಕಾಲದ ಅನಂತರ ಮೃತ ನಾಗಿರಬೇಕು ಎಂದು ತೋರುತ್ತದೆ. ಧ್ವನ್ಯಾಲೋಕವನ್ನು ಆನಂದವರ್ಧನನು ತಾನು ವಯೋವೃದ್ಧನಾದನಂತರ ಬರೆದಿರಬೇಕಾಗಿ ಬೋಧೆಯಾಗುತ್ತದೆ. ಏಕೆಂದರೆ ಇವನ ಇತರ ಗ್ರಂಥಸ್ಥ ಶ್ಲೋಕಗಳೆಲ್ಲವೂ ಇದರಲ್ಲಿ ಉದಾಹೃತವಾಗಿವೆ ಆದುದ ರಿಂದ ಆನಂದವರ್ಧನನು ಧ್ವನ್ಯಾಲೋಕವನ್ನುಬರೆಯುವವೇಳೆಗೆ ಆನಂದವರ್ಧನನಿಗೆ ಸುಮಾರು ೪೦-೫೦ ವರ್ಷ ವಯಸ್ಸಾಗಿರಬೇಕು. ಅವಂತಿವರ್ಮನು ಸಿಂಹಾಸನಕ್ಕೆ ಬರುವ ವೇಳೆಗೆ ಆನಂದವರ್ಧನನಿಗೆ ಸುಮಾರು ೩೦ ವರ್ಷಗಳಾದರೂ ಆಗಿರಬೇಕು. ಹೀಗೆ ಹೇಳುವದರಿಂದ ತರುಣ ಆನಂದವರ್ಧನನು ವಯೋಗಳಿತನಾಗಿದ್ದ ಮನೋ

$ ರಾಜತರಂಗಿಣೀ ೪—೬೭೧.

ರಥನಿಗೆ ಸಮಕಾಲೀನನಾಗಿದ್ದನೆಂದು ನಿಶ್ಚಯಪಡುವದು. ಆದುದರಿಂದ "ಗ್ರಂಥ ಕೃತ್" ಎಂಬುದಕ್ಕೆ ಕಾರಿಕಾಕಾರನೆಂದು ಅರ್ಥಮಾಡುವುದು ಸರಿಯಲ್ಲ. ಈ ಕಾರಣಗಳಿಂದ ಕಲ್ಹಣನು ಹೇಳುವ ಮನೋರಥನೂ ಅಭಿನವಗುಪ್ತನು ಹೇಳುವ ಮನೋರಥನೂ ಇಬ್ಬರೂ ಒಂದೇ ವ್ಯಕ್ತಿಯೆಂದೂ ಅವನು ಆನಂದವರ್ಧನನ ಸಮ ಕಾಲೀನನೆಂದೂ ಸ್ಪಷ್ಟವಾಗುವುದು.' ಈ ಮನೋರಥನಲ್ಲದೆ "ಅವಂತಿಸುಂದರೀ ಕಥಾಸಾರ" ವೆಂಬ ಗ್ರಂಥದಲ್ಲಿ 'ಭಾರವಿ' ಎಂಬವನಿಗೆ ಮೂರುಜನ ಮಕ್ಕಳೆಂದೂ ಅವರಲ್ಲಿ ಮಧ್ಯಮನಹೆಸರುಮನೋರಥನೆಂದೂ ಹೇಳಲ್ಪಟ್ಟಿದೆ.§ ಇವನು ಹೆಸರು ಮಾತ್ರದಿಂದ ಪ್ರಸಿದ್ಧನು. ಮೇಲೆ ಹೇಳಿರುವ ಮನೋರಥನು ಮಹಾ ಕವಿ ಆದುದರಿಂದ ಇವರೀರ್ವರಿಗೂಯಾವ ಸಂಬಂಧವೂ ಇರದು. ಸಂಬಂಧಕಲ್ಪನೆಯೂ ಅಸಂಗತವಾದುದು.

**ವಿಷಮಬಾಣಲೀಲಾ**:—ಧ್ವನ್ಯಾಲೋಕದಲ್ಲಿ ಉದಾಹರಿಸಿಕೊಂಡಿರುವ ಇದರ ಶ್ಲೋಕಗಳಿಂದ ಇದು ಪ್ರಾಕೃತಕಾವ್ಯವಾಗಿರಬೇಕೆಂದು ಗೊತ್ತಾಗುತ್ತದೆ. ಈ ಉದಾಹರಣೆಗಳನ್ನು ಸಮ್ಯಕ್ ದೃಷ್ಟಿಯಿಂದ ಪರಿಶೀಲಿಸುವುದಾದರೆ ಸುಭಾಷಿ ತಾವಳಿಗಳಂತೆ ಇದೊಂದು ಸಂಕಲಿತ ಗ್ರಂಥವಾಗಿರಬೇಕೆಂದೂ "ಕವಿವ್ಯು ತ್ಪತ್ತಯೇ" ಎಂದು ಹೇಳಲ್ಪಟ್ಟಿರುವುದರಿಂದ ಕವಿಗಳಿಗೋಸ್ಕರ ಬರೆದುದಾಗಿರ ಬೇಕೆಂದೂ ಬೋಧೆಯಾಗುತ್ತದೆ. ಧ್ವನ್ಯಾಲೋಕದಲ್ಲಿ ಕಂಡುಬರುವ ಅಪಭ್ರಂ ಶೋದಾಹರಣೆಗಳನ್ನು ನೋಡಿದರೆ ಈ ಭಾಷೆಯಲ್ಲಿಯೂ ಯಾವುದಾದರೊಂದು ಗ್ರಂಥವನ್ನು ಸುಭಾಷಿತಾವಳಿಯಂತೆ ಸಂಕಲಿತ ಮಾಡಿ ಬರೆಯಲ್ಪಟ್ಟಿರಬಹುದಾಗಿ ಊಹಿಸಲು ಅವಕಾಶವಿದೆ. ಈ ಗ್ರಂಥದ ವಿಚಾರವಾಗಿ ಹೆಚ್ಚಾಗಿ ತಿಳಿಯದು.

**ದೇವೀಶತಕ**:—ಚಿತ್ರಬಂಧಯಮಕ ಶ್ಲೇಷಗಳಿಂದ ಕೂಡಿ ಅತಿಕ್ಲಿಷ್ಟ ವಾಗಿದೆ. ಇದರಲ್ಲಿ ಮಹಾರಾಷ್ಟ್ರೀ ಪೈಶಾಚೀ, ಮಾಗಧೀ, ಶೌರಸೇನೀ ಮತ್ತು ಅಪ ಭ್ರಂಶ ಭಾಷೆಗಳಿಗೆ ಸಂಸ್ಕೃತಭಾಷೆಯಲ್ಲಿ ಶ್ಲೇಷೆಯನ್ನು ಕಲ್ಪಿಸಿ ಬರೆಯಲ್ಪಟ್ಟಿದೆ.

"**ಅರ್ಜುನಚರಿತ**"ವು ಮಹಾಕಾವ್ಯವೆಂದೂ "**ಹರವಿಜಯ**"ವು ಪ್ರಾಕೃತ ಕಾವ್ಯವೆಂದೂ ತಿಳಿಯಬರುವುದು ಹೊರ್ತು ಗ್ರಂಥವು ಉಪಲಬ್ಧವಿಲ್ಲವಾಗಿದೆ.

ಭಾಷಾಷಟ್ಕಸಮಾವೇಶಮನುಳ್ಳ ದೇವೀಶತಕದ ಒಂದು ಶ್ಲೋಕವನ್ನು ಮಾದರಿಗಾಗಿ ಬರೆಯುವೆವು.

' Journal of Oriental Research Vol II Pt. 1 P. 44 47.

§ ಮನೋರಥಾಖ್ಯಯಸ್ತೇಷಾಂ ಮಧ್ಯಮೋ ವಂಶವರ್ಧನಃ
(ಅವಂತಿಸುಂದರೀ ಕಥಾಸಾರ ೧-೨೦)

ಆಲೋಲ ಕಮಲೇಚಿತ್ತ
ಲಲಾಮ ಕಮಲಾಲಯೇ
ನಾಹಿಚಂಡಿಮಹಾಮೋಹ
ಭಂಗಭೀಮಬಲಾಮಲೇ ||

ದ್ವ್ಯಕ್ಷರಶ್ಲೋಕೋದಾಹರಣೆ :—

ಮೇನೇನೂನಮನೇನಸೋನನಮುಮಾನಾಮ್ನಾಸುಮೇನೋನ್ಮನಾ
ನುನ್ನೇನೇನಮನೇನಿಮಾನ ಮಮುನಾನೋನಾಮನಾನಾನುಮೇ
ಮೌನೇನಾಮಮಮಾನನಿಮ್ನ ಮನನನ್ನಾನಾಮಿನಾನೂನಿಮೇ
ಮುನ್ಮೀನ್ನಾನನಮಾನಮಾಮುನಿಮನೋಮಾನಾನ್ನನೋನ್ನಾಮಿತಿ ||

## ಹರಿಚಂದ್ರ (೨)

ಇವನ ಮಾತಾಪಿತೃಗಳಾರೆಂಬುದಾಗಲಿ, ಎಲ್ಲಿಯವನೆಂಬುದಾಗಲಿ ಹೇಳುವ ಪ್ರಮಾಣಗ್ರಂಥಗಳು ದೊರೆಯುವಂತಿಲ್ಲ. ಇವನ ಮಂಗಳಾಚರಣ ಶ್ಲೋಕದಿಂದಲೂ ಗ್ರಂಥಾಂತ್ಯ ಶ್ಲೋಕಗಳಿಂದಲೂ ಇವನು ಜೈನಮತೀಯನೆಂದು ಸಿದ್ಧವಾಗುತ್ತದೆ.

**ಕಾಲ** :—ಇವನು ಕ್ರಿ. ಶ. ೯ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಧರ್ಮಶರ್ಮಾಭ್ಯುದಯಕಾರನನ್ನು ಹೇಳಿಕೊಂಡಿರುವುದರಿಂದ ಅವನಿಗಿಂತ ಈಚಿನವನೂ ಕ್ರಿ. ಶ. ಸುಮಾರು ೧೧ನೆಯ ಶತಮಾನದ ವಾದೀಭಸಿಂಹನು ಈ ಹರಿಚಂದ್ರನನ್ನು ಹೇಳಿಕೊಂಡಿರುವುದರಿಂದ ಇವನಿಗಿಂತ ಪ್ರಾಚೀನನೂ ಸುಮಾರು ಕ್ರಿ. ಶ. ೯ನೆಯ ಶತಮಾನದ ಉತ್ತರಾರ್ಧದವನೂ ಆಗಿರಬೇಕೆಂದು ತೋರುತ್ತದೆ.

**ಗ್ರಂಥ** —ಇವನು ಬರೆದುದಾದ ಜೀವಂಧರಚಂಪೂ ಎಂಬ ಗ್ರಂಥವು ಮಾತ್ರ ದೊರೆಯುವುದು. ಇದರಲ್ಲಿ ೧೧ಲಂಬಕಗಳಿರುವುವು. ಜಿನಮತ ಪ್ರವಿಷ್ಟನಾದ ಜೀವಂಧರನಚರಿತೆಯು ಸರಸವಾಗಿ ವರ್ಣಿತವಾಗಿದೆ. ಗದ್ಯವೂ ಪದ್ಯವೂ ಅವುಗಳ ಯೋಗ್ಯತೆಗೆ ತಕ್ಕಂತೆ ಸಂತೋಷಗೊಳಿಸುವುದೆನ್ನುವುದಾದರೂ ಗದ್ಯ ಪದ್ಯಗಳೊಡನೆ ಬರೆದಗ್ರಂಥವು ಮತ್ತಷ್ಟು ಸಂತೋಷವನ್ನು ಹೆಚ್ಚಿಸುವುದೆಂದೂ

ಗದ್ಯಾವಲಿಃ ಪದ್ಯಪರಂಪರಾ ಚ
ಪ್ರತ್ಯೇಕ ಮಪ್ಯಾವಹತಿ ಪ್ರಮೋದಂ
ಹರ್ಷಪ್ರಕರ್ಷಂ ತನುತೇ ಮಿಲಿತ್ವಾ
ದ್ರಾಗ್ಬಾಲ್ಯತಾರುಣ್ಯವತೀವ ಕಾಂತಾ ||[1]

ಎಂದು ಹೇಳಿಕೊಂಡಿರುವನು.

[1] ಜೀವಂಧರಚಂಪೂ ೧-೯

ಹೇಮಾಂಗದೇಶದ ರಾಜಧಾನಿಯಾದ ರಾಜಪುರಿಯನ್ನು ಸತ್ಯಂಧರನೆಂಬ ರಾಜನು ಪಟ್ಟಮಹಿಷಿಯಾದ ವಿಜಯಾ ಎಂಬುವಳೊಡನೆ ಕೂಡಿ ರಾಜ್ಯಭಾರ ಮಾಡುತ್ತ ರಾಜ್ಯವು ನಿಷ್ಕಂಟಕವಾಗಿರುವುದನ್ನು ನೋಡಿ ಕಾಷ್ಠಾಂಗಾರನೆಂಬ ಮಿತ್ರನ ವಶಕ್ಕೆ ರಾಜ್ಯಭಾರವನೊಪ್ಪಿಸಿ ಸುಖಭೋಗಲೋಲುಪನಾಗಿರುತ್ತಿದ್ದು ಕಾಷ್ಠಾಂಗಾರನ ಕಪಟದಿಂದ ವಂಚಿತನಾಗಿ ಹತನಾದನು. ಆಗ ಗರ್ಭವತಿಯಾಗಿದ್ದ ವಿಜಯಾದೇವಿಯು ನಷ್ಟಸಂಪದಳಾಗಿ ಊರನ್ನುಬಿಟ್ಟು ಶ್ಮಶಾನದಲ್ಲಿ ಸುಖಪ್ರಸೂತಳಾಗಿ ಹಸುಳೆಯನ್ನುಬಿಟ್ಟು ಅಗಲಬೇಕಾದ ಸಂಭವವು ಒದಗಿ ಹೊರಟುಹೋಗುವಾಗ ಹಸುಳೆಯನ್ನು ನೋಡಿ ಕಣ್ಣೀರಿಡುತ್ತ "ಜೀವಂಧರ" ನೆಂದು ಹರಿಸಿ ಹೊರಟುಹೋದಳು. ಕೊನೆಗೆ ಈ ಹಸುಳೆಯು ಅದೇ ಊರಿನ ಗಂಧೋತ್ಕಟನೆಂಬವೈಶ್ಯನ ಮನೆಯಲ್ಲಿ ಬೆಳೆದು ಆರ್ಯನಂದಾಚಾರ್ಯನ ಬಳಿ ಗುರುಕುಲವಾಸವನ್ನುಮಾಡಿ ಸಕಲ ಶಾಸ್ತ್ರಾರ್ಥಂಗಳನ್ನರಿತು ಕಾಲಕ್ರಮದಲ್ಲಿ ಗಂಧರ್ವದತ್ತೆ, ಗುಣಮಾಲೆ, ಪದ್ಮಾ, ಕ್ಷೇಮಶ್ರೀ, ಕನಕಮಾಲೆ, ವಿಮಲಾ, ಸುರಮಂಜರೀ, ಮತ್ತು ಲಕ್ಷಣಾ ಎಂಬುವರನ್ನು ವಿವಾಹಮಾಡಿಕೊಂಡು ದುರ್ಮಾರ್ಗನಾದ ಕಾಷ್ಠಾಂಗಾರನನ್ನು ಕೊಂದು ಮುನಿವೃತ್ತಿಯೊಳಿದ್ದ ತಾಯಿಯನ್ನು ಸಂತೈಸಿ ತಾಯಿಯೊಡನೆ ಸುಖಸಾಮ್ರಾಜ್ಯವನ್ನನುಭವಿಸುತ್ತ ನಷ್ಟವಾಗಿದ್ದ ರಾಜ್ಯವನ್ನು ಮರಳಿ ಸಂಪಾದಿಸಿಕೊಂಡು ಸುಖವಾಗಿರುತ್ತಿದ್ದನೆಂಬುದೇ ಜೀವಂಧರಚರಿತ ಕಥಾಸಾರಾಂಶ. ಶೈಲಿಯು ಅತ್ಯಂತ ಪೇಶಲವಾಗಿ, ಸಹಜವರ್ಣನಗಳಿಂದ ಕೂಡಿ ಸರಳವಾದುದಾಗಿ ಗ್ರಂಥವು ಆಪಾತತಃ ರಮಣೀಯವಾಗಿರುವುದೆಂದರೂ ಸಲ್ಲುವುದು. ಗದ್ಯದ ಮಾದರಿಗಾಗಿ ಕೊಂಚಭಾಗವನ್ನೆತ್ತಿ ಬರೆಯುವೆವು. ಹೇಮಾಂಗದವೆಂಬ ದೇಶವರ್ಣನವು ಹೀಗಿರುವುದು;—

"ಅಥಲವಣರತ್ನಾಕರನಿರ್ಲೋಲಕಲ್ಲೋಲಶಯಕುಶೇಶಯಪ್ರಕ್ಷಿಪ್ತಮುಕ್ತಾವಿದ್ರುಮರಾಜೀವಿರಾಜಿತವೇಲಾಲಂಕೃತೇ, ಸಕಲದ್ವೀಪಮಧ್ಯಮಧ್ಯಾಸೀನೇಽಪಿ ಶೋಭಾತಿಶಯೇನತೇಷಾಮುಪರಿವರ್ತಮಾನೇ, ಸ್ವಮಹಿಮನಿರಂಕೃತಸುರಾಧಿಪಲೋಕಂ ಗಗನತಲಚುಂಬಿಜಂಬೂವಿಟಪಿಕಪಟೇನ ಮಸ್ತಕಮುದ್ಧೃತ್ಯ ಪ್ರತಿಕ್ಷಣವೀಕ್ಷಮಾಣ ಇವ, ಅಪಾರಸಂಸಾರಸಂತಮಸಾಂಧೀಕೃತ ಜೀವಲೋಕಸ್ಯ ಪುರುಷಾರ್ಥಚತುಷ್ಟಯಪ್ರಕಾಶನಾಯೇವದಿವಾಕರಯುಗಲನಿಶಾಕರಯುಗಲವ್ಯಾಜೇನ ಪ್ರದೀಪಚತುಷ್ಟಯಮಾಬಿಭ್ರಾಣೇ, ಮೂರ್ತೀಕೃತಲಾವಣ್ಯಾಇವ ಮಹೀಮಹಿಲಾಯಾಃ, ರಂಗಸ್ಥಲಇವ ಶ್ರೀಲಾಸಿಕಾಲಾಸ್ಯಸ್ಯ, ಪ್ರತಿಚ್ಛಂದಇವ ನಾಕಲೋಕಸ್ಯ, ಸಕಲಲೇಖಲೋಚನವಿಮಾನಾನಾಮಾಲಂಬನಕೂಪೇ, ಜಂಬೂದ್ವೀಪೇ, ಭರತಖಂಡಮಂಡನಾಯಮಾನಕಮಲವನಮಧುಲುಬ್ಧಭೃಂಗಮಾಲಾವ್ಯಾ

ಜೇನ ಸಕಲಲೋಕಲೋಚನಬಂಧನಾರ್ಥಮಾಯಸಶೃಂಖಲಾಮಿವ ಬಿಭ್ರಾಣಂ, ಪರಿಪಾಕಪಿಶಂಗಕಲಮಮಂಜರೀಪುಂಜಪಿಂಜರೀಭೂತ ತಯಾ ಪತ್ರಿಕುಲಪಾತಭಯಾತ್ಕೃಷೀವಲಸ್ಥಗಿತಪೀತಾಂಬರಮಿವ ಬಿಭ್ರಾಣಂ, ತತ್ರ ತತ್ರ ಸಮರ್ಪಿತೈರಭ್ರಂಲಿಹೈರ್ಬೀಜಾವಾಪಪ್ರಭೃತಿ ತಪನಕಲಿತಸಂತಾಪಜನಿತವೈರಿತಯಾ ತದೀಯಪದವೀಮುಪರುಂಧ ದ್ಭಿರಿವ ನಿಜಸೌಂದರ್ಯಸಂದರ್ಶನಾರ್ಥಮಾಗತೈಃ ಕುಲಾಚಲೈರಿವ ಉದ ಯಾಸ್ತಾಚಲಮಧ್ಯಸಂಚಾರಖಿನ್ನಸ್ಯ ಸರೋಜಬಂಧೋರ್ವಿಶ್ರಮಾಯವೇ ಧಸಾ ವಿರಚಿತೈರಿವ ಧರಾಧರೈರ್ಧಾನ್ಯರಾಶಿಭಿರುದ್ಭಾಸಿತಂ, ಅತಿದೂರ ಪ್ರವೃದ್ಧಶಾಖಾವಲಯವಿಲಸಿತಕಿಲಯಕೈತವೇನ ಹಸ್ತಮುದಸ್ಯ ವಿಚಿತ್ರಪತತ್ರಿವಿರುತೈಃ ಕಲ್ಪಪಾದಪಾಂಜೇತುಮಿವಾಹ್ವಯಮಾನೈ ರ್ಜ ನ್ಮಪ್ರಭೃತಿ ಜಲಸೇಕಾದ್ಯುಪಕಾರೇಣ ವರ್ಧಕೇಭ್ಯೋ ವಲಾಹಕೇಭ್ಯಃ ಫಲಪುಷ್ಪಾದೀನಿ ಸಮರ್ಪಯಿತುಮಿವ ಮೇಘಮಂಡಲಮವಲಂಬ ಮಾನೈರುಪವನತರುಷಂಡೈರ್ಮಂಡಿತಂ, ವಿಕಚನೀಲೋತ್ಪಲನಯನಾಭಿಃ ಪದ್ಮ ಮುಖೀಭಿರ್ಭೃಂಗಜಾಲನೀಲಾಲಕಾಭಿರ್ಮುದಿತಮೀನಲಾಂಛನ ಮಕರೀಶೋಭಿತಚಾರುಚಕ್ರಪಯೋಧರಾಭಿರ್ಘನ ಪುಲಿನಜಘನಾಭಿಸ್ತ ಟಿನೀವಧೂಟೀಭಿಃ ಪರಿವೃತಮಸ್ತಿ ನಿಸ್ತುಲಂ ಹೇಮಾಂಗದಂ ನಾಮ ಮಂಡಲಂ ||

ಪದ್ಯಭಾಗದಮಾದರಿಗೆ. —

ವಿದ್ಯಾವಲ್ಲೀ ಪಾತ್ರಸುಕ್ಷೇತ್ರದತ್ತಾ
ಪ್ರಜ್ಞಾಸಿಕ್ತಾ ಸೂಕ್ತಿಭಿಃ ಪುಷ್ಪಿತಾ ಚ
ಆಶಾಯೋಷಿತ್ಕರ್ಣಭೂಷಾಯಮಾಣಾಂ
ಕೀರ್ತಿಪ್ರೋದ್ಯನ್ಮಂಜರೀಮಾದಧಾತಿ || ೮೦ಬ ೨—೧೬

ಸುಕ್ಷೇತ್ರದಲ್ಲಿಡಲ್ಪಟ್ಟುದಾದ ವಿದ್ಯಾ ಎಂಬ ಬಳ್ಳಿಯು ಜ್ಞಾನವೆಂಬ ಜಲದಿಂದ ತೋಯಿಸಲ್ಪಟ್ಟುದಾಗಿ ನೀತಿಗಳೆಂಬ ಪುಷ್ಪಗಳಿಂದ ಕೂಡಿದುದಾಗಿ ಶ್ರೋತೃಗಳ ಕರ್ಣಭೂಷಣವಾಗಿ ದಿಕ್ಕು ದಿಕ್ಕುಗಳಲ್ಲಿ ಕೀರ್ತಿ ಎಂಬ ಗೊಂಚಲನ್ನು ಕೊಡುವು ದಾಗಿರುವುದು.

ಸೌಂದರ್ಯಸ್ಯ ಪರಾ ಕಾಷ್ಠಾ ಶೃಂಗಾರಸ್ಯ ಪರಾಗತಿಃ
ಖನಿಃ ಕಲಾನಾ ಯ್ವಾಸೀ ನ್ಮೂರ್ತಿರಾನಂದದಾಯಿನೀ || ೨—೨೧

ವಿದ್ಯೆಯೆಂಬುದು ವಿಶ್ವಸೌಂದರ್ಯಾನುಮಾರ್ಗದಾಯಿಯಾಗಿಯೂ ಪ್ರಣಯ ತತ್ತ್ವಾಂತಬೋಧಕವಾಗಿಯೂ ಸಕಲಕಲಾಖನಿಯಾಗಿಯೂ ಸಕಲ ಸೌಖ್ಯಗಳ ಮೂರ್ತಿ ಮತ್ತಾಗಿರುವುದು.

## ಹತ್ತನೆಯ ಶತಮಾನ.

### ರಾಜಶೇಖರ (೧)



"ತದಾಮುಷ್ಯಾಯಣಸ್ಯ ಮಹಾರಾಷ್ಟ್ರಚೂಡಾಮಣೇರಕಾಲಜಲದಸ್ಯ ಚತುರ್ಥೋದೌರ್ದುಕಿಃ ಶೀಲವತೀಸೂನುರುಪಾಧ್ಯಾಯಃಶ್ರೀರಾಜಶೇಖರ ಇತ್ಯಪರ್ಯಾಪ್ತಂಬಹುಮಾನೇನ" ಎಂದು ಹೇಳಿರುವುದರಿಂದ ಇವನು ಮಹಾರಾಷ್ಟ್ರ ಚೂಡಾಮಣಿಯಾದ ಅಕಾಲಜಲದನ ನಾಲ್ಕನೆಯವನಾದ ದೌರ್ದುಕಿ ಮತ್ತು ಶೀಲವತಿಯರಮಗನೆಂದೂ, ಉಪಾಧ್ಯಾಯನೆಂದೂ

ಸ ಮೂರ್ತೋ ಯತ್ರಾಸೀದ್ಗುಣಗಣ ಇವಾಕಾಲಜಲದಃ
ಸುರಾನಂದಃ ಸೋಽಪಿ ಶ್ರವಣಪುಟಪೇಯೇನ ವಚಸಾ।
ನ ಚಾನ್ಯೇ ಗಣ್ಯಂತೇ ತರಲಕವಿರಾಜಪ್ರಭೃತಯೋ
ಮಹಾಭಾಗಸ್ತಸ್ಮಿನ್ನಯಮಜನಿ **ಯಾಯಾವರಕುಲೇ** ।

ಎಂಬುದರಿಂದ ಅಕಾಲಜಲದ, ಸುರಾನಂದ, ತರಲ, ಕವಿರಾಜನೇ ಮೊದಲಾದ ಮಹಾ ಕವಿಗಳು ಜನ್ಮಿಸಿದ ಯಾಯಾವರವೆಂಬ ಬ್ರಾಹ್ಮಣಕುಲದಲ್ಲಿ ಜನ್ಮಗ್ರಹಣ ಮಾಡಿದವನೆಂದೂ,

ಬಾಲಕವಿಃ‡ ಕವಿರಾಜೋ ನಿರ್ಭಯರಾಜಸ್ಯ ತಥೋಪಾಧ್ಯಾಯಃ
ಇತ್ಯೇತಸ್ಯ ಪರಂಪರಯಾ ಆತ್ಮಾ ಮಾಹಾತ್ಮ್ಯಮಾರೂಢಃ ॥
ಕಿಮಪರಮಪರೈಃ ಪರೋಪಕಾರ
ವ್ಯಸನನಿಧೇರ್ಗುಣಿಕೈರ್ಗುಣೈರಮುಷ್ಯ
ರಘುಕುಲತಿಲಕೋ ಮಹೇಂದ್ರಪಾಲಃ
ಸಕಲಕಲಾನಿಲಯಃ ಸ ಯಸ್ಯ ಶಿಷ್ಯಃ ॥ $

ಎಂಬುದರಿಂದ ಬಾಲಕವಿ, ಕವಿರಾಜನೆಂಬ ನಾಮಾಂತರಗಳುಳ್ಳ ರಾಜಶೇಖರನು "ನಿರ್ಭಯರಾಜಾ" ಪರನಾಮಕನಾದ ರಘುಕುಲತಿಲಕ ಮಹೇಂದ್ರಪಾಲನ ಉಪಾಧ್ಯಾಯನೆಂದೂ ವ್ಯಕ್ತವಾಗುತ್ತದೆ. ಇವನು ಶೈವಮತಾನುಯಾಯಿ.

---

ಬಾಲರಾಮಾಯಣ ಪ್ರಸ್ತಾವನಾ ಪುಟ ೯.

| Ibid ಅಂಕ ೧—೧೩.

‡ ರತ್ನಶೇಖರೋದಯಕಾರನಾದ ಬಾಲಕವಿಯು ಇವನಲ್ಲ.

$ ಕರ್ಪೂರಮಂಜರೀ ಪ್ರಸ್ತಾವನಾ ಪುಟ ೨.

"ಯಾಯಾವರ" ಎಂದರೆ ವೈಶ್ವದೇವಾಗ್ನಿಯನ್ನು ಅಥವಾ ಧಾರ್ಯಾಗ್ನಿಯನ್ನು ಇಟ್ಟುಕೊಂಡಿರುವವರೆಂದು ಡಾ|| ಹಾಲರವರು ಒಕ್ಕಣಿಸಿರುವರು. "ವಿದ್ಧಶಾಲಭಂಜಿಕೆ"ಯ ವ್ಯಾಖ್ಯಾನಕಾರನಾದ ನಾರಾಯಣ ದೀಕ್ಷಿತನು ತನ್ನ ವ್ಯಾಖ್ಯಾನದಲ್ಲಿ ದೇವಲ (ಸ್ಮೃತಿಕಾರ) ನನ್ನು ಹೇಳಿ ಯಾಯಾವರ ಎಂಬುದು ಗೃಹಸ್ಥಾಶ್ರಮ ಭೇದವೆಂದೂ ಗೃಹಸ್ಥಾಶ್ರಮದಲ್ಲಿ ಯಾಯಾವರ ಮತ್ತು ಶಾಲೀನ ಎಂಬ ಎರಡು ಪಂಗಡಗಳಿರುವುವೆಂದೂ ಹೇಳಿರುವುದಲ್ಲದೆ.—

> ಯಾಯಾವರೇಣ | ದ್ವಿವಿಧೋ ಗೃಹಸ್ಥೋ ಯಾಯಾವರಃ ಶಾಲೀನಶ್ಚೇತಿ ತಯೋರ್ಯಾಯಾವರಃ ಪ್ರವರೋ ಯಾಜನಾಧ್ಯಾಪನ ಪ್ರತಿಗ್ರಹರಿಕ್ಥವರ್ಜನಾತ್ ಷಟ್ಕರ್ಮಾಧಿಷ್ಠಿತಃ ಪ್ರೇಷ್ಯ ಚತುಷ್ಪದಗೃಹಗ್ರಾಮಧನಧಾನ್ಯಯುಕ್ತೋ ಲೋಕಾನುವರ್ತೀ ಶಾಲೀನ ಇತ್ಯಾದಿನಾ ದೇವಲೋಕ್ತೋ ವೃತ್ತಿವಿಶೇಷಶಾಲೀ ಗೃಹಸ್ಥವಿಶೇಷಸ್ತೇನ ||

ಎಂದು ವ್ಯಾಖ್ಯಾನ ಮಾಡಿರುವನು.

ಇದಲ್ಲದೆ ರಾಜಶೇಖರನಿಗೆ ರಜನೀವಲ್ಲಭಶಿಖಂಡ ಸರ್ವಭಾಷಾವಿಚಕ್ಷಣ† ಸರ್ವಭಾಷಾಚತುರ‡ ನೆಂಬ ಪರ್ಯಾಯನಾಮಗಳಿದ್ದುವಾಗಿ ತಿಳಿಯಬರುತ್ತದೆ.

ರಾಜಶೇಖರನೆನ್ನುವ ಬದಲು ಯಾಯಾವರೀಯ§ ನೆಂದು ಕಾವ್ಯಮೀಮಾಂಸಾದಲ್ಲಿಯೂ ಯಾಯಾವರಕವಿ¶ ಎಂದು ತಿಲಕಮಂಜರಿಯಲ್ಲಿಯೂ ಯಾಯಾವರx ಎಂದು "ಉದಯಸುಂದರೀಚಂಪೂ" ವಿನಲ್ಲಿಯೂ ಹೇಳಿದೆ.

ಅಪರಾಜಿತ, ಶಂಕರವರ್ಮ, ಮತ್ತು ದೈವಜ್ಞರೆಂಬ ಈ ಮೂವರೂ ರಾಜಶೇಖರನ ಸಮಕಾಲೀನರಾದ ಕವಿಗಳು.

ಅಪರಾಜಿತನಿಗೆ "ಬಬ್ಬರರಾ" ಎಂದು ಮತ್ತೊಂದು ಹೆಸರೆಂದೂ ಅವನು "ಮೃಗಾಂಕಲೇಖಾ" ಕಥಾಕಾರನೆಂದೂ ತಂಜಾವೂರಲ್ಲಿರುವ ಹಸ್ತಲಿಖಿತ ಪ್ರತಿ

ರಜನೀವಲ್ಲಭಶ್ಚಂದ್ರಃ ಶಿಖಂಡಃ ಶೇಖರೋಯಸ್ಯ ಇತಿ ತದರ್ಥಃ

| ಬಾಲರಾಮಾಯಣ ೧—೧೧

† ಕರ್ಪೂರಮಂಜರೀ ೧ –೭

§ ಯಾಯಾವರೀಯಃ ಸಂಕ್ಷಿಪ್ಯ ಮುನೀನಾಂ ಮತ ವಿಸ್ತರಂ||
ಕಾವ್ಯಮೀಮಾಂಸಾ ಪುಟ ೨.
ಪಂಚಮೀ ಸಾಹಿತ್ಯವಿದ್ಯಾ ಇತಿ ಯಾಯಾವರೀಯಃ ಪುಟ ೪.

¶ ಸಮಾಧಿಗುಣಶಾಲಿನ್ಯಃ ಪ್ರಸನ್ನಪರಿಪಕ್ತ್ರಿಮಾಃ
ಯಾಯಾವರಕವೇರ್ವಾಚೋ ಮುನೀನಾಮಿವ ವೃತ್ತಯಃ|| ತಿಲಕಮಂಜರೀ

x ಯಾಯಾವರಃ ಪ್ರಾಜ್ಞವರೋ ಗುಣಜ್ಞೈ
ರಾಶಂಸಿತಃ ಸೂರಿಸಮಾಜವರ್ಯೈಃ
ನೃತ್ಯತ್ಯುದಾರಂ ಭಣಿತೇ ರಸಸ್ಥಾ
ನಟೀವ ಯಸ್ಯೋದರಸಾ ಪದಶ್ರೀಃ || ಉದಯಸುಂದರೀಚಂಪೂಃ ಉಲ್ಲಾಸ ೮.

ಯಲ್ಲಿ ಹೇಳಲ್ಪಟ್ಟಿದೆ. ಭಟ್ಟಾಪರಾಜಿತನ ಶ್ಲೋಕಗಳು ಸುಭಾಷಿತಾವಳಿಯಲ್ಲಿಯೂ 'ಪದ್ಯಾವಳಿ'ಯಲ್ಲಿಯೂ ದೊರೆಯುತ್ತವೆ. ಶಂಕರವರ್ಮ ಅಥವಾ ಕೃಷ್ಣಶಂಕರ ವರ್ಮನೇ ಎರಡನೆಯವನು. ಇವನಿಗೆ 'ಸಭ್ಯ'ನೆಂದು ಬಾಲರಾಮಾಯಣ ದಲ್ಲಿಯೂ 'ಗೋಷ್ಠೀಗರಿಷ್ಠನೆಂದು' ವಿದ್ಧಶಾಲಭಂಜಿಕೆಯಲ್ಲಿಯೂ ಹೇಳಲ್ಪಟ್ಟಿದೆ. ದೈವಜ್ಞನೆಂಬುವನೇ ಮೂರನೆಯವನು. ಈ ಹೆಸರು ಬಾಲರಾಮಾಯಣ ಮತ್ತು ಬಾಲಭಾರತದಲ್ಲಿ ಹೇಳಿರುವುದು ಕಂಡುಬರುತ್ತದೆ. ಇದು ಕವಿಯ ಹೆಸರೋ ಅಥವಾ ಯಾರಾದರೊಬ್ಬ ಜೋತಿಷ್ಕನ ಹೆಸರೋ ತಿಳಿಯದು.

ರಾಜಶೇಖರನ ತಂದೆಯಾದ ದುರ್ದುಕ (ದುಹಿಕ)ನು ಚೇದಿರಾಜರಬಳಿ ಮುಖ್ಯಾಮಾತ್ಯನಾಗಿದ್ದನು. ವಿದ್ಧಶಾಲಭಂಜಿಕೆಯಲ್ಲಿ ಸೂತ್ರಧಾರನು "ತನ್ಮನ್ಯೇ ತದಭಿನಯೇ ಶ್ರೀಯುವರಾಜದೇವಸ್ಯ ಪರಿಷದಾದೇಶಃ" ಎಂದು ಪ್ರಾರಂಭಿಸಿರು ವನು. ಈ ಯುವರಾಜದೇವನು ಚೇದಿದೇಶದಲ್ಲಾಳಿದ ಕಲಚೂರ ಅರಸರಲ್ಲಿ ಮೊದಲನೆಯವನೆಂದು ಡಾ|| ಹಲ್ಟ್‌ಚ್‌ರವರು ಹೇಳಿರುವರು. ಚೇದಿದೇಶದಲ್ಲಿ ಯುವರಾಜನು ಆಳುತ್ತಿದ್ದಾಗ ಕನ್ಯಾಕುಬ್ಜದಲ್ಲಿ ಮಹೇಂದ್ರಪಾಲನು ಆಳುತ್ತಿದ್ದು ದಾಗಿಯೂ ಯುವರಾಜದೇವನ ಪೂರ್ವಜನಾದ ಕೋಕಿಲದೇವನೂ ಮಹೇಂದ್ರ ಪಾಲನ ಪೂರ್ವಜನಾದ ಭೋಜದೇವನೂ ಸಮಕಾಲೀನರಾಗಿದ್ದು ರಾಜ್ಯಭಾರ ಮಾಡಿದುದಾಗಿ ತಿಳಿಯಬರುತ್ತದೆ. ವಿದ್ಧಶಾಲಭಂಜಿಕೆಯ ನಾಯಕನಾದ ಕರ್ಪೂರವರ್ಷನಿಗೂ ಯುವರಾಜದೇವ ವಂಶೀಯನಾದ ಕೇಯೂರ ವರ್ಷನಿಗೂ ಹತ್ತಿರ ಸಂಬಂಧವಿದ್ದಿರಬಹುದಾಗಿ ತೋರುತ್ತದೆ.* ರಾಜಶೇಖರನಪೂರ್ವ ಜನಾದ ಅಕಾಲಜಲದನು ಮಹಾರಾಷ್ಟ್ರ ಚೂಡಾಮಣಿಯೆಂದು ಹೇಳಲ್ಪಟ್ಟಿ ರುವುದರಿಂದ ರಾಜಶೇಖರ ಕವಿಯು ಮಹಾರಾಷ್ಟ್ರದವನಾಗಿರಬೇಕೆಂದು ಕೆಲವರು ಹೇಳುವರು. ರಾಜಶೇಖರನ ಪೂರ್ವಿಕರು ಕುಂತಳ ಮತ್ತು ವಿದರ್ಭ ನಗರದವ ರೆಂದೂ ಕೆಲವರು ಹೇಳುವರು. ಅಕಾಲಜಲದನು ಮಹಾರಾಷ್ಟ್ರ ಚೂಡಾಮಣಿ ಯಾಗಿದ್ದುದಾದರೂ ಕಾಲಕ್ರಮದಲ್ಲಿ ಮಹಾರಾಷ್ಟ್ರವನ್ನು ಬಿಟ್ಟು ಚೇದಿದೇಶಕ್ಕೆ ಬಂದು ಅಮಾತ್ಯ ಪದವಿಯನ್ನು ಹೊಂದಿರಬೇಕಾಗಿ ತೋರುವುದರಿಂದ ರಾಜ ಶೇಖರನನ್ನು ಮಹಾರಾಷ್ಟ್ರದವನೆನ್ನುವುನು ಸಮಂಜಸವಾಗದು. ಇವನು ಕುಂತಳ ದವನೆಂದೂ ವಿದರ್ಭನಗರದವನೆಂದೂ ಸಾಧಿಸುವುದಕ್ಕೆ ಸರಿಯಾದ ಚಾರಿತ್ರಕ ಪ್ರಮಾಣಗಳು ದೊರೆಯವು. ಕವಿಯು ತನ್ನ ಗ್ರಂಥಗಳಲ್ಲಿ ದಕ್ಷಿಣದೇಶದ ನಡೆ ನುಡಿ, ಆಚಾರ, ವ್ಯವಹಾರ, ಪ್ರಾಂತ್ಯಗಳು, ಕಾವೇರೀ, ತಾಮ್ರಪರ್ಣೀ ಮತ್ತು

* Prof Sten Konow and Lanman's Karpuramanjari (Harvard Oriental series) P. 187.

ನರ್ಮದಾ ಮೊದಲಾದ ನದಿಗಳನ್ನು ವರ್ಣಿಸುವುದರಿಂದಲೂ ದ್ರಾವಿಡ, ಕರ್ಣಾಟಕ ಮತ್ತು ಲಾಟ ಮೊದಲಾದ ದೇಶಗಳ ಸ್ತ್ರೀಯರನ್ನು—

ಕರ್ಣಾಟೀದಶನಾಂಕಿತಃ ಶಿತಮಹಾರಾಷ್ಟ್ರೀಕಟಾಕ್ಷಾಹತಃ
ಪ್ರೌಢಾಂಧ್ರೀಸ್ತನಪೀಡಿತಃ ಪ್ರಣಯಿನೀಭ್ರೂಭಂಗವಿತ್ರಾಸಿತಃ
ಲಾಟೀಬಾಹುವಿವೇಷ್ಟಿತಶ್ಚ ಮಲಯಸ್ತ್ರೀತರ್ಜನೀತರ್ಜಿತಃ
ಸೋಽಯಂಸಂಪ್ರತಿ **ರಾಜಶೇಖರ**ಕವಿರ್ವಾರಾಣಸೀಂವಾಂಛತಿ||

ಎಂದು ವರ್ಣಿಸಿರುವುದರಿಂದ ಇವನು ದಾಕ್ಷಿಣಾತ್ಯನಾಗಿರಬೇಕೆಂದು ಪ್ರೊ. ಆಪ್ಟೆಯವರು ಹೇಳುವರು.§ ಈ ಶ್ಲೋಕವು ಕ್ಷೇಮೇಂದ್ರಕೃತ ಔಚಿತ್ಯವಿಚಾರ ಚರ್ಚಾ† ಎಂಬ ಗ್ರಂಥದಲ್ಲಿ ಮಾತ್ರ ರಾಜಶೇಖರನು ಹೇಳಿದುದಾಗಿ ಕಂಡುಬರುವುದು ಹೊರತು ರಾಜಶೇಖರಕೃತಗ್ರಂಥಗಳಲ್ಲಿ ಎಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲವಾದುದರಿಂದ ಈ ಶ್ಲೋಕಾಧಾರ ಮಾತ್ರದಿಂದ ಕವಿಯ ಸ್ಥಳವನ್ನು ನಿರ್ದೇಶಿಸಿ ಹೇಳುವುದು ತರವಲ್ಲ. ಇವುಗಳೆಲ್ಲವನ್ನೂ ಬಿಟ್ಟು ಕವಿಯನ್ನು ಚೇದಿ ದೇಶದವನೆಂದು ಹೇಳುವುದರಲ್ಲಿ ಯಾವ ನ್ಯೂನತೆಯೂ ತೋರದು. ರಾಜಶೇಖರನು ಕೆನೂಜ್ ಅಥವಾ ಕನ್ಯಾಕುಬ್ಜರಾಜನ ಆಸ್ಥಾನ ಪಂಡಿತನೂ ಗುರುವೂ (ಉಪಾಧ್ಯಾಯ) ಆಗಿದ್ದುದಾಗಿ ತಿಳಿಯಬರುವುದರಿಂದ ಇವನೂ ಬಿಲ್ಹಣಾದಿ ಇತರ ಕವಿಗಳಂತೆ ತನ್ನ ದೇಶವನ್ನು ಬಿಟ್ಟು ದೇಶಾಟನಕ್ಕಾಗಿ ಹೊರಟು ಕನ್ಯಾಕುಬ್ಜಕ್ಕೆ ಬಂದು ಆಗ ಆಳುತ್ತಿದ್ದ ಮಹೇಂದ್ರಪಾಲನು ಕೇಳಿಕೊಂಡಮೇರೆ ಅಲ್ಲಿಯೇ ಇದ್ದುದಾಗಿ ಹೇಳಬಹುದಾಗಿದೆ. ಇದಲ್ಲದೆ ರಾಜಶೇಖರನು ಮಹೇಂದ್ರಪಾಲನ ಗುರುವೆಂದು ತಾನು ಬರೆದಿರುವ ಎಲ್ಲಾ ನಾಟಕಗಳಲ್ಲಿಯೂ ಹೇಳಿಕೊಂಡಿರುವನು. ಸೂಕ್ತಿಮುಕ್ತಾವಳಿಯಲ್ಲಿ ಅಂತೇವಾಸಿ ಎಂಬ ಅಂಕಿತದಲ್ಲಿ “ಆಗಸ್ಕಾರಿಣಿ ಕೈಟಭಪ್ರಮಥನೇ.........” ಎಂಬ ಶ್ಲೋಕವು ಕಂಡುಬರುವುದು. ಈ ಅಂತೇವಾಸಿಯು ಮಹೇಂದ್ರಪಾಲನೋ ಅಥವಾ ಇತರರೋ ಎಂದು ನಿಶ್ಚಯಮಾಡಿ ಹೇಳಲಸದಳವಾಗಿದೆ. ಇವನು ಕೆನೂಜಿನಲ್ಲಿ ಮಹೀಪಾಲನ ಆಳ್ವಿಕೆಯಲ್ಲಿಯೂ ಇದ್ದುದಾಗಿ ಬೋಧೆಯಾಗುತ್ತದೆ. ಏಕೆಂದರೆ ಬಾಲಭಾರತನಾಟಕವು ಮಹೀಪಾಲನ ಕೇಳಿಕೆಯಂತೆ ಪ್ರದರ್ಶಿಸಲ್ಪಟ್ಟಿತಾಗಿ ಹೇಳಿದೆ. ಆದರೆ ಮಹೀಪಾಲನ ಆಳ್ವಿಕೆಯ ಯಾವಕಾಲದವರೆಗೆ ರಾಜಶೇಖರನು ಕೆನೂಜಿನಲ್ಲಿ ಸಭಾಪಂಡಿತನಾಗಿದ್ದನೆಂಬುದನ್ನು ಹೇಳಲಾಗುವುದಿಲ್ಲ.* ರಾಜಶೇಖರನಿಗೆ ಚೇದಿರಾಜರ

§ See Apte P. 20 F. N.

† Kavyamala Part 1 P. 148.

* Lanman's Karpuramanjari (Harvard Oriental Series) P. 181.

ಸಂಬಂಧವಿದ್ದುದಾಗಿ ಬಿಲಹರಿ ಶಾಸನವು ಹೇಳುವುದಲ್ಲದೆ, ಆ ಶಾಸನದಲ್ಲಿ ರಾಜಶೇಖರನ ಹೆಸರುಇರುವುದು ಕಂಡುಬರುತ್ತದೆ§ ಕ್ಷೇಮೇಂದ್ರನು ರಾಜಶೇಖರನ ವಿಚಾರವಾಗಿ ಹೇಳುವಒಂದಾನೊಂದು ಶ್ಲೋಕದಲ್ಲಿ ಕ್ಯಾಂಬೇ (Cambay) ಯಿಂದ ಕಾಮೊರೀ (Camorin) ವರೆಗಿನಮುಖ್ಯದೇಶಗಳನ್ನು ಹೇಳಿ ರಾಜಶೇಖರನು ದಾಕ್ಷಿಣಾತ್ಯ (Dakhan)ನೆಂದು ಹೇಳಿರುವನು.$

ಪ್ರಸಿದ್ಧ ಚೌಹಣವಂಶತಿಲಕಳಾದ "ಅವಂತಿಸುಂದರೀ" ಎಂಬುವಳು ರಾಜಶೇಖರನ ಪ್ರಣಯಿನಿಯೆಂದು.—

ಚಾಹುವಾನಕುಲx ಮೌಳಿಮಾಲಿಕಾ
ರಾಜಶೇಖರ ಕವೀಂದ್ರಗೇಹಿನೀ
ಭರ್ತುಃ **ಕೃತಿಮವಂತಿಸುಂದರೀ**
ಸಾ ಪ್ರಯೋಜಯಿತುಮೇತದಿಚ್ಛತಿ ||

ಎಂದು ಕರ್ಪೂರಮಂಜರಿಯಿಂದ ಗೊತ್ತಾಗುತ್ತದೆ.* ಅವಂತಿಸುಂದರಿಯು ಪ್ರಖ್ಯಾತ ಕವಯಿತ್ರಿಯಾಗಿದ್ದುದಾಗಿ ಶ್ರೀ|| ಸುಶೀಲಕುಮಾರಡೇಯವರು ಹೇಳುವರು. ಕವಿರಾಜನಾದ ರಾಜಶೇಖರನು ತನ್ನ "ಕಾವ್ಯಮೀಮಾಂಸಾ" ಗ್ರಂಥದಲ್ಲಿ ಮೂರುಕಡೆa ಅವಂತಿಸುಂದರಿಯನ್ನೆತ್ತಿ ಹೇಳಿಕೊಂಡಿರುವನು. ಇವುಗಳೆಲ್ಲವನ್ನೂ ನೋಡಿದರೆ ಅವಂತಿಸುಂದರಿಯು ಯಾವುದೋ ಲಕ್ಷಣಗ್ರಂಥವನ್ನು ಬರೆದಿರಬೇಕೆಂದೂ ಅದು ಪ್ರಕೃತ ಉಪಲಬ್ಧವಿಲ್ಲವೆಂದೂ ಬೋಧೆಯಾಗುತ್ತದೆ. (೧) ಅವಂತಿಸುಂದರಿಯು ಚಾಹಮಾನಕುಲದವಳೆಂದೂ ಕ್ಷತ್ರಿಯಕುಲ ಸಂಜಾತಳೆಂದು ಹೇಳಲ್ಪಟ್ಟಿರುವುದರಿಂದಲೂ, ದೋರ್ದಂಡ ಪರಾಕ್ರಮಿಗಳಾದ ಹಮ್ಮೀರ ಮತ್ತು ಪೃಥ್ವೀರಾಜನೇ ಮೊದಲಾದವರು ಈ ಚೌಹಣಕುಲದವರೆಂದು ಹೆಸರುಗೊಂಡಿರುವರೆಂದು ಕೆಲವರೂ. (೨) ಮಾಧವೀಯ ಶಂಕರವಿಜಯದಲ್ಲಿ ಹೇಳಲ್ಪಟ್ಟಿರುವ

§ The Bilohari Inscription of the Rulers of Chedi published by Keilhorn in the Epigraphica Indica P. 251 F. F. verse 85.

$ Lanman's Karpuramanjari P. 181.

x ಚಾಹಮಾನಕುಲಂ ಚೌಹಣ ಇತಿಪ್ರಸಿದ್ಧಂ ಕ್ಷತ್ರಿಯಕುಲಂ ||

* ಕರ್ಪೂರಮಂಜರೀ ಪುಟ ೧೦.

a (ಅ) "ಇಯಮಶಕ್ತಿರ್ನ ಪುನಃ ಪಾಕಃ" ಇತ್ಯವಂತಿಸುಂದರೀ (ಕಾವ್ಯಮೀಮಾಂಸಾ ಪುಟ ೨೦.)

ರಾಜಶೇಖರನೇ ಇವನೆಂದೂ ನಾಟಕತ್ರಯ ಕರ್ತನೆಂದೂ ಇವನು ಚೌಹಣ (ಚಾಹಮಾನಕುಲ) ದ ಅವಂತಿಸುಂದರಿಯನ್ನು ಮದುವೆಯಾದನೆಂದು ಕೆಲವರೂ (ಇ) ಕವಿಯು ಉಪಾಧ್ಯಾಯನೆಂದೂ, ಗುರುವೆಂದೂ ಕರ್ಪೂರಮಂಜರಿಯಲ್ಲಿ ಹೇಳಿಕೊಂಡಿರುವುದರಿಂದಲೂ ಕೆಲವುಕಡೆ ರಾಜಶೇಖರನನ್ನು ರಾಜಗುರುವೆಂದೂ ಜ್ಞಾನಬೋಧಕನೆಂದೂ ಹೇಳಲ್ಪಟ್ಟಿರುವನಾದುದರಿಂದ ರಾಜಶೇಖರನು ಕ್ಷತ್ರಿಯ ಗುರುವಾಗಿದ್ದಿರಕೂಡದೇಕೆಂದು ಕೆಲವರು ಹೇಳುವರಲ್ಲದೆ ಅನೇಕ ಕ್ಷತ್ರಿಯರು ರಾಜಶಿಕ್ಷಕರಾಗಿದ್ದು "ಗುರು" ಎಂಬ ಹೆಸರನ್ನು ಸಾರ್ಥಕಗೊಳಿಸಿದ್ದುದಾಗಿ ಪುರಾಣೇತಿಹಾಸಾದಿವಚನಗಳಿಂದ ತಿಳಿಯುಬರುತ್ತದೆ. ಬ್ರಾಹ್ಮಣನಿಗೆ ಇರುವ ಅಧ್ಯಾಪನಾದಿ ಕೆಲವು ಕರ್ಮಗಳು ಕ್ಷತ್ರಿಯರಿಗೆ ಇಲ್ಲದಮಾತ್ರಕ್ಕೆ ಶ್ರೋತ್ರಿಯನೆಂದೇಕೆ ಹೇಳಬಾರದು ? ಕ್ಷತ್ರಿಯನಿಗೆ ಬ್ರಾಹ್ಮಣನ ಹಾಗೆ ವೇದಾಧಿಕಾರವಿರುವುದು. ಉಪನಯನಾದಿ ಸಂಸ್ಕಾರಕರ್ಮಗಳಿರುವುವು. ಬ್ರಾಹ್ಮಣನಂತೆ ಇವನೂ ಷೋಡಶಕರ್ಮಾಧಿಕಾರಿಯಾಗಿರುವನು. ಅಲ್ಲದೆ.—

ಜನ್ಮನಾಬ್ರಾಹ್ಮಣೋಜ್ಞೇಯ ಸ್ಸಂಸ್ಕಾರೈರ್ದ್ವಿಜಉಚ್ಯತೆ
ವಿದ್ಯಯಾಯಾತಿವಿಪ್ರತ್ವಂ ತ್ರಿಭಿಃ ಶ್ರೋತ್ರಿಯಉಚ್ಯತೇ ||

ಎಂದು ಹೇಳಲ್ಪಟ್ಟಿರುವುದರಿಂದ ಇವನು ಮಹೇಂದ್ರಪಾಲನೇ ಮೊದಲಾದವರಿಗೆ ರಾಜನೀತಿಗಳನ್ನು ಸತ್ವಗುಣೋಪೇತವಾದ ಜ್ಞಾನಬೋಧೆಯನ್ನು ಮಾಡಿದ ಕ್ಷತ್ರಿಯನೆಂದೂ ಸಾಧಿಸುವರು. ಈ ವಿಚಾರವಾಗಿ ಕೊಂಚ ಬರೆಯುವದು ಅಪ್ರಸಕ್ತವಾಗದು.

---

(ಅ) "ವಿದಗ್ಧಭಣಿತಿನಿವೇದ್ಯಂ ವಸ್ತುನೋ ರೂಪಂ ನ ನಿಯತಸ್ವಭಾವಂ" ಇತ್ಯವಂತಿಸುಂದರೀ ತದಾಹ :—

ವಸ್ತುಸ್ವಭಾವೋಽತ್ರ ಕವೇರತನ್ತ್ರೋ
ಗುಣಾಗುಣಾವುಕ್ತಿವಶೇನ ಕಾವ್ಯೇ |
ಸ್ತುವನ್ನಿಬಧ್ನಾತ್ಯಮೃತಾಂಶುಮಿಂದುಂ
ನಿಂದಂಸ್ತು ದೋಷಾಕರಮಾಹ ಧೂರ್ತಃ || ಪುಟ. ೪೬

(ಇ) "ಅಯಮಪ್ರಸಿದ್ಧಃ ಪ್ರಸಿದ್ಧವಾನಹಂ; ಅಯಮಪ್ರತಿಷ್ಠಃ ಪ್ರತಿಷ್ಠಾವಾನಹಂ; ಅಪ್ರಕ್ರಾಂತಮಿದಮಸ್ಯ ಸಂವಿಧಾನಕಂ ಪ್ರಕ್ರಾಂತಂಮಮ; ಗುಡೂಚೀವಚನೋಽಯಂ ಮೃದ್ವೀಕಾವಚನೋಽಹಂ; ಅನಾದೃತಭಾಷಾವಿಶೇಷೋಽಯಂ ಆಹಮಾದೃತಭಾಷಾವಿಶೇಷಃ; ಪ್ರಶಾಂತಜ್ಞಾತೃಕಮಿದಂ, ದೇಶಾಂತರಿತಕರ್ತೃಕಮಿದಂ ಉಚ್ಛಿನ್ನನಿಬಂಧನಮೂಲಮಿದಂ; ಮ್ಲೇಚ್ಛಿತಕೋಪನಿಬಂಧನಮೂಲಮಿದಮಿತ್ಯೇವಮಾದಿಭಿಃ ಕಾರಣೈಃ ಶಬ್ದಹರಣೇ ಅರ್ಥಹರಣೇ ಚಾಭಿರಮೇತ" ಇತ್ಯವಂತಿಸುಂದರೀ — ಪುಟ ೫೭.

ಚೌಹಣರಾಜವಂಶದ ಮೂಲಪುರುಷನು ಸಾಮಂತನೆಂಬುವನು. "ಬಿಜೋಲಿಯದ ಶಾಸನ"ದ ಪ್ರಕಾರ ಇವನು ವತ್ಸಗೋತ್ರದವನೆಂದೂ ಬ್ರಾಹ್ಮಣನೆಂದೂ ಅಹಿಚ್ಛತ್ರವೆಂಬಸ್ಥಲದಿಂದ ವಲಸೆಬಂದವನೆಂದೂ ತಿಳಿಯಬರುತ್ತದೆ. ಇದರಿಂದ ಚಾಹಮಾನಕುಲದ ಪೂರ್ವಿಕರು ಬ್ರಾಹ್ಮಣರೆಂದೂ, ಸಾಂಗವೇದಾಧ್ಯಾಯಿಗಳೆಂದು ಹೇಳಿದಂತಾದುದು. ಮೇವಾರದ ಗೋಹಿಲೋಟ್‌ವಂಶೀಯರು ಮೊದಲು ಶ್ರೋತ್ರಿಯರಾಗಿದ್ದು ಕಾಲಕ್ರಮದಲ್ಲಿ ದೇಶರಕ್ಷಣೆ ದೇಹರಕ್ಷಣೆಗಾಗಿ ಕ್ಷಾತ್ರಧರ್ಮವನ್ನವಲಂಬಿಸಿದಂತೆ ಸ್ಪಷ್ಟಪಡುತ್ತದೆ. ಈ ಕಾರಣಗಳಿಂದ ರಾಜಶೇಖರನು ಚಾಹಮಾನ ಕುಲದವರು ಶ್ರೋತ್ರಿಯರೆಂದು ತಿಳಿದು ಅವಂತಿಸುಂದರಿಯನ್ನು ಮದುವೆಯಾದುದಾಗಿ ಭಾಸವಾಗುತ್ತದೆ. ವತ್ಸಗೋತ್ರದವರು ಕಾಲಕ್ರಮದಲ್ಲಿ "ವತ್ಸ" ಎಂಬ ಋಷಿಯ ನೇತ್ರೋತ್ಪನ್ನರೆಂದು ಹೇಳಿಕೊಳ್ಳುವದು ರೂಢಿಗೆಬಂದಿರಬೇಕಾಗಿ ಬೋಧೆಯಾಗುತ್ತದೆ. ಕದಂಬರೂ, ಪಲ್ಲವರೂ ಮೊದಲು ಬ್ರಾಹ್ಮಣರಾಗಿದ್ದು ಕೊನೆಕೊನೆಗೆ ಕ್ಷತ್ರಿಯರಾದರೆಂದು ಡಾ|| ಭಂಡಾರಕರವರು ಹೇಳಿರುವರು ಇದರಿಂದ ರಾಜಶೇಖರನು ಬ್ರಾಹ್ಮಣಿಯಾದ ಅವಂತಿಸುಂದರಿಯನ್ನು ಮದುವೆಯಾದುದು ಸಾಧುವೆಂದು ಹೇಳಿದಂತಾದುದು. ಕೆಲವರು ರಾಜಶೇಖರನು ಕ್ಷತ್ರಿಯನು. ರಾಜ್ಯಸಂಪಾದನಕ್ಕಾಗಿಯೋ ಅಥವಾ ದ್ರವ್ಯಸಂಪಾದನಕ್ಕಾಗಿಯೋ ಸ್ವದೇಶವನ್ನು ಬಿಟ್ಟು ಇಲ್ಲಿಗೆಬಂದು ಕ್ಷತ್ರಿಯಕುಲಸಂಜಾತಳಾದಅವಂತಿಸುಂದರಿಯನ್ನು ಮದುವೆಯಾಗಿ ಮಹೇಂದ್ರಪಾಲನಕೋರಿಕೆಯಂತೆ ಅವನಿಗೆ ಉಪಾಧ್ಯಾಯನಾಗಿರಲು ನಿಂತುದಾಗಿ ಹೇಳುವರು. ಆದರೆ ಇದುಸರಿಯಲ್ಲವೆಂದು ನಮಗೆ ತೋರುವದು. ಏಕೆಂದರೆ ಅಂವತಿ ಸುಂದರಿಯು ರಾಜಕುವರಿ. ದೇಶಾಟನಕ್ಕಾಗಿಯೋ ಏತಕ್ಕಾಗಿಯೋ ಇಲ್ಲಿಗೆ ಬಂದ ರಾಜಶೇಖರನ ಕುಲಗೋತ್ರಂಗಳೊಂದನ್ನೂ ವಿಚಾರಿಸದೆ ದೇಶಕೋಶಗಳಿಲ್ಲದವನಿಗೆ ರಾಜಕುವರಿಯನ್ನು ಕೊಟ್ಟರೆಂದು ಹೇಳುವುದು ಅಸಂಭವವಾಗುವುದು. ಅಲ್ಲದೆ ವಿದ್ಯಾಧೀತಸಂಪನ್ನಳಾದಅವಂತಿಸುಂದರಿಯು ಮೆಚ್ಚುಗೆಯನಿತ್ತು ಇಂತಹನನ್ನು ವಿವಾಹಮಾಡಿಕೊಂಡಳೆಂದರೆ ಕೇವಲ ಹಾಸ್ಯಾಸ್ಪದ ವಿಚಾರವಾಗುವುದು. ಹೀಗೆ ಹೇಳುವುದಕ್ಕಿಂತ ರಾಜಶೇಖರನು ಮಹಾ ವಿದ್ಯಾವಂತನಾದ ಬ್ರಾಹ್ಮಣನೆಂದು ವಿದ್ಯಾವಂತಳಾದ ಅವಂತಿಸುಂದರಿಯು ರಾಜಶೇಖರನ ವಿದ್ಯಾವೈದುಷ್ಯ ಸುರೂಪ ಕೌಶಲಗಳಿಗೆ ಮೆಚ್ಚಿ ಮದುವೆಯಾದಳೆನ್ನುವುದು ಸರಿಯೆಂದೂ ಶಿಷ್ಟಸಂಪ್ರದಾಯಾನುಸಾರವೆಂದೂ ಹೇಳಬಹುದಾಗಿದೆ. ರಾಜಶೇಖರ ಶಬ್ದಕ್ಕೆ ರಾಜ್ಞಾಂಶೇಖರಃ ರಾಜಶೇಖರಃ ಎಂದು ಹೇಳಿ ಕ್ಷತ್ರಿಯನೆಂದು ಸಾಧಿಸುವುದಕ್ಕಿಂತ 'ರಾಜಾಚಂದ್ರಶೇಖರೋ ಯಸ್ಯಸಃ ರಾಜಶೇಖರಃ' (ಚಂದ್ರಶೇಖರಃ) ಎಂದು ಹೇಳುವುದಾದರೆ ಪ್ರಕೃತೋಚಿತಸಮಾಸವಾಗುವುದು.

---

Indian Antiquary January 1911 P. 26 (See. to Foreign Elements in the Hindu population.)

**ಕಾಲ**;—ರಾಜಶೇಖರ ಕೃತಬಾಲರಾಮಾಯಣದಲ್ಲಿ ಮಹೇಂದ್ರಪಾಲನ ವರ್ಣನೆ ಇರುವುದು. ಇವನು ಕೊಟ್ಟಿರುವ ದಾನಪತ್ರದಲ್ಲಿ:—

ಓಂಸ್ವಸ್ತಿ **ಶ್ರೀಮಹೋದಯ**ಸಮಾವಾಸಿತಾನೇಕ ಗೋಹಸ್ತ್ಯಶ್ವರಥಪತ್ತಿ ಸಂಪನ್ನಸ್ಕಂಧಾವಾರಾತ್ ಪರಮಭಗವತೀಭಕ್ತೋಮಹಾರಾಜಶ್ರೀಭೋಜ ದೇವಸ್ತಸ್ಯಪುತ್ರಸ್ತತ್ಪಾದಾನುಧ್ಯಾತಶ್ರೀ ಚಂದ್ರಭಟ್ಟಾರಿಕಾದೇವ್ಯಾಮುತ್ಪ ನ್ನಃಪರಮಭಗವತೀಭಕ್ತೋಮಹಾರಾಜ ಶ್ರೀಮಹೇಂದ್ರಪಾಲದೇವಶ್ರಾ ವಸ್ತಿಭುಕ್ತೌಶ್ರಾವಸ್ತೀಮಂಡಲಾಂತಃ ಪಾತಿಬಾಲಯಿಕಾವಿಷಯ ಸಂಬದ್ಧ ಪಾನೀಯಕ ಗ್ರಾಮಸಮುಪಗತಾನ್ ಸರ್ವಾನೇವಯಥಾಸ್ಥಾನನಿಯುಕ್ತಾನ್ ಪ್ರತಿವಾಸನಶ್ಚ ಸಮಾಜ್ಞಾಪಯತಿ ||

ಎಂಬುದರಲ್ಲಿ ಮಹೋದಯ$ ವೆಂಬ ನಗರವನ್ನು ಮಹೇಂದ್ರಪಾಲನು ಆಳುತ್ತಿದ್ದಂತೆಯೂ ಕವಿಯಾದ ರಾಜಶೇಖರನು ಇವನ ಆಶ್ರಯದಲ್ಲಿ ಇದ್ದಂತೆಯೂ ಬಾಲಭಾರತದ ಪ್ರಸ್ತಾವನೆಯಿಂದ ತಿಳಿಯುಬರುತ್ತದೆ. ಮಹೋದಯವೆಂಬ ನಗರಕ್ಕೆ ಕೆನೂಜ್, ಕಾನ್ಯಕುಬ್ಜ, ಗಾಧಿಪುರ, ಕೌಶ, ಕುಶಸ್ಥಲ ಎಂಬಾಪರನಾಮಗಳಿದ್ದು ವಾಗಿ ತಿಳಿಯುಬರುತ್ತದೆ. ಇದಲ್ಲದೆ ಬಾಲರಾಮಾಯಣದಲ್ಲಿ.—

ಲಕ್ಷ್ಮಣಃ:—ಇದಂ ಪುನಸ್ತತೋಪಿ ಮಂದಾಕಿನೀ ಪರಿಕ್ಷಿಪ್ತಂ **ಮಹೋದಯಂ** ನಾಮನಗರಂದೃಶ್ಯತೇ.

ರಾಮಃ:—ಶಶ್ವತ್ಸುಧಾಮವಸುಧಾಮಹಿತಂದ್ವಿಷದ್ಭಿ
ರ್ನೋಗಾಹಿತಂ ಭವತಿ **ಗಾಧಿಪುರಂ** ಪುರಸ್ತಾತ್ |
ವೈದೇಹಿ ದೇಹಿ ಶಫರೀಸದೃಶಂದೃಶಂತ
ದಸ್ಮಿನ್ನಿತಂಬಿನಿನಿತಂಬವಹದ್ಯು ಸಿಂಧೌ || ೧೦—೮೮
ಇದಂದ್ವಯಂ ಸರ್ವಮಹಾಪವಿತ್ರಂ
ಪರಸ್ಪರಾಲಂಕರಣೈಕಹೇತುಃ
ಪುರಂಚ ಹೇ ಜಾನಕಿ! **ಕನ್ಯಾಕುಬ್ಜಂ**
ಸರಿಚ್ಚಗೌರೀಪತಿ ಮೌಳಿಮಾಲಾ || ೧೦—೮೯

ಎಂದು ಮಹೋದಯನಗರಕ್ಕೆ ಗಾಧಿಪುರ (ಕನ್ಯಾಕುಬ್ಜ)ವೆಂದು ಹೇಳಲ್ಪಟ್ಟಿದೆ.

$ (ಅ) ಮಹೋದಯಾಃ ಕಾನ್ಯಕುಬ್ಜಂ ಕನ್ಯಾಕುಬ್ಜಂ ಮಹೋದಯಂ|| ಅಮರಕೋಶ.
(ಆ) ಕನ್ಯಾಕುಬ್ಜಂಗಾಧಿಪುರಂ ಕೌಶಂ ಕುಶಸ್ಥಲಂ ಚ ತತ್ ಇತಿ ಹೈಮನಾಮಮಾಲಾಯಾಂ
(ಇ) "ಮಹೋದಯಃ ಕಾನ್ಯಕುಬ್ಜೇ" ಇತಿವಿಶ್ವಪ್ರಕಾಶಮೇದಿನೀಕೋಶೇ.

ಡಾ|| ಪ್ಲೀಟರವರು ಅಸ್ನಿ (Asni) ಶಾಸನದಲ್ಲಿ ಹೇಳಲ್ಪಟ್ಟಿರುವ ಮಹೀಪಾಲರಾಜನೇ ಈ ಮಹೇಂದ್ರಪಾಲನ ಮಗನೆಂದೂ ಇವನೇ ರಾಜಶೇಖರನ ಶಿಷ್ಯನೆಂದೂ ಇವನು ವಿ. ಸಂ. ೯೭೪ ಅಥವಾ ಕಿ. ಶ. ೯೧೭ರಲ್ಲಿ ಆಳುತ್ತಿದ್ದನೆಂದೂ ಹೇಳಿ ರಾಜಶೇಖರನು ಕ್ರಿ. ಶ. ಹತ್ತನೆಯ ಶತಮಾನಾರಂಭದಲ್ಲಿದ್ದನೆನ್ನುವರು.$

ಮಹೋದಯವೆಂಬ ನಗರವನ್ನು ಮಹೇಂದ್ರಪಾಲ ಮತ್ತು ಇವನ ಮಗ ಮಹೀಪಾಲ ಇವರೀರ್ವರೂ ಆಳಿದುದಾಗಿ ಸಿಯೊದೊಣೀಶಾಸನ (Siyodoni Inscription) ದಿಂದ ತಿಳಿಯಬರುತ್ತದೆ.

ಡಾ|| ಪ್ಲೀಟರವರು ನಿರ್ಭಯರಾಜನೂ ಮತ್ತು ಮಹೇಂದ್ರಪಾಲನೂ ಬೇರೆ ಬೇರೆಯೆಂದೂ ಮಹೇಂದ್ರಪಾಲನು ನಿರ್ಭಯರಾಜನ ಇನ್ನೊಬ್ಬಮಗನೋ ಅಥವಾ ಮೊಮ್ಮಗನೋ ಆಗಿರಬೇಕೆಂದೂ ನಿರ್ಭಯರಾಜನ ನಿಜವಾದ ಹೆಸರು ಮಹಿಷಪಾಲನೆಂದೂ ಹೇಳುವರು.‡ ಆದರೆ ರಾಜಶೇಖರನು ಬರೆದಿರುವ ಗ್ರಂಥಗಳಲ್ಲಿ ನಿರ್ಭಯರಾಜನೆಂಬುದು ಮಹೇಂದ್ರಪಾಲನ ಪರ್ಯಾಯನಾಮವೆಂದು ವ್ಯಕ್ತವಾಗುತ್ತದೆ.§ ಮೆ|| ಕೇಲಹಾರ್ನರವರು ಸಿಯೊದೊಣೀಶಾಸನದಂತೆ ಮಹೋದಯ (ಕನ್ಯಾಕುಬ್ಜ) ದಲ್ಲಾಳಿದ ನಾಲ್ಕುಜನ ರಾಜರನ್ನೂ ಅವರ ಆಳ್ವಿಕೆಯ ಕಾಲದೊಂದಿಗೆ ಹೇಳಿರುವರು. ಅದು ಹೀಗಿರುವುದು.

(೧) ಭೋಜ (ಇವನಾರೆಂಬುದಾಗಲಿ) ಕ್ರಿ. ಶ. ೮೬೨, ೮೭೬, ೮೮೨. (ಈ ಕಾಲಗಳಲ್ಲಿ ಆಳಿದವರು ಯಾರು ಯಾರೆಂಬುದಾಗಲಿ ಕೇಲಹಾರ್ನರವರು ಸ್ಪಷ್ಟಪಡಿಸಿಲ್ಲ.) (೨) ಮಹೇಂದ್ರಪಾಲ ಅಥವಾ ನಿರ್ಭಯನರೇಂದ್ರ ಅಥವಾ ಮಹಿಷಪಾಲ (ರಾಜಶೇಖರನ ಶಿಷ್ಯ) ಕ್ರಿ. ಶ. ೯೦೩-೯೦೭. (೩) ಇವನ ಮಗ ಕ್ಷಿತಿಪಾಲ ಅಥವಾ ಮಹೀಪಾಲ ಅಥವಾ ಹೇರಂಬಪಾಲ ಕ್ರಿ. ಶ. ೯೧೭. (೪) ಇವನ ಮಗ ದೇವಪಾಲ ಕ್ರಿ. ಶ. ೯೪೮.

ಡಾ|| ಪ್ಲೀಟರವರು ಹರ್ಷಸಂವತ್ಸರ ೧೫೫ ಅಥವಾ ಕ್ರಿ. ಶ. ೭೬೧-೨ರಲ್ಲಿ ಬರೆಯಲ್ಪಟ್ಟುದಾಗಿ, ಮಹೋದಯದಲ್ಲಾಳಿದ ಮಹೇಂದ್ರಪಾಲನ ವಿಚಾರವಾಗಿ ಹೇಳಲ್ಪಟ್ಟಿರುವ ಒಂದು ಶಾಸನವನ್ನು ಮುದ್ರಿಸಿರುವರು. ಇದರಲ್ಲಿ ಹೇಳಿರುವ ಮಹೇಂದ್ರಪಾಲನು ರಾಜಶೇಖರನ ಶಿಷ್ಯನಾದ ಮಹೇಂದ್ರಪಾಲನಿಗೆ ಪ್ರಾಚೀನ

$ Lanman's Karpuramanjari P. 179.

‡ Ibid — — ,,

§ ಕರ್ಪೂರಮಂಜರೀ ಪುಟ ೨.

* Lanman's Karpuramanjari P. 179.

ನಾಗಿರಬೇಕಾಗಿ ತೋರುತ್ತದೆ. ಈ ಕಾರಣದಿಂದ ರಾಜಶೇಖರನು ಶಂಕರಾಚಾರ್ಯರ ಸಮಕಾಲೀನನೆಂದು ಹೇಳುವ ಗ್ರಂಥವು ನಮಗೆ ಪ್ರಮಾಣವಾಗಿ ತೋರುವುದಿಲ್ಲ. ಅದರಲ್ಲಿ ಹೇಳಿರುವ ರಾಜಶೇಖರನು ಇವನಲ್ಲ.

ರಾಜಶೇಖರನು ಮಲಬಾರಿಗೆ ರಾಜನಾಗಿದ್ದನೆಂದೂ ಅವನ ನಿಜವಾದ ಹೆಸರು ಕುಲಶೇಖರಪೆರುಮಾಳೆಂದು ದಾಕ್ಷಿಣಾತ್ಯ ಕಥೆಗಳು ಹೇಳುವುವು. ಆದರೆ ಕೇರಳೋತ್ಪತ್ತಿ ಅಥವಾ ಕೇರಳವಿಶೇಷ ಮಹಾತ್ಮ್ಯವೆಂಬ ಗ್ರಂಥದಲ್ಲಿ ರಾಜಶೇಖರ ನೆಂಬ ರಾಜನು ಕ್ರಿ. ಶ. ೩೨೨ರಲ್ಲಿ ಆಳಿದುದಾಗಿ ಹೇಳಿರುವುದು ಹೊರ್ತು ಅವನ ಹೆಸರು ಕುಲಶೇಖರಪೆರುಮಾಳೆಂದಾಗಲೀ ಅವನ ಸಂಬಂಧವಾದ ಐತಿಹಾಸಕ ಕಥೆಯಾಗಲೀ ಹೇಳಲ್ಪಟ್ಟಿರುವುದಿಲ್ಲ.† ರಾಜಶೇಖರನು ಮಹೀಪಾಲನ ಆಶ್ರಯ ದಲ್ಲಿ ಎಲ್ಲಿಯವರೆಗೆ ಇದ್ದನೆಂದು ಖಂಡಿತಮಾಡಿ ಹೇಳಲಾಗುವುದಿಲ್ಲ. ಮಹೀ ಪಾಲನು ನರ್ಮದೆಯ ಉತ್ತರ ದೇಶವೆಲ್ಲವನ್ನೂ ಸ್ವಾಧೀನಪಡಿಸಿಕೊಂಡು ಸಮಗ್ರ ಆರ್ಯಾವರ್ತಕ್ಕೆಲ್ಲಾ ಒಡೆಯನಾಗಿದ್ದನೆಂಬುದ, "(ತೇನ) ಮಹೀಪಾಲದೇವೇನ ಚ ರಘುವಂಶಮುಕ್ತಾಮಣಿಃ ಆರ್ಯಾವರ್ತಮಹಾರಾಜಾಧಿರಾಜೇನ ಶ್ರೀನಿರ್ಭಯನ ರೇಂದ್ರಸಂದನೇನಾರಾಧಿತಃ ಸಭಾಸದಃ" ಎಂಬುದರಿಂದ ಊಹಿಸಲಾಗುತ್ತದೆ. ಈ ಮೇಲ್ಕಂಡ ಕಾರಣಗಳಿಂದ ರಾಜಶೇಖರನು ಕ್ರಿ. ಶ. ಹತ್ತನೆಯ ಶತಮಾನದ ಪ್ರಾರಂಭದಲ್ಲಿದ್ದನೆಂಬುದು ಸ್ಪಷ್ಟವು. ಇದನ್ನೇ ಮತ್ತೊಂದು ವಿಧವಾಗಿ ಸ್ಥಾಪಿಸಿ ಹೇಳಬಹುದಾಗಿದೆ. ಮಹೇಂದ್ರಪಾಲನು ಕ್ರಿ. ಶ. ೯೦೩-೯೦೭ ರಲ್ಲಿ ಆಳಿದುದಾಗಿ ಸಿಯೊದೊನೀಶಾಸನವು ಹೇಳುತ್ತದೆ. ಮಹೀಪಾಲನು (ಮಹೇಂದ್ರಪಾಲನ ಮಗ) ಕ್ರಿ. ಶ. ೯೧೭ರಲ್ಲಿ ಆಳಿದುದಾಗಿ ಸ್ಥಿರಪಡುತ್ತದೆ. ಈ ಕಾರಣಗಳಿಂದ ರಾಜಶೇಖರನು ಕ್ರಿ. ಶ. ೯೦೩-೯೧೭ರ ಮಧ್ಯಕಾಲದಲ್ಲಿರಬೇಕೆಂದು ನಿಶ್ಚಯವಾಗುತ್ತದೆ. ಇದಲ್ಲದೆ ರಾಜಶೇಖರನು ತನ್ನ ಕಾವ್ಯಮೀಮಾಂಸಾಗ್ರಂಥದಲ್ಲಿ 'ಗೌಡವಧ' ಕಾರನಾದ ವಾಕ್ಪ ತಿರಾಜನನ್ನೂ* ಕ್ರಿ. ಶ. ೭೭೯-೮೧೩ ರವರೆಗೆ ಕಾಶ್ಮೀರದಲ್ಲಾಳಿದ ಜಯಾಪೀಡನ ಸಭಾಸದನಾದ ಉದ್ಭಟನನ್ನೂ‡ ಆನಂದವರ್ಧನನನ್ನೂ ಉದಾಹರಿಸಿಕೊಂಡಿರುವನು. ಕ್ರಿ. ಶ. ೯೬೦ರಲ್ಲಿ ಪೂರ್ತಿಗೊಳಿಸಲ್ಪಟ್ಟುದಾದ 'ಯಶಸ್ತಿಲಕಚಂಪೂ'ಕಾರನಾದ ಸೋಮದೇವನು ರಾಜಶೇಖರನನ್ನು ಹೇಳಿರುವುದರಿಂದ ರಾಜಶೇಖರನು ಆನಂದ ವರ್ಧನನಗಿಂತ ಈಚಿನವನೂ ಸೋಮದೇವನಿಗೆ ಪ್ರಾಚೀನನೂ ಆಗಿರಬೇಕು. ಎಂದರೆ ಕ್ರಿ. ಶ. ೮೮೦-೯೨೦ರ ಮಧ್ಯಕಾಲದಲ್ಲಿ ರಾಜಶೇಖರನು ಜೀವಿಸಿದ್ದಿರಬೇಕು

† Karpuramanjari P. 180.

* ''ನ''ಇತಿವಾಕ್ಪತಿರಾಜಃ ಕಾವ್ಯಮೀಮಾಂಸಾ ಪುಟ ೬೨.

‡ ತಸ್ಯ ಚ ತ್ರಿಧಾಭಿಧಾವ್ಯಾಪಾರಃ ಇತ್ಯೌದ್ಭಟಾಃ ಕಾವ್ಯಮೀಮಾಂಸಾ ಪುಟ ೨೨ ಮತು ೪೧.

ಎಂದರೆ ಒಟ್ಟಿನಲ್ಲಿ ಕ್ರಿ. ಶ. ಹತ್ತನೆಯ ಶತಮಾನದ ಪ್ರಾರಂಭದಲ್ಲಿದ್ದವನೆಂದು ಧಾರಾಳವಾಗಿ ಹೇಳಬಹುದು.

**ಗ್ರಂಥಗಳು:—** (೧) ಬಾಲರಾಮಾಯಣ.
(೨) ಬಾಲಭಾರತ.
(೩) ವಿದ್ಧಶಾಲಭಂಜಿಕಾ.
(೪) ಕರ್ಪೂರಮಂಜರೀ
(೫) ಕಾವ್ಯಮೀಮಾಂಸಾ.
(೬) ಹರವಿಲಾಸ.
(೭) ಭುವನಾಭ್ಯುದಯ (ಭುವನ) ಕೋಶವೆಂಬ

ಏಳು ಗ್ರಂಥಗಳು ಪ್ರಕೃತ ದೊರೆತಿರುವುವು. ಇವುಗಳಲ್ಲಿ ಮೊದಲಣ ನಾಲ್ಕು ನಾಟಕಗಳು. ಐದನೆಯದು ಅಲಂಕಾರಶಾಸ್ತ್ರ. ಆರನೆಯದು ಕಾವ್ಯ. ಏಳನೆಯದು ಕೋಶ.

ರಾಜಶೇಖರನು ತನ್ನನ್ನು ಕವಿರಾಜ*ನೆಂದು ಕರೆದುಕೊಂಡಿರುವನು ಇವನು ಮೊದಲು ಬಾಲಕವಿಯಾಗಿದ್ದು ಅನಂತರ ಮಹಾಕವಿಯಾಗಿ ಕೊನೆಗೆ ಕವಿರಾಜನಾದುದಾಗಿ ತಿಳಿಯಬರುತ್ತದೆ. ಇವನು ಬರೆದಿರುವ ಕಾವ್ಯಮೀಮಾಂಸಾಗ್ರಂಥದಲ್ಲಿ ದಶವಿಧ ಕವಿಲಕ್ಷಣ§ಗಳನ್ನು ಹೇಳಿ ಅದರಲ್ಲಿ ಆರನೇಯದು ಮಹಾಕವಿಲಕ್ಷಣ‡ವೆಂದೂ ಏಳನೆಯದೇ ಕವಿರಾಜಲ$ಕ್ಷಣವೆಂದೂ ಹೇಳಿರುವನಾದುದರಿಂದ ಇವನು ಮಹಾಕವಿಗಿಂತಲೂ ಹಿರಿಯನು.

ಇವನು ಚಿಕ್ಕತನದಲ್ಲಿ ಬಾಲಕವಿಯಾಗಿದ್ದು ಬಾಲರಾಮಾಯಣ. ಬಾಲಭಾರತ ನಾಟಕಗಳನ್ನು ಬರೆದುದಾಗಿ ಕರ್ಪೂರಮಂಜರಿಯಿಂದ ಗೊತ್ತಾಗುತ್ತದೆ.

ವಿದ್ಧಶಾಲಭಂಜಿಕೆಯನ್ನು ಬಾಲ್ಯದಲ್ಲಿಯೇ ಬರೆದಿರಬೇಕಾಗಿ ತೋರುತ್ತದೆ ಕರ್ಪೂರಮಂಜರೀ ಮತ್ತು ಕಾವ್ಯಮೀಮಾಂಸಾಗ್ರಂಥವನ್ನು ಕವಿರಾಜನಾದನಂತರ ಬರೆದಿರಬೇಕಾಗಿ ಬೋಧೆಯಾಗುತ್ತದೆ. ಹೇಗೆಂದರೆ ಬಾಲರಾಮಾಯಣ,

* 'ಬಾಲಕವಿಃ ಕವಿರಾಜೋ' ಕರ್ಪೂರಮಂಜರೀ ೧-೯.

§ ದಶ ಚ ಕವೇರವಸ್ಥಾ ಭವಂತಿ. ಕಾವ್ಯಮೀಮಾಂಸಾ ಪುಟ ೧೯.

‡ ಯೋಽನ್ಯತರಪ್ರಬಂಧೇ ಪ್ರವೀಣಃ ಸ ಮಹಾಕವಿಃ Ibid ಪುಟ ೧೯.

$ ಯಸ್ತು ತತ್ರ ತತ್ರ ಭಾಷಾವಿಶೇಷೇ ತೇಷು ಪ್ರಬಂಧೇಷು ತಸ್ಮಿಂಸ್ತಸ್ಮಿಂಶ್ಚ ರಸೇ ಸ್ವತಂತ್ರಃ ಸ ಕವಿರಾಜಃ Ibid ಪುಟ. ೧೯.

ಬಾಲಭಾರತ, ಮತ್ತು ವಿದ್ಧಶಾಲಭಂಜಿಕೆಯ ಶ್ಲೋಕಗಳು ಕಾವ್ಯಮೀಮಾಂಸಾ ದಲ್ಲಿ ಕಂಡುಬರುತ್ತವೆ. ಆದರೆ:—

ಬ್ರೂತೇ ಯಃ ಕೋಽಪಿ ದೋಷಂ ಮಹದಿತಿ ಸುಮತಿರ್ಬಾಲರಾಮಾಯಣೇಽಸ್ಮಿ
ನ್ಪ್ರಷ್ಟವ್ಯೋಽಸೌ ಪಟೀಯಾನಿಹ ಭಣಿತಿಗುಣೋ ವಿದ್ಯತೇ ವಾ ನ ವೇತಿ
ಯದ್ಯಸ್ತಿ ಸ್ವಸ್ತಿ ತುಭ್ಯಂ ಭವ ಪಠನರುಚಿರ್ವಿದ್ಧಿ ನಃ **ಷಟ್ ಪ್ರಬಂಧಾ**
ನ್ನೈವಂ ಚೇದ್ದೀರ್ಘಮಾಸ್ತಾಂ ನಟವಟುವದನೇ ಜರ್ಜರಾಕಾವ್ಯಕಂಥಾ ||
ಬಾಲರಾಮಾಯಣ ೧-೧೨

ಎಂಬ ಬಾಲರಾಮಾಯಣದ ಶ್ಲೋಕದಿಂದ ಆರುಗ್ರಂಥಗಳನ್ನು ಬರೆದಿರುವು ದಾಗಿ ಸ್ಪಷ್ಟಪಡುತ್ತದೆ. ಇದರಿಂದ ಬಾಲರಾಮಾಯಣನಾಟಕರಚನೆಯು ಕಾಲಕ್ಕೆ ಆರುಗ್ರಂಥಗಳು ರಚನೆಯಾಗಿದ್ದಿರಬೇಕಾಗಿ ತೋರುವುದಲ್ಲದೆ ಬಾಲರಾಮಾ ಯಣವು ಕೊನೆಯದೆನ್ನಬೇಕಾಗುತ್ತದೆ. ಇದು ನಿಜವೆನ್ನುವುದಾದರೆ ಬಾಲರಾಮಾ ಯಣದ ವೇಳೆಗೆ ಬರೆದಿದ್ದ ಆರುಗ್ರಂಥಗಳಾವುವು ? ಎಂಬ ಪ್ರಶ್ನೆಯುಂಟಾಗುತ್ತದೆ. ಮೇಲೆ ಹೇಳಿರುವ ಗ್ರಂಥಗಳಲ್ಲಾವುವು? ಉಪಲಬ್ಧವಿಲ್ಲದವುಗಳಾವುವು? ಎಂಬುದರ ಸಮರ್ಥನವು ಅವಶ್ಯಕವೆನಿಸುತ್ತದೆ. ಹೀಗಾಗಿಸಂದೇಹಸಾಮ್ರಾಜ್ಯದಲ್ಲೋಲಾಡ ಬೇಕಾಗಿದೆ.

ರಾಜಶೇಖರನು ಹರವಿಲಾಸವೆಂಬ ಕಾವ್ಯವನ್ನು ಬರೆದಿರುವುದಾಗಿ ಹೇಮ ಚಂದ್ರನು ತನ್ನ 'ಕಾವ್ಯಾನುಶಾಸನ' ದಲ್ಲಿ ಹೇಳಿಕೊಂಡಿರುವುದಲ್ಲದೆ ಹರವಿಲಾಸದ ಎರಡು ಶ್ಲೋಕಗಳನ್ನು ಉದಾಹರಿಸಿಕೊಂಡಿರುವನು. ಮೊದಲನೆಯದು ಮಂಗಳಾ ಚರಣ.* ಎರಡನೆಯದು ದುರ್ಜನ ಮತ್ತು ಸಜ್ಜನವರ್ಣನೆ†ಯಾಗಿರುವುದು.

ಉಜ್ವಲದತ್ತನು ಹರವಿಲಾಸದ ಶ್ಲೋಕಾರ್ಧವನ್ನು‡ ಉದಾಹರಿಸಿಕೊಂಡಿರು ವನು. ಇವುಗಳೆಲ್ಲವನ್ನೂ ನೋಡಿದರೆ ಹರವಿಲಾಸವು ಕಾವ್ಯವಾಗಿರಬೇಕೆಂದೂ ಕವಿ ರಾಜನಾದ ಅನಂತರ ಬರೆದಿರಬೇಕೆಂದು ಸ್ಪಷ್ಟವಾಗುತ್ತದೆ. ಇವನು ಶ್ಲೋಕಾರ್ಧ

* ಆಶೀರ್ಯಥಾ ಹರವಿಲಾಸೇ:—
ಓಮಿತ್ಯೇಕಾಕ್ಷರಂಬ್ರಹ್ಮ ಶ್ರುತೀನಾಂ ಮುಖಮಕ್ಷರಂ
ಪ್ರಸೀದತು ಸತಾಂ ಸ್ವಾಂತೇಷ್ವೇಕಂ ತ್ರಿಪುರುಷೀಮಯಂ ||

† ಸುಜನ ದುರ್ಜನಸ್ವರೂಪಂ ಹರವಿಲಾಸೇ:—
ಇತಸ್ತತೋ ಭಷನ್ಭೂರಿ ನ ಪತೇತ್ಪಿಶುನಃ ಶುನಃ
ಅವದಾತತಯಾ ಕಿಂಚ ನ ಭೇದೋ ಹಂಸತಃ ಸತಃ ||

‡ ದಶಾನನಕ್ಷಿಪ್ತಖುರಪ್ರಖಂಡಿತಃಕ್ವಚಿ
ದ್ಗತಾರ್ಧೋ ಹರದೀಧಿತಿರ್ಯಥಾ|| ಇತಿಹರವಿಲಾಸೇ || ;j ೨೮

ವನ್ನು ಉದಾಹರಿಸಿಕೊಂಡಿರುವುದರ ಜೊತೆಗೆ ಶಿವನಪ್ರತಿನಾಮ$ಗಳ ವಿಚಾರವಾಗಿ ಬೇರೆ ಶ್ಲೋಕಾರ್ಥವನ್ನುದಾಹರಿಸಿಕೊಂಡು ಅದನ್ನು ರಾಜಶೇಖರನದೆಂದಿರುವನು. ಈ ಕೋಶವಾವುದೆಂಬುದು ತಿಳಿಯದು. ಇವುಗಳೆಲ್ಲವನ್ನೂ ನೋಡಿದರೆ ರಾಜಶೇಖರನು ಮೇಲೆಹೇಳಿರುವಗ್ರಂಥಗಳಲ್ಲದೆ ಇನ್ನೂ ಅನೇಕ ಗ್ರಂಥಗಳನ್ನು ಬರೆದಿರಬಹುದಾಗಿಯೂ ಅವು ಉಪಲಬ್ಧವಿಲ್ಲವಾಗಿಯೂ ಊಹಿಸಬಹುದಾಗಿದೆ.

ರಾಜಶೇಖರನು ಭುವನಕೋಶವೆಂಬ ಭೂಗೋಳ ವಿಷಯಕ ಗ್ರಂಥವನ್ನು ಬರೆದಿರುವುದಾಗಿ ಕಾವ್ಯಮೀಮಾಂಸೆಯ ಹದಿನೇಳನೆಯ ಅಧ್ಯಾಯದ ಕೊನೆಯಲ್ಲಿ ಹೇಳಿಕೊಂಡಿರುವುದು ಕಂಡುಬರುತ್ತದೆ.§

**ಬಾಲರಾಮಾಯಣ**:—ಇದು ಹತ್ತು ಅಂಕಗಳುಳ್ಳ ನಾಟಕ. ಇದು ಪ್ರಕರಣ ಜಾತಿಗೆ ಸೇರಿದುದು. ಇದರಲ್ಲಿ ೭೮೧ ಶ್ಲೋಕಗಳಿರುವುವು. ಸೀತಾಸ್ವಯಂವರ ಮೊದಲು ರಾವಣನವಧಾನಂತರ ಅಯೊಧ್ಯೆಗೆಬಂದು ಅಗ್ನಿಪೂತಳಾದ ಜಾನಕಿಯೊಡನೆ ರಾಜ್ಯವಾಳಿದವರೆಗೆ ಕಥೆಯು ಬರೆಯಲ್ಪಟ್ಟಿದೆ. ಇದರಲ್ಲಿ ಶೂರ್ಪಣಖಿಯೇ ಮೊದಲಾದರಾಕ್ಷಸರು ದಶರಥ ಮತ್ತು ಕೈಕಯೆಯ ರೂಪದಿಂದಬಂದು ರಾಮನನ್ನು ವನವಾಸಕ್ಕೆಕಳುಹಿದುದಾಗಿ ಸೂಚಿಸಿದೆ. ಸೀತಾವಿಷಯಕವಾದ ರಾವಣನಮೋಹವೂ, ಸೌಂದರ್ಯಮುಗ್ಧನಾಗಿ ಹಂಬಲಿಸುವಿಕೆಯೂ, ಅವನ ನಿರ್ದಯಕ್ಕಿಂತಲೂ ಹೆಚ್ಚಾಗಿ ವರ್ಣಿತವಾಗಿದೆ. ಇವನು ರಾಮಾಯಣ ಕಥೆಯನ್ನು ತೆಗೆದುಕೊಂಡು ಭವಭೂತಿಯ ಶೈಲಿಯನ್ನನುಕರಿಸಲಾಶಿಸಿ ಮಹಾವೀರಚರಿತೆಯನ್ನು ಎದುರಿಗೆ ಇಟ್ಟುಕೊಂಡು ಬರೆದಿರಬೇಕಾಗಿ ತೋರುತ್ತದೆ.† ಆರನೆಯ ಅಂಕದಲ್ಲಿ ದಶರಥನ ಹೆಂಡತಿಯನ್ನು (ಕೈಕಯೆಯನ್ನು) ದೋಷದೂರಳೆಂದು ಸಮಾಧಾನ ಹೇಳುವ ವಿಚಾರದಲ್ಲಿ ಮಹಾಕವಿ ಭವಭೂತಿಯನ್ನು ಹಿಂಬಾಲಿಸಿರುವನಲ್ಲದೆ, ಲಂಕಾ ಮತ್ತು ಅಲಕ ಇವುಗಳವರ್ಣನದಲ್ಲಿ,'ನೋಟಗಳ ಪ್ರದರ್ಶನಚತುರತೆಯಲ್ಲಿ ಭವಭೂತಿಯನ್ನು ಅನುಸರಿಸಿರುವನು. ಕವಿಯ ಭಾಷಾಸಾಮರ್ಥ್ಯವೂ ಶಬ್ದಯೋಜನಕೌಶಲವು ಇವನ ಎಲ್ಲಾ ನಾಟಕಗಳಿಗಿಂತಲೂ ಇದರಲ್ಲಿ ಕಡುಜಾಣ್ಮೆ

$ ಚಂಡೀಕಾಂತೋ ಭಗಾಲೀ ಚ
ಲೇಲಿಹಾನೋ ವೃಷಧ್ವಜಃ ॥ ii ೭೬.

§ ಇತ್ಥಂ ದೇಶವಿಭಾಗೋ ಮುದ್ರಾಮಾತ್ರೇಣ ಸೂತ್ರಿತಃ ಸುಧಿಯಾಂ
ಯಸ್ತು ಜಿಗೀಷತ್ಯಧಿಕಂ ಪಶ್ಯಂತು ಮದ್ಭುವನಕೋಶಮುಪ ॥
ಕಾವ್ಯಮೀಮಾಂಸಾ ೧೭ನೆಯ ಅಧ್ಯಾಯ—

† ಬಾಲರಾಮಾಯಣದ ೧೦—೭೫ ಮತ್ತು ಮಹಾವೀರಚರಿತೆ ೧—೫೫ನೆಯ ಶ್ಲೋಕಗಳನ್ನು ಹೋಲಿಸಿ ನೋಡಿ.

ಯಿಂದ ವರ್ಣಿತವಾಗಿದೆ. ಈ ನಾಟಕವು ಮಹೇಂದ್ರಪಾಲನ ಅಪೇಕ್ಷೆಯಂತೆ ಅಭಿನಯಿಸಲ್ಪಟ್ಟಿರುವುದಾಗಿದೆ.

**ಬಾಲಭಾರತ**‡:—ಇದಕ್ಕೆ ಪ್ರಚಂಡ ಪಾಂಡವವೆಂದು ಹೆಸರು. ಇದು ಅಪೂರ್ಣವಾಗಿರುವುದಾಗಿ ಎರಡು ಅಂಕಗಳು ಮಾತ್ರವೇ ಉಪಲಬ್ಧವಿರುವುವು. ಇದರಲ್ಲಿ ದ್ರೌಪದಿಯ ಸ್ವಯಂವರ ಮತ್ತು ವಸ್ತ್ರಾಪಹರಣ ಇವು ವರ್ಣಿತವಾಗಿವೆ. "ರಾಜಶೇಖರಕವೇರ್ಮಹಾತ್ಮನೋ ಬಾಲಭಾರತಮಿದಂಹಿನಾಟಕಂ" ಎಂಬುದನ್ನು ನೋಡಿದರೆ ೫ಅಂಕಗಳಿಗಿಂತ ಹೆಚ್ಚಾಗಿರಬೇಕಾಗಿ ಬೋಧೆಯಾಗುತ್ತದೆ. ಮೊದಲನೆಯ ಅಂಕದಲ್ಲಿ ವ್ಯಾಸಪ್ರಾರ್ಥಿತಸಪ್ರವೇಶ, ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸುವಿಕೆ. ಎರಡನೆಯ ಅಂಕದಲ್ಲಿ ದ್ಯೂತಾರಂಭ ಧರ್ಮರಾಜನ ಸೋಲು. ದುಶ್ಶಾಸನನಿಂದ ಅವಮಾನಿತಳಾದ ದ್ರೌಪದಿಯ ಪ್ರತಿಜ್ಞೆ ಇವೇ ಮೊದಲಾದವು ವನಗಮನದವರೆಗೆ ವರ್ಣಿತವಾಗಿದೆ. ಇದು ಮಹೋದಯದಲ್ಲಿ ಮಹೀಪಾಲನ ಆಳ್ವಿಕೆಯಲ್ಲಿ ಅಭಿನಯಿಸಲ್ಪಟ್ಟಿತು.

**ವಿದ್ಧಶಾಲಭಂಜಿಕಾ** ಅಥವಾ ಪ್ರತಿಮಾ\$:—ಇದು ನಾಲ್ಕು ಅಂಕಗಳುಳ್ಳ ನಾಟಿಕಾ. ರತ್ನಾವಳೀನಾಟಿಕೆಯನ್ನನುಕರಿಸಿ ಬರೆದಿರುವಹಾಗೆ ತೋರುತ್ತದೆ. ಕಥಾವಸ್ತುವು ಕರ್ಪೂರಮಂಜರಿಯಂತೆ ಇದೆ. ಪುತ್ರಸಂತಾನವಿಲ್ಲದ ಲಾಟದೇಶದ ರಾಜನಾದ ಚಂದ್ರವರ್ಮನು ತನ್ನ ಒಬ್ಬಳೇ ಮಗಳಾದ ಮೃಗಾಂಕಾವಳಿಗೆ ಗಂಡುವೇಷವನ್ನಳವಡಿಸಿ ಮೃಗಾಂಕವರ್ಮಾಭಿಧಾನದಿಂದ ವಿದ್ಯಾಧರಮಲ್ಲನ ರಾಣಿಯ ಬಳಿಗೆ ಕಳುಹಿಸಿಕೊಡುವನು. ಮೊದಲನೆಯ ಅಂಕದಲ್ಲಿ ವಿದ್ಯಾಧರಮಲ್ಲನು ಸ್ವಪ್ನದಲ್ಲಿ ತಾನೊಬ್ಬ ಸುಂದರಿಯನ್ನು ನೋಡಿದುದಾಗಿಯೂ ಅವಳನ್ನು ಹಿಡಿದುಕೊಳ್ಳುವಷ್ಟರಲ್ಲಿ ಅವಳು ಜಾರಿಹೋದ ತನ್ನ ಕಂಠಾಭರಣವನ್ನು ಬಿಟ್ಟು ತಪ್ಪಿಸಿಕೊಂಡು ಹೋದುದಾಗಿ ವಿದೂಷಕನ ಬಳಿ ಹೇಳಿಕೊಳ್ಳುವನು. ಆದರೆ ಅದು ಸ್ವಪ್ನವಲ್ಲವೆಂದೂ ನಿಜವಾದುದೆಂದೂ ಮಂತ್ರಿಯ ಸಲಹೆಯಿಂದ ನಡೆಯಿಸಲ್ಪಟ್ಟುದಾಗಿ ಮೂರನೆಯ ಅಂಕದಿಂದ ತಿಳಿಯಬರುತ್ತದೆ. ಕಾಮದೇವನನ್ನು ನೋಡಲು ರಾಜನ ಶಯ್ಯಾಗೃಹಕ್ಕೆ ಹೋಗಬೇಕೆಂದು ದಾಸಿಯೊಬ್ಬಳು ಮೃಗಾಂಕಲೇಖೆಯನ್ನು ಒತ್ತಾಯಮಾಡುವಳು. ಅನಂತರ ರಾಜನು ಉದ್ಯಾನವಿಹಾರಕ್ಕೆ ಹೋಗಿ ಅಲ್ಲಿಗೆಬಂದಿದ್ದ ಸುಂದರಿಯರನೇಕರಮಧ್ಯದಲ್ಲಿ ವಿಹರಿಸುತ್ತಾ ತಾನು ಸ್ವಪ್ನದಲ್ಲಿ ಕಂಡಂತಾದ ಪ್ರತಿಮೆಯೊಂದನ್ನು ವಿಹಾರಮಂದಿರದಲ್ಲಿ ನೋಡಿ ಗುರ್ತಿಸಿ ಮೋಹಪರವಶನಾಗಿ ತನಗೆ ದೊರೆತಿದ್ದ ಕಂಠಾಭರಣವನ್ನು ಅದರ ಕೊರಳಿಗೆ ಹಾಕು

‡ ಮಹಾಕವಿ ಶ್ರೀಮದಮರಚಂದ್ರಸೂರಿ ವಿರಚಿತ ಬಾಲಭಾರತ (ಕಾವ್ಯವು) ಇದಲ್ಲ.

\$ ಇದು ಭಾಸಕೃತಪ್ರತಿಮಾ ನಾಟಕವಲ್ಲ.

ವನು. ಕೊನೆಗೆ ಮೃಗಾಂಕಾವಳಿಯ ಸಂದರ್ಶನ ಲಾಭವಾದರೂ ಅವಳು ಬಹಳ ಹೊತ್ತು ಅಲ್ಲಿ ನಿಲ್ಲಲಿಲ್ಲ. ಎರಡನೆಯ ಅಂಕದಲ್ಲಿ ತಾನು ಹೇಗೆ ಮೃಗಾಂಕಾವಳಿಯಲ್ಲಿ ಅನುರಕ್ತನೋ ಹಾಗೆಯೇ ಮೃಗಾಂಕಾವಳಿಯೂ ತನ್ನಲ್ಲಿ ಅನುರಕ್ತಳಾಗಿರುವಳೆಂಬುದನ್ನು ತಿಳಿಯುವನು. ಮೂರನೆಯ ಅಂಕದಲ್ಲಿ ವಿದೂಷಕನು ರಾಣಿಯ ಗೆಳತಿಯಾದ ಮೇಖಲೆಯೊಡನೆ ಯೋಚಿಸಿ ಉಪಾಯದಿಂದ ರಾಜನೂ ನಾಯಕಿಯೂ ಸೇರುವಂತೆ ಮಾಡಿದನಾದರೂ ರಾಣಿಯು ಬಂದಳೆಂಬುದನ್ನು ತಿಳಿದು ಪರಸ್ಪರ ಅಗಲಬೇಕಾದುದು. ನಾಲ್ಕನೆಯ ಅಂಕದಲ್ಲಿ ವಿದೂಷಕನ ಪತ್ನಿಯು ನಿದ್ರೆಯಲ್ಲಿ ರಾಣಿಯು ಮೃಗಾಂಕಾವಳಿಯನ್ನು ರಾಜನಿಗೆ ಕೊಟ್ಟು ಮದುವೆಯನ್ನು ಮಾಡಲಿಚ್ಛಿಸುವುದೇ ಮೊದಲಾದ ವಿಷಯಗಳನ್ನು ಕನವರಿಸುತ್ತಿರುವಂತೆ ನಟಿಸುವಳು. ಹೀಗಾಗಿ ಕೊಂಚಕಾಲಡಲ್ಲಿ ಇವರೀರ್ವರಿಗೂ ಮದುವೆಯಾಗುವುದು. ಇಷ್ಟರಲ್ಲಿ ದೂತನೋರ್ವನು ಬಂದು ಚಂದ್ರವರ್ಮನಿಗೆ ಪುತ್ರೋತ್ಸವವಾದುದೆಂದು ತಿಳಿಸುವನು. ಎಲ್ಲರೂ ಹೃಷ್ಟಚಿತ್ತರಾಗುವರು. ಕಥೆಯೂ ಮುಗಿದುದು. ಇದನ್ನು ಶ್ರೀಯುವರಾಜನ ಹೇಳಿಕೆಯಂತೆ ಅಭಿನಯಿಸಲ್ಪಟ್ಟುದಾಗಿದೆ. ಇದಕ್ಕೆ ಘನಶ್ಯಾಮನೆಂಬುವನು ವ್ಯಾಖ್ಯಾನವನ್ನು ಬರೆದಿರುವನು. ಸುಂದರೀ ಮತ್ತು ಕಮಲಾ ಎಂಬ ಹೆಂಗಳೆಯರಿಬ್ಬರು ಘನಶ್ಯಾಮನ ಮಡದಿಯರು. ಇವರು ವಿದ್ಧಶಾಲಭಂಜಿಕೆಗೆ ಟೀಕೆಯನ್ನು ಬರೆದು ಅದನ್ನು 'ವಿದ್ಧಶಾಲಭಂಜಿಕಾವ್ಯಾಖ್ಯಾ' ಎಂದೂ, ಚಮತ್ಕಾರತರಂಗಿಣೀ, ಎಂದೂ 'ಸುಂದರೀಕಮಲೀಯ'ವೆಂದೂ ಕರೆದಿರುವರು. ಇದು.

ಸುಂದರೀಕಮಲಾಭ್ಯಾಂ ಸಾ
ವ್ಯುತ್ಪನ್ನಾನಾಂ ಸುಬೋಧನೇ
ಇಯಂ ಪ್ರಣೀಯತೇ ಟೀಕಾ
ಚಮತ್ಕಾರತರಂಗಿಣೀ||

ಎಂಬ ಶ್ಲೋಕದಿಂದಲೂ ವ್ಯಾಖ್ಯಾನದ ಕೊನೆಯಲ್ಲಿ "ಇತಿಮಹಾರಾಜಪದ + ಸುಂದರೀ ಕಮಲೀಯ ಸಹಜಸವ್ಯಾಖ್ಯಾನೇ ತೃತೀಯೋಂಕಃ" ಎಂದು ಹೇಳಿರುವುದರಿಂದ ಸ್ಪಷ್ಟಪಡುತ್ತದೆ. ಈ ಅಪೂರ್ವ ವ್ಯಾಖ್ಯಾನವು ಇನ್ನೂ ಅಚ್ಚಾಗಿರುವುದಿಲ್ಲ.

**ಕರ್ಪೂರಮಂಜರೀ** :—ಇದು ರೂಪಕಭೇದವಾದ ಸಾಟ್ಟಕ$ ಜಾತಿಗೆ ಸೇರಿದುದು. ಇದು ಪ್ರಾಕೃತದಲ್ಲಿರುವುದು :—

$ ಸಾಟ್ಟಕವೆಂದರೆ ಪ್ರವೇಶಕ ವಿಷ್ಕಂಭಂಗಳೊಂದೂ ಇಲ್ಲದೆ ನಾಲ್ಕು ಜವನಿಕಾಂತರಗಳಿಂದ ಕೂಡಿರುವ ಪ್ರಾಕೃತ ಭಾಷಾರೂಪಕಕ್ಕೆ ಸಾಟ್ಟಕವೆಂದು ಹೆಸರು.

" ಭೈರವಾನಂದಃ! ತ್ವಂ ಸುಷ್ಠುತರಂ ಭ್ರಾಂತೋಽಸಿ ।
ಯತಃ ಕರ್ಪೂರಮಂಜರ್ಯಾ **ಘನಸಾರಮಂಜರೀ** ತಿನಾಮಾಂತರಂ ಚಾಸಾಸಿ‡ "

ಎಂದು ಹೇಳಲ್ಪಟ್ಟಿರುವುದರಿಂದ ಕರ್ಪೂರಮಂಜರಿಗೆ ಘನಸಾರಮಂಜರೀ ಎಂಬ ನಾಮಾಂತರವಿರುವುದಾಗಿ ತಿಳಿಯಬರುತ್ತದೆ. ಇದರ ಕೆಲವು ವಿಚಾರಗಳು ನಾಟಿಕೆಯನ್ನು ಹೋಲುವುವು. ರಾಜನಾದ ಚಂಡಪಾಲನು ಕುಂತಳ ರಾಜ ಕುವರಿಯಾದ ಕರ್ಪೂರಮಂಜರಿಯನ್ನು ಮದುವೆಯಾಗಿ ಹೇಗೆ ಚಕ್ರವರ್ತಿಪದವಿಯನ್ನು ಹೊಂದಿ ಸುಖಿಸಿದನೆಂಬ ವಿಚಾರವು ವರ್ಣಿತವಾಗಿರವುದು. ಭೈರವಾನಂದನು ಮಾಡುವ ತಂತ್ರಗಳು ಅದ್ಭುತರಸವನ್ನು ಸೂಚಿಸುವುವಾಗಿವೆ. ಇದು ಪ್ರಾಕೃತದಲ್ಲಿ ಬರೆಯಲ್ಪಟ್ಟಿರುವುದು. ಪ್ರಾಕೃತದ ವಿಚಾರವಾಗಿ ರಾಜಶೇಖರನ ಮತವು ಹೀಗಿರುವುದು.—

ಪರುಷಾಃ ಸಂಸ್ಕೃತಗುಂಫಾಃ
ಪ್ರಾಕೃತಗುಂಫೋಽಪಿ ಭವತಿ ಸುಕುಮಾರಃ ।
ಪುರುಷಮಹಿಲಾನಾಂ
ಯಾವದಿಹಾಂತರಂ ತೇಷು ತಾವತ್ ॥§

ಸಂಸ್ಕೃತವು ಕಟುವೆಂದೂ ಪ್ರಾಕೃತವು ಸುಕುಮಾರ (ಚೆಲು) ವೆಂದೂ ಇವೆರಡರ ವ್ಯತ್ಯಾಸವು ಗಂಡಸರಿಗೂ ಹೆಂಗಸರಿಗೂ ಇರುವಷ್ಟೆಂದೂ ಒಕ್ಕಣಿಸಿರುವನು. ಇದನ್ನು ರಾಜಶೇಖರನ ಹೆಂಡತಿಯಾದ ಅವಂತಿಸುಂದರಿಯ ಹೇಳಿಕೆಯಂತೆ ಅಭಿನಯಿಸಲ್ಪಟ್ಟುದಾಗಿದೆ.

**ಕಾವ್ಯಮೀಮಾಂಸಾ** :—ಇದು ಅಲಂಕಾರ ಗ್ರಂಥ. ಇದರಲ್ಲಿ ಹದಿನೆಂಟು ಅಧ್ಯಾಯಗಳಿರುವುವು. ಶೈಲಿಯು ಕೌಟಿಲ್ಯನ ಅರ್ಥಶಾಸ್ತ್ರದಂತೆ, ವಾತ್ಸ್ಯಾಯನನ ಕಾಮಸೂತ್ರದಂತೆ ಇರುವುದು. ಪ್ರಕೃತ ನಮಗೆ ದೊರೆತಿರುವ ಕಾವ್ಯಮೀಮಾಂಸಾ ಗ್ರಂಥಾಂತ್ಯದಲ್ಲಿ ಕಂಡುಬರುವ " ಇತಿರಾಜಶೇಖರಕೃತೌ ಕಾವ್ಯಮೀಮಾಂಸಾಯಾಂ ಕವಿರಹಸ್ಯೇ¶ ಪ್ರಥಮೋಽಧಿಕರಣೇ ಕಾಲವಿಭಾಗೋ ನಾಮ ಅಷ್ಟಾದಶೋಽಧ್ಯಾಯಃ " ಎಂದೂ " ಸಮಾಪ್ತಮಿದಂ ಪ್ರಥಮಾಧಿಕರಣಂ ಕವಿರಹಸ್ಯಂ ಕಾವ್ಯಮೀಮಾಂಸಾಯಾಂ " ಎಂದಿರುವುದನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿದರೆ ಕಾವ್ಯಮೀಮಾಂಸಾ ಗ್ರಂಥವು ಈಗ ದೊರೆತಿರುವುದಕ್ಕಿಂತಲೂ ಇನ್ನೂ ಹೆಚ್ಚಾಗಿರಬೇಕಾಗಿ ಬೋಧೆಯಾಗುತ್ತದೆ.

‡ ಕರ್ಪೂರಮಂಜರೀ ಪುಟ ೧೦೬
§ — Ibid — ಪು ೯.
¶ ಹಲಾಯುಧನ ಕವಿರಹಸ್ಯವು ಇದಲ್ಲ.

ಇವನ ಕೆಲವು ಶ್ಲೋಕಗಳನ್ನು ಮಾದರಿಗಾಗಿ ಬರೆಯುವೆವು:--

ಚೈತ್ರವರ್ಣನವು ಹೀಗಿರುವದು :—

ಲಂಕಾತೋರಣಮಾಲಿಕಾತರಲಿನಃ ಕುಂಭೋದ್ಭವಸ್ಯಾಶ್ರಮೇ
ಮಂದಾಂದೋಲಿತಚಂದನದ್ರುಮಲತಾಕರ್ಪೂರಸಂಪರ್ಕಿಣಃ
ಕಂಕೋಲೀಕುಲಕಂಪಿನಃ ಫಣಿಲತಾನಿಷ್ಪಷ್ಟನರ್ತಕಾ
ಶ್ಚಂಡಂ ಚುಂಬಿತತಾಮ್ರಪರ್ಣಿಸಲಿಲಾ ವಾಂತಿ ಚೈತ್ರಾನಿಲಾಃ
ಕರ್ಪೂರಮಂಜರೀ ೧—೧೭

ಆಹಹ! ಚೈತ್ರಮಾಸದ ಪ್ರಸಾದ ಮಾಧುರ್ಯ ಸೌಕುಮಾರ್ಯ ವಿಶಿಷ್ಟನಾದ ಸಮೀರಣನು ದಕ್ಷಿಣದಿಗ್ದರ್ಶಿಯಾದ ಅಗಸ್ತ್ಯಮಹರ್ಷಿಯ ಪುಣ್ಯಾಶ್ರಮದತೋರ್ರಣಮಾಲೆಯನ್ನಲುಗಿಸಿ, ಮೆಲ್ಲನೆ ಆಂದೋಳನವಾಡುತ್ತಿರುವ ಶ್ರೀಗ್ರಂಥವೃಕ್ಷಗಳನ್ನು ಸ್ಪರ್ಶಿಸಿ, ಕರ್ಪೂರಲತೆಗಳನ್ನು ಕುಲುಕಿಸಿ, ಕಾಂತಾಜನಪಾದ ಸ್ಪರ್ಶನಗಳಿಂದ ಪಲ್ಲವಿತಗಳಾದ ಕಂಕೋಲವೃಕ್ಷಗಳನ್ನಾಡಿಸಿ, ವಿಧವಿಧವಾದ ಲತೆಗಳನರ್ತನವನ್ನು ಮಾಡಿಸಿ ದಣಿದು ಗಂಭೀರವಾಹಿನಿಯಾದ ತಾಮ್ರಪರ್ಣಿಯಜಲವಂ ಚುಂಬಿಸಿ ಮೆಲ್ಲಗೆ ಬೀಸುತ್ತಿರುವನು.

ಸೀತೆಯನ್ನು ನೋಡಿದ ರಾವಣನ ಹೇಳಿಕೆ:—ಇಯಮಸೌ ಹೃದಯವಿಶಲ್ಯಕರಣೌಷಧಿರ್ಮೈಥಿಲೀ |

ದಮ್ಮಿಲ್ಲೋ ಲಲಿತಃ ಸ್ಮಿತಂ ಶುಚಿ ದೃಶೌ ದೀರ್ಘೇ ಭ್ರುವೌ ಭಂಗುರೇ
ಸುಶಾಭೇ ಶ್ರವಸೀ ವಿಶಾಲಮಲಿಕಂ ಮಾಂಜಷ್ಠಪುಷ್ಪೋದರಃ
ಕಂಠೋ ರುಚ್ಯರುಚಿಃ ಸಮುನ್ನತಮುರಃ ಕಾಮ್ಯಂ ಚ ಕಾಂಚೀಪದಂ
ದೃಗ್ದ್ವಂದ್ವಾನಿ ಚಿರಂ ವಿಭಜ್ಯ ದಶಧಾ ತಸ್ಮೈಥಿಲೀಂ ಪಶ್ಯತ ||
ಬಾಲರಾಮಾಯಣ ೩—೨೪.

ಎಲೈ ದಶನೇತ್ರಯುಗ್ಮಗಳೆ !

ಲಾವಣ್ಯಮಯಿಯಾ ಆದ ಸೀತೆಯ ಮನೋಹರವಾದ ಕೇಶಕಲಾಪವನ್ನೂ, ಪರಿಶುದ್ಧವಾದ ಮಂದಹಾಸವನ್ನೂ, ವಿಶಾಲವಾದ ಕಣ್ಣುಗಳನ್ನೂ, ಕುಟಿಲವಾಗಿರುವ ಭ್ರೂಯುಗ್ಮಗಳನ್ನೂ, ದೇದೀಪ್ಯಮಾನವಾದ ಶ್ರೋಣಿಪ್ರದೇಶಗಳನ್ನೂ, ವೈಭವೋಪೇತವಾದ ವಿಶಾಲಲಲಾಟವನ್ನೂ, ಅತ್ಯುನ್ನತ ವಕ್ಷಸ್ಥಲಭಾವವನ್ನೂ, ಇಷ್ಟಾರ್ಥಸಿದ್ಧಿಯನ್ನುಂಟುಮಾಡುವುದಾದ ಕಾಂಚೀ (ನಾಭಿ) ಪ್ರದೇಶವನ್ನೂ, ಮಾಂಜಿಷ್ಠ (ಕೆಂಪಾದ) ದಂತಿರುವ ಅಧರವನ್ನೂ ಯಥಾ ಕ್ರಮವಾಗಿ ನೋಡಿ ನೋಡಿ ದಣಿಯುವರಾಗಿ. ಪುನಃ ಉನ್ಮಾದ ನಂತೆ ಸೀತಾನುಸಂಧಾನವನ್ನು ಮಾಡಿ ಆಕಾಶವನ್ನು ನೋಡುತ್ತ:—

* ಚಿತ್ತಸಂಮೋಹ ಉನ್ಮಾದಃ ಕಾಮಶೋಕಭಯಾದಿಭಿಃ
ಅಸ್ಥಾನ ಹಾಸರುದಿತಗೀತಪ್ರಲಪನಾದಿಕೃತ್ ||

ತರಂಗಯ ದೃಶೋಽಙ್ಗನೇ ಪತತು ಚಿತ್ರಮಿಂದೀವರಂ
ಸ್ಫುಟೀಕುರು ರದಚ್ಛದಂ ವ್ರಜತು ವಿದ್ರುಮಃ ಶ್ವೇತತಾಂ
ಕ್ಷಣಂ ವಪುರಪಾವೃಣು ಸ್ಪೃಶತು ಕಾಂಚನಂ ಕಾಲಿಕಾ
ಮುದಂಚಯ ಮನಾಙ್ಮುಖಂ ಭವತು ಚ ದ್ವಿಚಂದ್ರಂ ನಭಃ ||
ಬಾಲರಾಮಾಯಣ ೩—೨೫

ಎಲೌ ! ಸೀತೆ ! ಇಂದೀವರಗಳಂತಿರುವ ನಿನ್ನ ಕಣ್ಣುಗಳನ್ನು ಇತ್ತಕಡೆ ತಿರುಗಿಸು. ಹವಳದಂತೆ ಕೆಂಪಾಗಿರುವ ತುಟಿಗಳು ಶುಭ್ರವಾಗಿರುವ ನಿನ್ನ ದಂತಪಙ್ಕ್ತಿಗಳಿಂದ (ಮಂದಸ್ಮಿತದಿಂದ) ಧಾವಳ್ಯವನ್ನು ಹೊಂದಲಿ. ನಿನ್ನ ಹೇಮಾಂಗವನ್ನು ನೋಡಿ ಸುವರ್ಣವು ವಿವರ್ಣವಾಗಲಿ ಅಥವಾ ಕಪ್ಪಾಗಿಹೋಗಲಿ. ಮುಖವನ್ನೆತ್ತುವುದರಿಂದ ನಿನ್ನ ಮುಖಚಂದ್ರನನ್ನು ನೋಡಿ ಅಂತರಿಕ್ಷದಲ್ಲಿ ಚಂದ್ರದ್ವಯವಾದಂತಾಗಲಿ.

ಸೀತೆಯು ಶ್ರೀರಾಮನೊಡನೆ ಅಡವಿಗೆ ಹೊರಟುಹೋದ ವಿಚಾರವನ್ನು ಸುಮಂತ್ರನು ದಶರಥನೊಡನೆ ಹೇಳುವ ಸಂದರ್ಭವು ಎಷ್ಟು ಶೃಂಗಾರಕರುಣರಸಯುಕ್ತವಾಗಿರುವದು.

ಮಸೃಣಚರಣಪಾತಂ ಗಮ್ಯತಾಂ ಭೂಸ್ಸದರ್ಭಾ
ವಿರಚಯ ಸಿಚಯಾಂತಂ ಮೂರ್ಧ್ನಿ ಘರ್ಮಃ ಕಠೋರಃ
ಇದಿತಿಜನಕಪುತ್ರೀ ಲೋಚನೈರಶ್ರುಪೂರ್ಣೈಃ
ಪಥಿಪಥಿಕವಧೂಭಿ ರ್ವೀಕ್ಷಿತಾ ಶಿಕ್ಷಿತಾಚ || ಬಾಲರಾಮಾಯಣ.

ಮಾರ್ಗದಲ್ಲಿ ಪತಿವಿರಹಿತಸ್ತ್ರೀಯರು ಸೀತೆಯನ್ನು ನೋಡಿ ಅಮ್ಮ ! ಸೀತೆ ! ದರ್ಭೆಗಳ ಕೂಳೆಗಳುಳ್ಳ ಈ ದಾರಿಯಲ್ಲಿ ಮೆಲ್ಲನೆ ಅಡಿಯಿಡು. ಬಿಸಿಲು ಅತ್ಯಂತ ತೀಕ್ಷ್ಣವಾಗಿರುವುದರಿಂದ ಸೀರೆಯ ಸೆರಗನ್ನು ತಲೆಯಮೇಲೆ ಹೊದ್ದುಕೊಳ್ಳಮ್ಮ ಎಂದು ಕಣ್ಣೀರ್ಗರೆಯುತ್ತ ಹೇಳಿದರು. (ಇದರಲ್ಲಿ ಸೀತೆಯ ಸೌಕುಮಾರ್ಯವೂ ಗಂಡನೊಡನೆ ವನಪ್ರವೇಶವೂ ಸೂಚಿತವಾಗುವುದಲ್ಲದೆ ಸೀತೆಯು ಹಾಗೆ ಪತಿಯನ್ನು ಅನುಸರಿಸಿಹೋಗುವ ಭಾಗ್ಯವು ತಮಗಾಗದುದಕ್ಕಾಗಿ ದುಃಖಿಸುವರೆಂಬ ಮನೋವೈಕಲ್ಯವನ್ನು ಸೂಚಿಸುವುದಾಗಿದೆ.)

ದ್ರೌಪದಿಯ ಹೇಳಿಕೆ:—ರೆ ! ರೇ ! ದುರ್ಯೋಧನ !

ಏಷ ಮೇ ಕಚ ಕರ್ಷಣಾಪರಿಭವಃ ಆಮುಕ್ತಬಂಧಕ್ರಮ
ಸ್ತತ್ಸತ್ಯಮೇವ ಚಂಚರೀಕ ರಮಣೀಯಾ ಕೇಶಪಾಶಚ್ಛಟಾ
ನಖಾಗ್ರಾಂಕುಶಕೋಟಿ ಪಾಟಿತಮಹಾದುಃಶಾಸನೋರಸ್ಥಲೀ
ರಕ್ತೋಲ್ಲೇಖಿಕರೇಣ ನಿಶ್ಚಿತಮಿದಂ ಭೀಮೇನ ಯಾ ಬಧ್ಯತೇ
ಬಾಲಭಾರತ ೨—೫೦.

ಎಲವೆಲ್ಲವೋ ದುರ್ಯೋಧನ! ಕೇಳು.

ಆ ಪಾಪಿ ದುಶ್ಶಾಸನನ ಉರಸ್ಥಲವನ್ನು ತನ್ನ ಉಗುರುಗಳೆಂಬ ಅಂಕುಶದಿಂದ ಬಗೆದು ರಕ್ತ ಲೇಪನಗೊಂಡ ತನ್ನ ಕೈ ಗಳಿಂದ ಇದೋ! ಬಿಚ್ಚಿ ಹೋಗಿರುವ ಈ ಕೇಶಪಾಶಗಳನ್ನು ಭೀಮನು ನಿಶ್ಚಯವಾಗಿಯೂ ಎತ್ತಿ ಕಟ್ಟುವನೆಂಬುವನ್ನು ನೀನು ತಿಳಿ.

ಕೋಪದ ಪ್ರಗತಿಯನ್ನು ತಿಳುಹುವುವಾದ ಭೀಮಸೇನನ ಪ್ರತಿಜ್ಞಾಶ್ಲೋಕಗಳು ಹೀಗಿರುವುವು:—

ರೇ! ರೇ! ದುರ್ಯೋಧನ! ಭೀಮಸೇನಸ್ಯ ಶ್ರುಣುಪ್ರತಿಜ್ಞಾಂ:—

ಯೇನೇಯಂ ಯಾಜ್ಞಸೇನೀ ನೃಪಸದಸಿ ಹರಾತ್ಕೇಶಹಸ್ತೇ ಗೃಹೀತಾ
ಯಶ್ಚಾಸ್ಯಾಃ ಕೋಟವೀತ್ವಂ ಬತ ವಿದಧದಿಕೋ ವಾಸಸಾಂ ರಾಶಿಕಾರಃ
ಸೋಽಹಂ ತೇನೈವ ರೋಷಾರುಣನಯನಪಟುಃ ಪಾಣಿನೋತ್ಪಾಟಿತೇನ
ತ್ವಾಂ ಹಂತಾ ಹಂತ ವಕ್ಷಸ್ತಟಭುವಿರಟತೋ ದುಷ್ಟದುಃಶಾಸನಸ್ಯ || ಬಾಲಭಾರತ ೨—೫೨.

ಎಲೆ! ದುರ್ಯೋಧನ ಕೇಳು:—

ರಾಜಸಭೆಯಲ್ಲಿ ಯಾವಕಾರಣದಿಂದ ಈ ದ್ರುಪದನಂದನೆಯ ಕೇಶಪಾಶಗಳನ್ನು ಕೈಯಲ್ಲಿ ಹಿಡಿದು ಸೀರೆಯನ್ನೆಳಸಿ ರಾಶಿಹಾಕಿಸಿದೆಯೋ ಅದು ಕಾರಣದಿಂದ ಆರಕ್ತನೇತ್ರಕಷಾಯಿತನಾದ ಈ ಭೀಮನು ನಿನ್ನನ್ನೂ ಆ ದುಶ್ಶಾಸನನ್ನೂ ಭೂಮಿಯಲ್ಲಿ ಕೆಡಹಿಕೊಂಡು ಉರಸ್ಥಲವನ್ನು ಇದೋ! ಈ ಕೈಗಳಿಂದ ಬಗೆದು ರಾಶಿಹಾಕುವನೆಂಬುದನ್ನು ತಿಳಿ.

ಅಪಿಚ ರೇ! ರೇ! ದುರ್ಯೋಧನ:—

ನಖಿಕ್ರಕಚ ಪಾಟನತ್ರುಟಿತಕೀಕಸಾದ್ವಕ್ಷಸಃ
ಶಿರಾಸರಣಿಭಿರ್ಮೃಧೇ ರುಧಿರಮುತ್ಪಲತ್ಪೇನಿಲಂ
ಮಹಾಂಜಲಿಮಯಂ ರುಷಾ ಹೃದಿ ನಿವೇಶ್ಯ ದುಃಶಾಸನೇ
ಯುಧಿಷ್ಠಿರಸಹೋದರಃ ಶ್ರುಣು ವೃಕೋದರಃ ಪಾಸ್ಯತಿ|| ಬಾಲಭಾರತ ೨—೫೨,

ದುರ್ಯೋಧನ! ಇನ್ನೂ ಕೇಳು:—

ಯುಧಿಷ್ಠಿರನ ಸೋದರನೂ, ರೋಷಗೊಂಡಿರುವನೂ, ಆದ ಈ ವೃಕೋದರನು ಆ ದುಶ್ಶಾಸನನ ಎದೆಯ ಕೀಕಸೆ (ಮೂಳೆ) ಗಳನ್ನು ಉಗುರುಗಳೆಂಬ ಗರಗಸದಿಂದ ಸೀಳಿ ನರಗಳ ಸಂದಣಿಯಿಂದ ನೊರೆನೊರೆಯಾಗಿ ಹರಿದು ಬರುತ್ತಿರುವ ರಕ್ತವನ್ನು ತನ್ನ ಬೊಗಸೆಗಳಿಂದ ಪಾನಮಾಡುವನೆಂಬುದನ್ನು ತಿಳಿ.

ದ್ರೋಣಾದುಪಾರ್ಜಿತಧನುರ್ನಿಗಮಪ್ರಕರ್ಷಾ
ತ್ಸರ್ವಾನಪಿ ಸ್ಥಿತವತೋ ವಯಸಿ ಪ್ರಕಾಶೇ
ಭ್ರಾತೃಾಜ್ಞ್ಯತಂ ತವ ಹನಿಷ್ಯತಿ ಭೀಮಸೇನಃ
ಕಾಲೇ ಗದಪ್ರಹರಣೋ ರಣಕರ್ಮಶೌಂಡಃ || ಭಾಲಭಾರತ ೨—೫೩.

ಎಲಾ ! ದುರ್ಯೋಧನ,

ಆಚಾರ್ಯ ದ್ರೋಣನಿಂದ ಅನುಗ್ರಹಿಸಲ್ಪಟ್ಟ ವಿಧವಿಧವಾದ ಶಾಸ್ತ್ರಸಮ್ಮತ ಶಸ್ತ್ರಾಸ್ತ್ರಗಳಿರುವುವಾದರೂ ಅವುಗಳಾವುದನ್ನೂ ಲಕ್ಷಿಸದ ರಣಕರ್ಮಧೌರೇಯನಾದ ಈ ಭೀಮಸೇನನ ಗದಾಪ್ರಹರಣದಿಂದ ನಿನ್ನ ನೂರುಜನ ಸೋದರರೂ ನಾಶ ಹೊಂದುವರೆಂಬುದನ್ನು ತಿಳಿ.

ದೋರ್ದಂಡಮಂಡಲಿತ ಚಂಡಗದಾಪ್ರಹಾರೈ
ರಾಮೂಲತಸ್ತದದಿತಿ ತ್ರುಟಿತೋರುಸಂಧೇಃ
ದುರ್ಯೋಧನಸ್ಯ ವಿಕಟಾಂಮುಕುಟಾಗ್ರಪೀಠಿಂ
ದ್ರಾಗ್ಲೋಟಯಿಷ್ಯತಿ ರಣೇ ಚರಣೇನ ಭೀಮಃ ॥ ಬಾಲಭಾರತ ೨—೫೪

ಹೆಚ್ಚೇಕೆ! ಮಹಾಪರಾಕ್ರಮದಿಂದ ತಿರುಗಿಸಲ್ಪಟ್ಟ ಈ ಚಂಡಗದೆಯ ಪ್ರಹಾರದಿಂದ ಭಿನ್ನವಾದ ಉರಃಪ್ರದೇಶವುಳ್ಳ ದುರ್ಯೋಧನನ ಶ್ರೇಷ್ಠತಮವಾದ ಈ ಕಿರೀಟವು ಯುದ್ಧರಂಗದಲ್ಲಿ ಈ ಭೀಮನ ಚರಣತಲದಲ್ಲಿ ಸಿಲುಕಿ ಪುಡಿಪುಡಿ ಯಾಗುವುದೆಂದು ತಿಳಿ.

ವಿದ್ಧಶಾಲಭಂಜಿಕೆಯ ಮಂಗಳಾಚರಣವು ಹೀಗಿರುವುದು :—

ಕುಲಗುರುರಬಲಾನಾಂ ಕೇಳಿ ದೀಕ್ಷಾಪ್ರದಾನೇ
ಪರಮಸುಹೃದನಂಗೋ ರೋಹಿಣೀವಲ್ಲಭಸ್ಯ
ಅಪಿ ಕುಸುಮಪೃಷತ್ಕೈ ರ್ದೇವದೇವಸ್ಯ ಜೇತಾ
ಜಯತಿ ಸುರತಲೀಲಾನಾಟಕಾಸೂತ್ರಧಾರಃ

ವಿದ್ಧಶಾಲಭಂಜಿಕಾ ೧—೧ ॥

ರತಿಕೇಳಿಗೆ ದೀಕ್ಷಾದಾನವನ್ನುಮಾಡುವುದರಲ್ಲಿ ಕುಲಗುರುವಾಗಿಯೂ, ರೋಹಿಣೀವಲ್ಲಭನಾದ ಚಂದ್ರನಿಗೆ ಪರಮಮಿತ್ರನಾಗಿಯೂ, ದೇವದೇವೋತ್ತಮನಾದ ಪರಶಿವನನ್ನು ಪುಷ್ಪಬಾಣಂಗಳಿಂದ ಜಯಿಸಿದವನಾಗಿಯೂ, ಸುರತಕ್ರೀಡಾನಾಟಕ ಸೂತ್ರಧಾರನಾಗಿಯೂ ಇರುವ ಅನಂಗನು ಸರ್ವೋತ್ಕರ್ಷನಾಗಿರುವನು.

ಕಂದುಕಕ್ರೀಡಾವರ್ಣನವು ಹೀಗಿರುವುದು:—

ಅಮಂದಮಣಿನೂಪುರಕ್ವಣನಚಾರುಚಾರಿಕ್ರಮಂ
ಝಣಝಣಿತಮೇಖಲಾಸ್ಖಲಿತತಾರಹಾರಚ್ಛಟಂ
ಇದಂ ತರಲಕಂಕಣಾವಲಿ ವಿಶೇಷವಾಚಾಲಿತಂ
ಮನೋಹರತಿ ಸುಭ್ರುವಃ ಕಿಮಪಿ ಕಂದುಕಕ್ರೀಡನಂ ॥

ವಿದ್ಧಶಾಲಭಂಜಿಕಾ—೩—೬

ಕಾಲಿನ ಅಂದುಗೆಯ ಝಣತ್ಕಾರದಿಂದಲೂ, ಆಡುತ್ತಿರುವಾಗ ಒಡ್ಯಾಣಕ್ಕೆ ತಗುಲಿ ತಗುಲಿ ಎಗರುತ್ತಿರುವ ಹಾರಗಳ ಚಟಚಟವೆಂಬ ಅನುಕರಣ ಶಬ್ದಗಳಿಂದಲೂ, "ಕೈಬಳೆಗಳ ಮನೋಹರವಾದ ಶಬ್ದತಾನದಿಂದಲೂ ಕೂಡಿರುವ ರಮಣಿಯರ ಕಂದುಕಕ್ರೀಡೆಯು ಹೃದಯಂಗಮವಾಗಿರುವುದು.

# ಆ ರ್ಯ ಕ್ಷೇ ಮೀ ಶ್ವ ರ

ಇವನು ವಿಜಯಪ್ರಕೋಷ್ಠನ ಮುಮ್ಮಗನೆಂಬುದು " ಯಥಾ ಕಿಲ ವಿಜಯಪ್ರಕೋಷ್ಠಪ್ರಣಪ್ತುಃ ಕವೇರಾರ್ಯಕ್ಷೇಮೀಶ್ವರಸ್ಯ ಕೃತಿರಭಿನವಂ ಚಂಡಕೌಶಿಕಂ " ಎಂಬುದರ ಪ್ರಸ್ತಾವನೆಯಿಂದ ತಿಳಿಯುಬರುತ್ತದೆ. ಇವನು ಕನೋಜಿನವನು. ಬ್ರಾಹ್ಮಣನು. ನಾಮಸಾಮ್ಯದಿಂದ ಕ್ಷೇಮೇಂದ್ರನೂ ಕ್ಷೇಮೀಶ್ವರನೂ ಒಂದೇ ವ್ಯಕ್ತಿಯೆಂದು ಕೆಲವರು ತರ್ಕಿಸುವರು. ಕ್ಷೇಮೀಶ್ವರನು ತಾನು ವಿಜಯಪ್ರಕೋಷ್ಠನ ಮುಮ್ಮಗನೆಂದೂ ಕ್ಷೇಮೇಂದ್ರನು ಸಿಂಧುವಿನ ಮುಮ್ಮಗನೆಂದೂ ಪ್ರಕಾಶೇಂದ್ರನ ಮಗನೆಂದೂ ಹೇಳಿಕೊಂಡಿರುವುದರಿಂದ ಇವರೀರ್ವರೂ ಭಿನ್ನ ವ್ಯಕ್ತಿಗಳೆಂದು ನಿಶ್ಚಯವಾಗುತ್ತದೆ. ಅದನ್ನು ಹೀಗೆ ಸಮರ್ಥಿಸಬಹುದು.

| | ಕ್ಷೇಮೀಶ್ವರ. | ಕ್ಷೇಮೇಂದ್ರ |
|---|---|---|
| ೧. | ತಾನು ವಿಜಯಪ್ರಕೋಷ್ಠನ ಮುಮ್ಮಗನೆಂಬುದು ಹೊರ್ತು ತಾಯಿ ತಂದೆಗಳ ಹೆಸರನ್ನು ಹೇಳಿಕೊಂಡಿರುವುದಿಲ್ಲ. | ಇವನು ಬರೆದುದಾದ 'ಔಚಿತ್ಯವಿಚಾರಚರ್ಚಾ' ಎಂಬ ಗ್ರಂಥದಲ್ಲಿ ತನ್ನ ವಂಶಾವಳಿ, ತಾಯಿ ತಂದೆಗಳ ಹೆಸರನ್ನು ಹೇಳಿಕೊಂಡಿರುವನು. |
| ೨. | ಇವನು ಆರ್ಯಶಬ್ದದಿಂದ ವಿಶೇಷಿಸಿಹೇಳಲ್ಪಟ್ಟಿರುವನು. | ಇವನು ವ್ಯಾಸದಾಸನೆಂಬ ಹೆಸರಿನಿಂದ ಮಾತ್ರವೇ ಪರಿಚಿತನು. |
| ೩. | ಇವನು ಬರೆದುದಾದ 'ಚಂಡಕೌಶಿಕ' ಎಂಬ ಏಕಗ್ರಂಥಮಾತ್ರದಿಂದ ಪ್ರಸಿದ್ಧನು. | ಇವನು ಬಹುಗ್ರಂಥಕರ್ತೃವೆಂದೆನಿಸಿಕೊಂಡಿರುವನು. |
| ೪. | ಇವನು ಮಹೀಪಾಲದೇವನ ಆಶ್ರಿತನೆಂದು ಹೇಳಿಕೊಂಡಿರುವನು. | ಇವನು ಕಾಶ್ಮೀರದ ಅರಸನಾದ ಅನಂತರಾಜನ ಸಮಕಾಲೀನನೆಂದು ಹೇಳಿಕೊಂಡಿರುವನು. |
| ೫ | ಮಹೀಪಾಲನ ಆಳ್ವಿಕೆಯಕಾಲವು ಕ್ರಿ. ಶ. ೯೧೦---೯೪೦. | ಅನಂತರಾಜನ ಆಳ್ವಿಕೆಯ ಕಾಲವು ಕ್ರಿ. ಶ. ೧೦೨೮ — ೧೦೬೦. |
| ೬. | ಇವನು ಕನೋಜಿನವನು | ಇವನು ಕಾಶ್ಮೀರದವನು. |

**ಕಾಲ** :—ಇವನು ಕನೋಜಿನಲ್ಲಿ ಸುಮಾರು ಕ್ರಿ. ಶ. ೯೧೦—೯೪೦ರಲ್ಲಿ ಕ್ಷಿತಿಪಾಲನೆಂಬಾಪರನಾಮಕನಾದ ಮಹೀಪಾಲನ ಆಶ್ರಯದಲ್ಲಿದ್ದವನೆಂದೂ ಇವನು ಹಿಂದಣಜನ್ಮದಲ್ಲಿ ಚಂದ್ರಗುಪ್ತನಾಗಿದ್ದಂತೆಯೂ ಆಗಣನಂದರು ಈಗ ಕರ್ಣಾಟಕರಾಜರಾಗಿ ಹುಟ್ಟಿರುವುದಾಗಿ.—" ಅಲಮತಿವಿಸ್ತರೇಣ, ಅಧಿಷ್ಠ್ಯೋಽಸ್ಮಿ ದುಷ್ಟಾಮಾತ್ಯವಾಗುರ್ಾವಲಂಘ್ಯ ಸಿಂಹರಂಹಸಾ ಭ್ರೂಭಂಗಲೀಲಾಸಮುದ್ಧೃತಾಶೇಷಕಂಟಕೇನ ಸಮರಸಾಗರಾಂತ ಭರ್ಮದ್ಭುಜದಂಡಮಂದರಾಕೃಷ್ಟಲಕ್ಷ್ಮೀಸ್ವ

ಯಂವರಪ್ರಣಯಿನಾ ಶ್ರೀಮಹೀಪಾಲದೇವೇನ ಯಸ್ಯೇಮಾಂಪುರಾವಿದಃ ಪ್ರಶಸ್ತಿ ಗಾಥಾಮುದಾಹರಂತಿ" ಎಂದೂ—

ಯಃ ಸಂಶ್ರಿತ್ಯ ಪ್ರಕೃತಿಗಹನಾಮಾರ್ಯ ಚಾಣಕ್ಯನೀತಿಂ
ಜಿತ್ವಾ ನಂದಾನ್ ಕುಸುಮನಗರಂ ಚಂದ್ರಗುಪ್ತೋ ಜಿಗಾಯ |
ಕರ್ಣಾಟತ್ವಂ ಧ್ರುವಮುಪಗತಾನದ್ಯ ತಾನೇವ ಹಂತುಂ
ದೋರ್ದರ್ಪಾಢ್ಯಃ ಸ ಪುನರಭವಚ್ಛ್ರೀಮಹೀಪಾಲದೇವಃ ||
ಚಂಡಕೌಶಿಕ. ಅಂಕ ೧—೪.

ಎಂದು ನಾಟಕದಲ್ಲಿ ವರ್ಣಿತವಾಗಿರುವುದರಿಂದ, ಕರ್ಣಾಟಕ ರಾಜರಾದ ರಾಷ್ಟ್ರಕೂಟ ದೊರೆಗಳಲ್ಲಿ ಮೂರನೆಯ ಇಂದ್ರನೆಂಬುವನಿಗೂ ಕನೋಜಿನಲ್ಲಿ ಆಗ ಆಳುತ್ತಿದ್ದ ಮಹೀಪಾಲನಿಗೂ ವೈರವಿದ್ದು ಕ್ರಿ. ಶ. ೯೧೬ರಲ್ಲಿ ಯುದ್ಧವುನಡೆದು ಇಂದ್ರನು ಪರಾಜಿತನಾದುದಾಗಿ¶ ತಿಳಿಯಬರುವುದರಿಂದ ಇವನು ಕ್ರಿ. ಶ. ಹತ್ತನೆಯ ಶತಮಾನದಲ್ಲಿದ್ದವನೆಂಬುದು ಸ್ಪಷ್ಟವು.

**ಗ್ರಂಥ:**—ಇವನು ಚಂಡಾಕೌಶಿಕವೆಂಬ ನಾಟಕವನ್ನು ಬರೆದಿರುವನು. ಇವನು ಮಹಾಭಾರತದ ನಳನ ಕಥೆಯನ್ನು ತೆಗೆದುಕೊಂಡು "ನೈಷಧಾನಂದ" ಎಂಬ ಏಳು ಅಂಕಗಳುಳ್ಳ ಬೇರೊಂದು ನಾಟಕವನ್ನು ಬರೆದಿರುವುದಾಗಿ ಡಾ|| ಎ. ಬಿ. ಕೀತರವರು ಹೇಳಿರುವರು§ ಇದಾವುದೆಂಬುದು ನಮಗೆ ತಿಳಿಯದು.

**ಚಂಡಕೌಶಿಕ ನಾಟಕ:**—ಇದರಲ್ಲಿ ೫ ಅಂಕಗಳಿರುವುವು. ಹೆಸರುಮಾತ್ರದಿಂದಲೇ ಕಥಾವಿಚಾರವನ್ನು ಸೂಚಿಸುವುದಾದ ನಾಗಾನಂದ, ಮುದ್ರಾರಾಕ್ಷಸ ವೇಣೀಸಂಹಾರ ನಾಟಕಗಳಂತೆ ತನ್ನ ತಪೋಭಂಗವಾದುದಕ್ಕಾಗಿ ರಾಜನಾದ ಹರಿಶ್ಚಂದ್ರನಲ್ಲಿ ಖತಿಗೊಂಡು ಅತ್ಯಂತ ಕಾಠಿಣ್ಯದಿಂದವರ್ತಿಸಿದ ಕೌಶಿಕನ (ವಿಶ್ವಾಮಿತ್ರ) ವರ್ಣನವಿರುವುದರಿಂದ ಕವಿಯು ಇದನ್ನು **ಚಂಡಕೌಶಿಕ** ವೆಂದೇ ಕರೆದಿರುವನು. ಕಥೆಯನ್ನು ಮಾರ್ಕಂಡೇಯ ಪುರಾಣದಿಂದ ಆರಿಸಿಕೊಂಡಿರುವನು.' ದೇವೀ ಭಾಗವತದಲ್ಲಿಯೂ ಹರಿಶ್ಚಂದ್ರೋಪಾಖ್ಯಾನವಿರುವುದು. ಇವನು ಪುರಾಣ ಕಥೆಯನ್ನು ತೆಗೆದುಕೊಂಡಿರುವನಾದರೂ ಕವಿಸಮಯಕ್ಕೆ ತಕ್ಕಂತೆ ಸುಧಾರಿಸಿ ಹೇಳಿರುವನು. ಇತಿಹಾಸರತ್ನಭಾಂಡಾಗಾರವಾದ ಮಹಾಭಾರತದಲ್ಲಿ ಹರಿಶ್ಚಂದ್ರನ ಕಥೆಯು ಹೇಳಲ್ಪಡದೇ ಇರುವುದರಿಂದ ಪ್ರಕ್ಷಿಪ್ತ ಕಥೆಯೆಂದು ಕೆಲವರ ತರ್ಕವಿರುವುದು.

ಚಂಡಕೌಶಿಕ ಪ್ರಸ್ತಾವನಾ ಪುಟ ೪.

¶ The Indian Antiquary Vol. 37 P. 138.

§ Dr. A. B. Keiths The Sanskrit Drama P. 241.

ಆದರೆ ಹೀಗೆಹೇಳುವುದು ಸಮಂಜಸವಾಗದು. ಕ್ಲೇಶಸಹಿಷ್ಣುತೆ ಧರ್ಮಶೀಲತೆ ಕರ್ಮನಿಷ್ಠತೆ ಇವೇ ಮೊದಲಾದವುಗಳಿಂದ ಕೂಡಿ ನೀತಿಬೋಧಕವಾದ ಕಥೆಗಳನೇಕಗಳಲ್ಲಿ ನಳದಮಯಂತಿಯರ ಕಥೆ, ಮತ್ತು ಹರಿಶ್ಚಂದ್ರೋಪಾಖ್ಯಾನವು ಮುಖ್ಯವೆಂದು ಹೇಳುವುದಾದರೂ ನಳೋಪಾಖ್ಯಾನವು ಎಷ್ಟು ಪ್ರಾಚೀನವೋ ಹರಿಶ್ಚಂದ್ರೋಪಾಖ್ಯಾನವು ಅಷ್ಟು ಅರ್ವಾಚೀನವೆಂದು ತೋರುವುದು. ಆದಿಕಾವ್ಯವಾದ ಶ್ರೀಮದ್ರಾಮಾಯಣದಲ್ಲಿ ಒಂದುಕಡೆ "ನಳದಮಯಂತೀವ" ಎಂದು ಹೇಳಿರುವುದು ಕಂಡುಬರುವುದರಿಂದ ನಳೋಪಾಖ್ಯಾನದ ಪ್ರಾಚೀನತ್ವವು ವ್ಯಕ್ತವಾಗುವುದು. ನಳದಮಯಂತಿಯರ ಕಥೆಯನ್ನು ವಿಧವಿಧವಾಗಿ ಬಣ್ಣಿಸಿ ಕಣ್ಣೀರ್ಗರೆಯುವಂತೆ ಹೇಳುವುದರಲ್ಲಿ ಭಾರತೀಯ ಕವಿಗಳು ತಮ್ಮಪ್ರತಿಭೆ ಎಲ್ಲವನ್ನೂ ತೋರಿಸಿ ಸ್ತುತಿಶೀಲರಾಗಿರುವರು. ಕಥೆಯಂತೆ (೧) ವಿಶ್ವಾಮಿತ್ರನೂ, ವಶಿಷ್ಠನೂ ಮತ್ತು ಹರಿಶ್ಚಂದ್ರನೂ ಸಮಕಾಲೀನರೆನ್ನಬೇಕಾಗುವುದು. (೨) ರಾಜಸೂಯಯಾಗವನ್ನು ಧರ್ಮನಂದನನು ಮಾಡಿದುದಾಗಿ ಮಹಾಭಾರತವು ಹೇಳುವುದು. (೩) ತ್ರೇತಾಯುಗದಲ್ಲಿ ಶ್ರೀಮದ್ರಾಮಾಯಣದಲ್ಲಿ ವಶಿಷ್ಠ, ವಿಶ್ವಾಮಿತ್ರರ ಸಮಕಾಲೀನತ್ವವು ಸೂಚಿತವಾಗಿರುವುದು. ಹೀಗೆ ಸಮಯವಿನಿಯೋಗ ವಿಚಾರದಲ್ಲಿ ಎಷ್ಟೋ ಅಂತರಾಯವು ತೋರಿಬರುವುದರಿಂದ ವಿಚಾರವು ಚರ್ಚಾಸ್ಪದವಾಗಿರುವುದಲ್ಲದೆ,—

(೧) ಹರಿಶ್ಚಂದ್ರನೆಂಬ ರಾಜನು ಒಬ್ಬನೇ ಅಥವಾ ಹಲವರೇ? (೨) ಬ್ರಹ್ಮಸೃಷ್ಟಿಗೆ ಪ್ರತಿಸೃಷ್ಟಿಯನ್ನಾಚರಿಸಬಲ್ಲ ನಿಗ್ರಹಾನುಗ್ರಹಶಕ್ತನಾದ ವಿಶ್ವಾಮಿತ್ರನು ರಾಜಸೂಯಯಾಗದ ದಕ್ಷಿಣಾಧನಕ್ಕಾಗಿ ರಾಜನ ಬಳಿಗೆಬಂದು ಧನವನ್ನು ಯಾಚಿಸಬೇಕಾದಕೌತುಕವಾದರೂ ಏನು? (೩) ದಾರಾಪುತ್ರಾದಿಗಳಿಂದ ರಾಜನನ್ನು ದೂರಮಾಡಿ ಅವನನ್ನು ಕೋಟಲೆಗೆ ಈಡುಮಾಡಿ ಆತ್ಮವಿಕ್ರಯದಿಂದಾದರೂ ದ್ರವ್ಯಾರ್ಜನೆಯನ್ನು ಮಾಡಿಕೊಡಲೇಬೇಕೆಂಬ ಬಲುಮೆಯ ಸನ್ನಿವೇಶವೇನಾದರೂ ಇದ್ದಿತೇ ಹೇಗೆ? ಎಂಬಿವೇ ಮೊದಲಾದ ವಿಚಾರಗಳಿಗೆ ಪ್ರಮಾಣಗಳನ್ನೊದಗಿಸಿ ಹೇಳುವುದು ಸುಲಭವಲ್ಲ. ಇವುಗಳೆಲ್ಲವನ್ನೂ ಸಮದೃಷ್ಟಿಯಿಂದ ಪರಿಶೀಲಿಸಿದರೆ ಋಣಭಾರಕ್ಕಿಂತ ಭಾರವಾದುದು ಮತ್ತಾವುದೂ ಇಲ್ಲವೆಂದೂ, ಋಣಭಾರಸಹನವು ಬಹುಕಷ್ಟವೆಂದೂ, ಸಮಾಜಕ್ಷೋಭೆಗೆ ಕಾರಣವೆಂದೂ, ಆತ್ಮಶಾಂತಿಗೆ ವಿಘ್ನಕಾರಿಯೆಂದೂ, ಸ್ವಾತಂತ್ರ್ಯಹೀನದ ಮೂಲವೆಂದೂ, ಗ್ರಹಚಾರದೋಷದಿಂದ ಋಣಗ್ರಸ್ತನಾದವನು ಹೇಗಾದರೂ ತನ್ನ ಸರ್ವತ್ಯಾಗದಿಂದ ಋಣಮುಕ್ತನಾಗಲೇಬೇಕೆಂಬುದನ್ನೂ $ ಋಣವು ಬಹುಹೇಯವೆಂಬುದನ್ನು ಸಮಾಜಕ್ಕೆ ಪ್ರತ್ಯಕ್ಷವಾಗಿ ತೋರಿಸಬೇಕೆಂಬ ಉದ್ದೇಶದಿಂದ ಇಂತಹ ನೀತಿಬೋಧಕ ನಾಟಕರಚನೆಯಾಗಿರ

$ ಪುನರ್ಜನ್ಮದಲ್ಲಿ ನಂಬಿಕೆ ಇರುವವರು ಋಣವನ್ನು ತೀರಿಸುವುದಕ್ಕಾದರೂ ಪುನಃ ಜನ್ಮಧಾರಣಮಾಡಲೇಬೇಕೆಂದು ತರ್ಕಿಸುವರು.

ಬೇಕೆಂದು ತೋರುತ್ತದೆ. ಇದರಲ್ಲಿ ಋಣಭಾರದ ಅವಹೇಳನ, ಪರಸೇವೆಯಕಷ್ಟ, ಸತ್ಯದಬೆಲೆ ಇವು ಪ್ರತಿಯೊಬ್ಬರೂ ಕಣ್ಣೀರ್ಗರೆವಂತೆ ಚಿತ್ರಿಸಲ್ಪಟ್ಟು ಲೋಕಾನುಭವವನ್ನು ನೈಸರ್ಗಿಕರೀತಿಯಲ್ಲಿ ತೋರುವುದಾಗಿದೆ.

ಸೂರ್ಯಕುಲೋತ್ಪನ್ನನಾದ ತ್ರಿಶಂಕುವಿನ ಮಗ ಹರಿಶ್ಚಂದ್ರನ ಸತ್ಯಸಂಧತೆಯ ವಿಚಾರವಾಗಿ ಪ್ರಶಂಸಿಸುತ್ತಿರುವ ವಶಿಷ್ಠನ ಮಾತನ್ನು ಕೇಳಿ ಕೋಪಗೊಂಡ ಕೌಶಿಕನು ಇದರ ನೆಲೆಯನ್ನು ತಿಳಿಯಲಾಶಿಸಿ ರಾಜನಿಗೆ ಬೇಕಾದಷ್ಟು ತೊಂದರೆಗಳನ್ನು ಕೊಟ್ಟುದಲ್ಲದೆ ರಾಜ್ಯಪದಭ್ರಷ್ಟನನ್ನಾಗಿ ಮಾಡಲ್ಪಟ್ಟನಾದರೂ ಸತಿಸುತರು ವಿಕ್ರಯಿಸಲ್ಪಟ್ಟರಾದರೂ ಹೆಚ್ಚೇಕೆ! ಶ್ಮಶಾನದ ತೆರಿಗೆಯನ್ನು ಕೊಡಲು ಗತಿಕಾಣದ ತನ್ನ ಹೆಂಡತಿಯನ್ನು ಮೃತನಾದ ತನ್ನ ಮಗನ ಹೊದಿಕೆಯನ್ನಾದರೂ ಕೊಡಬೇಕೆಂದು ಕೇಳುವಷ್ಟು ಕಾರ್ಪಣ್ಯಕ್ಕೆ ಈಡುಮಾಡಲ್ಪಟ್ಟನಾದರೂ ಸತ್ಯಪಥದಿಂದ ಕೊಂಚವೂ ಹಿಮ್ಮೆಟ್ಟದ ರಾಜನನ್ನು ನೋಡಿ ಅವನ ದೃಢಸಂಕಲ್ಪಕ್ಕೆ ಮೆಚ್ಚಿ ಮೃತನಾದ ಮಗನನ್ನು ಬದುಕಿಸಿ ಅವನ ರಾಜ್ಯವನ್ನು ಅವನಿಗೆ ಪುನಃ ಕೊಟ್ಟು ಸಂತೋಷಗೊಳಿಸಿದನೆಂಬುದೇ ಕಥಾವಸ್ತು.

ನಾಟಕದಲ್ಲಿ ಶೃಂಗಾರರಸವಾಗಲಿ ಅಥವಾ ವೀರರಸವಾಗಲಿ ಇದ್ದೇ ತೀರಬೇಕೆಂಬ ಲಾಕ್ಷಣಿಕ ನಿಯಮದಂತೆ ಇದರಲ್ಲಿ ವೀರರಸವು ಪ್ರಧಾನವಾಗಿರುವುದೆಂದು ಹೇಳಬೇಕಾಗುವುದು. ಅದರಲ್ಲಿಯೂ **ದಾನವೀರ**§ರಸವು ಮೂರ್ತಿಮತ್ತಾಗಿರುವುದು. ವೀರರಸದಲ್ಲಿ ದಾನವೀರ, ಧರ್ಮವೀರ, ಯುದ್ಧವೀರ, ದಯಾವೀರ, ಎಂಬ ನಾಲ್ಕು ವಿಧಗಳಿರುವುವು. ಶೋಕರಸಸ್ಥಾಯಿಯು ಕರುಣರಸವೆಂದೂ ಈ ರೂಪಕವು ಸಾದ್ಯಂತ ಶೋಕಮಯವಾಗಿರುವುದರಿಂದ ಇದರ ರಸವು ಕರುಣರಸವೆಂದೂ ಕೆಲವರ ತರ್ಕವಿರುವುದು. ಕರುಣರಸವೆಂದು ಹೇಳುವುದಾದರೆ ನಾಟಕ ಪ್ರಯೋಜನವೂ ಕವಿಯ ಆಶಯವೂ ಮಾರ್ಪಡುವುದಾದುದರಿಂದ ಹಾಗೆ ಹೇಳುವುದು ಸರಿಯಾಗಿ ನಮಗೆ ತೋರುವುದಿಲ್ಲ.

(೧) ಈ ನಾಟಕದಲ್ಲಿ ಶೃಂಗಾರರಸಕ್ಕೆ ಕಾರಣವೇ ಇಲ್ಲದಿದ್ದರೂ ನಾಟಕದಲ್ಲಿ ಶೃಂಗಾರರಸವು ಇರಲೇಬೇಕೆಂದು ಬಹು ಯತ್ನಪೂರ್ವಕವಾಗಿ ಮೊದಲನೆಯ ಅಂಕದಲ್ಲಿಶೃಂಗಾರರಸವು ಯೋಜಿತವಾಗಿರುವುದು. (೨) ಪಾತ್ರಗಳಲ್ಲಿ ನಾಯಿಕಾನಾಯ

§ ದಾನವೀರ ರಸಲಕ್ಷಣಂ:—

ಸ್ಮಿತಪೂರ್ವಾಭಿಭಾಷಿತ್ವಂ ಸ್ಮಿತಪೂರ್ವಂಚವೀಕ್ಷಣಂ
ಪ್ರಸಾದಾದ್ಬಹುದಾತೃತ್ವಂ ತದ್ವಾಚಾಮನುಮೋದನಂ
ಗುಣಾಗುಣವಿಚಾರಾದ್ಯಾ ಅನುಭಾವಾಸ್ಸಮಿರಿತಾಃ
ದಾನವೀರೇಧೃತಿರ್ಹರ್ಷ ಇತ್ಯಾದ್ಯಾವ್ಯಭಿಚಾರಿಣಃ (ಭರತರಸ ಪ್ರಕರಣ)

ಕರ ಗುಣತೋರಾಣಿಕೆಯಿಂದ ಕವಿಚಾತುರ್ಯಕ್ಕೆ ಭಂಗಬರುವಂತಿದೆ. (೩) ನಿದ್ರಾ ನಿದ್ರ, ಫಲಾಫಲ, ಗುಣಾವಗುಣಗಳ ಹೆಗ್ಗಳಿಕೆಯು ಕಥಾ ನಾಯಕನೇ ಹೇಳಿರುವಂತೆ ಬರೆದಿರುವುದಕ್ಕಿಂತಲೂ ಮತ್ತಾರಿಂದಾದರೂ ಹೇಳಿಸಿದ್ದರೆ ಚೆಲುವಾಗಿದ್ದಿತಾಗಿ ತೋರುತ್ತದೆ. (೪) ಸೂಕರ ವಿಚಾರವಾಗಿ ಮಿತಿಮೀರಿ ವರ್ಣಿಸಿರುವುದು ಹೆಚ್ಚೆಂದು ತೋರುತ್ತದೆ. ಅಥವಾ ಅನುಪಯುಕ್ತವೆಂದರೂ ಸಲ್ಲುವುದು. (೫)ಅನಿಷ್ಟ ಪರಿಹಾರಾರ್ಥವಾಗಿ ಆಚರಿಸಲ್ಪಟ್ಟ ಶಾಂತಿಕರ್ಮಾಂಗವಾದ ಜಾಗರಣೆಯ ಅನಂತರ ಪ್ರಾತಃಕಾಲದಲ್ಲಿ ಪ್ರೈಬ್ಯೆಯವಿರಹಪೀಡನ ಸೂಚನೆಯು ಧರ್ಮವಿರುದ್ಧವಾದುದಾಗಿ ನಿಷ್ಕಾಮಕರ್ಮಫಲಪ್ರಾಪ್ತಿಗೆ ಕುಂದನ್ನುಂಟುಮಾಡುವುದಾದುದರಿಂದ ಉಚಿತವಾದುದಾಗಿ ನಮಗೆ ತೋರುವದಿಲ್ಲ.

(೬) ಮಹಾತ್ಮನಾದ ಮುಖ್ಯಾಮಾತ್ಯಚಾಣಕ್ಯನತಂತ್ರದಿಂದ ಚಂದ್ರಗುಪ್ತನು ನವನಂದರನ್ನು ಜಯಿಸಿ ಕುಸುಮಪುರವನ್ನು ವಶಪಡಿಸಿಕೊಂಡಂತೆ ಚಂದ್ರಗುಪ್ತನೇ ಈಗ ಮಹೀಪಾಲದೇವಾಭಿಧಾನದಿಂದವತರಿಸಿ ನಂದರೂಪರಾದ ಕರ್ಣಾಟಕ ರಾಜರನ್ನು ನಾಶಗೊಳಿಸುವುದಕ್ಕಾಗಿ ಜನ್ಮಿಸಿದುದಾಗಿ ಹೇಳಲ್ಪಟ್ಟಿದೆ. ಈ ಉಪಮಾನವು ಅಷ್ಟು ಸೊಗಸೆಂದು ನಮಗೆ ತೋರುವುದಿಲ್ಲ. ಏಕೆಂದರೆ ಕರ್ಣಾಟಕ ರಾಜರು ನವನಂದನರಂತೆ ಒಂಭತ್ತು ಜನರಿರಬೇಕು. ಚಂದ್ರಗುಪ್ತನನ್ನು ಮಹೀಪಾಲನೆನ್ನುವುದಾದರೆ ಆರ್ಯಚಾಣಕ್ಯನಬದಲು ಇಲ್ಲಿ ಯಾರೆಂಬುದು ತಿಳಿಯದಾಗಿದೆ.

ಇದರ ಕೆಲವು ಶ್ಲೋಕಗಳನ್ನು ಮಾದರಿಗಾಗಿ ಬರೆಯುವೆವು :—

ಲೋಕದಲ್ಲಿ ಜೀವಿಗಳಿಗೆಲ್ಲಾ ಶರೀರಾರೋಗ್ಯಕ್ಕೆ ನಿದ್ರೆಯೇಕಾರಣವೆಂಬುದಕ್ಕೆ:-

ಚಿತ್ತಂ ಪ್ರಸಾದಯತಿ ಲಾಘವ ಮಾದಧಾತಿ
ಪ್ರತ್ಯಂಗ ಮುಜ್ಜ್ವಲಯತಿ ಪ್ರತಿಭಾ ವಿಶೇಷಂ
ದೋಷಾನುದಸ್ಯತಿ ಕರೋತಿಚ ಧಾತುಸಾಮ್ಯಂ
ಆನಂದಮರ್ಪಯತಿ ಯೋಗವಿಶೇಷಗಮ್ಯಂ || ಚಂಡಕೌಶಿಕ ೧—೮

ನಿದ್ರೆಯು ಮನಸ್ಸನ್ನು ನಿರ್ಮಲ ಮಾಡುವುದು. ಅವಯವಗಳಿಗೆ ಲವಲವಿಕೆಯನ್ನುಂಟುಮಾಡುವುದು. ಶರೀರದ ದೋಷಗಳನ್ನು ನಾಶಗೊಳಿಸಿ ಶರೀರ

* ಇಂತಹ ಸಂಭವವು ಒದಗಿದಾಗ ಮಹಾಕವಿ ಕಾಳಿದಾಸನು ತನ್ನ ಶಾಕುಂತಲನಾಟಕದಲ್ಲಿ ಕವಿಸಮಯವು ಕೆಡದಂತೆ, ಧರ್ಮಲೋಪವಾಗದಂತೆ, ಓದುಗರು ಅಚ್ಚರಿಪಡುವಂತೆ, ಚಕ್ರವಾಕಮಿಥುನವನ್ನು ಹೇಗೆ ಕಲ್ಪಿಸಿ ಹೇಳಿರುವನೆಂಬುದನ್ನು ನೋಡಿ.
(ಶಾಕುಂತಲನಾಟಕ ಅಂಕ ೩)

ಧಾತುವನ್ನು ಸಮಸ್ಥಿತಿಯಲ್ಲಿರಿಸಿ ಯೋಗಗಮ್ಯವಾದ ಆನಂದವನ್ನುಂಟುಮಾಡು ವುದು. ನಿದ್ರಾಭಂಗದಿಂದ ಆಗುವ ಅನರ್ಥಗಳು :—

ನಿದ್ರಾಲಸಂ ಭಂಗಮುಪೈತಿ ಗಾತ್ರಂ
ಖೇದಾತಿಭಾರಸ್ತಿಮಿತಂ ಮನಶ್ಚ
ಮುಹುರ್ಮುಹುರ್ವಕ್ತ್ರಮುಪೈತಿ ಜೃಂಭಾಂ
ಬಾಲಾತಪಾಲೋಕಸಹಾ ನ ದೃಷ್ಟಿಃ || ೧—೯

ನಿದ್ರೆಯು ಇಲ್ಲದುದರಿಂದ ಶರೀರದಲ್ಲಿ ಆಲಸಿಕೆಯುಂಟಾಗುವುದು. ಖೇದ ದಿಂದಮನಸ್ಸು ಜಡವಾಗುವುದು. ಪದೇ ಪದೇ ಆಕಳಿಕೆಯನ್ನುಂಟುಮಾಡುವುದು. ದೃಷ್ಟಿಯು ಬಾಲಸೂರ್ಯನನ್ನು ಅಥವಾ ಎಳೆಯ ಬಿಸಿಲನ್ನು ನೋಡದಂತಾಗು ವುದು.

ಕ್ಷತ್ರಿಯರ ಧರ್ಮನಿರೂಪಣವು ಹೀಗಿರುವುದು: —

ದಾತವ್ಯಂ ರಕ್ಷಿತವ್ಯಂಚ ಯೋದ್ಧವ್ಯಂ ಕ್ಷತ್ರಿಯೈರಿತಿ
ಗೀತಃ ಪುರಾಣೈರ್ಮುನಿಭಿ ರೇಷ ಧರ್ಮಸ್ಸನಾತನಃ || ೨—೨೯

ಕೊಡತಕ್ಕದ್ದು; ರಕ್ಷಿಸತಕ್ಕದ್ದು; ಯುದ್ಧಮಾಡತಕ್ಕದ್ದು ಇವು ಮೂರೂ ಕ್ಷತ್ರಿಯನ ಸನಾತನ ಧರ್ಮಗಳು. ಯಾರಿಗೆ ಕೊಡತಕ್ಕದು? ಯಾರೊಡನೆ ಯುದ್ಧ ವನ್ನು ಮಾಡತಕ್ಕದೆಂದು ಕೇಳಿದ ವಿಶ್ವಾಮಿತ್ರನನ್ನು ಕುರಿತು ಹರಿಶ್ಚಂದ್ರನು ಹೇಳುವುದು.—ಗುಣವಂತರಾದ ಶ್ರೋತ್ರಿಯರಲ್ಲಿ ಕೊಡತಕ್ಕದು. ಭಯಾತ ರನ್ನು ರಕ್ಷಿಸತಕ್ಕದು. ಶತ್ರುಗಳೊಡನೆ ಯುದ್ಧಮಾಡತಕ್ಕದು.

ಸುಖದುಃಖ ವಿವೇಚನೆ.—

ಸುಖಂವಾದುಃಖಂವಾಕಿಮಿವಹಿಜಗತ್ಯಸ್ತಿನಿಯತಂ
ವಿವೇಕಪ್ರಧ್ವಂಸಾದ್ಭವತಿ ಸುಖದುಃಖವ್ಯತಿಕರಃ
ಮನೋವೃತ್ತಿಃ ಪುಂಸಾಂಜಗತಿಜಯಿನೀಕಾಪಿಮಹತಾಂ
ಯಯಾದುಃಖಂದುಃಖಂ ಸುಖಮಪಿಸುಖಂವಾನುಭವತಿ || ೪—೨೫

ಪ್ರಪಂಚದಲ್ಲಿ ಸುಖವೇ ಆಗಲಿ ದುಃಖವೇ ಆಗಲಿ ಯಾವುದೂ ಸ್ಥಿರವಾದು ದಲ್ಲ. ಇದು ಸುಖ ಅದು ದುಃಖವೆಂಬ ವೈಲಕ್ಷಣ್ಯವು ವ್ಯಕ್ತಿಯ ವಿವೇಕಾಭಾವ (ಅವಿವೇಕ) ದಿಂದಾಗುವುವು. ಇಂತಹ ವಿಲಕ್ಷಣಕ್ಕೊಳಪಡದ ಮಹಾತ್ಮರ ಮನೋ ಧೈರ್ಯವೇ ಜಯಶೀಲವಾಗುವುದು. ಎಂದರೆ ವಿಪತ್ಪರಂಪರೆಗಳನ್ನು ದಾಟುವುದು

ಋಣಬಾಧೆಯಿಂದ ಸಂತಪ್ತನಾದ ಹರಿಶ್ಚಂದ್ರನ ಹೇಳಿಕೆ :—

ಲೋಕದ್ವಯಪ್ರತಿಭಯೈಕನಿದಾನಮೇತ
ದ್ಧಿಕ್ಪ್ರಾಣಿನಾಂ ಋಣಮಹೋ! ಪರಿಣಾಮಘೋರಂ

ಏಕಃ ಸ ಏವ ಹಿ ಪುಮಾನ್ ಪರಮಸ್ತಿ ಲೋಕೇ
ಕ್ರುದ್ಧಸ್ಯ ಯೇನ ಧನಿಕಸ್ಯ ಮುಖಂ ನ ದೃಷ್ಟಂ || ೩—೧೬

ಅಹೋಧಿಕ್ :—ಲೋಕದ್ವಯದಲ್ಲಿ ಅತ್ಯಂತಭೀತಿಯನ್ನೂ ಪರಿಣಾಮ ದಲ್ಲಿ ಅತ್ಯಂತ ದುಃಖವನ್ನೂ ಉಂಟುಮಾಡುವುದಾದ ಈ ಋಣಬಾಧೆಯು ಎಷ್ಟು ಘೋರವಾದುದು! ಯಾವನು ಕುಪಿತನಾದ ತನ್ನ ಸಾಲಗಾರನಿಂದ ಎಲ್ಲಿಯವರೆಗೆ ನೋಡಲ್ಪಡುವುದಿಲ್ಲವೋ ಅವನು ಮೂರು ಲೋಕಗಳಲ್ಲಿಯೂ ಧನ್ಯನೆಂದೇ ಹೇಳಬೇಕು.

ಶ್ಮಶಾನದ ಭೀಭತ್ಸತೆಯು ಹೀಗಿರುವುದು :—

ಇಮಾಮೂರ್ಛಂತ್ಯಂತಃ ಪ್ರತಿರವಭೃತಃ ಕರ್ಣಕಟವಃ
ಶಿವಾಃಕ್ರೂರಾಕ್ರಂದೈರಶಿವಪಟಹಾಡಂಬರರವಾಃ
ಜ್ವಲಂತ್ಯೇತೇ ತಾಪಸ್ಫುಟತನೃಕರೋಟೀಪುರದರೀ
ಲಸನ್ಮಸ್ತಿಷ್ಕಾತ್ತಾಸ್ತಿಮಿತಜಟಿಲಾಗ್ರಾ ಹುತಭುಜಃ || ೪—೮

ಅಹಹ! ಈ ಶ್ಮಶಾನದ ಇರವನ್ನೇನೆಂದು ಬಣ್ಣಿಸಲಿ. ಮರಣಸೂಚಕ ವಾದ ವಾದ್ಯಗಳಂತೆ ಕೇಳಬರುವ ನರಿಗಳ ಭಯಂಕರವಾದ ಕೂಗು ಈ ಶ್ಮಶಾನ ಪ್ರಾಂತರದಲ್ಲ ಪ್ರತಿಧ್ವನಿಯನ್ನು ಕೊಡುವುದರಿಂದ ಕರ್ಣಕಠೋರವಾಗಿದೆ. ಕಪಾ ಲವು ಸಿಡಿದು ರಂಧ್ರದಿಂದ ಸ್ರವಿಸುತ್ತಿರುವ ಮಸ್ತಿಷ್ಕದ ಬಿಂದುಗಳಿಂದ ಉರಿಯು ವೇಗಗೊಳಿಸಲ್ಪಟ್ಟುಹಾಗೆಯೇ ಕಡಿಮೆಯಾಗಿ ನಂದಿಹೋಗುತ್ತಿದೆ.

ಭಿನತ್ತ್ಯಕ್ಷ್ಣೋರ್ಮರ್ಮದ್ರಾಂ ಶಿರಸಿ ಚರಣೌನ್ಯಸ್ಯ ಕರಟಃ
ಶಿವಾ ಸೃಕ್ಪ್ರಾಂತೇ ಗ್ರಸತಿರಸನಾಗ್ರಂ ವಿಲುಠಿತಂ
ಛಿನತ್ತಿ ಶ್ವಾ ಮೇಢ್ರಂ ಪ್ರಥಯತಿ ಚ ಗೃಧ್ರೋತ್ರವಿವರಂ
ಯಥೇಷ್ಟವ್ಯಾಪಾರಾಸ್ತ್ವಯಿಕುಣಪ! ಯಚ್ಛ್ವಾಪದಗಣಾಃ || ೪—೯

ಹರಿಶ್ಚಂದ್ರನು ಮುಂದೆನಡೆದು ಹಾಯ್! ಈ ಶ್ಮಶಾನನಾಟಕೆಯು ನೋಡು ವುದಕ್ಕೆ ಜಿಹಾಸಾಸ್ಪದವಾಗಿರುವುದಾದರೂ ನೊಂದಿರುವ ಈ ಮನಸ್ಸಿಗೆ ಇಂಪಾ ಗಿಯೇ ತೋರುವುದು. ಎಂದು ಹೆಳುತ್ತ (ಎದುರುನಲ್ಲಿ ಕಂಡುಬರುವ ಒಂದಾ ನೊಂದು ಮೃತಕಳೇಬರವನ್ನುದ್ದೇಶಿಸಿ) ಎಲೈ! ಕುಣಪ! ನಿನ್ನಶರೀರವು ಮಾಂಸಾ ಹಾರಿಗಳಾದ ಮೃಗಪಕ್ಷಿಗಳಿಂದ ಯಥೇಚ್ಛವಾಗಿ ಭುಜಿಸಲ್ಪಡುವುದಾದುದರಿಂದ ನೀನೇಧನ್ಯನು ಹೇಗೆಂದರೆ ಇಗೋ! ಕಾಗೆಯು ನಿನ್ನತಲೆಯಮೇಲೆ ಕುಳಿತುಕೊಂಡು ನಿನ್ನಕಣ್ಣುರೆಪ್ಪೆಯನ್ನು ಗೀಳಿ ತೆರೆಯುತ್ತಿದೆ. ಕೊನೆಯಬಾಯಿಯಿಂದ ಹೊರ ಬಿದ್ದಿರುವನಾಲಿಗೆಯ ತುದಿಯನ್ನು ನರಿಗಳು ಕಚ್ಚಿತಿನ್ನುತ್ತಿವೆ. ನಾಯಿಗಳು ಮರ್ಮ ಸ್ಥಾನವನ್ನು ಕಚ್ಚಿ ಎಳೆಯುತ್ತಿವೆ. ರಣಹದ್ದುಗಳು ರಂಧ್ರವನ್ನು ತಮ್ಮ ಕೊಕ್ಕಿ

ನಿಂದ ಎಳೆದೆಳೆದು ದೊಡ್ಡದಾಗಿ ಮಾಡುತ್ತಿವೆ. ಹೀಗೆ ಮಾಂಸಾಹಾರಿಗಳಾದ ಈ ಜಂತುಗಳು ನಿನ್ನ ಶರೀರವನ್ನು ಭುಂಜಿಸಿ ಯಥೇಷ್ಟವಾಗಿ ವಿಹರಿಸುತ್ತಿವೆ.

ಶರೀರನಿಸ್ಸಾರತೆಯ ವರ್ಣನವು ಹೀಗಿರುವುದು;—

ತನ್ಮಧ್ಯಂತದುರಸ್ತದೇವ ವದನಂ ತೇ ಲೋಚನೇ ತೇ ಭ್ರುವೌ
ಜಾತಂ ಸರ್ವಮಮೇಧ್ಯಶೋಣಿತವಸಾಮಾಂಸಾಸ್ಥಿ ಲಾಲಾಮಯಂ
ಭೀರೂಣಾಂ ಭಯದಂ ಕೃಪಾಸ್ಪದಮಿದಂ ವಿದ್ಯಾವಿನೀತಾತ್ಮನಾಂ
ತನ್ಮೂರ್ಖೈಃ ಕ್ರಿಯತೇ ವೃಥಾ ವಿಷಯಿಭಿಃ ಕ್ಷುದ್ರೋಭಿಮಾನಗ್ರಹಃ ೪—೧೦

ಕೇವಲ ವಿಷಯಲೋಲುಪರಾದವರಿಂದ ವಿಷಯಸುಖಕ್ಕೋಸುಗವಾಗಿಯೇ ಶರೀರವು ಸುಂದರವೆಂದೂ ಉಪಭೋಗ ಯೋಗ್ಯವೆಂದೂ ವಿಧವಿಧವಾಗಿ ಬಣ್ಣಿಸಲ್ಪಡುವವುಗಳಾದ ತಲೆ, ಎದೆ, ಮುಖ, ಕಣ್ಣು, ಹುಬ್ಬುಗಳು ರಕ್ತ, ಕೊಬ್ಬು ಮೊದಲಾದವು ಮಾಂಸ,ಮೂಳೆ ಮತ್ತು ಜೊಲ್ಲಿನಿಂದ ಕೂಡಿದುದಾಗಿದ್ದು ಕ್ಷಣಾರ್ಧದಲ್ಲಿ ಕೊಳೆತು ನೋಡುವುದಕ್ಕೆ ಅಸಹ್ಯಕರವಾಗಿ ಹೋಗುವುದು. ಇಂತಹ ಹೇಯವಾದಶರೀರವು ಅವಿವೇಕಿಗಳಿಗೆ ಭೀತ್ಯಾಸ್ಪದವೂ ವಿದ್ಯಾವಿನೀತರಿಗೆ ಕೃಪಾಸ್ಪದವಾದುದಾಗಿಯೂ ಇರುವುದು.

ಶ್ಮಶಾನಕ್ಕೆ ಹೋಲಿಸುವ ಸಂಧ್ಯಾವರ್ಣನವು ಹೀಗಿರುವುದು:—

ಸಂಧ್ಯಾಬಧ್ಯಾಸ್ಥಶೋಣಂ ಪಿಸುವಹುವಚಿತಾಂಗಾರವುಂದಾರ್ಕಬಿಂಬಂ
ತಾರಾನಾರಾಸ್ಥಿಕೀರ್ಣಂ ವಿಶದನರಶಿರಃ ಕಾಯಮಾಣೋಜ್ಜ್ವಲೇಂದು
ಹೃಷ್ಯನ್ನಕ್ತಂಚರಾಘ್ರೇಂಘನತಿಮಿರಮಹಾಧೂಮಧೂಮ್ರಾನುಕಾರಂ
ಜಾತಂ ಲೀಲಾಶ್ಮಶಾನಂ ಜಗದಖಿಲಮಹೋ! ಕಾಲಕಾಪಾಲಿಕಸ್ಯ|| ೪—೨೯

ಅಹಹ! ಚೇತನಹೀನವಾದ ಕಳೇಬರದರಕ್ತದಿಂದ ಬಣ್ಣಬಳಿದಂತಿರುವ ವಿಶ್ವಸಂಧ್ಯಾ. ಉರಿದುರಿದು ನಂದಿಹೋಗುತ್ತ ಕೊಂಚಕೊಂಚವಾಗಿ ಕಾಣುತ್ತಿರುವ ಪ್ರೇತಾಗ್ನಿಯಂತೆ ಮಂದವಾಗಿಕಾಣುವ ಸೂರ್ಯಬಿಂಬ. ಚೂರುಚೂರಾದ ಅಸ್ಥಿಸಂಕೀರ್ಣದಂತಿರುವ ನಕ್ಷತ್ರಗಳು. ಶುಭ್ರವಾದ ತಲೇಬುರುಡೆಯಂತಿರುವ ಚಂದ್ರ. ದಟ್ಟವಾಗಿಪ್ರಸರಿಸಿರುವ ಪ್ರೇತಾಗ್ನಿಯ ಧೂಮದಂತೆ ಅಂಧಕಾರಯುಕ್ತವಾದುದಾಗಿ ಈ ವಿಶ್ವವು ಕಾಲನೆಂಬ ಕಾಪಾಲಿಕನ ಕ್ರೀಡಾಕ್ಷೇತ್ರದಂತೆ ಕಾಣುತ್ತಿರುವುದು.

ದುಃಖಾರ್ತನಾದ ಹರಿಶ್ಚಂದ್ರನ ಹೇಳಿಕೆ: —

ಮಾಮಾತವ್ಯುಶಿರೋಧರಂ ಪ್ರಭವತಾಕ್ರುದ್ಧೇನರಾಜ್ಯಶ್ರಿಯಾ
ಯದ್ವಿಶ್ಲೇಷಯತಾಪಿತೇನ ಮುನಿನಾನಿಶ್ಶೇಷಿತಂನಸ್ತ್ರಯಂ
ತತ್ಪ್ರಾಪಿವ್ಯಸನಪ್ರಿಯೇಣ ವಿಧಿನಾವೃತ್ತಂತಧಾನಿಷ್ಠುರಂ
ಯೇನಾತ್ಮಾತನಯಃ ಕಳತ್ರಮಪಿಮೇ ಸರ್ವಂವಿಲುಪ್ತಂಕ್ಷಣಾತ್|| ೨—೫.

ಸತಿಸುತರನ್ನು ವಿಕ್ರಯಿಸಿ ತಾನೂ ಪರಾಧೀನನಾಗಿ ಈ ಶ್ಮಶಾನವಮಂ ಬಹು ದುಃಖದಿಂದ ಕಾಯುತ್ತ ಹಾಯ್! ಹತವಿಧಿ! ನಿಷ್ಕಾರಣವಾಗಿ ನನ್ನೊಡನೆ ಕುಪಿತನಾದ ಆ ವಿಶ್ವಾಮಿತ್ರನು ನನ್ನ ಅಶೇಷ ರಾಜ್ಯಲಕ್ಷ್ಮಿಯನ್ನು ಅಪಹರಿಸಿದನಾದರೂ ಹೆಂಡತಿಯನ್ನೂ ಮಗನನ್ನೂ ಉಳಿಸಿದ್ದನು. ನೀನಾದರೋ ಕ್ಷಣಾರ್ಧದಲ್ಲಿ ನನ್ನ ಸತಿಸುತರನ್ನು ಅಪಹರಿಸಿರುವೆಯಲಾ! ಅಯ್ಯೋ!



## ಸೋಮದೇವ ಸೂರಿ.

ಇವನ ಮಂಗಳಾಚರಣ ಶ್ಲೋಕಗಳಿಂದಲೂ ಈತನ ಕೃತಿಯಲ್ಲಿ ಜಿನ ಜೈನಾಚಾರ್ಯವರ್ಣನೆಗಳಿರುವುದರಿಂದ ಇವನು ಜೈನನೆಂದೂ ತನ್ನ ಗ್ರಂಥದ ಪ್ರತ್ಯಾಶ್ವಾಸದ ಕೊನೆಯಲ್ಲಿರುವ "ಇತಿ ಸಕಲತಾರ್ಕಿಕಲೋಕಚೂಡಾಮಣೇಃ **ಶ್ರೀಮನ್ನೇಮಿದೇವ**ಭಗವತಃ ಶಿಷ್ಯೇಣ ಸದ್ಯೋಽನವದ್ಯಗದ್ಯಪದ್ಯವಿದ್ಯಾಧರಚಕ್ರವರ್ತಿಶಿಖಂಡಮಂಡನೀಭವಚ್ಚರಣಕಮಲೇನ **ಶ್ರೀಸೋಮದೇವ** ಸೂರಿಣಾವಿರಚಿತೇ **ಯಶೋಧರ**ಮಹಾರಾಜಚರಿತೇ **ಯಶಸ್ತಿಲಕಾ**ಪರನಾಮ್ನಿ ಮಹಾಕಾವ್ಯೇ" ಎಂಬುದರಿಂದ ಇವನು ನೇಮಿದೇವನ ಶಿಷ್ಯನೆಂದೂ ಯಶಸ್ತಿಲಕಾಪರನಾಮಕವಾದ ಯಶೋಧರ ರಾಜಚರಿತೆಕಾರನೆಂದೂ ಗೊತ್ತಾಗುತ್ತದೆ.

**ಕಾಲ:**—"ಶಕನೃಪಕಾಲಾತೀತಸಂವತ್ಸರ ಶತೇಷ್ವಷ್ಟಸ್ವೇಕಾಶೀತ್ಯಧಿಕೇಷು (೮೮೧) ಗತೇಷು ಸಿದ್ಧಾರ್ಥಿಸಂವತ್ಸರ ಚೈತ್ರಮಾಸಮದನತ್ರಯೋದಸ್ಯಾಂ........ ಶ್ರೀಮದರಿಕೇಸರಿಣಃ ಪ್ರಥಮಪುತ್ರಸ್ಯ ಶ್ರೀಮದ್ವಾಗರಾಜ ಪ್ರವರ್ಧಮಾನವಸುಧಾರಾಯಾಂ ಗಂಗಧಾರಾಯಾಂ ವಿನಿರ್ಮಿತಮಿದಂಕಾವ್ಯಂ" ಎಂಬ ಗ್ರಂಥಾಂತಗದ್ಯದಿಂದ ಇವನು (ಚೋಳರಾಜ್ಯದಲ್ಲಿರುವ ?) 'ಗಂಗಧಾರಾ' ಎಂಬ ಗ್ರಾಮದವನೆಂದೂ ಗ್ರಂಥನಿರ್ಮಾಣ ಕಾಲವು ಶಕಸಂವತ್ಸರ ೮೮೧ ಅಥವಾ ಕ್ರಿ. ಶ. ೯೫೯ ಎಂದೂ ಅದೇ ಕವಿಯ ಕಾಲವೆಂದೂ ಗೊತ್ತಾಗುತ್ತದೆ. ಎಂದರೆ ಕವಿಯು ಕ್ರಿ. ಶ. ಹತ್ತನೆಯ ಶತಮಾನದವನೆಂಬುದು ಸ್ಪಷ್ಟವಾಗಿದೆ.

**ಗ್ರಂಥ:**—ಇವನು "ಯಶಸ್ತಿಲಕ" ಎಂಬ ಚಂಪೂಕಾವ್ಯವನ್ನು ಬರೆದಿರುವನು. "ಅಹಿಂಸಾಪರಮೋಧರ್ಮಃ ಅಥವಾ ನಾಹಿಂಸ್ಯಾತ್ಸರ್ವಭೂತಾನಿ" ಎಂಬ ತತ್ವಾರ್ಥವೇ ಇದರ ಸಾರ. ಸಕಲಪಾಪಕಾರ್ಯಗಳಿಗೂ ತತ್ತನ್ಮನೋವೃತ್ತಿಯೇ ಕಾರಣವಾಗುವುದಾದುದರಿಂದ ಅಂತಹ ಮಾನಸಿಕ ಪಾಪಕೃತ್ಯಗಳ ದೆಸೆ

ಯಿಂದ ಪುನರ್ಜನ್ಮವನೆತ್ತಿ ಅನರ್ಥಕಾರಣನಾಗುವನೆಂದು ನಿರೂಪಿಸುವುದೇ ಕಥಾಧ್ಯೇಯ. ಇದರಲ್ಲಿ ೮ ಆಶ್ವಾಸಗಳಿರುವುವು. ಯಶೋಧರ ಚರಿತೆಯನ್ನು ಹೇಳುವ ನೆಪದಲ್ಲಿ ಜಿನೋಪಾಸನಾಧ್ಯಯನಾದಿ ಕ್ರಮಗಳು ಸಾಂಗವಾಗಿ ವರ್ಣಿತ ವಾಗಿರುವುವು. ಜಿನಮತದ ತತ್ವಬೋಧಕಗಳಾದ ಅನೇಕ ಉಪಾಖ್ಯಾನಗಳು ಇದರಲ್ಲಿ ಉದಾಹೃತವಾಗಿವೆ. ಇದರ ನಾಲ್ಕನೆಯ ಆಶ್ವಾಸದಲ್ಲಿ.—

ಮಯಾವಾಗರ್ಥಸಂಭಾರೇ ಭುಕ್ತೇ ಸಾರಸ್ವತೇ ರಸೇ
ಕವಯೋಽನ್ಯೇ ಭವಿಷ್ಯಂತಿ ನೂನಮುಚ್ಛಿಷ್ಟ ಭೋಜನಾಃ

ಎಂಬ ಅಭಿಮಾನೋಕ್ತಿಯು ಇರುವುದು.

ಬ್ರಾಹ್ಮಣನು ಯಾರೆಂಬ ವಿಚಾರದಲ್ಲಿ ಹೀಗೆಂದು ಹೇಳಿರುವನು.

ವೈರಾಗ್ಯಂ ಜ್ಞಾನಸಂಪತ್ತಿ ರಸಂಗಸ್ಥಿರಚಿತ್ತತಾ
ಊರ್ಮಿಸ್ಮಯಸಹತ್ವಂಚ ಪಂಚಯೋಗಸ್ಯ ಹೇತವಃ
ಪರೇ ಬ್ರಹ್ಮಣ್ಯನೂಚಾನೋ ಧೃತಿಮೈತ್ರೀದಯಾನ್ವಿತಃ
ಅನ್ಯತ್ರ ಸೂನೃತಾದ್ವಾಕ್ಯಾನ್ನಿತ್ಯಂ ವಾಚಂ ಯಮೀ ಭವೇತ್
ಜಾತಿರ್ಜರಾ ಮೃತಿಃ ಪುಂಸಾಂ ತ್ರಯೀ ಸಂಸೃತಿಕಾರಣಂ
ಏಷಾ ತ್ರಯೀ ಯತಸ್ತ್ರಯ್ಯಾಃ ಕ್ಷೀಯತೇ ಸಾತ್ರಯೀ ಮತಾ
ಅಹಿಂಸಸ್ಸದ್ವ್ರತೋ ಜ್ಞಾನೀ ನಿರೀಹೋ ನಿಷ್ಪರಿಗ್ರಹಃ
ಯಸ್ಸ್ಯಾತ್ಸ ಬ್ರಾಹ್ಮಣಸ್ಸತ್ಯಂ ನತು ಜಾತಿಮದಾಂಧಲಃ ॥

ಇದನ್ನು ಯೋಚಿಸುವ ಪ್ರತಿಯೊಬ್ಬನಿಗೂ ಸಾಮವೇದದಲ್ಲಿ ಹೇಳಿರುವ ವಜ್ರಸೂಚಿಕೋಪನಿಷತ್ತಿನ ಹೇಳಿಕೆಯು[*] ಜ್ಞಾಪಕವು ಬಾರದಿರದು.

ಯಜ್ಞಾದಿ ಕರ್ಮವಿಚಾರವಾಗಿ ಇವನ ಮತವು ಹೀಗಿರುವುದು:—

ಲೋಕೇಂದ್ರಿಯೈರ್ಲೋಕ ಮನೋಽನುಕೂಲೈ
ಸ್ಸ್ವಾಜೀವನಾಯಾಗಮ ಏವ ಸೃಷ್ಟಃ
ಸ್ವರ್ಗೋಯದಿಸ್ಯಾತ್ಪಶುಹಿಂಸಕಾನಾಂ

---

ಯಃ ಕಶ್ಚಿದಾತ್ಮಾನಮದ್ವಿತೀಯಂ ಜಾತಿಗುಣಕ್ರಿಯಾಹೀನಂ ಷಡೂರ್ಮಿಷಡ್ಭಾವೇತ್ಯಾದಿಸರ್ವ ದೋಷರಹಿತಂ ಸತ್ಯ ಜ್ಞಾನಾನಂದಾನಂತಸ್ವರೂಪಂ ಸ್ವಯಂ ನಿರ್ವಿಕಲ್ಪಮಶೇಷ ಕಲ್ಪಾ ಧಾರಮಶೇಷಭೂತಾಂತರ್ಯಾಮಿತ್ವೇನವರ್ತಮಾನ ಮಂತರ್ಬಹಿಶ್ಚಾಕಾಶವದನುಸ್ಯೂತ ಮಖಂಡಾನಂದಸ್ವಭಾವ ಮಪ್ರಮೇಯ ಮನುಭವೈಕವೇದ್ಯಮಪರೋಕ್ಷತಯಾಭಾಸ ಮಾನಂ ಕರತಲಾಮಲಕವತ್ಸಾಕ್ಷಾದಪರೋಕ್ಷೀಕೃತ್ಯ ಕೃತಾರ್ಥತಯಾಕಾಮರಾಗಾದಿ ದೋಷರಹಿತಶ್ಶಮಾದಿ ಸಂಪನ್ನೋ ಭಾವಮಾತ್ಸರ್ಯತೃಷ್ಣಾಶಾಮೋಹಾದಿರಹಿತೋದಂ ಭಾಹಂಕಾರಾದಿಭಿರಸಂಸ್ಪೃಷ್ಟಚೇತಾವರ್ತತೇ। ಏವಮುಕ್ತಲಕ್ಷಣೋಯಸ್ಸಏವಬ್ರಾಹ್ಮಣ ಇತಿ ಶ್ರುತಿಸ್ಮೃತಿಪುರಾಣೇತಿಹಾಸಾನಾಮಭಿಪ್ರಾಯಃ ॥

ಸೂನಾಕೃತಾಂತರ್ಹಿ ಭವೇತ್ಸಕಾಮಃ ||
ಮಂತ್ರೇಣಶಸ್ತ್ರೈರ್ಗಲಪೀಡನಾದ್ವಾ
ವೇದ್ಯಾಂಬಹಿರ್ವಾಪಿ ವದಸ್ಸಮಾನಃ
ಸ್ವರ್ಗೋಯದಿಸ್ಯಾತ್ಸಖಿಹಿಂಸಿತಾನಾಂ
ಸ್ವಬಾಂಧವೈರ್ಯಜ್ಞವಿಧಿರ್ನಕಿಂತು ||

ಗ್ರಂಥವಿಚಾರದಿಂದ ಇವನು ಉದ್ದಂಡತಾರ್ಕಿಕನೆಂಬುದು ವ್ಯಕ್ತವಾಗುತ್ತದೆ. ಇವನ ಪದ್ಯಶೈಲಿಯನ್ನು ತಿಳಿಸುವುದಕ್ಕೆ ಮೇಲಣ ಶ್ಲೋಕಗಳು ಸಾಕೆಂದು ತೋರುವುದು.



## ದಂಡಿ (೨)

ಇವನಾವನೆಂಬುದಾಗಲಿ, ಎಲ್ಲಿಯವನೆಂಬುದಾಗಲಿ, ಜನನೀಜನಕರಾರೆಂಬುದಾಗಲಿ ಯಾವುದೂ ತಿಳಿಯಬರುವಂತಿಲ್ಲ. 'ದಂಡಿ' ಎಂದರೆ ಸಾಮಾನ್ಯವಾಗಿ 'ಸನ್ಯಾಸಿ' ಎಂದು ಅರ್ಥಮಾಡುವ ರೂಢಿಯು ಇರುವುದು. (೧) ಇವನನ್ನು ಸನ್ಯಾಸಿಯೆಂದು ಕೆಲವರೂ. (೨) ತನ್ನ ಗ್ರಂಥದಲ್ಲಿ ಕೆಲವುಕಡೆ 'ಇತಿ ಶ್ರೀಮದಾಚಾರ್ಯಮಹಾಕವಿದಂಡಿನಾವಿರಚಿತೇ ದಶಕುಮಾರಚರಿತೇ' ಎಂದು ಹೇಳಲ್ಪಟ್ಟಿರುವದರಿಂದ ಇವನು ಮಹಾವೇತ್ತನಾದ ಆಚಾರ್ಯನೆಂದು ಕೆಲವರೂ, (೩) ಮಂಗಳಾಚರಣಶ್ಲೋಕದ ಪದ, ಪದಾಂತ್ಯದಲ್ಲಿ ಹೇಳಲ್ಪಟ್ಟಿರುವ ದಂಡಃ ದಂಡಃ ಎಂಬ ಶಬ್ದಪ್ರಯೋಗದಿಂದ ಇವನಿಗೆ ದಂಡಿ ಎಂಬ ಹೆಸರು ಬಂದಿರಬಹುದಾಗಿ ಕೆಲವರೂ (೪) ಕಾವ್ಯಾದರ್ಶಕಾರನಾದ ದಂಡಿಯು ಇವನೇ ಎಂದು ಕೆಲವರೂ ಹೇಳುವರು. ಈ ವಿಚಾರವಾಗಿ ಒಳಹೊಕ್ಕು ನೋಡುವುದು ಯುಕ್ತವಾಗಿರುವುದು. ದಂಡವುಳ್ಳವನು ದಂಡಿಯೆಂದೂ, ಸನ್ಯಾಸಿಯೆಂದೂ ಹೇಳುವುದಾದರೆ ಗ್ರಂಥವಿಷಯಪರಿಶೀಲನದಿಂದ ಹೆಸರಿಗೆ ಗೌಣಬರುವುದು. ಕಾವ್ಯಾದರ್ಶಕಾರನಾದ ದಂಡಿಯು ಮಾತ್ರವೇ ಆಚಾರ್ಯಪದವಿಗೆ ಯೋಗ್ಯನು ಹೊರ್ತು ಈ ದಂಡಿಗೆ ಆಚಾರ್ಯಪದಪ್ರಯೋಗವು ಸಲ್ಲದು. ಏಕೆಂದರೆ ಇವನ ಹೇಳಿಕೆಯಾದ (೧) "ಕನ್ಯೇಕಾಮಯಮಾನಂ ಮಾಂನತ್ವಂಕಾಮಯಸೇಕಥಂ" ಎಂದೂ. (೨) "ತ್ವಾಮಯಮಾಬದ್ಧಾಂಜಲಿದಾಸಜನಸ್ತ್ವಮಿಮಮರ್ಥಮರ್ಥಯತೇ| ಸ್ವಪಿಹಿಮಯಾಸಹ ಸುರತವ್ಯತಿಕರಖಿನ್ನೇವಮಾವೈವಂ||" ಎಂಬಿವೇ ಮೊದಲಾದ ಗ್ರಾಮ್ಯ, ಅಶ್ಲೀಲ, ನಿರಸನವಿಷಯಚಾಟೂಕ್ತಿಗಳನ್ನು ಕಾವ್ಯಾದರ್ಶಕಾರನೂ, ರಸಜ್ಞನೂ ಆದ ಆಚಾರ್ಯದಂಡಿಯು ಎಂದಿಗೂ ಹೇಳಿರುವುದಿಲ್ಲವೆಂಬುದನ್ನು ವಿಚಾರಪರರಾದ ರಸಿಕರು

ತಿಳಿದುಕೊಂಡಿರುವರು. ಈ ದಂಡಿಯು ವಿಷಯಲಂಪಟನೂ, ವಿಷಯಲೋಲ ಸಚಿತ್ತನೂ, ಧರ್ಮದೂರನೂ ಆಗಿರಬೇಕಾಗಿ ತೋರುವುದರಿಂದಲೇ:—

"ಪಿತಾಮಹಸ್ಯತಿಲೋತ್ತಮಾಭಿಲಾಷಃ, ಭವಾನೀಪತೇರ್ಮುನಿಸಹಸ್ರಕಳತ್ರ ಸಂದೂಷಣಂ, ಪದ್ಮನಾಭಸ್ಯಷೋಡಶಸಹಸ್ರಾಂತಃಪುರವಿಹಾರಃ, ಪ್ರಜಾಪತೇಸ್ಸ್ವದುಹಿತರ್ಯಪಿಪ್ರಣಯಪ್ರವೃತ್ತಿಃ, ಶಚೀಪತೇರಹಲ್ಯಾಜಾರತಾ, ಶಶಾಂಕಸ್ಯಗುರುತಲ್ಪಗಮನಂ, ಅಂಶುಮಾಲಿನೋಬಡಬಾಲಂಘನಂ, ಅನಿಲಸ್ಯಕೇಸರಿಕಳತ್ರಸಮಾಗಮಃ, ಬೃಹಸ್ಪತೇರುತಥ್ಯಭಾರ್ಯಾಭಿಸರಣಂ,ಪರಾಶರಸ್ಯಭ್ರಾತೃದಾರಸಂಗತಿಃ ಅತ್ರೇರ್ಮೃಗೀಸಮಾಗಮಃ"

ಎಂಬಿವೇ ಮೊದಲಾದ ದೂಷಣೆಗಳನ್ನು ದೇವಾದಿದೇವತೆಗಳು ಮಹರ್ಷಿಗಳ ಮೊದಲುಗೊಂಡು ವಿವೇಕಶೂನ್ಯತೆಯಿಂದ ಹೇಳಿಕೊಂಡಿರುವನು. ಇವನಿಗೆ ಸ್ತ್ರೀ ಎಂಬುದೇ ಪರಾಪರವಸ್ತು. ತಚ್ಚಿಂತನವೇಯೋಗ. ವಿಷಯಾನಂದವೇ ಮೋಕ್ಷವೆಂಬುದನ್ನು ಮೂಲಮಂತ್ರವನ್ನಾಗಿಟ್ಟುಕೊಂಡು ಇಂತಹ ಅಪ್ರಬುದ್ಧಗ್ರಂಥವನ್ನು ಬರೆದಿರುವುದಾಗಿ ಭಾಸವಾಗುತ್ತದೆ. ಮಂಗಳಾಚರಣದಲ್ಲಿ ಪ್ರಯೋಗಿಸಿರುವ ದಂಡಃ ದಂಡಃ ಎಂಬುದರಿಂದ ದಂಡಿಯೆಂದು ಕರೆದಿರಬೇಕೆಂಬ ವಿಚಾರದಲ್ಲಿ ಪಾರ್ವತಿಯನ್ನು ವರ್ಣಿಸಲುಜ್ಜುಗಿಸಿದ ಶ್ರೀಕಂಠನಿಗೆ ಭವಭೂತಿಯೆಂದೂ 'ನಿದ್ರಾದರಿದ್ರ'ವೆಂಬ ಪದಪ್ರಯೋಗವನ್ನು ಮಾಡಿದ ಕವಿಯನ್ನು ನಿದ್ರಾದರಿದ್ರನೆಂದೂ 'ಚಮಚ್ಚಮಿತಿ' ಯೆಂಬ ಪದಪ್ರಯೋಗಮಾಡಿದ ಕವಿಯನ್ನು ಚಮಚ್ಚಮಕನೆಂದು ಕರೆದಿರುವಂತೆ ಇವನನ್ನು ದಂಡಿಯೆಂದು ಕರೆದಿರಬಹುದಾಗಿ ಹೇಳಲ್ಪಟ್ಟಿದೆ.* ದಂಡವೆಂಬ ಶಬ್ದಪ್ರಯೋಗಮಾತ್ರದಿಂದ ದಂಡಿಯೆಂದು ಕರೆಯುವುದಾದರೆ ಇಂತಹ ಪ್ರಾಸಬದ್ಧ ಶ್ಲೋಕಗಳು ಗೀರ್ವಾಣವಾಙ್ಮಯದಲ್ಲಿ ಬೇಕಾದಷ್ಟು ಸಾಕಾದಷ್ಟು ದೊರೆಯುವುವು. ಅವುಗಳೆಲ್ಲವೂ ಆಯಾ ಕವಿಗಳ ಹೆಸರಿನಲ್ಲಿ ಹೇಳಲ್ಪಟ್ಟಿರುವುವೇ ಹೊರ್ತು ಅವರವರ ಶ್ಲೋಕಗಳಲ್ಲಿ ಕಂಡುಬರುವ ಶಬ್ದಪ್ರಯೋಗದಿಂದ ಕರೆಯಲ್ಪಟ್ಟಿರುವುದಿಲ್ಲ.

**ಕಾಲ** :—ಪ್ರೊ. ವಿಲ್ಸನ್ ಪಂಡಿತರು ಇವನ ಕಾಲವನ್ನು ಕಂಡುಹಿಡಿಯಲು ಎರಡು ವಿಚಾರಗಳನ್ನು ಸಮರ್ಥಿಸಿ ಹೇಳಿರುವರು.

(೧) ಯವನರ ಸಂಗತಿ.

(೨) ಭೋಜವಂಶ ವಿಚಾರ.

* ಕರ್ಣಾಟಕ ಸಾಹಿತ್ಯಪರಿಷತ್ಪತ್ರಿಕೆ ೧೯೧೬ ಅಕ್ಟೋಬರ ಪುಟ ೨೫೩—೨೫೪.

ಮೊದಲನೆಯದಾದ ಯವನರ ವಿಚಾರವು ಸಾಂಪ್ರತ ಕಥಾಸಂದರ್ಭದಲ್ಲಿ ಒಂದೆರಡುಕಡೆ ಹೇಳಲ್ಪಟ್ಟಿದೆ. ಹಿಂದುಗಳು ಯವನರನ್ನು ವ್ಯಾಪಾರಿಗಳೆಂದೂ ಅಥವಾ ದರೋಡೆಯವರೆಂದು ಮಾತ್ರವೇ ತಿಳಿದುಕೊಂಡಿದ್ದರು. ಎಂಟನೆಯ ಉಚ್ಛ್ವಾಸದಲ್ಲಿ ಭೋಜವಿಚಾರವು ಹೇಳಲ್ಪಟ್ಟಿದೆ. ಭೋಜನು ಕ್ರಿ. ಶ. ೧೧ನೆಯ ಶತಮಾನದವನೆಂದೂ ಬಲ್ಲಾಳಕೃತ ಭೋಜಪ್ರಬಂಧದಲ್ಲಿ ದಂಡಿಯ ಹೆಸರು ಉಲ್ಲೇಖಿಸಲ್ಪಟ್ಟಿರುವುದರಿಂದಲೂ ಯವನಶಬ್ದವು 'ಅಯೋನಿಯನ್' ಎಂಬ ಶಬ್ದದಿಂದ ಹುಟ್ಟಿದುದೆಂದೂ ಹೇಳಿ ದಶಕುಮಾರಚರಿತವು ಕ್ರಿ. ಶ. ೧೧, ೧೨ನೆಯ ಶತಮಾನಗಳಲ್ಲಿ ಬರೆಯಲ್ಪಟ್ಟಿರಬೇಕೆಂದೂ ಹೇಳುವರು. ಈವಿಚಾರವಾಗಿ ಕೊಂಚ ಬರೆಯಬೇಕಾಗುವುದು. "ಯವನ" ಶಬ್ದದ ಉಲ್ಲೇಖವು ಹಿಂದೂ ಗ್ರಂಥಗಳಲ್ಲಿ ಬಹುಪ್ರಾಚೀನಕಾಲದಿಂದ ಇರುವುದಾಗಿ ತೋರುತ್ತದೆ.

(೧) ಮಹಾಭಾರತದಲ್ಲಿ ಯವನರು ದುರ್ಯೋಧನನ ಆಪ್ತರಾಗಿದ್ದರೆಂದು ಹೇಳಲ್ಪಟ್ಟಿದೆ. (೨) ಲಾಕ್ಷಾಗಾರದಹನವನ್ನು ಪುರೋಚನನೆಂಬ ಯವನನಿಗೆ ನಿರೂಪಿಸಿದುದು ವ್ಯಕ್ತವಾಗುತ್ತದೆ. (೩) 'ಮುದ್ರಾರಾಕ್ಷಸ' ಕಾಲಕ್ಕೆ ಯವನರಿದ್ದರೆಂಬುದು ಸ್ಪಷ್ಟಪಡುತ್ತದೆ. (೪) ಪಾರಸೀಕರೇ ಹೂಣರೆಂದೂ ಹೂಣರೇ ಯವನರೆಂದು ಹೇಳುವುದಾದರೆ ಕಾಳಿದಾಸನ ರಘುವಂಶದಲ್ಲಿ ಹೂಣರ ಉಲ್ಲೇಖವಿದೆ. (೫) ಬಾಣನ ಕಾದಂಬರಿಯಲ್ಲಿ ಚಂದ್ರಾಪೀಡನ ಇಂದ್ರಾಯುಧವೆಂಬ ಕುದುರೆಯು ಪಾರಸೀಕ ಮಹಾರಾಜನಿಂದ ಕೊಡಲ್ಪಟ್ಟುದಾಗಿ ಹೇಳಲ್ಪಟ್ಟಿದೆ. ಇವುಗಳೆಲ್ಲವೂ ಮುಸಲ್ಮಾನರ ಪದಾರ್ಪಣಕ್ಕೆ ನೂರಾರುವರ್ಷಗಳಹಿಂದೆ ಬರೆಯಲ್ಪಟ್ಟುವಾಗಿವೆ. (೬) ಭೋಜವಂಶದ ಉಲ್ಲೇಖನದ ಆಧಾರವೆನ್ನುವುದಾದರೆ ಈ ಹೆಸರಿನ ಅನೇಕ ರಾಜರು ಆಳಿ ಅಳಿದು ಹೋಗಿರುವುದಾಗಿ ಗ್ರಂಥಾನೇಕಗಳಿಂದ ಗೊತ್ತಾಗುತ್ತದೆ. ಮಹಾಭಾರತದಲ್ಲಿ ಭೋಜವಂಶ ವಿಚಾರವಿರುವುದು. ಕುಂತಿಯು ಭೋಜವಂಶದವಳು. (೭) ಬಲ್ಲಾಳಕೃತ'ಭೋಜಪ್ರಬಂಧ'ವೆನ್ನುವುದಾದರೆ ಇದನ್ನು ಇತಿಹಾಸವನ್ನಾಗಿ ತೆಗೆದುಕೊಂಡು ಸಂಸ್ಕೃತ ಕವಿಕಾಲನಿರ್ದೇಶವಾಡುವುದು ಆರೇಬಿಯನ್ ನೈಟ್ಸಿನ ಕಥಾಭಾಗದಮೇಲೆ ಚರಿತ್ರೆಯನ್ನು ಬರೆದಂತಾಗುವುದು. ಇದಲ್ಲದೆ ಬಲ್ಲಾಳಮಿಶ್ರನು ಕ್ರಿ. ಶ. ೧೩ನೆಯ ಶತಮಾನದವನು. ಇವನು ಸ್ವಲ್ಪ ಹೆಚ್ಚುಕಡಿಮೆ ತನಗೆ ತಿಳಿದುಬಂದ ಸಂಸ್ಕೃತ ಕವಿಗಳೆಲ್ಲರನ್ನು ತನ್ನ ಗ್ರಂಥದಲ್ಲಿ ಹೇಳಿ ಕೊಂಡಿರುವನು. ಆದುದರಿಂದ ಇದನ್ನು ಪ್ರಮಾಣ ಗ್ರಂಥವನ್ನಾಗಿ ಅಂಗೀಕರಿಸಲಾಗುವುದಿಲ್ಲ. (೮) 'ಯವನ' ಶಬ್ದವು ಅಯೋನಿಯನ್‌ಶಬ್ದದಿಂದ ಹೇಗಾದುದೆಂಬ ರೂಪನಿಷ್ಪತ್ತಿಯು ತಿಳಿಯದಾಗಿದೆ.

ಈ ಕಾರಣಗಳಿಂದ ವಿಲ್ಸನ್ ಪಂಡಿತರ ಅಭಿಪ್ರಾಯವು ಚಾರಿತ್ರಿಕ ದೃಷ್ಟಿಯಿಂದ ದೂರವಾಗುವುದು. ಸಂಸ್ಕೃತದಲ್ಲಿ ವಾಸವದತ್ತಾ, ಕಾದಂಬರೀ ಮತ್ತು

ದಶಕುಮಾರಚರಿತೆ. ಈ ಮೂರು ಗದ್ಯಕಾವ್ಯಗಳು ದೊರೆತು ಈ ಮೂರೂ ಬೇರೆ ಬೇರೆ ಕಾಲದವುಗಳೆಂದು ಸ್ಪಷ್ಟವಾಗುತ್ತವೆ.

ಕ್ರಿ. ಶ. ೭ನೆಯ ಶತಮಾನದ ಬಾಣ, ಹರ್ಷವರ್ಧನ, ಮಯೂರಾದಿ ಕವಿಗಳಾಗಲಿ ಕ್ರಿ. ಶ. ೯ನೆಯ ಶತಮಾನದ ಲಾಕ್ಷಣಿಕರಾಗಲಿಅಥವಾ ಕವಿರಾಜಮಾರ್ಗವೆಂಬ ಅಲಂಕಾರ ಗ್ರಂಥವನ್ನು ಬರೆದ ಕನ್ನಡಕವಿ ನೃಪತುಂಗನಾಗಲಿ ಈ ದಂಡಿಯ ಹೆಸರನ್ನು ಹೇಳಿರುವದಿಲ್ಲ. ಕಾವ್ಯಲಕ್ಷಣಗಳನ್ನು ಹೇಳಿದವರು ದಶಕುಮಾರ ಚರಿತೆಯನ್ನು 'ಆಖ್ಯಾಯಿಕೆಯ' ಉದಾಹರಣಕ್ಕಾದರೂ ಹೇಳುತ್ತಿದ್ದರೆಂಬ ಭರವಸೆಯುಂಟಾಗುತ್ತದೆ. ದಶಕುಮಾರ ಚರಿತೆಯು ಕ್ಷುಲ್ಲಕ ಗ್ರಂಥವೆಂದು ಸುಮ್ಮನೆಯಾಗಿರಬಹುದೆನ್ನುವುದಾದರೆ ಅವರು ಕವಿಯ ಹೆಸರನ್ನಾದರೂ ಹೇಳಿ ಗ್ರಂಥವು ಸಮಾದರಣೀಯವಲ್ಲವೆಂದಾದರೂ ಹೇಳಬಹುದಾಗಿದ್ದಿತು. ಇತಿಹಾಸ ದೃಷ್ಟಿಯಿಂದ ಭರತಖಂಡವು ಕ್ರಿ. ಶ. ೧೦ನೆಯ ಶತಮಾನದಲ್ಲಿ ಮ್ಲೇಚ್ಛ ಪದಾರ್ಪಣದಿಂದ ಕಂಗಾಲಾಗಿ ಧರ್ಮಹ್ರಾಸದಿಂದ ಹಾಹಾಕಾರಗೊಂಡಿದ್ದಿತಾಗಿ ಚರಿತ್ರೆಯು ಹೇಳುವುದು. ಮಂಗಳಾಚರಣ ಶ್ಲೋಕವೂ ಮ್ಲೇಚ್ಛನಾಶವನ್ನು ಕೋರಿ ಬರೆದಿರಬಹುದಾಗಿ ಭಾಸವಾಗುತ್ತದೆ. ಕಾವ್ಯಾದರ್ಶಕಾರನಾದ ದಂಡಿಯು ಕ್ರಿ. ಶ. ೬ನೆಯ ಶತಮಾನದಲ್ಲಿದ್ದನೆಂಬುದನ್ನು ಸ್ಪಷ್ಟಪಡಿಸಿದುದಾಗಿದೆ. ಕ್ರಿ. ಶ. ೯ನೆಯ ಶತಮಾನದಲ್ಲಿದ್ದ ನೃಪತುಂಗನು ದಂಡಿಯ ಕಾವ್ಯಾದರ್ಶವನ್ನವಲಂಬಿಸಿ ಕನ್ನಡದಲ್ಲಿ ಬರೆದಿರುವ ಕವಿರಾಜಮಾರ್ಗವೆಂಬ ಲಕ್ಷಣಗ್ರಂಥದಲ್ಲಿ ಕಾವ್ಯಭೇದ ವಿಚಾರವಾಗಿ ಬರೆಯುವಾಗ "ಗದ್ಯಪದ್ಯಾಖ್ಯಾತಂಗದ್ಯ ಮನೇಕರೂಪಭೇದ' ವಿವಿಕ್ತಂ ಪದಮುಲಸಮುಸಂಸ್ಕೃತ ವಾಕ್ಯದ ಹೃದಯಂ ಹರ್ಷಚರಿತಕಾದಂಬರಿಗಳ್" ಎಂದು ಹೇಳಿರುವುದರಿಂದ ನೃಪತುಂಗನ ಕಾಲಕ್ಕೆ ಹರ್ಷಚರಿತ ಮತ್ತು ಕಾದಂಬರೀ ಎಂಬ ಗದ್ಯಗ್ರಂಥಗಳು ಮಾತ್ರವೇ ಇದ್ದುದಾಗಿಯೂ ದಶಕುಮಾರಚರಿತವು ಆಗ ಇದ್ದುದಾಗಿದ್ದರೆ ಹರ್ಷ ಚರಿತ ಮತ್ತು ಕಾದಂಬರೀ ಗ್ರಂಥಗಳ ಹೆಸರನ್ನು ಹೇಳಿದಂತೆ ದಶಕುಮಾರಚರಿತದ ಹೆಸರನ್ನೂ ಹೇಳುತ್ತಿದ್ದನೆಂದು ನಮ್ಮ ಭರವಸೆ.

ತುರುಷ್ಕರಹಾವಳಿಯು ಕ್ರಿ. ಶ. ೧೦-೧೧ನೆಯ ಶತಮಾನಗಳಲ್ಲಿ ಬಲಗೊಂಡಿದ್ದಿತಾಗಿಯೂ ಬ್ರಾಹ್ಮಣಧರ್ಮಹ್ರಾಸವು ಅಸೀಮವಾಗಿದ್ದುದಾಗಿ ಚರಿತ್ರೆಯು ಹೇಳುತ್ತದೆಯಲ್ಲದೆ, ಇವನ ಗ್ರಂಥದಿಂದಲೂ ಸ್ಪಷ್ಟಪಡುತ್ತದೆ.*

(೧) " ರಾಜನಂದನ! ಕೇಚದಸ್ಯಾಮುಟವ್ಯಾಂವೇದಾದಿ ವಿದ್ಯಾಭ್ಯಾಸಮುಪಹಾಯ ನಿಜಕುಲಾಚಾರಂ ದೂರೀಕೃತ್ಯ ಸತ್ಯಶೌಚಾದಿಧರ್ಮವ್ರಾತಂಪರಿ

* ದ. ಮಾ. ಪೀ. ಉ. ೨

ಹೃತ್ಯ ಕಿಲ್ಬಿಷಮನ್ವಿಷ್ಯಂತಃ ಪುಳಿಂದಪುರೋಗವಾಸ್ತದನ್ನಮುಪ ಭುಂಜಾನಾಃಬಹವೋಬ್ರಾಹ್ಮಣಬ್ರುವಾಃ ನಿವಸಂತಿ" "(೨) ಸೌಮ್ಯ! ಸೋಹಮಸ್ಮಿದ್ವಿಜನ್ಮಾ. ಶತ್ರುಹಸ್ತಾದರ್ಣವೇ. ಅರ್ಣವಾದ್ಯವನನಾವಂ. ಯವನನಾವಶ್ಚಿತ್ರಗ್ರಾವಾಣಮೇನಂಪರ್ವತಪ್ರವರಂಗತಃ"$

ಎಂಬಿವೇ ಮೊದಲಾದವುಗಳೆಲ್ಲದರ ಪರಿಶೀಲನದಿಂದ ತುರುಕರ ಹಾವಳಿಯು ಎಷ್ಟುಮಟ್ಟಿಗೆಪ್ರಬಲಗೊಂಡಿದ್ದಿತೆಂಬುದನ್ನೂ ಧರ್ಮಹ್ರಾಸವನ್ನೂ ನೋಡಿದರೆ ಎಂತ ಹನೂ ಚಕಿತನಾಗದಿರನು. ಕ್ರಿ. ಶ. ೯ನೆಯ ಶತಮಾನದ ಪ್ರಸಿದ್ಧ ಲಾಕ್ಷಣಿಕನಾದ ನೃಪತುಂಗನು ದಶಕುಮಾರಚರಿತದ ವಿಷಯವಾಗಿ ಹೇಳದೆ ಇರುವುದರಿಂದಲೂ ಕ್ರಿ. ಶ. ೧೧ನೆಯ ಶತಮಾನದ ಗ್ರಂಥಗಳಲ್ಲಿ ದಶಕುಮಾರಚರಿತ ವಿಚಾರವು ಕಂಡು ಬರುವುದರಿಂದಲೂ ಈ ಮಧ್ಯಕಾಲದಲ್ಲಿ ಎಂದರೆ ಕ್ರಿ. ಶ. ಹತ್ತನೆಯ ಶತಮಾನದವ ನೆಂಬುದು ಖಂಡಿತವಾಗುವುದು.

**ಗ್ರಂಥ:**—ದಶಕುಮಾರ ಚರಿತ. ಇದು ಗದ್ಯ ಗ್ರಂಥ. ಹೆಸರಿಗೆ ತಕ್ಕಂತೆ ಇದ ರಲ್ಲಿ ಹತ್ತುಜನ ರಾಜಪುತ್ರರ ಚರಿತೆಯು ಹೇಳಲ್ಪಟ್ಟಿರುವದು. ಇದರಲ್ಲಿ ಪೂರ್ವ ಪೀಠಿಕೆಯೆಂದೂ ಉತ್ತರ ಪೀಠಿಕೆಯೆಂದೂ ಎರಡು ಭಾಗಗಳಿರುವುವು. ಕಾದಂಬರಿ ಗಿಂತ ದಶಕುಮಾರಚರಿತವು ವಿಲಕ್ಷಣಗ್ರಂಥವಾಗಿದೆ. ಇದರಲ್ಲಿ ಮೊದಲನೆಯ ಪರಿಚ್ಛೇದವನ್ನು ಓದಿದ ಕೂಡಲೆ ಸ್ತ್ರೀಪುರುಷರ ಶೃಂಗಾರ ಭಾಷಣಕ್ಕೆ ಮೊದಲಾಗುವದು. ಅವರು ಯಾರು ? ಯಾವಸ್ಥಳದವರೆಂಬುದೇ ತಿಳಿಯದು. ಕಥಾಪ್ರಾರಂಭಾಂತ್ಯಗಳು ಪರಸ್ಪರ ಅಸಂಬದ್ಧವಾಗಿವೆ. ಕೆಲವು ಶಬ್ದಗಳು ಎರಡೆರ ಡಾವರ್ತಿ ಬಂದಿವೆ. ಕಾದಂಬರೀ ವಾಸವದತ್ತಾ ಗದ್ಯ ಗ್ರಂಥಗಳಂತೆ ಕೃತ್ರಿಮರಚ ನೆಯು ಇದರಲ್ಲಿರದೆ ಶೈಲಿಯು ಸರಳವಾಗಿದೆ. ದಶಕುಮಾರಚರಿತೆಯು ಅಪೂ ರ್ಣವಾಗಿರುವುದಾಗಿ ಕಂಡುಬರುತ್ತದೆ. ಕಥೆಯು ಒಂದರಹಾಗೆ ಮತ್ತೊಂದು ಹೇಳಲ್ಪಟ್ಟಿದೆ. ಯಾವಕಾಲದಲ್ಲಿ ಕ್ರೂರ ಮತ್ತು ನೀಚಕೃತ್ಯಗಳು ನಡೆದುವೋ ಯಾವಕಾಲದಲ್ಲಿ ಧರ್ಮಹ್ರಾಸವು ಸರ್ವತ್ರ ಪ್ರಚುರವಾಗಿದ್ದಿತೋ ಅದರ ಕಲ್ಪ ನೆಯೂ ಭಯಂಕರವಾಗಿದೆ. ಇದರಲ್ಲಿ ಯಾವರಸಪೋಷಣೆಯೂ ಪೂರ್ಣ ವಾಗಿರುವುದಿಲ್ಲ. ಅಲ್ಲಲ್ಲಿ ಗ್ರಾಮ್ಯವೂ ಅಶ್ಲೀಲತೆಯೂ ತಲೆದೋರಿದೆ. ಪ್ರತಿಯೊಬ್ಬ ಕುಮಾರನ ಚರಿತದಲ್ಲಿ ವೀರರಸ ಮತ್ತು ಶೃಂಗಾರರಸ ಇವೆರಡು ಮಾತ್ರವೇ ಕಂಡು ಬರುವುವಾದರೂ ಈ ರಸಗಳಾದರೂ ಪೂರ್ಣವಾಗಿ ಸಾಧಿಸಲ್ಪಟ್ಟಿರುವುದಿಲ್ಲ ಈ ಎರಡು ರಸಗಳೂ ಕೇವಲದುಷ್ಟರೂಪದಿಂದಿರುವುದರಿಂದ ವಾಚಕರ ಮನಸ್ಸು ಪ್ರಸನ್ನವಾಗದೆ ಉದ್ವೇಗಮಾತ್ರ ಆಗುತ್ತದೆ. ಕೆಲವರ ವೃತ್ತಾಂತದಲ್ಲಿ ಅದ್ಭುತ

$ ದ. ಉ. ೬

ಮತ್ತು ಭಯಾನಕ ರಸಗಳಿರುವುವಾದರೂ ಅವುಗಳೂ ಅಪೂರ್ಣವಾಗಿವೆ. ಬಾಣನ ಕಾದಂಬರಿಯ ರಚನೆ, ವರ್ಣನಾತೀತ ಕೌಶಲ, ಪದಸಂಯೋಜನವು ಹೇಗೆ ಉತ್ಕೃಷ್ಟರೀತಿಯಿಂದಿರುವುದೋ ಅಥವಾ ಅರೇಬಿಯನ್ನೈಟ್ಸನ ಪ್ರತಿಯೊಂದು ಕಥೆಯೂ ಹೇಗೆ ಅದ್ಭುತರಸ ಯುಕ್ತವಾಗಿರುವುದೋ ಹಾಗೆ ಇದರ ಒಂದುಕಥೆಯ ಲ್ಲಿಯೂ ಕಂಡುಬರುವುದಿಲ್ಲ. ಒಂದೆರಡುಕಥೆಗಳು ಇದ್ದುದರಲ್ಲಿಕೊಂಚ ಚೆಲುವೆನ್ನು ವುದಾದರೂ ಉಳಿದವುಗಳೆಲ್ಲವೂ ಸಾಧಾರಣತರದುದೆಂದೇ ಹೇಳಬೇಕಾಗುವುದು. ಅಪಹಾರವರ್ಮನ ಚರಿತದಲ್ಲಿ ವಾರಾಂಗನಾಮಾತೃ (ಕುಟ್ಟಣಿ)ವಿಗೆ ಇರತಕ್ಕ ಅಧಿ ಕಾರವೂ, ಪ್ರಮಿತಿಯಚರಿತದಲ್ಲಿ ರತಿಶಾಸ್ತ್ರವಿಷಯಗಳು, ಪ್ರಥಮಯೌವನಾದಿಭಾಗ ಗಳು, ಪದ್ಮಿನಿ, ಹಸ್ತಿನಿ, ಶಂಖಿನಿ, ಚಿತ್ತಿನಿ ಎಂಬ ಸ್ತ್ರೀಭೇಧಗಳಲ್ಲಿ ಮುಖ್ಯವಾದ ಪದ್ಮಿ ನೀಜಾತಿಯ ನಾಯಿಕಾಲಕ್ಷಣವೂ, ವಿಶ್ರುತನಚರಿತೆಯಲ್ಲಿ ದಂಡನೀತಿ ಮೊದಲಾದ ರಾಜವಿದ್ಯಾವಿಚಾರವು ವರ್ಣಿತವಾಗಿರುವುದು. ಯಾವುದು ಹೇಗಾದರೂ ಇರಲಿ ಗ್ರಂಥವು ರಸವೈಚಿತ್ರ್ಯದಿಂದ ತುಂಬಿಹೋಗಿದೆ. ಗ್ರಂಥದಲ್ಲಿ ಎಲ್ಲೆಲ್ಲಿ ಹೇಗೆ ಹೇಗೆ ನೋಡಿದರೂ ಸ್ತ್ರೀವರ್ಣನೆ ಆ ರಾಮವರ್ಣನೆಗಳೇ ಹೆಚ್ಚಾಗಿರುವುವು. ಇದರಲ್ಲಿ ಚಮತ್ಕಾರವಿಶೇಷವಾವುದೂ ಇಲ್ಲದೆ ಇರುವುದರಿಂದ ರಸಿಕನಾದವನು ಇವನಗ್ರಂಥ ವನ್ನು ಓದಿ ಮುಗಿಸಿದ ಕೂಡಲೇ ನೀರಸನಾಗುವನು. ಕೆಲವು ಸ್ಥಳಗಳು ಕೇವಲ ಹೃದ ಯಂಗಮವಾಗಿರುವುದಾದರೂ ಮತ್ತೊಂದು ಸಲ ಓದಬೇಕೆಂಬಾಸೆಯನ್ನುಹುಟ್ಟಿ ಸುವಂತಿಲ್ಲ. ಇದರ ಅರ್ಥರಚನೆಯು ಪದ್ಯದ ಹೋಲಿಕೆಯಂತಿರುವುದು. ಸುಬಂಧು ಮತ್ತು ಬಾಣಕವಿಗಳ ಗ್ರಂಥಗಳಿಗಿಂತಲೂ ಲಲಿತಪದಸಮಾವೇಶಿತವಾದ ಉತ್ಕೃಷ್ಟ ಗದ್ಯಕಾವ್ಯವನ್ನು ಒರೆಯಲಾಶಿಸಿ ದಶಕುಮಾರಚರಿತೆಯನ್ನು ಬರೆದಿರಬೇಕಾಗಿ ಬೋ ಧೆಯಾಗುತ್ತದೆ. ಅನೇಕಕಥಾಭಾಗಗಳನ್ನು ಒಂದೇಕಡೆಸೇರಿಸಿ ಬರೆದಿರುವುದರಿಂದಲೂ ಯಾವುದಾದರೊಂದು ರಸವನ್ನು ಪ್ರಧಾನವಾಗಿತೆಗೆದುಕೊಂಡು ಅದನ್ನು ಕ್ರಮವಾಗಿ ಪೋಷಿಸದೇ ಇರುವುದರಿಂದ ಇದನ್ನು 'ಕಾದಂಬರೀ' ಎಂದೂ ಹೇಳಲಾಗುವುದಿಲ್ಲ. ದಶಕುಮಾರಚರಿತೆಯನ್ನು ಹಿತೋಪದೇಶ ಪಂಚತಂತ್ರಗಳಿಗೆಹೋಲಿಸಬಹುದಾಗಿದೆ. ಮಹಾಕವಿ ಭವಭೂತಿಯು ತನ್ನಕಾಲದಲ್ಲಿ ನಡೆದವಿಚಾರವಾಗಿ ಬರೆದಿರುವನಾದರೂ ಬಹುತರ ಒಳ್ಳೆಯವುಗಳನ್ನೇ ಆರಿಸಿಕೊಂಡುಬರೆದಿರುವನು. ದಶಕುಮಾರಚರಿತದಲ್ಲಿ ಹಾಗಿರದೆ ಕುಮಾರರ ಧಾಂಡಿಗತನ, ದುಂಡಾವರ್ತಿ, ಚೌರ್ಯ, ಲೂಟಿ ಇವು ಗಳನ್ನು ಹೇಳಿರುವುದೇ ಹೊರತು ಇತರ ಸುಗುಣಗಳ ವಿಚಾರವಾಗಿ ಯಾವುದನ್ನೂ ಹೇಳಿರುವುದಿಲ್ಲ. ಗಣಪತಿ, ಭಗವತಿ ಇವರಿಬ್ಬರಲ್ಲಿ ಭಕ್ತಿಯನ್ನು ನಟಿಸುತ್ತ ಅವರ ಹೆಸರಿನಲ್ಲಿ ಜನಗಳನ್ನು ಮೋಸಪಡಿಸುವುದು ಕಂಡುಬರುತ್ತದೆ. ಇವನು ಬುದ್ಧಸ್ತ್ರೀಗೆ ಕುಟ್ಟನಿಯ ಕೆಲಸವನ್ನು ಯೋಜಿಸಿರುವನು. ಭವಭೂತಿಯು ತಾನು ಬರೆದುದಾದ ಮಾಲತೀಮಾಧವನಾಟಕದಲ್ಲಿ ಬುದ್ಧಸ್ತ್ರೀ ವಿಚಾರವನ್ನು

ತೆಗೆದುಕೊಂಡು ಅವರ ಶೀಲಸ್ವಭಾವ ಚತುರತೆಗಳನ್ನು ಬಹೂತ್ಕೃಷ್ಟ ರೀತಿಯಿಂದ ಸಾಧಿಸಿರುವುದು ಕಂಡುಬರುತ್ತದೆ. ಇದನ್ನು ನೋಡಿದರೆ ದಶಕುಮಾರಚರಿತೆ ಕಾರನ ಕಾಲಕ್ಕೆ ಬುದ್ಧಮತದ ಅವಹೇಳನದೆಸೆಯು ಮಿತಿಮೀರಿರಬಹುದಾಗಿ ಊಹಿಸಬಹುದಾಗಿದೆ. ದಶಕುಮಾರಚರಿತದಲ್ಲಿ ರಾಜವಾಹನನು ಇತರರ ಕೃತ್ಯ ಗಳನ್ನು ನೋಡಿ ಸಂತುಷ್ಟನಾಗಿ ಜಾರಚೋರಮೋಸಕೃತ್ಯಗಳನ್ನು ಮಾಡಿದರೂ ಚಿಂತೆಯಿಲ್ಲ. ಅರ್ಥಲಾಭ, ರಾಜ್ಯಪ್ರಾಪ್ತಿ, ಜನ್ಮದಾತರ ಬಂಧವಿಮೋಚನವಾದುದಕ್ಕೆ ಸಂತೋಷಿಸಿದುದಾಗಿ ಹೇಳಿರುವನು. ಈ ಸಮಾರಂಭದಲ್ಲಿ ಜಾರತ್ವವೂ ಕಾಪಟ್ಯವೂ ಪಾಪಾಕರಗಳೆಂಬುದನ್ನು ಮರೆತೇ ಹೋಗಿರುವನು. ದಶಕುಮಾರಚರಿತದ ಏಳನೆಯ ಅಧ್ಯಾಯದಲ್ಲಿ ಮಂತ್ರಗುಪ್ತನ ಚರಿತವಿರುವುದು. ಅವನ ಹೇಳಿಕೆಯು ಹೀಗಿರುವದು. "ರಾಜವಾಹನ! ನಾನು ಕಳಿಂಗದೇಶಕ್ಕೆ ಹೋದೆನು. ಅಲ್ಲಿದ್ದ ಒಂದಾನೊಂದು ಕೆರೆಯ ದಂಡೆಯಮೇಲೆ ಮಲಗಿಕೊಂಡೆನು. ಅಲ್ಲಿ ಮರಗಿಡಗಳು ಬಹುವಾಗಿದ್ದವು. ಅದರಾಚೆ ಶ್ಮಶಾನವಿದ್ದಿತು. ಅಲ್ಲಿ ಎರಡು ಪಿಶಾಚಗಳು ಮಾತನಾ ಡುತ್ತ ಹತ್ತಿರಬಂದಂತಾಗಿ ಎಚ್ಚರಗೊಂಡೆನು. ಆ ಪಿಶಾಚಗಳು ಶ್ಮಶಾನದಲ್ಲಿರುವ ಸಿದ್ಧರ ವಿಚಾರವಾಗಿ ಮಾತನಾಡುತ್ತಿದ್ದವು. ನಾನೂ ಅವನ್ನು ನೋಡಬೇಕೆಂಬ ಕುತೂಹಲದಿಂದ ಅವುಗಳನ್ನು ಹಿಂಬಾಲಿಸಿದೆನು. ಅಲ್ಲಿ ಸರ್ವಾಂಗಭಸ್ಮಧಾರಣೆ ಯನ್ನು ಮಾಡಿಕೊಂಡು ನರಕಪಾಲಮಾಲಾಲಂಕೃತನಾಗಿ ಅಗ್ನಿಯಲ್ಲಿ ಪದೇ ಪದೇ ಎಳ್ಳನ್ನು ಹಾಕುತ್ತಿರುವವನೊಬ್ಬನನ್ನು ನೋಡಿದೆನು. ಅವನ ಶಿಷ್ಯರು ಅವನ ಅಪ್ಪಣೆ ಯಂತೆ ಕಳಿಂಗರಾಜನ ಕುವರಿಯಾದ ಕರ್ಣರೇಖೆಯನ್ನು ಕರೆದುಕೊಂಡುಬಂದು ಅವನ ಮುಂದೆ ನಿಲ್ಲಿಸಿದರು. ಅವಳು ಹೆದರಿಕೆಯಿಂದ ಅಳುತ್ತಿದ್ದಳು. ಅವಳನ್ನು ಕೊಲ್ಲಲು ಸಿದ್ಧನು ಕೈಯೆತ್ತಿದ ಕೂಡಲೇ ನಾನು ಹೋಗಿ ಸಿದ್ಧನನ್ನು ಕೊಂದೆನು ಎಂದು ಹೇಳಿದುದನ್ನು ನೋಡಿದರೆ ಮಾಲತೀ ಮಾಧವದ ಐದನೆಯ ಅಂಕದಲ್ಲಿನ ಶ್ಮಶಾನ, ಪಿಶಾಚ, ಅಘೋರಘಂಟ, ಮಾಲತೀ, ಮತ್ತು ಮಾಧವ ಇವರಜ್ಞಾಪಕವು ಬಾರದಿರದು. ದಶಕುಮಾರ ಚರಿತದ ಪೂರ್ವಪೀಠಿಕೆಯ ಅಂತ್ಯವೂ ಉತ್ತರಪೀಠಿ ಕೆಯ ಮೊದಲನೆಯ ಕಥಾಭಾಗವೂ ಪರಸ್ಪರ ಭಿನ್ನವಾಗಿರುವುದರಿಂದ ಇವನನ್ನು ಕಥಾಸಂವಿಧಾನ ಚತುರನೆನಲಾಗುವುದಿಲ್ಲ.

ಪೂರ್ವಪೀಠಿಕೆಯ ಐದುಜನ ರಾಜಪುತ್ರರ ಕಥೆಯನ್ನು ದಂಡಿಯು ಬರೆದು ದಾಗಿಯೂ ಉಳಿದುದನ್ನು ಮತ್ತಾರೋಬರೆದುದಾಗಿಯೂ ಕೆಲವರ ಮತವಿರು ವುದು. ಇದಕ್ಕೆ ಸರಿಯಾದ ಆಧಾರಗಳು ದೊರೆಯುವುದಿಲ್ಲ. ದಕ್ಷಿಣದೇಶದ ಚಕ್ರಪಾಣಿದೀಕ್ಷಿತನೆಂಬುವನು " ದಶಕುಮಾರಚರಿತಶೇಷ " ಎಂಬ ಒಂದು ಗ್ರಂಥ ವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಗ್ರಂಥವು ಉಪಲಬ್ಧವಿಲ್ಲ. ಗ್ರಂಥಕಾರನ

ವಿಚಾರವೂ ತಿಳಿಯುದು. ಪ್ರಸಿದ್ಧಗ್ರಂಥಕರ್ತನೂ, ರಸಿಕಾಗ್ರಣಿಯೂ ಆದ ಅಪ್ಪಯ್ಯದೀಕ್ಷಿತನು ದಂಡಿಯುಪದಲಾಲಿತ್ಯದ ವಿಚಾರವಾಗಿ ಕೇವಲ ಅಭಿಮಾನಿಸಿ ಬರೆದಿರುವನು. ಇದೇ ಪ್ರಕಾರ ವಿನಾಯಕನೆಂಬುವನೂ ಬರೆದಿರುವುದಾಗಿ ತಿಳಿಯ ಬರುತ್ತದೆ. ಈ ರೀತಿಯಾದ ಪ್ರಶಸ್ತಿಗೆ ಮೂರು ಕಾರಣಗಳಿರುವುವು :—

(೧) ಆಗಣ ಕಾಲದಲ್ಲಿ ಗೀರ್ವಾಣ ಭಾಷೆಯಲ್ಲಿ ಪದಲಾಲಿತ್ಯವುಳ್ಳ ಗದ್ಯ ಪುಸ್ತಕಗಳು ಒಹಳಕಡಿಮೆ. ಅಲ್ಲದೆ ದಶಕುಮಾರಚರಿತದಂತೆ ಸುಲಭಶೈಲಿಯ ಗ್ರಂಥಗಳಾವುವೂ ಬರೆಯಲ್ಪಡಲಿಲ್ಲ. ಕಾದಂಬರೀ ವಾಸವದತ್ತಾದಿ ಗ್ರಂಥಗಳಿದ್ದು ವಾದರೂ ಅವುಗಳ ರಚನೆಯು ಕೇವಲ ಕೃತಕ. ಇದರ ಭಾಷೆಯು ಹಾಗಿರದೆ ಕೇವಲ ವ್ಯವಹಾರ ಭಾಷೆಯಂತಿರುವುದು. (೨) ಪಂಡಿತ ವಿಲ್ಸನ್ ಮಹಾಶಯನೇ ಮೊದಲಾದ ಯೂರೋಪಿನ ಸಂಸ್ಕೃತಜ್ಞರಿಂದ ದಶಕುಮಾರಚರಿತವು ಶ್ಲಾಘಿಸಲ್ಪಟ್ಟಿರುವುದರಿಂದ ಇದರ ಪ್ರಶಸ್ತಿಯು ನ್ಯಾಯವಾಗಿರಬೇಕಾದುದಕ್ಕಿಂತಲೂ ಹೆಚ್ಚಾಗಿ ಹೋಗಿದೆ. ಯೂರೋಪಿನಲ್ಲಿ ಗ್ರೀಕು ಮತ್ತು ಲ್ಯಾಟಿನ್ ಭಾಷೆಗಳು ಪ್ರಚಾರದಲ್ಲಿರುವಂತೆ ಗೀರ್ವಾಣಭಾಷಾಪ್ರಚಾರವು ಅಲ್ಲಿರುವುದಿಲ್ಲ. ಉದಾಹರಣೆಗಾಗಿ ಬಾಣನ ಕಾದಂಬರೀ ಮತ್ತು ಪಂಡಿತ ರಾಜನ ಗ್ರಂಥಗಳಿಗೆ ನಮ್ಮ ದೇಶದಲ್ಲಿರುವಷ್ಟು ಗೌರವವು ಪಾಶ್ಚಾತ್ಯದೇಶದಲ್ಲಿರುವದಿಲ್ಲ. ಅವರಿಗೆ ಹಿತೋಪದೇಶವು ಹೇಗೆ ಆದರ ಪಾತ್ರವಾಗಿರುವುದೋ ಹಾಗೆ ಕಿರಾತಾರ್ಜುನೀಯವು ಆಗಿರುವದಿಲ್ಲ. ಪಂಡಿತರಾಜನ 'ಭಾಮಿನೀವಿಲಾಸ' 'ರಸಗಂಗಾಧರ' ದಂತಹ ಅನುಪಮ ಗ್ರಂಥಗಳು ಬಹು ಜನರಿಗೆ ಗೊತ್ತೇ ಇಲ್ಲ. ಮುಂಬಯಿಯ ವಿದ್ಯಾಖಾತೆಯ ಮುಖ್ಯಾಧಿಕಾರಿಯಾದ ಗ್ರ್ಯಾಂಟ್ ಸಾಹೇಬನು ಮಹಾರಾಷ್ಟ್ರಕವಿಕುಲತಿಲಕನಾದ ತುಕಾರಾಮನ ಅಭಂಗಗಳನ್ನು ಕೇಳಿ ಹೇಗೆ ಅವನ ಗ್ರಂಥಗಳನ್ನು ಮಾನಿಸಿದನೋ ಹಾಗೆಯೇ ವಿಲ್ಸನ ಪಂಡಿತ ಮಹಾಶಯನು ದಶಕುಮಾರ ಚರಿತೆಯನ್ನು ಮಾನಿಸದಿದ್ದರೆ ಈ ಕವಿಯೂ ಎಷ್ಟೋಜನ ಅಪ್ರಸಿದ್ಧರಾದ ಕವಿಗಳ ಜೊತೆಗೆ ಸೇರಿಹೋಗುತ್ತಿದ್ದನು. (೩) ಇದರಲ್ಲಿ ಆಕಾಲದ ರಾಜಕೀಯ, ಧಾರ್ಮಿಕ, ಸಮಾಜಸ್ಥಿತಿಗಳು ವರ್ಣಿತಗಳಾಗಿರುವುದರಿಂದ ಇತಿಹಾಸ ಸಂಶೋಧಕರಿಗೂ, ಪ್ರಾಕ್ಕಾಲಜಿಜ್ಞಾಸುಗಳಿಗೂ ಉಪಯೋಗವಾಗಿರುವುದು.

ದಶಕುಮಾರಚರಿತೆಗೆ ಪದದೀಪಿಕಾ, ಪದಚಂದ್ರಿಕಾ, ಭೂಷಣಾ, ಲಘುದೀಪಿಕಾ ಎಂಬ ನಾಲ್ಕು ವ್ಯಾಖ್ಯಾನಗಳಿರುವುವು. ಈ ದಂಡಿಯಲ್ಲದೆ ಅವಂತಿಸುಂದರೀ ಕಥಾಕಾರನಾದ ದಂಡಿಯೊಬ್ಬನೂ ದ್ವಿಸಂಧಾನ ಕಾವ್ಯಕಾರನಾದ ದಂಡಿಯೊಬ್ಬನೂ ದೊರೆಯುವರು. ಇದರ ವಿಚಾರವು ಕ್ರಮಶಃ. ಮಾದರಿಗಾಗಿ ದಶಕುಮಾರ ಚರಿತದ ಕೆಲವು ಭಾಗಗಳನ್ನು ಬರೆಯುವೆವು. ಇದರಿಂದ ಪದಲಾಲಿತ್ಯ,

ಮತ್ತು ಶೈಲಿಯರೂಪವನ್ನು ತಿಳಿಯಬಹುದಾಗಿದೆ.—ಶ್ರುತ್ವಾ ತು ಭುವನವೃತ್ತಾಂ ತಮುತ್ತಮಾಂಗನಾ ವಿಸ್ಮಯವಿಕಸಿತಾಕ್ಷೀ ಸಸ್ಮಿತ ಮಿದಮಭಾಷತ| ದಯಿತ ತ್ವತ್ಪ್ರಸಾದಾದದ್ಯ ಮೇ ಚರಿತಾರ್ಥಾ ಶ್ರೋತ್ರವೃತ್ತಿರದ್ಯ ಮೇ ಮನಸಿ ತಮೋಽಪಹಸ್ತ್ವಯಾ ದತ್ತೋ ಜ್ಞಾನಪ್ರದೀಪಃ| ಪಕ್ವಮಿದಾನೀಂ ತ್ವತ್ಪಾದಪದ್ಮಪರಿಚರ್ಯಾಫಲಂ| ಅಸ್ಯ ಚ ತ್ವತ್ಪ್ರಸಾದಸ್ಯ ಕಿಮುಪಕೃತ್ಯ ಪ್ರತ್ಯುಪಕೃತವತೀ ಭವೇಯಂ ಅಭವದೀಯಂ ಹಿ ನೈವ ಕಿಂಚಿನ್ಮತ್ಸಂಬದ್ಧಂ |* ಅಥವಾಽಸ್ತ್ಯೇವಾಸ್ಯಾಪಿ........ರಾಗವೃತ್ತ್ಯಾ ಭೂಯೋ ಭೂಯಃ ಪ್ರಾವರ್ತ್ತಾತಿಮಾತ್ರ ಚಿತ್ರೋಪಚಾರಶೀಘರೋ ರತಿಪ್ರಬಂಧಃ (ಉತ್ತರಪೀಠಿಕೆ ರಾಜವಾಹನನ ಚರಿತೆ ಪ್ರಥಮೋಚ್ಛ್ವಾಸ).

ಇದರಲ್ಲಿನ ನೃತ್ಯವರ್ಣನ:—

ವಿದ್ಯುಲ್ಲತಾಮಿವ ವಿಡಂಬಯಂತೀ ಭೂಷಣಮಣಿರಣಿತದತ್ತಲಯಸಂವಾದಿಪಾದಚಾರಂ ಅಪದೇಶಸ್ಮಿತಪ್ರಭಾಭಿಷಿಕ್ತಬಿಂಬಾಧರಂ ಅವಸ್ರಂಸಿಪ್ರತಿಸಮಾಹಿತ ಶಿಖಂಡಭಾರಂ ಸಮಾಘಟ್ಟಿತ ಕ್ವಣಿತರತ್ನಮೇಖಲಾಗುಣಂ ಅಂಚಿತೋತ್ಥಿತಪೃಥುನಿತಂಬವಿಲಂಬಿತವಿಚಲದಂಶುಕೋಜ್ಜ್ವಲಂ ಆಕುಂಚಿತಪ್ರಸೃತವೇಲ್ಲಿತಭುಜಲತಾಭಿಹತಲಲಿತಕಂದುಕಂ ಆವರ್ಜಿತ ಬಾಹುಪಾಶಂ ಉಪರಿವರ್ತಿತತ್ರಿಕವಿಲಗ್ನಲೋಲಕುಂತಲಂ ಅವಗಲಿತ ಕರ್ಣಪೂರಕನಕಪತ್ರಪ್ರತಿಸಮಾಧಾನಶೀಘ್ರತಾನತಿಕ್ರಮಿತಪ್ರಕೃತಕ್ರೀಡನಂ ಅಸಕೃದುತ್ಕ್ಷಿಪ್ಯಮಾಣಹಸ್ತಪಾದಬಾಹ್ಯಾಭ್ಯಂತರಭ್ರಾಂತಕಂದುಕಂ ಅವನಮನೋನ್ನಮನೈರಂತರ್ಯನಷ್ಟದಷ್ಟಮಧ್ಯಯಷ್ಟಿಕಂ ಅವಪತನೋತ್ಪತನನಿರ್ವ್ಯವಸ್ಥಮುಕ್ತಹಾರಂ ಅಂಕುರಿತಘರ್ಮಸಲಿಲದೂಷಿತ

* 'ನನ್ನ ಸಂಬಂಧವಾದ ಸಮಸ್ತವೂ ನಿಮ್ಮದಾಗಿಯೇ ಇರುವದೆಂಬರ್ಥವುಳ್ಳ ಮೇಲೆ ಹೇಳಿದ ಅಭವದೀಯಂ ಹಿನ್ನೈವ ಕಿಂಚಿನ್ಮತ್ಸಂಬದ್ಧಂ' ಎಂಬುದನ್ನು ಮಹಾಕವಿ ಷೇಕ್ಸಪಿಯರನು ತಾನು ಬರೆದಿರುವ 'ವೆನಿಸಿನ ವರ್ತಕರು' (Merchant of Venice) ಎಂಬ ನಾಟಕದಲ್ಲಿ ನಾಯಿಕಾ ನಾಯಕರ ಭಾಷಣದಲ್ಲಿ ನಾಯಕಿಯ ಕೈಲಿ ಹೇಳಿಸಿರುವುದು ಎಷ್ಟು ಚೆಲುವೆಂಬುದನ್ನು ನೋಡಿ.

"Myself and what is mine, to you and yours.
Is now converted, but now I was the lord.
Of this fair mansion, master of my servants
Queen over myself: and even now, but now,
This house, these servants, and this same myself,
Are yours my lord!—"

Merchant of Venice act III scene II

ಕಪೋಲ ಪತ್ರಭಂಗಶೋಷಣಾಧಿಕೃತಶ್ರವಣಪಲ್ಲವಾನಿಲಂ ಆಗಲಿತಸ್ತನ ತಟಾಂಶುಕ ನಿಯಮವ್ಯಾಪೃತೈಕ ಪಾಣಿಪಲ್ಲವಂ ಚ ನಿಷದ್ಯೋತ್ಥಾಯ ನಿಮಾಲ್ಯೋನ್ಮೀಲ್ಯ ಸ್ಥಿತ್ವಾ ಗತ್ವಾಚೈವಾತಿಚಿತ್ರಂ ಪರ್ಯ ಕೀಡತ ರಾಜ ಕನ್ಯಾ। ಅಭಿಹತ್ಯ ಭೂತಲಾಕಾಶಯೋರಪಿ ಕ್ರೀಡಾಂತರಾಣಿ ದರ್ಶನಿ ಯಾನ್ಯೇಕೇನೈವ ವಾನೇಕೇನೈವ ಕಂದುಕೇನಾದರ್ಶಯತ್ ॥

ಉಚ್ಛ್ವಾಸ. ೬.—



## ಪದ್ಮಗುಪ್ತ.

" ಮೃಗಾಂಕದತ್ತಸೂನೋಃ ಪರಿಮಳಾಪರನ್ನಾಮ್ನಃ ಪದ್ಮಗುಪ್ತಸ್ಯಕೃತೌ " ಎಂಬ ಸರ್ಗಾಂತಗದ್ಯದಿಂದ ಇವನು ಮೃಗಾಂಕದತ್ತನ ಮಗನೆಂದೂ, ಪದ್ಮಗುಪ್ತ ನೆಂದೂ ಇವನಿಗೆ 'ಪರಿಮಳ'ನೆಂಬ ಮತ್ತೊಂದು ಹೆಸರಿದ್ದಿತೆಂದೂ ತಿಳಿಯುಬರು ತ್ತದೆ. ಇವನಕಾವ್ಯದ ೧,೩,೫ ನೆಯ ಸರ್ಗಾಂತ್ಯಗಳಲ್ಲಿ 'ಮೃಂಗಾಕಗುಪ್ತಸೂನೋಃ' ಎಂದೂ ೬ನೆಯ ಸರ್ಗಾಂತ್ಯದಲ್ಲಿ 'ಮೃಗಾಂಕಸೂನೋಃ' ಎಂದೂ ಉಳಿದವುಗಳಲ್ಲಿ 'ಮೃಗಾಂಕದತ್ತಸೂನೋಃ' ಎಂದಿರುವುದು.

ಡಾ|| ಬರ್ನೆಲ್ಲರವರು ತಾವು ಬರೆದಿರುವ ಪುಸ್ತಕಪಟ್ಟಿಯಲ್ಲಿ ಇವನನ್ನು ಪರಿಮಳಕಾಳಿದಾಸನೆಂದು ಕರೆದಿರುವರು§ ಇವನ ಹುಟ್ಟುಹೆಸರನ್ನು ಬಿಟ್ಟು ಕಾಳಿ ದಾಸನೆಂದು ಇಟ್ಟ ಹೆಸರಿನಿಂದ ಕರೆಯುವುದಾದರೆ ಇವನನ್ನು ನಾಲ್ಕನೆಯ ಕಾಳಿ ದಾಸನೆನ್ನಬೇಕಾಗುವುದು. ಇವನ ಲಲಿತಕವಿತೆಗಾಗಿ ಲೋಕವು ಇವನನ್ನು ಕಾಳಿ ದಾಸನೆಂದು ಕರೆದಿರಬಹುದೇ? ಹೇಗೆ? ಎಂಬ ವಿಚಾರವು ಯೋಚಿಸತಕ್ಕದಾಗಿದೆ.

ಪಂಡಿತ ರಾಮನರೇಶ ತ್ರಿಪಾಠಿಯವರು ಇವನನ್ನು 'ಅಭಿನವಕಾಳಿದಾಸ' ಎಂದು ಕರೆದಿರುವುದು ಹೊರ್ತು ಈ ವಿಚಾರವಾಗಿ ಯಾವ ಪ್ರಮಾಣವನ್ನೂ ಸಾಧಿಸಿರುವುದಿಲ್ಲ¶ ಇವನನ್ನು ಕಾಳಿದಾಸನಿಗೆ ಹೋಲಿಸುವುದಾದರೆ ಇವನ ಕಾವ್ಯ ದಲ್ಲ ಕಾಳಿದಾಸನ ಕೃತಿಗಳಲ್ಲಿ ಕಂಡುಬರುವ ಶೈಲಿಯ ಸರಳತೆ, ಪ್ರಸಾದ, ಮಾಧು ರ್ಯ, ಉಪಮಾನೋಪಮೇಯಗಳ ಉತ್ಕರ್ಷತೆ, ಉದಾತ್ತಭಾವ, ವಿಷಯಸಾಧನ ಚತುರತೆ, ರಸಸಂಗೋಪನ, ನಿಯಮಮರ್ಯಾದಾ ಇವೇ ಮೊದಲಾದ ಮನೋಹರ

§ Dr. Burnell's catalogue of the M. S S. in the Tanjore Palace Library

¶ ಕವಿತಾ ಕೌಮುದಿ. ಪುಟ ೧೪೦

ವಿಷಯಗಳು ಜಾರಿ, ಲಲಿತಪದಬಂಧುರವು ಮಾತ್ರವೇ ಹೆಚ್ಚಾಗಿ ತೋರುವುದನ್ನು ನೋಡಿ ಮನಸೋತ ತ್ರಿಪಾಠಿಯವರು ಕೇವಲ ಅಭಿಮಾನದಿಂದ ಪದ್ಮಗುಪ್ತನನ್ನು 'ಅಭಿನವಕಾಳಿದಾಸ'ನೆಂದು ಕರೆದಿರಬಹುದಾಗಿ ನಮಗೆನಿಸುತ್ತದೆ.

ಡಾ|| ಬರ್ನೆಲ್ಲರವರ 'ಪುಸ್ತಕಾನುಕ್ರಮಣಿಕೆ'ಯಂತೆ ಪದ್ಮಗುಪ್ತನನ್ನು 'ಕಾಳಿದಾಸ' ಎಂದು ಕರೆಯಬೇಕಲ್ಲದೆ ಅವನು ಬರೆದಿರುವ ಗ್ರಂಥದಲ್ಲಿ ಎಲ್ಲಿಯೂ ಹೇಳಿಕೊಂಡಿರುವಂತೆ ಕಂಡುಬರುವುದಿಲ್ಲ. ಹಾಗೆ ಇದ್ದುದಾಗಿದ್ದರೆ 'ಪರಿಮಳಾಪರನಾಮ' ನೆಂದು ಕವಿಯು ಹೇಳಿಕೊಂಡಿರುವಂತೆ 'ಕಾಳಿದಾಸ'ನೆಂಬಾಪರನಾಮವೂ ಇದ್ದಿತಾಗಿ ಹೇಳಿಕೊಳ್ಳುತ್ತಿದ್ದನೆಂದು ನಮಗೆ ತೋರುತ್ತದೆ.

ಸ್ಥಳ, ಕುಲ, ಗೋತ್ರಗಳೊಂದೂ ತಿಳಿಯದ ಈ ಕವಿಯನ್ನು ಕಾಶ್ಮಿರ ಬ್ರಾಹ್ಮಣನೆಂದೂ‡ ಜಿನಮತಾನುಯಾಯಿ ಎಂದು ತ್ರ್ಯಂಬಕಗುರುನಾಥಕಾಳಿಯವರೂ ಹೇಳುವರು* ಇವನು ಜೈನನೆಂಬುವುದಕ್ಕೆ ಯಾವ ಪ್ರಮಾಣವನ್ನೂ ಸಾಧಿಸಿರುವುದಿಲ್ಲ. ಇವನು ಕಾಶ್ಮೀರದವನೆಂದೂ ದೇಶಪರ್ಯಟನಕ್ಕಾಗಿ ಹೊರಟು ಮಾಳವಕ್ಕೆ ಬಂದು ನಿಂತುದರ ವಿಚಾರವಾಗಿ ಎಲ್ಲಿಯೂ ಸಮರ್ಥಿಸಿ ಹೇಳಿರುವುದಿಲ್ಲ. ಹಾಗೆ ಹೇಳುವ ಪ್ರಮಾಣಗಳೊಂದೂ ದೊರೆಯವು. 'ಕುಟ್ಟನೀಮತ' ಕಾರನಾದ ದಾಮೋದರ ಗುಪ್ತನನ್ನು ಬ್ರಾಹ್ಮಣನೆಂದು ಹೇಳಿರುವಂತೆ ಪದ್ಮ ಅಥವಾ ಪರಿಮಳನ ಹೆಸರಿಗೆ 'ಗುಪ್ತ ಅಥವಾ 'ದತ್ತ' ಶಬ್ದಗಳ ಜೋಡಣೆಯಿಂದ ಇವನು ಬ್ರಾಹ್ಮಣನಾಗಿರಬಹುದಾಗಿ ಹೇಳಲು ಅವಕಾಶವಿದೆ. ಕವಿಯು 'ಧಾರಾ' ನಗರದವನೆಂದು 'ಭೋಜರಾಜ' ಚರಿತವು ಹೇಳುತ್ತದೆ$ ಕವಿಯು ಅಲ್ಲಿಯೇ ಇದ್ದವನಾದುದರಿಂದ ಹಾಗೆ ಹೇಳಿರಬಹುದು ಹೊರ್ತು ನಾಮೋಲ್ಲೇಖನ ಮಾತ್ರದಿಂದ ಹಾಗೆ ಸಾಧಿಸುವುದು ಸಾಹಸದ ಕೆಲಸ.

**ಕಾಲ** :—ಧಾರಾನಗರದ ಪರಮಾರ ಸಿಂಧು (ಲ) ರಾಜನು ಕ್ರಿ. ಶ. ೯೯೫-೧೦೧೦ ರ ವರೆಗೆ ಆಳಿದುದಾಗಿ ಚರಿತ್ರೆಯು ಹೇಳುತ್ತದೆ. ಪದ್ಮಗುಪ್ತನು ಇವನ ಆಶ್ರಯದಲ್ಲಿದ್ದವನಾದುದರಿಂದ ಇವನು ಕ್ರಿ. ಶ. ೧೧ನೆಯ ಶತಮಾನದವನೆಂಬುದು ಸ್ಪಷ್ಟವು.

**ಗ್ರಂಥ** :—ಇವನು ತನಗೆ ಆಶ್ರಯವನ್ನು ಕೊಟ್ಟ ಸಿಂಧು (ಲ) ರಾಜನ ವಿಚಾರವಾದ ಕಾವ್ಯವನ್ನು ಹದಿನೆಂಟು ಅಧ್ಯಾಯಗಳಲ್ಲಿ ಬರೆದು ಅದನ್ನು 'ನವಸಾಹ

‡ ಸಂಸ್ಕೃತಕವಿಜೀವಿತಮು ಪುಟ ೧೬೪.

* ಸಂ ಕವಿಚರಿತೆ ಪುಟ ೩೨.

$ Bhoja Raja Published by Annamalai University P. 16

ಸಾಂಕಚರಿತ' ಎಂದುಕರೆದಿರುವನು. ಸಿಂಧು (ಲ) ರಾಜನನ್ನು **ನವಸಾಹಸಾಂಕ**ನೆಂದೂ **ಕುಮಾರನಾರಾಯಣ**ನೆಂದೂ ಕರೆಯುವ ರೂಢಿಯುಇದ್ದುದಾಗಿ :—

ನಿರ್ವ್ಯೂಢನಾನಾದ್ಭುತಸಾಹಸಂ ಚ
ರಣೇ ವೃತಂ ಚ ಸ್ವಯಮೇವ ಲಕ್ಷ್ಮ್ಯಾ
ಸಾಮ್ನಾಯಮೇಕೇ **ನವಸಾಹಸಾಂಕಂ**
ಕುಮಾರನಾರಾಯಣಮಾಹುರನ್ಯೇ ||
ನವಸಾಹಸಾಂಕ ಚರಿತ ೧—೫೯.

ಎಂಬ ಶ್ಲೋಕದಿಂದ ಸ್ಪಷ್ಟಪಡುತ್ತದೆ.

ಸಿಂಧುರಾಜನು ಒಂದಾನೊಂದುದಿವಸ ಮೃಗಯಾ ವಿನೋದಕ್ಕಾಗಿ ಹೊರಟು ದೃಷ್ಟಿಪಥಕ್ಕೆ ದೊರೆತ ಒಂದು ಹರಿಣದ ಬೆನ್ನಟ್ಟಿ ವಿಂಧ್ಯಕಂದರಪ್ರಾಂತವನ್ನೈದಿ ಮಾರ್ಗಮಧ್ಯದಲ್ಲಿ ದೊರೆತ ರತ್ನಹಾರವನ್ನು ನೋಡಿ ಅಚ್ಚರಿಗೊಂಡು ಇದಾರದೋ ರಾಜಾಂತಃಪುರ „ಪುರಂಧ್ರಿಯರದಾಗಿರಬೇಕೆಂದು ತರ್ಕಿಸುತ್ತಾ ಮಾರ್ಗಕ್ರಮಣ ಮಾಡಿ ಸುಯೋಗದಿಂದ ದೊರೆತ ಶಶಿಪ್ರಭಾ ಮೊದಲಾದ ಸುಂದರಿಯರನ್ನು ವರಿಸಿ ರಾಜಧಾನಿಗೆ ಹಿಂತಿರುಗಿ ಸಾಮ್ರಾಜ್ಯ ಸುಖವನ್ನನುಭವಿಸಿದನೆಂಬುದು ಕಾವ್ಯದ ತಿರುಳು. ಪರಮಾರ ವಂಶಾವಳಿಯು ಈ ಕಾವ್ಯದ ಹನ್ನೊಂದನೆಯ ಸರ್ಗದಲ್ಲಿ ವರ್ಣಿತವಾಗಿರುವುದು. ಪ್ರಾಚೀನಕವಿವರ್ಣನಾವಸರದಲ್ಲಿ ಇವನು ಆದರ್ಶ ಕವಿಯಾದ ಭರ್ತೃಮೇಂಠನನ್ನು ಹೇಳಿಕೊಂಡಿರುವನು. ಇದು ಕಾವ್ಯಲಕ್ಷಣಗಳಿಂದ ಕೂಡಿರುವುದಾಗಿ ಪೇಶಲಶೈಲಿಯನುಳ್ಳುದಾಗಿ ಹೇಳಿರುವುದಾದರೂ ಕಥಾಮಧ್ಯದಲ್ಲಿ ಅಲ್ಲಲ್ಲಿ ಪರಸ್ಪರ ಭಾಷಣಗಳನ್ನು ಲಂಬಿಸಿ ವಿಸ್ತೃತವರ್ಣನೆಗಳನ್ನು ತುಂಬಿರುವನಾದುದರಿಂದ ಕಥೆಯಕಲ್ಪನಾತಂತುವು ಅಲ್ಲಲ್ಲಿಕಿತ್ತುಹೋಗಿ ಪುನಃ ಗಂಟುಹಾಕಿದಂತೆ ಇದೆ. ಇವನದೆಂದುಹೇಳುವ ಅನೇಕ ಶ್ಲೋಕಗಳು ಕ್ಷೇಮೇಂದ್ರನ 'ಔಚಿತ್ಯವಿಚಾರ ಚರ್ಚಾ', ಧನಂಜಯಕೃತ, 'ದಶರೂಪಕ' ಸುಭಾಷಿತಾವಳಿ, ಶಾರ್ಙಧರ'ಪದ್ಧತಿ' ಸುವೃತ್ತತಿಲಕಾದಿ ಗ್ರಂಥಗಳಲ್ಲಿ ದೊರೆಯುವುವು. ಗ್ರಂಥವು ಸರಳವಾಗಿದ್ದರೂ ರಸದೌರ್ಬಲ್ಯವು ಅಲ್ಲಲ್ಲಿ ಮೂಡಿರುವ ಹಾಗೆ ತೋರುತ್ತದೆ. ಅಲ್ಲದೆ ಕವಿಯ ಮತ್ತು ಓದುಗರ ಅಂತಃಕರಣಗಳೊಂದಾಗಿ ಅದರಲ್ಲಿ ಸರ್ವವನ್ನೂ ಲೀನಮಾಡಿ ಕೊಳ್ಳುವ ಪ್ರಕೃತಿ ವಿಶೇಷವು ಇರುವೆಡೆಯಲ್ಲಿ ಕವಿತೆಯು ಶೋಭಿಸುವುದು. ಅದು ಇದರಲ್ಲಿ ಮೃಗ್ಯವು. ಬಾಣಮಹಾಕವಿಕೃತ 'ಹರ್ಷಚರಿತೆ', ಬಿಲ್ಹಣಕವಿಕೃತ ವಿಕ್ರಮಾಂಕದೇವಚರಿತೆ, ವಾಮನಭಟ್ಟ ಬಾಣವಿರಚಿತ, 'ವೇಮಭೂಪಾಲಚರಿತೆ' ಇವುಗಳಂತೆ ಇರದೆ ಯಾವುದೋ ನೂತನ ಮಾರ್ಗವನ್ನು ಅವಲಂಬಿಸಿದೆ.

ಮಾದರಿಗಾಗಿ ಕೆಲವು ಶ್ಲೋಕಗಳು:-—

ಮಯಿ ಗೋಪ್ತರಿ ಚೋರೋಽಯಮಬಲಾಲೋಚನಶ್ರಿಯಃ
ಇತೀವ ಮುಮುಚೇ ತೇನ ಕೃಷ್ಣಸಾರೇ ಶಿಲೀಮುಖಃ ॥ ೨-೧೭

ನವಸಾಹಸಾಂಕನು ವನವಿಹರಣಕ್ಕಾಗಿ ಮಹಾಟವಿಯನ್ನು ಹೊಕ್ಕು ಅಲ್ಲಿರುವ ಕ್ರೂರಮೃಗಗಳನ್ನು ಕೊಲ್ಲುತ್ತ ಜಿಂಕೆಯ ತಂಡವನ್ನು ನೋಡಿ ನಾನು ಪ್ರಜೆಗಳನ್ನು (ಚೋರಭಯದಿಂದ ತಪ್ಪಿಸಿ) ಕಾಪಾಡುತ್ತಿದ್ದಾಗ್ಯೂ ರಾಜನಾದ ನನ್ನ ಎದುರಿನಲ್ಲಿ ನಿರ್ಭಯವಾಗಿ ಈ ಹರಿಣಗಳು ಚಂಚಲಾಕ್ಷಿಯರ (ಸುಂದರಿಯರ) ನೋಟವನ್ನು ಅಪಹರಿಸಿರುವುವಾಗಿ ತಿಳಿದು (ಕಳ್ಳತನದ ಶಿಕ್ಷೆಗಾಗಿ) ಅವುಗಳ ಮೇಲೆ ಬಾಣಪ್ರಯೋಗವನ್ನು ಮಾಡಿದನು.

ಅರಣ್ಯಾನೀ ಕ್ವೇಯಂ ಧೃತಕನಕಸೂತ್ರಃ ಕ್ವ ಸ ಮೃಗಃ
ಕ್ವ ಮುಕ್ತಾಹಾರೋಽಯಂ ಕ್ವ ಚ ಸ ಪತಗಃ ಕ್ವೇಯಮಬಲಾ
ಕ್ವ ತತ್ಕನ್ಯಾರತ್ನಂ ಲಲಿತಮಹಿಭರ್ತುಃ ಕ್ವ ಚ ವಯಂ
ಸ್ವಮಾಕೂತಂ ಧಾತಾ ಕಿಮಪಿ ನಿಭೃತಂ ಪಲ್ಲವಯತಿ ॥ ೫—೮೧

ರಾಜನು 'ಶಶಿಪ್ರಭಾ' ದರ್ಶನಾರ್ಥವಾಗಿ ಹೋದಾಗ ಅವಳನ್ನು ನೋಡಿ ಅಚ್ಚರಿಗೊಂಡು ಹೇಳುವಿಕೆ:—

ಈ ಮಹಾರಣ್ಯವು ಎಲ್ಲಿ? ಸುವರ್ಣಸೂತ್ರ (ಚಿನ್ಹೆ) ಗಳಿಂದ ಕೂಡಿದ ಆ ಮೃಗವು ಎಲ್ಲಿ? ಆ ಮುತ್ತಿನ ಸರವೆಲ್ಲಿ? ಆ ಪಕ್ಷಿಯು ಎಲ್ಲಿ? ಆ ಸ್ತ್ರೀ ಎಲ್ಲಿ? ಮನೋಹರಳಾದ ಆ ನಾಗಕನ್ಯಾಮಣಿಯು ಎಲ್ಲಿ? ಎಂದು ಈರೀತಿಯಾಗಿ ಬ್ರಹ್ಮನು ಅನಿರ್ವಚನೀಯವಾದ ತನ್ನ ಇಂಗಿತವನ್ನು (ಅಪೇಕ್ಷೆಯನ್ನು) ಸ್ಥಳಕಾಲನಿರ್ದೇಶವಿಲ್ಲದೆ ಎಲ್ಲೆಲ್ಲಿಯೋ ಅಂಕುರಿಸುವಂತೆ ಮಾಡುತ್ತಾನೆ. ಇದು ಆಶ್ಚರ್ಯ.

ನರ್ಮದೆಯು ಹೇಳುವ ರಾಜನ ಪರಾಕ್ರಮವರ್ಣನೆಯು ಹೀಗಿರುವುದು:—

ಸಮಾನಭಾವೈಸ್ತ್ರಿಭಿರೇವ ಮನ್ಯೇ
ಸಮುದ್ರನೇಮಿರ್ವಸುಧಾ ಧೃತೇಯಂ
ಭುಜಂಗಮೇಂದ್ರೇಣ ಚ ಮೇರುಣಾ ಚ
ದೋಷ್ಣಾ ಚ ಮೌರ್ವೀಕಿಣಶೋಭಿನಾತೇ ॥ ೯—೭

ಸಮುದ್ರವೇ ಎಲ್ಲೆಯಾಗಿರತಕ್ಕ ಈ ಭೂಮಿಯು ಪರಸ್ಪರ ಸಮಾನಗಳಾಗಿರತಕ್ಕ ಸರ್ಪರಾಜನಾದ ಆದಿಶೇಷನಿಂದಲೂ, ಮೇರುಪರ್ವತದಿಂದಲೂ, ಅನವರತವೂ ಬಾಣಪ್ರಯೋಗದಿಂದ ಜಡ್ಡುಕಟ್ಟಿರತಕ್ಕ (ಬಾಣಗಳಿಂದ ಕ್ಷತವಾಗಿ ಶೋಭಿಸುತ್ತಿರುವ) ನಿನ್ನ ಬಾಹುವಿನಿಂದಲೂ ಧರಿಸಲ್ಪಟ್ಟಿರುವುದಾಗಿ ತಿಳಿಯುತ್ತೇನೆ.

ತ್ವಯಿ ಸ್ಥಿತೇ ಸಂಪ್ರತಿ ಜಾಗರೂಕೇ
ಜಗದ್ವಿಧೇಯೇಷು ವಿಘೂತಚಿಂತಃ

ಕರೋತಿ ನೇತ್ರೇ ಭಗವಾನವೈಮಿ
ಸಯೋಗನಿದ್ರಾಮುಕುಲೇ ಮುಕುಂದಃ || ೯—೮

ಎಲೈ ರಾಜನೆ! ನೀನು ಯಾವಾಗಲೂ ಬಹುಜಾಗರೂಕನಾಗಿದ್ದುಕೊಂಡು ರಾಜ್ಯ (ಭೂ) ರಕ್ಷಣೆಯನ್ನು ಮಾಡುತ್ತಲಿರುವುದರಿಂದ ಮುಕುಂದನು ಲೋಕ ವ್ಯಾಪಾರಗಳಲ್ಲಿ ಚಿಂತಾರಹಿತನಾಗಿ ಯೋಗನಿದ್ರಾಪರವಶನಾಗಿರುತ್ತಾನೆಂದು ತಿಳಿ ಯುತ್ತೇನೆ.

## ಧ ನ ಂ ಜ ಯ (೨)

ವಿಷ್ಣೋಸ್ಸುತೇನಾಪಿಧನಂಜಯೇನ ವಿದ್ವನ್ಮನೋರಾಗನಿಬಂಧಹೇತು
ಆವಿಷ್ಕೃತಂಮುಂಜಮಹೀಶಗೋಷ್ಠೀ ವೈದಗ್ಧ್ಯಭಾಜಾದಶರೂಪಮೇತತ್

ಎಂಬಶ್ಲೋಕದಿಂದ, ಇವನು ವಿಷ್ಣುವಿನ ಮಗನೆಂದೂ, ಮುಂಜರಾಜನ ಆಸ್ಥಾನ ಪಂಡಿತನೆಂದೂ, ದಶರೂಪವೆಂಬ ಲಕ್ಷಣಗ್ರಂಥಕಾರನೆಂದೂ, ಬ್ರಾಹ್ಮಣ ನೆಂದೂ ತಿಳಿಯಬರುತ್ತದೆ.

**ಕಾಲ:**—ಮುಂಜನು ಕ್ರಿ. ಶ. ಹತ್ತನೆಯ ಶತಮಾನದವನು. ಧನಂಜ ಯನು ಇವನ ಸಮಕಾಲೀನನು.

**ಗ್ರಂಥ:**—ಇವನು 'ದಶರೂಪಕ' ಎಂಬ ಲಕ್ಷಣಗ್ರಂಥವನ್ನು ಬರೆದಿರುವು ದಾಗಿ ಮೇಲೆ ಹೇಳಿರುವೆವು. ಇವನು ಭರತಾದಿನಾಟ್ಯಶಾಸ್ತ್ರಕಾರರ ಗ್ರಂಥಗಳನ್ನು ಪರಿಶೀಲಿಸಿ ಉಪಯುಕ್ತ ವಿಷಯಗಳನ್ನು ಮಾತ್ರವೇ ಸಂಗ್ರಹಿಸಿ ಸುಲಭವಾಗಿ ತಿಳಿಯುವಂತೆ ಬರೆದಿರುವನು. ಕಾಲಕ್ರಮದಲ್ಲಿ ರೂಪಕ ನಿರ್ಮಾಣಾದಿ ಗ್ರಂಥ ರಚನೆಗೆ ಇದು ಪ್ರಮಾಣ ಗ್ರಂಥವಾಗಿರುವುದು. ಇದಕ್ಕೆ ಧನಿಕನು "ದಶರೂಪಾವ ಲೋಕ" ಎಂಬ ವ್ಯಾಖ್ಯಾನವನ್ನು ಬರೆದಿರುವನು.

## ಧ ನಿ ಕ

ಇವನು ದಶರೂಪಕಾರನಾದ ಧನಂಜಯನ ಸೋದರನು. ಇವನು ಕ್ರಿ. ಶ. ೧೧ನೆಯ ಶತಮಾನದವನು.

**ಗ್ರಂಥಗಳು:**—ಇವನು 'ಕಾವ್ಯನಿರ್ಣಯ' ಎಂಬ ಲಕ್ಷಣಗ್ರಂಥವನ್ನು ಬರೆದಿ ರುವುದಲ್ಲದೆ 'ದಶರೂಪಾವಲೋಕ'ವೆಂಬ ವ್ಯಾಖ್ಯಾನವನ್ನು ಬರೆದಿರುವನು. ದಶರೂ

* ದಶರೂಪಕ ಪುಟ ೧೧೦

ಪಾವಲೋಕದ ಒಂದಾನೊಂದು ಹಸ್ತಪ್ರತಿಯಲ್ಲಿ ಇವನಿಗೆ ಉತ್ಪಲರಾಜ(ಮುಂಜರಾಜ)ನಬಳಿ ಮಹಾಸಾಧ್ಯಪಾಲ (ಇದಕ್ಕೆ ಈಗಣ ಹೆಸರೇನೆಂಬುದು ತಿಳಿಯದು) ಕೆಲಸವಿದ್ದುದಾಗಿ ತಿಳಿಯಬರುತ್ತದೆ. §

'ಸಾಹಿತ್ಯದರ್ಪಣ'ಕಾರನು ಧನಂಜಯನೂ ಧನಿಕನೂ ನಾಮಸಾಮ್ಯದಿಂದ ಒಬ್ಬನೇ ಎನ್ನುವನು. ಆದರೆ ಇಂತಹ ಸಂಶಯಕ್ಕೆಡೆಗೊಡದಂತೆ ಗ್ರಂಥಕಾರನೇ ಸ್ಪಷ್ಟಪಡಿಸಿರುವನು. ಇದಲ್ಲದೆ ಭಾರತಕೀ 'ಪ್ರಾಚೀನರಾಜವಂಶ' ಎಂಬ ಹಿಂದೀ ಗ್ರಂಥದಲ್ಲಿ ಧನಿಕನ ವಿಚಾರವಾಗಿ ಬರೆಯುವಾಗ "ಯಹ ಧನಂಜಯಕಾಭಾಯೀಥಾ. ಇಸನೇ ಅಪನೇ ಭಾಯಿಕೇ ರಚನೇಹುಯೇ ದಶರೂಪಕಪರದಶರೂಪಾವಲೋಕನಾಮಕೀ ಟೀಕಾಲಿಖೀ. ಔರ 'ಕಾವ್ಯನಿರ್ಣಯ' ನಾಮಕಾ ಅಲಂಕಾರ ಗ್ರಂಥ ಬನಾಯ" ಎಂದು ಸ್ಪಷ್ಟಪಡಿಸಿರುವುದರಿಂದ ಧನಿಕನು ಧನಂಜಯನ ಸೋದರನೆಂಬುದು ವ್ಯಕ್ತವು.



## ಅ ಜಿ ತ ಸೇ ನ

ಇವನು ಜೈನನು ಕ್ರಿ. ಶ. ೧೦ನೆಯ ಶತಮಾನದಲ್ಲಿದ್ದ ಚಾಮುಂಡರಾಜನ ಪುರೋಹಿತನೂ ಗಂಗರಸನಾದ ರಾಯಮಲ್ಲನ ಮುಖ್ಯಾಮಾತ್ಯನೂ ಕನ್ನಡಕವಿಯಾದ ನಾಗವರ್ಮನ ಉಪಾಧ್ಯಾಯನೂ, ಬೆಂಕೀಪುರಮಠದ ಸರ್ವಾಧಿಕಾರಿಯೂ ಆಗಿದ್ದನು. ಚಂದ್ರವಂಶದ ಕಾಮಿರಾಯನು ಕೇಳಿಕೊಂಡುದರಿಂದ ಇವನು 'ಶೃಂಗಾರಮಂಜರಿ' ಎಂಬ ಗ್ರಂಥವನ್ನು ಬರೆದುದಾಗಿ ಹೇಳಲ್ಪಟ್ಟಿರುವದು. ಇದರಲ್ಲಿ ೧೨೮ ಶ್ಲೋಕಗಳಿದ್ದು ಮೂರು ಪ್ರಕರಣಗಳಾಗಿ ವಿಂಗಡಿಸಲ್ಪಟ್ಟಿರುವುದು. $

---

## ಹ ಲಾ ಯು ಧ

ಇತಿಸಮಾಪ್ತಮವಾಪ್ತಗುಣೋದಯಂ
ಕವಿರಹಸ್ಯಮಿದಂರಸಿಕಪ್ರಿಯಂ
ಸದಭಿಧಾನನಿದಾನಹಲಾಯುಧ
ದ್ವಿಜವರಸ್ಯಕೃತಿಃ ಸುಕೃತಾತ್ಮನಃ ||

---

§ S. K De's Sanskrit Poetics P 132

$ History of Sanskrit Literature P. 163.

ಅಸ್ತ್ಯಗಸ್ತ್ಯಮುನಿಜ್ಯೋತ್ಸ್ನಾ ಪವಿತ್ರೇದಕ್ಷಿಣಾಪಥೇ
ಕೃಷ್ಣರಾಜ ಇತಿಖ್ಯಾತೋ ರಾಜಾಸಾಮ್ರಾಜ್ಯದೀಕ್ಷಿತಃ ||

ಎಂಬ ಶ್ಲೋಕಗಳಿಂದ ಇವನು ಬ್ರಾಹ್ಮಣನೆಂದೂ ದಕ್ಷಿಣದೇಶದವನೆಂದೂ ಕೃಷ್ಣರಾಜನ ಸಮಕಾಲೀನನೆಂದೂ ತಿಳಿಯಬರುವದು. ಈ ಕೃಷ್ಣರಾಜನಾರೆಂಬುದು ತಿಳಿಯದು.

**ಕಾಲ:**—ಇವನು 'ಅಭಿಧಾನರತ್ನಮಾಲೆ'ಯನ್ನು ಕ್ರಿ. ಶ. ೯೫೦ರಲ್ಲಿ ಬರೆದುದಾಗಿ ಪ್ರೊ. ಮ್ಯಾಕಡಾನಲ್ಲರವರು ಹೇಳುವರು. * ಕವಿರಹಸ್ಯವು ಕ್ರಿ. ಶ. ೧೦ನೆಯ ಶತಮಾನದಲ್ಲಿ ಬರೆಯಲ್ಪಟ್ಟುದಾಗಿ ಡಾ|| ಕೀತರವರ ಮತವಿರುವುದು. ಆದುದರಿಂದ ಇವನು ಕ್ರಿ. ಶ. ಹತ್ತನೆಯ ಶತಮಾನದವನೆಂಬುದು ಸ್ಪಷ್ಟವು.

**ಗ್ರಂಥಗಳು:**—ಮೇಲೆ ಹೇಳಿದ ಅಭಿಧಾನ ರತ್ನಮಾಲಾ ಮತ್ತು ಕವಿರಹಸ್ಯ ಗ್ರಂಥಗಳಲ್ಲದೆ 'ಮೃತಸಂಜೀವಿನೀ' ಎಂಬ ವ್ಯಾಖ್ಯಾನವನ್ನೂ ಬರೆದಿರುವುದಾಗಿ ತಿಳಿಯಬರುತ್ತದೆ ಇದು ಕವಿರಹಸ್ಯದ ವ್ಯಾಖ್ಯಾನವಾಗಿರಬಹುದು. § ಕವಿರಹಸ್ಯದ ವಿಚಾರವಾಗಿ ಕವಿಯಪ್ರತಿಜ್ಞೆಯು ಹೀಗಿರುವದು.

ಲೋಕೇಷುಶಾಸ್ತ್ರೇಷುಚಯೇಪ್ರಸಿದ್ಧಾಃ
ಕಾವ್ಯೇಷುಯೇಸತ್ಕವಿಭಿಃ ಪ್ರಯುಕ್ತಾಃ
ಉದ್ಧೃತ್ಯಕಾಂಶ್ಚಿತ್ಯವಿನೋದನಾಯ
ಶಬ್ದಾನಹಧಾತುಭಿರುದ್ಧರಾಮಿ ||

ಇದರಲ್ಲಿ ೨೭೪ ಶ್ಲೋಕಗಳಿರುವವು. ಗ್ರಂಥಾಂತ್ಯದಲ್ಲಿ "ಇತಿಹಲಾಯುಧಪ್ರಣೀತಂ ಶ್ರೀ ಕವಿರಹಸ್ಯಂ ಸಮಾಪ್ತಂ" ಎಂದಿದೆ.



## ಭಟ್ಟನಾಯಕ

ಇವನು ಮೀಮಾಂಸಕನೆಂಬುದು ಹೊರ್ತು ಇವನ ವಿಚಾರವಾಗಿ ಮತ್ತಾವುದೂ ತಿಳಿಯದು. ರಾಜತರಂಗಿಣಿಯಲ್ಲಿ ಕಲ್ಹಣನು ಶಂಕರವರ್ಮನ ಆಶ್ರಯದಲ್ಲಿ ಭಟ್ಟನಾಯಕನೊಬ್ಬನಿದ್ದುದಾಗಿ ಹೇಳಿರುವನು. ಇವನೇನಾವು ಹೇಳುವ ಭಟ್ಟನಾಯಕನಾಗಿರಬಹುದು.

* A. A Macdonell's History of Sanskrit Literature P 433.
§ The Classical Sanskrit Literature P 161.

**ಕಾಲ:**—ಕ್ರಿ. ಶ, ೯ನೆಯ ಶತಮಾನದ ಉತ್ತರಾರ್ಧದವನಾದ ಆನಂದ ವರ್ಧನನ ಗ್ರಂಥಗಳ ವಿಚಾರವಾಗಿ ಖಂಡಿಸಿಬರೆದಿರುವುದರಿಂದಲೂ ಹತ್ತನೆಯ ಶತ ಮಾನದವನಾದ ಅಭಿನವಗುಪ್ತಾಚಾರ್ಯನು ತಾನು ಬರೆದಿರುವ 'ಅಭಿನವಭಾರತ' ಎಂಬ ಗ್ರಂಥದಲ್ಲಿ ಭಟ್ಟನಾಯಕನನ್ನು ಹೇಳಿಕೊಂಡಿರುವುದರಿಂದ ಆನಂದವರ್ಧನನ ಈಚಿನವನೂ ಅಭಿನವಗುಪ್ತನ ಪ್ರಾಚೀನನೂ ಕ್ರಿ. ಶ. ಹತ್ತನೆಯ ಶತಮಾನದ ವನೂ ಎಂಬುದು ಸ್ಪಷ್ಟವು.

ಇವನು "**ಹೃದಯದರ್ಪಣ**" † ಎಂಬ ಅಲಂಕಾರ ಗ್ರಂಥವನ್ನು ಬರೆದಿರು ವನು. ಇದನ್ನು ಸಹೃದಯದರ್ಪಣವೆಂದೂ ಕರೆಯುವುದುಂಟು.

ಧ್ವನಿಯೇ ಕಾವ್ಯದಜೀವವೆಂದೂ, ರಸಸ್ಥಿತಿಗೆ ವ್ಯಂಜನೋಪಕರಣಗಳೆನ್ನುವ ಆನಂದವರ್ಧನನ ಮತವನ್ನು ಖಂಡಿಸಿ ರಸೋಪಪತ್ತಿಗೆ (೧) ಅಭಿಧಾಯಕತ್ವ. (೨) ಭಾವಕತ್ವ. (೩) ಮತ್ತು ಭೋಜಕತ್ವವೆಂಬ ಕ್ರಿಯಾ ತ್ರಯಂಗಳನ್ನು ವಿಸ್ತ ರಿಸಿ ಉದಾಹರಣೆಗಳನ್ನು ನಾತವಾಹನನ 'ಗಾಥಾ ಸಪ್ತಶತಿ' ಶ್ರೀಮದ್ರಾಮಾಯಣ ಮತ್ತು ಯಶೋವರ್ಮನ ರಾಮಾಭ್ಯುದಯವೆಂಬ ಗ್ರಂಥಗಳಿಂದಾರಿಸಿಕೊಂಡು ಹೇಳಿರುವನು.

ಪ್ರಸಿದ್ಧವ್ಯಾಖ್ಯಾನಕಾರನಾದ ಮಲ್ಲಿನಾಥನು ರಸವೈಶಿಷ್ಟ್ಯವನ್ನು ಹೇಳುವ (Rasa-realization) ಆಲಂಕಾರಿಕರನ್ನು ನಾಲ್ಕುವಿಧವಾಗಿ ವಿಂಗಡಿಸಿ ಲೊಲ್ಲಟನ ಮತಾನುಯಾಯಿಗಳಾದ ಆಲಂಕಾರಿಕರನ್ನು ಉತ್ಪತ್ತಿವಾದಿಗಳೆಂದೂ ಶಂಕುಕನ ಮತಾನುಯಾಯಿಗಳಾದ ಆಲಂಕಾರಿಕರನ್ನು ಅನುಮಿತಿವಾದಿಗಳೆಂದೂ ಆನಂದವರ್ಧನನ ಮತಾನುಯಾಯಿಗಳಾದ ಆಲಂಕಾರಿಕರನ್ನು ಅಭಿವ್ಯಕ್ತಿವಾದಿಗ ಳೆಂದೂ ಭಟ್ಟನಾಯಕನ ಮತಾನುಯಾಯಿಗಳನ್ನು ಭುಕ್ತಿವಾದಿಗಳೆಂದೂ ವ್ಯವಹ ರಿಸಿರುವನು. §

---

## ಕುಂತಳ

ಇವನನ್ನು ಕುಂಟುಕ* ನೆಂದೂಕರೆಯುವರು

**ಕಾಲ:**—ಇವನು ರಾಜಶೇಖರನನ್ನು ಹೇಳಿರುವುದರಿಂದಲೂ, ಅಭಿನವ ಗುಪ್ತನು ತಾನು ಬರೆದಿರುವ ಲೋಚನ ಗ್ರಂಥದಲ್ಲಿ ವಕ್ರೋಕ್ತಿಗೆ ಉದಾಹರಣೆ

† ಸಹೃದಯದರ್ಪಣ ಅಥವಾ ಹೃದಯದರ್ಪಣವೆಂಬ ಹೆಸರುಳ್ಳ ಭರತನ ನಾಟ್ಯಶಾಸ್ತ್ರವ್ಯಾಖ್ಯಾನವು ಇದಲ್ಲ.

§ Journal of Oriental research Madras Vol I. Part 3. P. 267-276.

* ವ್ಯಕ್ತಿವಿವೇಕ ಪುಟ ೫೮

ಯನ್ನು ಹೇಳುವಾಗ ಕುಂತಳನ ಶ್ಲೋಕಗಳನ್ನುಹೇಳದೆ ಇರುವುದರಿಂದ ಅಭಿನವ ಗುಪ್ತನ ಅನಂತರ ಇದ್ದವನೆಂದೂ ಕ್ರಿ. ಶ. ಹತ್ತನೆಯ ಶತಮಾನಾಂತ್ಯದಲ್ಲಿರ ಬೇಕೆಂದೂ ಖಂಡಿತವಾಗುವುದು.

**ಗ್ರಂಥ:**—ಇವನು "ವಕ್ರೋಕ್ತಿಜೀವಿತ"ವೆಂಬ ಅಲಂಕಾರಗ್ರಂಥವನ್ನು ಬರೆದಿರುವನು. ಇದರ ಮೊದಲನೆಯ ಎರಡು ಪರಿಚ್ಛೇದಗಳುಮಾತ್ರ ಅಚ್ಚಾಗಿರುವುವು.*

---

## ವೀರನಂದಿ.

ಇವನು ಜೈನನು. ಇವನ ಸ್ಥಳ, ಮಾತಾಪಿತೃಗಳಾರೆಂಬುದು ತಿಳಿಯದು. ಇವನ ಆಚಾರ್ಯಾವಳಿಯು ಹೀಗಿರುವುದು.

(೧) ಗುಣನಂದಿ.
(೨) ವಿಬುಧಗುಣನಂದಿ.
(೩) ಅಭಯನಂದಿ.

**ಕಾಲ**—ಇವನ ಕಾಲವನ್ನು ನಿಶ್ಚಯಮಾಡಿ ಬರೆದಿರುವಂತೆ ಎಲ್ಲಿಯೂ ಕಂಡು ಬರುವದಿಲ್ಲವಾದುದರಿಂದ ಕೇವಲ ಬಾಹ್ಯಪ್ರಮಾಣಗಳಿಂದ ಇವನ ಕಾಲವನ್ನು ಊಹಿಸಿ ಹೇಳಲು ಅವಕಾಶವಿದೆ.

(೧) ಕನ್ನಡ ಜೈನಕವಿಯಾದ ಅಗ್ಗಳನು ವೀರನಂದಿಯ ಚಂದ್ರಪ್ರಭ ಚರಿತಕಾವ್ಯಾಧಾರದ ಮೇಲೆ ಸುಮಾರು ಕ್ರಿ.ಶ. ೧೧೮೯ರಲ್ಲಿ ಕನ್ನಡದಲ್ಲಿ ಚಂದ್ರಪ್ರಭ ಚರಿತವನ್ನು ಚಂಪೂರೂಪದಲ್ಲಿ ಹದಿನಾರು ಆಶ್ವಾಸಗಳಾಗಿ ಬರೆದು ಅದನ್ನು ಚಂದ್ರಪ್ರಭಪುರಾಣ ಎಂದು ಕರೆದಿರುವನು.

(೨) ಆವೇಳೆಗೆ ಕನ್ನಡಭಾಷೆಯು ಉಚ್ಚ್ರಾಯ ಸ್ಥಿತಿಯಲ್ಲಿದ್ದು ಸಂಸ್ಕೃತ ಭಾಷಾನಭಿಜ್ಞರಾದ ಕರ್ಣಾಟಕ ಜೈನಸಮುದಾಯಕ್ಕೆ ಮತಪ್ರಕ್ರಿಯೆಗಳನ್ನು ಕನ್ನಡದಲ್ಲಿ ಬೋಧಿಸಲೋಸುಗ ಬರೆದುದಾಗಿ ತೋರುತ್ತದೆ.

---

* ಅಲಂಕಾರಸರ್ವಸ್ವ ಪುಟ ೮

" ಹತ್ತನೆಯ ಶತಮಾನದಲ್ಲಿಯೇ ಕನ್ನಡದಲ್ಲಿ ಉದ್ಗ್ರಂಥಗಳು ಹುಟ್ಟಿದುವು. ೯ನೆಯ ಶತಮಾನದ ಕೆಲವು ಉದ್ಗ್ರಂಥಗಳ ಮಾತೃಕೆಗಳು ಈಚೆಗೆ ದೊರೆತಿವೆ. ೯ನೆಯ ಶತಮಾನಕ್ಕೆ ಹಿಂದೆಯೇ ಉದ್ಗ್ರಂಥಗಳು ಇದ್ದುವೆಂದು ನೃಪತುಂಗನು ಹೇಳುವನು.

(೩) ದೇಶೀಯ ಸಾಹಿತ್ಯಾಭಿಮಾನ (ಕನ್ನಡ) ವು ಜನಸಮುದಾಯದಲ್ಲಿ ಬೇರೂರಿ ಸಂಸ್ಕೃತಸಾಹಿತ್ಯಾವಲೋಕನವು ಕೇವಲ ಸಂಸ್ಕೃತಜ್ಞರಿಗೆ ಮಾತ್ರವೇ ರುಚಿಸುವಂತಾಗಿ ದೇಶೀಯ ಭಾಷೆಯಲ್ಲಿ ಇಂತಹ ಉದ್ದಾಮಗ್ರಂಥರಚನೆಗಳಾಗಿರ ಬೇಕಾದರೆ ಪರಸ್ಪರ ಗ್ರಂಥಗಳ ಅಂತರಕಾಲವು ಕನಿಷ್ಠಪಕ್ಷ ಒಂದು ಅಥವಾ ಎರಡು ಶತಮಾನಗಳಾದರೂ ಆಗಿರಬಹುದಾಗಿ ಬಹುತರ ಬೋಧೆಯಾಗುತ್ತದೆ. ಆದುದ ರಿಂದ ವೀರನಂದಿಯ ಕಾಲವು ಸುಮಾರು ಕ್ರಿ. ಶ. ಹತ್ತನೆಯ ಶತಮಾನದ ಅಂತ್ಯ ಭಾಗದಲ್ಲಿರಬೇಕೆಂದು ಹೇಳುವ ಊಹೆಯು ತಪ್ಪಾಗದು. ಇದಲ್ಲದೆ ವಾದಿರಾಜ ನೆಂಬ ಜೈನಮಹಾಕವಿಯು ಶಕ ಸಂವತ್ಸರ ೯೪೭ ಅಥವಾ ಕ್ರಿ. ಶ. ೧೦೨೫ ರಲ್ಲಿ ಪಾರ್ಶ್ವನಾಥಕಾವ್ಯವನ್ನು ಬರೆದುದಾಗಿ –

ಶಾಕಾಬ್ದೇನಗವಾರ್ಧಿರಂಧ್ರಗಣನೇ ಸಂವತ್ಸರೇ ಕ್ರೋಧನೇ
ಮಾಸೇ ಕಾರ್ತಿಕ ನಾಮ್ನಿ ಬುದ್ಧಿಮಹಿತೇಶುದ್ಧೇ ತೃತೀಯಾದಿನೇ
ಸಿಂಹೇಪಾತಿಜಯಾದಿಕೇ ವಸುಮತೀಂ ಜೈನೀಕಥೇಯಂಮಯಾ
ನಿಷ್ಪತ್ತಿಂಗಮಿತಾಸತೀಭವತುವಃ ಕಲ್ಯಾಣನಿಷ್ಪತ್ತಯೇ || *

ಎಂಬುದರಿಂದ ಗೊತ್ತಾಗುತ್ತದೆ.

ಇವನು **ಪಾರ್ಶ್ವನಾಥಕಾವ್ಯಾ**ರಂಭದಲ್ಲಿ ತನ್ನ ಪೂರ್ವಾಚಾರ್ಯರನ್ನು ನುತಿಸುವಾಗ ಚಂದ್ರಪ್ರಭಚರಿತಕಾರನಾದ ವೀರನಂದಿಯನ್ನು:—

ಚಂದ್ರಪ್ರಭಾಭಿಸಂಬದ್ಧಾ ರಸಪುಷ್ಟಾಮನಪ್ರಿಯಂ
ಕುಮುದ್ವತೀವನೋಧತ್ತೇ ಭಾರತೀವೀರನಂದಿನಃ ||

ಎಂದು ಹೇಳಿಹೊಗಳಿಕೊಂಡಿರುವುದರಿಂದ ಪಾರ್ಶ್ವನಾಥಕಾವ್ಯರಚನೆಗೆ ಮೊದಲೇ ಚಂದ್ರಪ್ರಭಚರಿತೆಯ ನಿರ್ಮಾಣವೆಂದು ಸ್ಪಷ್ಟವಾಗುತ್ತದೆ. ಈ ಕಾರಣ ಗಳಿಂದ ವೀರನಂದಿಯನ್ನು ಹತ್ತನೆಯ ಶತಮಾನದವನೆನಬೇಕಾಗುವದು.

**ಗ್ರಂಥ:**—ಇವನು **ಚಂದ್ರಪ್ರಭಚರಿತ** ಎಂಬ ಮಹಾಕಾವ್ಯವನ್ನು ಬರೆದಿರು ವನು. ಇದರಲ್ಲಿ ೧೮ ಸರ್ಗಗಳಿರುವುವು. ಅಷ್ಟಾದಶಲಕ್ಷಣಗಳಿಂದ ಕೂಡಿದುದಾಗಿದ್ದು ಜಿನಧರ್ಮತತ್ವವನ್ನು ಬೋಧಿಸುವುದಾದ ಮತಗ್ರಂಥವೆಂದರೂ ಸಲ್ಲುವುದು. ಜೈನರು ಪೂಜಿಸುವ ಇಪ್ಪತ್ತುನಾಲ್ಕು ತೀರ್ಥಂಕರರಲ್ಲಿ ಚಂದ್ರಪ್ರಭನು ಏಳನೆಯ ವನು. ಅದು ಈ ಶ್ಲೋಕದಿಂದ ವ್ಯಕ್ತಪಡುವುದು.

ಯಃ ಶ್ರೀವರ್ಮನೃಪೋ ಬಭೂವವಿಬುಧಃಸೌಧರ್ಮಕಲ್ಪೇ ತತ
ಸ್ತಸ್ಮಾಚ್ಚಾಜಿತಸೇನಚಕ್ರಭೃದಭೂದ್ಯಶ್ಚಾಚ್ಯುತೇಂದ್ರಸ್ತತಃ

* ತ್ರಿಲೋಕಸಾರ ಪುಟ ೪.

ಯಶ್ಚಾಜಾಯತ ಪದ್ಮನಾಭನೃಪತಿರ್ಯೋ ವೈಜಯಂತೇಶ್ವರೋ
ಯಃ ಸ್ಯಾತ್ತೀರ್ಥಕರಃ ಸ ಸಪ್ತಮಭವೇ ಚಂದ್ರಪ್ರಭಃಪಾತುನಃ ||

ಚಂದ್ರಪ್ರಭನು ತೀರ್ಥಂಕರನಾಗುವುದಕ್ಕೆ ಮುಂಚೆ ಆರುಜನ್ಮಗಳನು ತ್ತರಿಸಿ ಬಂದಂತೆಯೂ ಈತೀರ್ಥಂಕರರಿಗೆ ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಿಜ್ಞಾನ, ನಿರ್ವಾಣಗಳೆಂಬ ಪಂಚಕಲ್ಯಾಣಂಗಳು ನಡೆಯುವುವೆಂದು ಚಂದ್ರಪ್ರಭಚರಿತದಿಂದ ಗೊತ್ತಾಗುತ್ತದೆ. ಇದು ಸುಲಭಶೈಲಿಯನುಳ್ಳದ್ದಾಗಿ ಚಂದ್ರಪ್ರಭನ ಹಿಂದಣ ತೀರ್ಥಂಕರರ ಉಪಾಖ್ಯಾನಗಳಿಂದ ಕೂಡಿ, ಆತ್ಮಾನಾತ್ಮವಿವೇಚನೆ, ಜೀವಕಾರುಣ್ಯ, ವಿಷಯಗರ್ಹಣ, ಜೀವನ್ಮುಕ್ತಿ ಮೊದಲಾದ ವಿಷಯಗಳಿಂದ ಕೂಡಿ ಲೋಕಬೋಧಕವಾಗಿದೆ. ಇದರ ೧೭ ಮತ್ತು ೧೮ನೆಯ ಸರ್ಗಗಳು ಜಿನೋತ್ಪತ್ತಿವರ್ಣನ ಮತ್ತು ಸಂಕ್ಷೇಪಜಿನಸಿದ್ಧಾಂತಕಥೆಗಳಿಂದ ಕೂಡಿದೆ. ಮಹಾಕಾವ್ಯಲಕ್ಷಣಕ್ಕೆ ತಕ್ಕಂತೆ ಅಲ್ಲಲ್ಲಿ ಗಿರಿ, ನದೀ, ಕಾಸಾರ, ಆರಾಮ ಮೊದಲಾದವುಗಳ ವರ್ಣನೆಗಳು ಜೋಡಣೆಯಾಗಿವೆ. ಕಥೆಯಕಲ್ಪನಾಚತುರತೆಗಿಂತ ಮತಪ್ರಕಿಯಾವರ್ಣನೆಗಳೇ ಹೆಚ್ಚಾಗಿವೆ. ಹೆಚ್ಚೇಕೆ! ಜೈನಮತದ ಮುಖ್ಯತತ್ವಗಳೆಲ್ಲಾ ಸಾಮಾನ್ಯವಾಗಿ ಈ ಒಂದು ಕಾವ್ಯದಲ್ಲಿ ಅಡಗಿರುವುದೆಂದರೆ ಅತ್ಯುಕ್ತಿಯಾಗದು. ಕಥಾಭಾಗವು ಒಂದಾದರೆ ವರ್ಣನಾಭಾಗವು ಹತ್ತರಷ್ಟು ಹೆಚ್ಚಾಗಿರುವುದು. ಇದರಲ್ಲಿ ಮೊದಲನೆಯವನಾದ ಶ್ರೀವರ್ಮನ ಚರಿತೆಯನ್ನು ಮಾದರಿಗಾಗಿ ಬರೆಯುವೆವು:—

ಮಂಗಳಾವತೀ ರಾಜ್ಯಕ್ಕೆಮುಖ್ಯಪತ್ತನವಾದರತ್ನಸಂಜ(ಚ)ಯುವೆಂಬುದನ್ನು ಕನಕಪ್ರಭನೆಂಬ ರಾಜನು ಪಟ್ಟಮಹಿಷಿಯಾದ ಸವರ್ಣಮಾಲಾ ಎಂಬುವಳೊಡನೆ ಸುಖದಿಂದ ರಾಜ್ಯವಾಳುತ್ತಿರುತ್ತ ಒಂದಾನೊಂದುದಿವಸ ಅಂತಃಪುರದ ಮೇಲ್ಕಾವಣಿಯಲ್ಲಿಕುಳಿತು ನೋಡುತ್ತಿರುವಾಗ ಸಮೀಪವರ್ತಿಯಾದ ಹಳ್ಳದಲ್ಲಿ ನೀರನ್ನು ಕುಡಿಯುವುದಕ್ಕಾಗಿ ಬಂದ ಹಿಂಡುದನದಲ್ಲಿ ಒಂದು ಮುದಿ ಎತ್ತು ಕೆಸರಿನಲ್ಲಿ ಹೂತುಹೋಗಿ ಮರಣೋನ್ಮುಖವಾಗಿರುವುದನ್ನು ನೋಡಿ ಮನಸ್ಸಿನಲ್ಲಿ ಕಡು ನೊಂದು ವೈರಾಗ್ಯವನ್ನು ತಾಳಿ ಮಗನಾದ ಪದ್ಮನಾಭನಿಗೆ ರಾಜ್ಯವನ್ನು ಕೊಟ್ಟು ತಪಶ್ಚರಣೆಗಾಗಿ ಅರಣ್ಯಕ್ಕೆ ಹೊರಟನು. ಪದ್ಮನಾಭನು ತಂದೆಯಿಂದ ಕೊಡಲ್ಪಟ್ಟ ರಾಜ್ಯವನ್ನು ಪರಿಪಾಲಿಸುತ್ತ ತನ್ನ ಮಗನಾದ ಸುವರ್ಣನಾಭನಿಗೆ ಯುವರಾಜ ಪಟ್ಟವನ್ನಿತ್ತು ತಾನು ರಾಜಭೋಗಗಳನ್ನನುಭವಿಸುತ್ತ ಸುಖದಿಂದಿರುತ್ತಿರಲು ಒಂದಾನೊಂದುದಿವಸ ವನಪಾಲಕನೊಬ್ಬನು ರಾಜಸಮ್ಮುಖಕ್ಕೆ ಬಂದು ಜಿಯ್ಯಾ! ನಮ್ಮ ಉಪವನಕ್ಕೆ ಶ್ರೀಧರನೆಂಬ ಒಬ್ಬಾನೊಬ್ಬ ತಪಸ್ವಿಯು ಬಂದಿರುವುದಾಗಿ ಹೇಳಿದುದನ್ನು ಕೇಳಿ ಮುನಿದರ್ಶನಕ್ಕಾಗಿ ಮಿತಪರಿವಾರದೊಡನೆ ಹೋಗಿ ಬದ್ಧಾಂಜಲಿಪುಟನಾಗಿ ನಮಸ್ಕರಿಸಿ ಮುನಿಯಿಂದ ಆಶೀರ್ವಾದವನ್ನು ಹೊಂದಿನಿಂತು

ಕೊಂಚಹೊತ್ತಿನ ಅನಂತರ ರಾಜನು ಜೀವಾಜೀವ ವಿಚಾರವನ್ನು ಮುನಿಯೊಡನೆ ಪ್ರಶ್ನಿಸುತ್ತಾ ತನ್ನ ಪೂರ್ವಜನ್ಮ ವಿಚಾರವನ್ನು ಕುರಿತು ಮುನಿಯನ್ನು ಕೇಳಲು ಮುನಿವರನು ಹೀಗೆಂದನು :—

. ಶ್ರೀಪುರವೆಂಬ ರಾಜಧಾನಿಯುಳ್ಳ ಸುಗಂಧದೇಶವನ್ನು ಶ್ರೀಷೇಣನೆಂಬ ರಾಜನು ಶ್ರೀಕಾಂತೆಯೆಂಬ ಸತಿಯೊಡಗೂಡಿ ರಾಜ್ಯವಾಳುತ್ತ ಸುಖದಿಂದ ಬಹು ಕಾಲ ಕಳೆದರಾದರೂ ಪುತ್ರಸಂತಾನವಿಲ್ಲದುದಕ್ಕಾಗಿ ಚಿಂತಿಸುತ್ತಿದ್ದು ಒಂದಾನೊಂದುದಿವಸ ಉದ್ಯಾನ ವಿಹಾರಕ್ಕೆಂದು ಹೋಗಿ ಅಲ್ಲಿ ಅಕಸ್ಮಾತ್ತಾಗಿ ದರ್ಶನವಿತ್ತ ಚಾರಣಮುನಿಯನ್ನು ಕಂಡು ಸ್ತುತಿಸಿ ನಮಸ್ಕರಿಸಿ ಎಲೈ ! ಮಹಾಭಾಗನೇ ! ನನ್ನ ಮನಸ್ಸು ಅಶಾಂತವಾಗಿರಲು ಕಾರಣವೇನೆಂದು ವಿನಯದಿಂದ ಕೇಳಿದುದಕ್ಕೆ ಆ ಮುನಿಯು ಕರುಣೆಗೊಂಡು ಭೂಪಾಲ ! ನಿನಗೆ ಸಂತಾನವಾಗುವವರೆಗೂ ಮನಶ್ಶಾಂತಿಯು ದೊರಕದು. ನೀನು ನಂದೀಶ್ವರನನ್ನಾರಾಧಿಸು. ಪುತ್ರಸಂತಾನವಾಗುವುದು ಎಂದು ಹೇಳಿಹೋಗಲು ಮುನಿಯಾಣತಿಯಂತೆ ನಂದೀಶ್ವರನನ್ನಾರಾಧಿಸಿದ ಕೆಲವುಕಾಲಕ್ಕೆ ರಾಣಿಯು ಗರ್ಭಿಣಿಯಾಗಿ ಮುಂದಣ ತೀರ್ಥಂಕರನಾದ ಶ್ರೀವರ್ಮನೆಂಬ ಕುಮಾರನನ್ನು ಪ್ರಸವಿಸಿದಳು. ಹೀಗೆ ಕೆಲವುಕಾಲ ಕಳೆಯಲು ಶ್ರೀವರ್ಮನು ವಿವಾಹಯೋಗ್ಯನಾದುದನ್ನರಿತು 'ಪ್ರಭಾವತಿ' ಎಂಬ ಕನ್ಯೆಯನ್ನು ಪಾಣಿಗ್ರಹಣಮಾಡಿಸಿ ಕುಮಾರನಿಗೆ ಯುವರಾಜ ಪದವಿಯನಿತ್ತು ಸುಖದಿಂದಿರುತ್ತ ಒಂದಾನೊಂದುದಿವಸ ಆಕಾಶದಿಂದ ಬಿದ್ದುಹೋಗುತ್ತಿರುವ ನಕ್ಷತ್ರವನ್ನು ನೋಡಿ ಸಂಸಾರದ ಅನಿತ್ಯತೆಯನ್ನು ತಿಳಿದು ವಿರಕ್ತನಾಗಿ ವಿಷಯಗರ್ಹಣಮಾಡಿ ರಾಜ್ಯವನ್ನು ಮಗನಿಗೆ ಒಪ್ಪಿಸಿ ಶ್ರೀಪ್ರಭಮುನಿಯ ದರ್ಶನಲಾಭದಿಂದ ತಪಸ್ಸನ್ನಾಚರಿಸಿ ಕೊನೆಗೆ ಕೈವಲ್ಯವನ್ನು ಹೊಂದಿದನು. ಶ್ರೀವರ್ಮನು ರಾಜೋಚಿತ ಧರ್ಮಮಂ ಕೈಗೊಂಡು ದಿಗ್ವಿಜಯಕ್ಕಾಗಿ ಹೊರಟು ವಿಜಯಿಯಾಗಿ ಹಿಂತಿರುಗಿ ಶ್ರೀಪುರಕ್ಕೆ ಬಂದು ಸುಖದಿಂದಿರುತ್ತಿರಲು ಶರತ್ಕಾಲದ ಒಂದಾನೊಂದುದಿವಸ ಬಿಳುಪುಗಟ್ಟಿದ ಮೋಡವನ್ನು ನೋಡಿ ಬೇಸತ್ತು ಪುತ್ರನಾದ ಶ್ರೀಕಾಂತನಿಗೆ ರಾಜ್ಯಭಾರವನೊಪ್ಪಿಸಿ ಅರಣ್ಯವನ್ನು ಹೊಕ್ಕು ತಪವನಾಚರಿಸಿ ಸೌಧರ್ಮದಲ್ಲಿ ಶ್ರೀಧರಾಖ್ಯದೇವನಾಗಿ ಜನ್ಮಿಸಿದನು. ಇಂತು ಶ್ರೀವರ್ಮನ ಚರಿತೆಯು ಹೇಳಿ ಚಂದ್ರಪ್ರಭತೀರ್ಥಂಕರ ಚರಿತದೊಡನೆ ಮುಗಿಸಲ್ಪಟ್ಟಿರುವುದು.

ಕಹಿಮದ್ದಂ ಸವಿಯಲಾರದ ರೋಗಿಗೆ ಜೇನನ್ನುಸೇರಿಸಿ ಉಣಲಿಡುವಂತೆ ವಿಷಯವ್ಯಾಪ್ತವಿಶ್ವಕ್ಕೆ ಜೈನಮತದ ತತ್ವನಿರೂಪಣದ ಜೊತೆಗೆ ಬೇಕುಬೇಕಾದಷ್ಟು ವರ್ಣನೆಗಳನ್ನು ಸಾಕುಸಾಕಾದಷ್ಟು ಕೂಡಿಸಿಹೇಳಿ ಕಾವ್ಯವನ್ನು ಸೊಗಸುಮಾಡಿರುವನು. ಹೀಗೆ ಪ್ರತಿಕಥೆಯಲ್ಲಿಯೂ ವೈರಾಗ್ಯಪ್ರಾಪ್ತಿ, ಮುನಿದರ್ಶನ, ಜಿನಮತದ ತತ್ವನಿರೂಪಣವಿರುವುದು

ಮೂದರಿಗಾಗಿ ಇದರ ಕೆಲವು ಶ್ಲೋಕಗಳು :—ಮರಣೋನ್ಮುಖವಾಗುತ್ತಿದ್ದ ಮುದಿ ಎತ್ತನ್ನು ನೋಡಿ ವೈರಾಗ್ಯಗೊಂಡ ಕನಕಪ್ರಭನ ಮನೋವಾಣಿಯ ಹೇಳಿಕೆ.—

ಕ್ಷಣಭಗುರವೃತ್ತಿ ಜೀವಿತಂ ಭವಭಾಜಾಮಿತಿನಾತ್ರವಿಸ್ಮಯಃ
ತದಿಹಾದ್ಭುತಮೇತದೀದೃಶಂ ಯದವಸ್ಯದ್ಭಿರಪಿಪ್ರಮುಹ್ಯತೇ ||
ಚಂ. ಚ. ೧—೬೭

ಅಯ್ಯೋ! ಪ್ರಪಂಚದಲ್ಲಿ ಜನ್ಮಿಸಿದ ಪ್ರತಿಯೊಂದು ಪ್ರಾಣಿಯ ಜೀವಿತವು ಕೇವಲ ನಶ್ವರವೆಂಬುದೇನೂ ಆಶ್ಚರ್ಯವಾಗಿ ತೋರುವುದಿಲ್ಲ. (ಅದು ಪ್ರತಿದಿವಸದ ಅನುಭವ) ಆದರೆ ತಿಳಿದವರೆನಿಸಿಕೊಂಡಿರುವವರು ತಿಳಿದೂ ತಿಳಿದೂ ತಾವು ಶಾಶ್ವತರಾಗಿರುವರಂತೆ ಯೋಚಿಸಿನಡೆಯುತ್ತಿರುವುದೆಂಬುದೊಂದೇ ಆಶ್ಚರ್ಯಕರವಾದುದು.

ಮಲ್ಲಿಗೆಯ ವರ್ಣನೆ : —

ಜಯಶಬ್ದಂ ವಯಃ ಶಬ್ದೈಃ ಕುರ್ವತ್ಯಾಃ ಕಾನನಶ್ರಿಯಃ
ದಂತಾವಳಿರಿವಾಭಾತಿ ಕುಂದಕುಡ್ಮಲಸಂಹತಿಃ || ೨—೧೮.

ಪಕ್ಷಿಗಳ ಕಲಕಲ ಶಬ್ದದಿಂದ ಮುನಿಗೆ ಜಯಶಬ್ದವನ್ನುಚ್ಚರಿಸುತ್ತಿರುವ ಉದ್ಯಾನಲಕ್ಷ್ಮಿಯ ದಂತಪಂಙ್ತಿಗಳೋ ಎಂಬಂತೆ ಉಪವನದ ಮಲ್ಲಿಗೆಯಮೊಗ್ಗುಗಳು ರಾಜಿಸುತ್ತಿದ್ದವು.

ಕೃತ್ಸ್ನಕರ್ಮಕ್ಷಯೋಮೋಕ್ಷೋ ಭವ್ಯಸ್ಯಪರಿಣಾಮಿನಃ
ಜ್ಞಾನದರ್ಶನಚಾರಿತ್ರ ತ್ರಯೋಪಾಯಃ ಪ್ರಕೀರ್ತಿತಃ || ೧೮—೧೨೩
ತತ್ತ್ವಪ್ರಕಾಶಿಕಂ ಜ್ಞಾನಂದರ್ಶನಂತತ್ತ್ವರೋಚಕಂ
ಪಾಪಾರಂಭಪರಿತ್ಯಾಗಶ್ಚಾರಿತ್ರಮಿತಿಕಥ್ಯತೇ || ೧೮—೧೨೪
ಸಂಸಾರವ್ಯಾಧಿವಿಧ್ವಂಸೇಭಾವ್ಯಮಾನಮಿದಂತ್ರಯಂ
ಹೇತುರೇಕಾಂಗವಿಕಲೋನಹೇತುರಿವಭೇಷಜಂ ||೧೮—೧೨೫

ಕರ್ಮಕ್ಷಯದಿಂದ ಮೋಕ್ಷ ಹೊಂದುವುದಕ್ಕೆ ಜ್ಞಾನ, ದರ್ಶನ, ಚಾರಿತ್ರಗಳೆಂಬ ಮೂರು ಉಪಾಯಗಳೆಂದು ಹೇಳಲ್ಪಟ್ಟಿರುವುದು. ಜೀವಾದಿಸಪ್ತತತ್ತ್ವಗಳ (ಜೀವ ಅಜೀವ, ಆಸ್ರುವ, ಬಂಧ, ಸಂವರ, ನಿರ್ಜರ, ಮೋಕ್ಷಗಳೆಂಬುದೇ ಜೀವಾದಿ ಸಪ್ತತತ್ತ್ವಗಳು) ಯಾಥಾತ್ಮ್ಯವನ್ನು ತಿಳಿಯುವುದೇ ಜ್ಞಾನವೆಂದೂ ಇಂತಹ ಸಪ್ತತತ್ವಗಳನ್ನು ತಿಳಿಯಬೇಕೆಂಬ ಅಪರಿಹಾರ್ಯವಾದ ಅತ್ಯಾಸಕ್ತಿಗೆ ದರ್ಶನವೆಂದೂ ಪಾಪಾರಂಭ ಪರಿತ್ಯಾಗವೇ ಚಾರಿತ್ರಕವೆಂದೂ ಹೇಳಲ್ಪಟ್ಟಿರುವುದು. ಸಂಸಾರವೆಂಬ ವ್ಯಾಧಿನಾಶಕ್ಕೆ ಈ ಮೂರು ರತ್ನಗಳೇ(ಜ್ಞಾನ, ದರ್ಶನ, ಚಾರಿತ್ರ)ಭಾವಿಸಲ್ಪಡತಕ್ಕವುಗಳು ಹೊರ್ತು ಮತ್ತಾವುದರಿಂದಲೂ ನಿವಾರಿಸಲ್ಪಡತಕ್ಕವುಗಳಾಗುವುದಿಲ್ಲ.

# ವಾ ಧೀ ಭ ಸಿಂ ಹ

"ಅಯಂವಾದೀಭಸಿಂಹಃ ಕವಿರ್ದಿಗಂಬರಜೈನೋ ಯತಿಃ ಪುಷ್ಪಸೇನ ಮುನೇ ರಂತೇವಾಸೀಚ | ಅಸ್ಯಾನಿತರಸಾಧಾರಣೀಂ ನೈಪುಣೀಂಪಶ್ಯಂತಃ ಪಂಡಿತಾಃ **ವಾದೀಭಸಿಂಹ** ಇತಿನಾಮಚಕುರಿತಿಪ್ರತೀಯತೇ | ಸಾಂಸ್ಕಾರಿಕಂತು ನಾಮಓಡಯದೇವಃ ಇತ್ಯವಗಮ್ಯತೇ||"

ಎಂದು ಹೇಳಲ್ಪಟ್ಟಿರುವುದರಿಂದ ಇವನ ಮೊದಲಿನ ಹೆಸರು ಓಡಯದೇವನೆಂದೂ ಇವನ ಅಸಾಧಾರಣ ಪಾಂಡಿತ್ಯಕ್ಕೆ ಮೆಚ್ಚಿ ಪಂಡಿತರು **ವಾದೀಭಸಿಂಹ**ನೆಂದು ಕರೆದುದಾಗಿಯೂ ಇವನು ದಿಗಂಬರಜೈನ ಯತಿಯೆಂದೂ ಪುಷ್ಪಸೇನ ಮುನಿಯ ಅಂತೇವಾಸಿಯೆಂದೂ ಗೊತ್ತಾಗುತ್ತದೆ. ಇದೇ ವಿಚಾರವು ಈ ಶ್ಲೋಕಗಳಿಂದಲೂ ಸಿದ್ಧಪಡುತ್ತದೆ.

ಶ್ರೀಪುಷ್ಪಸೇನಮುನಿನಾಥ ಇತಿ ಪ್ರತೀತೋ
ದಿವ್ಯೋಮನುರ್ಮಮಸದಾಹೃದಿ ಸಂಸಿದಧ್ಯಾತ್
ಯಚ್ಛಕ್ತಿತಃ ಪ್ರಕೃತಿಮೂಢಮತಿರ್ಜನೋsಪಿ
**ವಾದೀಭಸಿಂಹ** ಮುನಿಪುಂಗವತಾಮುಪೈತಿ *

ಎಂದೂ,

" ಶ್ರೀಮದ್ವಾದೀಭಸಿಂಹೇನಚಿರಾದಾಸ್ಥಾನಭೂಷಣಃ
ಸ್ಥೇಯಾದೋಡಯದೇವೇನವಾದೀಭಹರಿಣಾಕೃತಃ "

ಎಂದೂ,

" ಕವಿತ್ವಸ್ಯ ಪುರಾಸೀಮಾವಾಗ್ಮಿತ್ವಸ್ಯ ಪರಂಪದಂ
ಗಮಕತ್ವಸ್ಯ ಪರ್ಯಂತೋ ವಾದಿಸಿಂಹೋಚ್ಯತೇನಕೈಃ "

ಎಂದೂ,

" ಪ್ರವಾದಕರಿಯೂಥಾನಾಂ ಕೇಸರೀನಯಕೇಸರಃ "

ಎಂದು ಹೇಳಲ್ಪಟ್ಟಿರುವುದರಿಂದಲೂ ವಾದದಲ್ಲಿ ಎದುರಾಳಿಯನ್ನು ಜಯಿಸುತ್ತಿದ್ದನಾದುದರಿಂದ ಇವನು '**ವಾದೀಭಸಿಂಹ**' ಎಂದು ಕರೆಯಿಸಿಕೊಂಡುದಾಗಿ ತೋರುತ್ತದೆ. ಇವನು ದಾಕ್ಷಿಣಾತ್ಯನಾಗಿರಬೇಕೆಂದು ಬಹುತರ ಬೋಧೆಯಾಗುತ್ತದೆ. ಇವನ ತಾಯಿತಂದೆಗಳಾರೆಂಬದು ತಿಳಿಯದು.

**ಕಾಲ:**—ಇವನು ಕಾದಂಬರೀಕಾರನಾದ ಬಾಣನನ್ನೂ ಜೀವಂಧರಚಂಪೂಕಾರನಾದ ಎರಡನೆಯ ಹರಿಚಂದ್ರನನ್ನು ಹೇಳಿಕೊಂಡಿರುವುದರಿಂದ ಹರಿಚಂದ್ರನಿಗಿಂತ ಈಚಿನವನೂ ಕ್ರಿ. ಶ. ಹತ್ತನೆಯ ಶತಮಾನದವನೆಂದೂ ಖಂಡಿತವಾಗುವುದು.

* ಗದ್ಯಚಿಂತಾಮಣಿ ಲಂಬಕ. ೧—೬

**ಗ್ರಂಥಗಳು**:—" ಕ್ಷತ್ರಚೂಡಾಮಣಿ, ಗದ್ಯಚಿಂತಾಮಣಿಶ್ಚೇತಿ, ದ್ವಾವೇವ ಗ್ರಂಥಾವೇತತ್ಕೃತಾವುಪಲಭ್ಯತೇ " ಎಂದು ಹೇಳಿರುವುದರಿಂದ ಪ್ರಕೃತ ಉಪಲಬ್ಧ ವಾಗಿ ಇವನು ಬರೆದುದಾಗಿರುವ **ಕ್ಷತ್ರಚೂಡಾಮಣಿ, ಗದ್ಯಚಿಂತಾಮಣಿ** ಎಂಬೆ ರಡು ಗ್ರಂಥಗಳು ದೊರೆಯುತ್ತವೆ.

ಕ್ಷತ್ರಚೂಡಾಮಣಿಯೆಂಬುದು ಹನ್ನೊಂದು ಲಂಬಕಗಳೊಡಗೂಡಿರುವ ಚಂಪೂಗ್ರಂಥ. ಗದ್ಯಚಿಂತಾಮಣಿಯಲ್ಲಿಯೂ ಹನ್ನೊಂದು ಲಂಬಕಗಳಿದ್ದು ಹೆಸರಿಗೆ ತಕ್ಕಂತೆ ಗದ್ಯಗ್ರಂಥವಾಗಿರುವುದು. ಕಥಾವಿಚಾರವು ಇವುಗಳೆರಡರಲ್ಲಿಯೂ ಒಂದೇ ಆಗಿರುವುದು. ಇವನು ಏಕವಿಷಯಕವಿಚಾರವನ್ನು ತೆಗೆದುಕೊಂಡು ಗದ್ಯಪದ್ಯಗಳೆರಡರಲ್ಲಿಯೂ ಏಕೆ ಬರೆದನೆಂದರೆ ಕ್ಷತ್ರಚೂಡಾಮಣಿಯು ಮೊದಲು ಬರೆಯಲ್ಪಟ್ಟುದಾಗಿ ಅದು ಕೇವಲ ಪಂಡಿತಮಾನ್ಯವಾಗಿ ತೋರಿದುದರಿಂದಲೂ ಹರಿಚಂದ್ರವಿರಚಿತವಾದ ಜೀವಂಧರಚರಿತ ಚಂಪೂಕಾವ್ಯವನ್ನು ನೋಡಿ ಲೋಕವು ಆನಂದಪಡುತ್ತಿದ್ದುದನ್ನರಿತು ಬೇರೆಬೇರೆಯೇ ಬರೆಯಲಾಶಿಸಿ ಅದರಂತೆ ಕಥೆ ಯನ್ನು ಗದ್ಯರೂಪದಲ್ಲಿ ಬರೆದು ಗದ್ಯಚಿಂತಾಮಣಿಯೆಂದು ಕರೆದಿರಬೇಕಾಗಿ ನಮಗೆ ತೋರುತ್ತದೆ. ಇವೆರಡರಲ್ಲಿಯೂ ಹಿಂದೆ ಹೇಳಲ್ಪಟ್ಟಿರುವ ಜೀವಂಧರ ಚರಿತವೇ ಕಥಾವಸ್ತು. ಇವನು ಬಾಣನ ಕಾದಂಬರಿಯನ್ನೂ ಹರಿಚಂದ್ರನ ಚಂಪೂವನ್ನೂ ಆದರ್ಶವಾಗಿಟ್ಟುಕೊಂಡು ಬರೆದುದಾಗಿ ತೋರುವುದರಿಂದ ಸಮಾನಾಭಿಪ್ರಾಯಗಳುಳ್ಳ ಅನೇಕ ವಿಚಾರಗಳು ಹಾಗೆಹಾಗೆಯೇ ಕೆಲವುಕಡೆ ಕೊಂಚಮಾರಿಸಿಬರೆದಿರುವಂತಿದೆ. ಈ ಕಾವ್ಯದಲ್ಲಿ ಪದಲಾಲಿತ್ಯ, ನಿರರ್ಗಳವಾಗ್ವೈ ಖರಿ, ಶ್ರಾವ್ಯಶಬ್ದಪದವಿನ್ಯಾಸ, ಧರ್ಮೋಪದೇಶ ಮೊದಲಾದುವು ಯೋಗ್ಯರೀತಿ ಯಿಂದ ವರ್ಣಿತವಾಗಿವೆ. ಗದ್ಯಚಿಂತಾಮಣಿಯಲ್ಲಿ ಗರ್ಭಿಣಿಯಾದ ವಿಜಯಾ ದೇವಿಯವರ್ಣನವು ಹೀಗಿರುವುದು.—

" ಅಥಕತಿಪಯದಿವಸಾಪಗಮೇ ಪರಿಣತಶರಪಾಂಡುನಾ ಕಪೋಲಯೋಃ ಕಾಂತಿಮಂಡಲೇನ ತುಹಿನಮಹಸಮಿವ ವಾಸವೀ ದಿಶಾಶಂಸತಿ ಸ್ಮ ಗರ್ಭೇ ಗರ್ಭರೂಪಸ್ಯಪರಿಣಾಮಂಹರಿಣಾಕ್ಷೀ | ಕಾಷ್ಠಾಂಗಾರಕಾನನ ದಿಧಕ್ಷಯಾ ಜ್ವಲಿಷ್ಯತಃ ಸುತಪ್ರತಾಪಾನಲಸ್ಯಧೂಮಕಂದಲ ಇವ ಕಾಲಿಮಾ ಕುಚಚೂಚಕಯೋರದೃಶ್ಯತ | ತನಯಮನಸಃ ಪ್ರಸಾದ ಇವ ಬಹಿಃಪ್ರಸೃತಶ್ಚಕ್ಷುಷೋರಲಕ್ಷ್ಯತಧವಲಿಮಾ | ನಿಖಿಲಜನದೌರ್ಗತ್ಯ ದುಃಖದ್ರುಹಿ ಗತವತಿ ಗರ್ಭಮರ್ಭಕೇ ಬಿಭ್ಯತೀವ ಭೀತಿಮುದರಾದತಿ ದೂರಂ ದರಿದ್ರತಾ ಪ್ರಾದ್ರವತ್ | ಬುದ್ಧ್ವೇವಭಾವಿನಂ ಸ್ನುಷಾಭಾವಮು ಭವದವನೌ ಪದನ್ಯಾಸಪರಾಙ್ಮುಖೀ | ಗರಿಮ್ಣಾ ಗರ್ಭೇಸಮುಪೇಯುಷಿ

ದುರ್ಧರತಾಂ ಕ್ಲೇಶಿತಾಧರಪಲ್ಲವಾಶ್ಚಾಮರಪವನಾ ಇವ ದೌಕ್ಯದಶ್ರಿಯಃ ಪ್ರತಿಕ್ಷಣಂನಿಃಶ್ವಾಸಾಃ ಪ್ರಾಸರ್ರ | ನಿಖಿಲಭುವನವಾಸ್ತವ್ಯಾನಾಂ ವಸ್ತೂನಾಂ ಭೋಕ್ತಾರಮಾತ್ಮಜಮಾವೇದಯಂತೀವ ವಿವಿಧರಸಾಸ್ವಾದಲಾಲಸಾ ಸಮಜನಿ ರಾಜ್ಞಿ | ಪರಿಜನವನಿತಾಕರಪಲ್ಲವಾತ್ಪಾದಯುಗಳಗಳಮಾಕೃಷ್ಯ ಪಾರ್ಥಿವಮುಕುಟಮಣಿಶಿಲಾಶಯನೇಷು ಶಾಯಯಿತುಮಚಕಮತಕಮಲಾಕ್ಷೀ| ಅಪಿ ಭೂಷಣಾನಾಮುದ್ವಹನೇ ಕ್ಲಾಮ್ಯದಂಗಯಷ್ಟಿಸ್ತ್ರಯಾಣಾಮಪಿವಿಷ್ಟಪಾನಾಂ ಭಾರಮುಸಶಿಖರೇ ನಿವೇಶಯಿತುಮುದಕಂಠತಕಂಬುಕಂಠೀ || ”

ಜೀವಂಧರನಿಗೆ ಮಾಡಿದ ಗುರೂಪದೇಶದ ಕೆಲವು ಭಾಗವನ್ನೆತ್ತಿ ಬರೆಯುವೆವು :—

“ ವತ್ಸ! ಬಲನಿಷೂದನಪುರೋಧಸಮಪಿ ಸ್ವಭಾವತೀಕ್ಷ್ಣಯಾ ಧಿಷಣಯಾಧಿಕ್ಕುರ್ವತಿ ಸರ್ವಪಥೀನಪಾಂಡಿತ್ಯೇ ಭವತಿ ಪಶ್ಯಾಮಿನಾವಕಾಶಮುಪದೇಶಾನಾಂ | ತದಪಿಕಲಶಭವಸಹಸ್ರೇಣಾಪಿ ಕಬಲಯಿತುಮಶಕ್ಯಃ ಪ್ರಲಯುತರಣಿಪರಿಷದಾಪ್ಯಶೋಷ್ಯೋ ಯೌವನಜನ್ಮಾಮೋಹಮಹೋದಧಿಃ | ಅಶೇಷಭೇಷಜಪ್ರಯೋಗವೈಫಲ್ಯನಿಷ್ಪಾದನದಕ್ಷೋ ಲಕ್ಷ್ಮೀಕಟಾಕ್ಷವಿಕ್ಷೇಪವಿಸರ್ಪಿದರ್ಪಜ್ವರಃ ಪುರೋವರ್ತ್ಯಪಿ ವಸ್ತು ನ ವಿಲೋಕಯಿತುಂ ಪ್ರಭವತಃ ಪ್ರಭೂತೈಶ್ವರ್ಯಮದಕಾಚಕಂಚುಕಿತರೋಚಿಷೀ ಚಕ್ಷುಷೀ| ಮಂದೀಕೃತಮಣಿಮಂತ್ರೌಷಧಿಪ್ರಭಾವಃ | ಪ್ರಭಾವನಾಟಕನಟನಸೂತ್ರಧಾರಃ ಸ್ಮಯಾಪಸ್ಮಾರಃ | ಪಾತಾಲವಿವರಪತಿತವಿಶ್ವಂಭರಾಸಮುದ್ಧರಣಧೀರೋ ಮುರಾರಿರಪಿವರಾಹರೂಪೀ ನಾಲಮುದ್ಧರ್ತುಮುದರ್ಕವಿಷಮವಿಷಯಾಭಿಲಾಷಬಹಲಜಂಬಾಲಜಾಲಮಗ್ನಂಮನಃ ಸಕಲಸಾಗರಸಲಿಲ ಪೂರೇಣಾಪಿ ನ ಪಾರ್ಯತೇ ಕ್ಷಾಲಯಿತುಮುತ್ತಾಲರಾಗಪರಾಗಪಟಲಪರಿಷ್ವಂಗಸಂಗಿಮಾಲಿನ್ಯಂ| ಅವಸ್ಥಾವಿಷಮವಿಷಮೋಕ್ಷಭೀಷಣ ರಾಜಲಕ್ಷ್ಮೀಭುಜಂಗೀ ಇತಿಕಿಂಚಿದಿಹಶಿಕ್ಷ್ಯಸೇ | ಅವಿನಯವಿಹಂಗಲೀಲಾವನಂ ಯೌವನಂ; ಅನಂಗಭುಜಂಗನಿವಾಸರಸಾತಲಂಸೌಂದರ್ಯಂ; ಸ್ವೈರವಿಹಾರಶೈಲೂಷನೃತ್ತಾಸ್ಥಾನಮೈಶ್ವರ್ಯಂ ಪೂಜ್ಯಪೂಜಾವಿಲಂಘನ ಲಘಿಮಜನನೀ ಮಹಾಸತ್ತ್ವತಾ ಚ ಪ್ರತ್ಯೇಕಮಪಿ ಭವತಿ ಜನಾನಾಮನರ್ಥಾಯ | ಚತುರ್ಣಾಂ ಪುನರೇತೇಷಾಮೇಕತ್ರಸಂನಿಪಾತಃಸದ್ಮ ಸರ್ವಾನರ್ಥಾನಾ ಮಿತ್ಯರ್ಥೇಽಸ್ಮಿಕಾಸಂಶೀತಿಃ...... . ”|

· ಗದ್ಯಚಿಂತಾಮಣಿ ಲಂಬಕ ೧ ಪುಟ ೨೦.

‡ ಗದ್ಯಚಿಂತಾಮಣಿ ಲಂಬಕ ೨ ಪುಟ ೪೧—೪೨.

ಇದನ್ನೋದುವ ಪ್ರತಿಯೊಬ್ಬನಿಗೂ ಬಾಣನ ಕಾದಂಬರಿಯಲ್ಲಿ ಶುಕನಾಸನು ಚಂದ್ರಾಪೀಡನಿಗೆ ಮಾಡಿದ ಉಪದೇಶವು ಜ್ಞಾಪಕಕ್ಕೆ ಬಾರದಿರದು, ಕ್ಷತ್ರಚೂಡಾಮಣಿಯ ಶ್ಲೋಕಗಳ ಕೆಲವನ್ನು ಮಾದರಿಗಾಗಿ ಬರೆಯುವೆವು.—

ಗುರುಲಕ್ಷಣ :—

ರತ್ನತ್ರಯವಿಶುದ್ಧಸ್ಸನ್ ಪಾತ್ರಸ್ನೇಹೀಪರಾರ್ಥಕೃತ್
ಪರಿಪಾಲಿತಧರ್ಮೋ ಹಿ ಭವಾಬ್ಧೇಸ್ತಾರಕೋಗುರುಃ ||

ರತ್ನತ್ರಯಂಗಳಾದ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳಿಂದ ಪರಿಶುದ್ಧನಾಗಿ ಯೋಗ್ಯಪಾತ್ರದಲ್ಲಿ ದಾನಮಾಡುವುದರಲ್ಲಾಸಕ್ತನಾಗಿ ಪರಪ್ರಯೋಜನವೇ ತನ್ನದೆಂದು ಆಚರಿಸುತ್ತ ಯಾವನು ಧರ್ಮಪಾಲಕನಾಗಿರುವನೋ ಅವನು ಗುರುವೆನಿಸಿಕೊಳ್ಳುವನು.

ಶಿಷ್ಯನಲಕ್ಷಣ :—

ಗುರುಭಕ್ತೋ ಭವಾದ್ಭೀತೋ ವಿನೀತೋಧಾರ್ಮಿಕಸ್ಸುಧೀಃ
ಶಾಂತಸ್ವಾಂತೋಹ್ಯತಂದ್ರಾಳುಃ ಶಿಷ್ಟಃಶಿಷ್ಯೋಯಮಿಷ್ಯತೇ ||
ಲಂಬಕ ೨—೩೧.

ಯಾವಾಗಲೂ ಗುರುಭಕ್ತನಾಗಿ, ಸಂಸಾರಭೀತನಾಗಿ, ವಿನೀತನೂ, ಧರ್ಮಿಷ್ಟನೂ ಆಗಿ ಕುಶಲಬುದ್ಧಿಯುಳ್ಳವನಾಗಿ ರಾಗದ್ವೇಷಾದಿರಹಿತ ನಿರ್ಮಲ ಮನಸ್ಸುಳ್ಳವನಾಗಿ ಸಂಗ್ರಹತ್ರಯಂಗಳಾದ ವಿದ್ಯಾ, ಧರ್ಮ, ಮೋಕ್ಷಸಂಗ್ರಹದಲ್ಲಿ ಜಾಗರೂಕನಾಗಿ ಶಾಸ್ತ್ರಾರ್ಥವಿಚಾರದಲ್ಲಿ ಭ್ರಾಂತಿದೂರನೂ, ದೃಢವಿಶ್ವಾಸಿಯೂ ಆಗಿರುವನು ಶಿಷ್ಯನೆನಿಸಿಕೊಳ್ಳುವನು.

ಹೇಯೋಪಾದೇಯವಿಜ್ಞಾನಂ ನೋಚೇದ್ವ್ಯರ್ಥಶ್ಶ್ರಮಶ್ಶ್ರುತೌ
ಕಿಂವ್ರೀಹಿಖಂಡನಾಯಸ್ಯಸ್ತಂಡುಲಾನಾಮಸಂಭವೇ ||
ಲಂಬ ೨—೪೪.

ಭತ್ತವನ್ನು ಎಷ್ಟುಕುಟ್ಟಿದರೂ ಅಕ್ಕಿಯುದೊರಕದೇ ಹೋದರೆ ಹಾಗೆ ಕುಟ್ಟುವಶ್ರಮವು ಹೇಗೆ ನಿರರ್ಥಕವೋ ಹಾಗೆ ಎಷ್ಟು ಓದಿದರೂ ಯುಕ್ತಾಯುಕ್ತವಿವೇಚನೆಯೇ ಇಲ್ಲವಾದರೆ ಅಥವಾ ಹುಟ್ಟದೇಹೋದರೆ ಅಂತಹ ಶಾಸ್ತ್ರಾಭ್ಯಾಸದಿಂದ ಏನೂ ಪ್ರಯೋಜನವಾಗದು.

ತತ್ವಜ್ಞಾನಂ ಚ ಮೋಘಂ ಸ್ಯಾತ್ತದ್ವಿರುದ್ಧಪ್ರವರ್ತಿನಾಂ
ಪಾಣೌಕೃತೇನದೀಪೇನ ಕಿಂಕೂಪೇಪತತಾಂಫಲಂ || ೨—೪೫.

ಕೈಯಲ್ಲಿ ದೀಪವನ್ನು ಹಿಡಿದುಕೊಂಡು ಭಾವಿಯಲ್ಲಿ ಬೀಳುವುದಾದರೆ ಅಂತಹ ದೀಪದಿಂದ ಹೇಗೆ ಪ್ರಯೋಜನವಿಲ್ಲವೋ ಹಾಗೆಯೇ ಅಮೋಘವಾದ

ಶಾಸ್ತ್ರಾರ್ಥಂಗಳನ್ನು ಮನನಮಾಡಿಯೂ ನಿಷಿದ್ಧಕಾರ್ಯಪ್ರವರ್ತಕರಿಗೆ ಅಂತಹ ಶಾಸ್ತ್ರಾರ್ಥ ತತ್ವಜ್ಞಾನವೂ ನಿಷ್ಫಲವಾದುದೇ ಸರಿ.

ಸಜ್ಜನ ದುರ್ಜನರ ಸ್ವಭಾವವು ಹೀಗಿರುವುದು :—

ಅಪಕಾರೋಪಕಾರಾಭ್ಯಾಂ
ಸದಸಂತೌನಭೇದಿನೌ
ದಗ್ಧಂ ಚ ಭಾತಿಕಲ್ಯಾಣಂ
ಕೇನಾಂಗಾರವಿಶುದ್ಧತಾ || ೧೦—೫೨

ಅಪಕಾರಮಾಡಿದವರಿಗೆ ಉಪಕಾರವನ್ನು ಮಾಡುವುದು ಸಜ್ಜನರ ಸಹಜ ಧರ್ಮ. ಸರ್ವತ್ರ ಅಪಕಾರವನ್ನು ಮಾಡುವುದು ದುರ್ಜನ ಧರ್ಮವಾದುದರಿಂದ ಉಪಕಾರವನ್ನು ಮಾಡಿದವರಿಗೆ ಅಪಕಾರವನ್ನು ಮಾಡುವುದು ದುರ್ಜನರ ಸಹಜ ಧರ್ಮವಾಗಿರುವುದು. ಹೇಗೆಂದರೆ ಭಂಗಾರವನ್ನು ಎಷ್ಟುಸಲ ಬೆಂಕಿಯಲ್ಲಿಹಾಕಿ ಕಾಸಿದರೂ ಪ್ರತಿಸಲಕ್ಕೂ ಹೆಚ್ಚಾಗಿ ಕಾಂತಿಯನ್ನು ಬೀರುವುದು ಸುವರ್ಣದ ಸಹಜಧರ್ಮ. ಏನು ಮಾಡಿದರೂ ಸ್ವಚ್ಛವಾಗದೆ ಕಪ್ಪಾಗಿಯೇ ಇರುವುದು ಇದ್ದಲಿನ ಸಹಜಧರ್ಮವಾಗಿರುವುದು.

ರಿಕ್ತಾರಿಕ್ತದಶಾಯಾಂ ಚ
ಸದಸಂತೌ ನಭೇದಿನೌ
ಖಾತಾಪಿ ಹಿ ನದೀದತ್ತೇ
ಪಾನೀಯಂ ನ ಪಯೋನಿಧಿಃ || ೧೦—೫೩.

ಹೊಳೆಯಲ್ಲಿ ನೀರು ಇಲ್ಲದೆ ಇರುವಾಗ ಎಷ್ಟು ಅಗೆದರೂ ಸಿಹಿನೀರೇ ದೊರಕುವಂತೆ ಸತ್ಪುರುಷರು ತಮಗೆ ಎಷ್ಟು ಬಡತನ ಬಂದಡಸಿದರೂ ಅವರ ಸಹಜ ಗುಣವಾದ ಉತ್ತಮ ಸ್ವಭಾವವನ್ನು ಬಿಡರು. ಸಮುದ್ರವು ಜಲಸಂಪತ್ಪರಿಪೂರ್ಣವಾಗಿರುವುದಾದರೂ ಉಪ್ಪುನೀರೇ ದೊರೆಯುವಂತೆ ದುರ್ಜನರು ಎಷ್ಟು ಸಂಪತ್ಪರಿಪೂರ್ಣರಾದರೂ ತಮ್ಮ ನೀಚಬುದ್ಧಿಯನ್ನು ಬಿಡರು.



# ೧೧ನೆಯ ಶತಮಾನ

## ಕ್ಷೇಮೇಂದ್ರ

ಇವನು ಕಾಶ್ಮೀರದವನು. ಸಿಂಧುವಿನ ಮುಮ್ಮಗನು. ಪ್ರಕಾಶೇಂದ್ರನ ಮಗನು. ಇವನಿಗೆ ವ್ಯಾಸದಾಸನೆಂಬಾಪರನಾಮವಿದ್ದುದಾಗಿ.—

ಆಸೀತ್ಪ್ರಕಾಶೇಂದ್ರ ಇತಿಪ್ರಕಾಶಃ ಕಾಶ್ಮೀರದೇಶೇತ್ರಿದಶೇಶ್ವರಶ್ರೀಃ
ತಸ್ಯಾತ್ಮಜಸ್ಸರ್ವಮನೀಷಿಶಿಷ್ಯ ಶ್ರೀವ್ಯಾಸದಾಸಾಪರಪುಣ್ಯನಾಮಾ ॥

ಎಂಬುದರಿಂದ ಗೊತ್ತಾಗುತ್ತದೆ.

**ಕಾಲ**:—ಇವನು ಬರೆದಿರುವ ಔಚಿತ್ಯವಿಚಾರಚರ್ಚಾ, ಕವಿಕಂಠಾಭರಣ ಮತ್ತು ಸುವೃತ್ತತಿಲಕಗಳನ್ನು ಕಾಶ್ಮೀರದ ರಾಜನಾದ ಅನಂತರಾಜನ ಕಾಲದಲ್ಲಿ ಬರೆದುದಾಗಿ.—

ಕಾಶ್ಮೀರೇಷುಪೃಥುಪ್ರತಾಪಸವಿತುಃ ಕೀರ್ತ್ಯಂಶುತಾರಾಪತೇಃ
ಪ್ರೌಢಾರಾತಿವನಾನಲಸ್ಯ ಧನದಸ್ಯೇಂದ್ರಸ್ಯ ಭೂಮಂಡಲೇ
ವಿಶ್ವಾಕಾರವತಃ ಪುನಃ ಕಲಿಯುಗೇವಿಷ್ಣೋರ್ದಿನೋತ್ಪಾದಿನೋ
ರಾಜ್ಯೇ ಶ್ರೀಮದ**ನಂತರಾಜನೃಪತೇಃ** ಕಾವ್ಯೋದಯೋಽಯಂಕೃತಃ ॥

ಎಂಬ ಗ್ರಂಥಾಂತ್ಯ ಶ್ಲೋಕದಿಂದ ವ್ಯಕ್ತಪಡುತ್ತದೆ. 'ಸಮಯಮಾತೃಕಾ' ಗ್ರಂಥವನ್ನು ಆ ರಾಜನ ಆಳ್ವಿಕೆಯಲ್ಲಿ ಕ್ರಿ. ಶ. ೧೦೫೦ರಲ್ಲಿ ಬರೆದು ಮುಗಿಸಿದು ದಲ್ಲದೆ ಅನಂತರಾಜನ ಮಗ ಕಲಶನ ಕಾಲದಲ್ಲಿ 'ದಶಾವತಾರ ಚರಿತ' ಎಂಬ ಗ್ರಂಥವನ್ನು ಬರೆದು ಮುಗಿಸಿದುದಾಗಿ ಹೇಳಿಕೊಂಡಿರುವನು. ಅನಂತರಾಜನು ಕ್ರಿ. ಶ. ೧೦೨೮-೧೦೮೦ರ ವರೆಗೆ ಕಾಶ್ಮೀರದಲ್ಲಿ ಆಳಿದನು. ಕ್ಷೇಮೇಂದ್ರನು ವಿದ್ಯಾವಿವೃತಿ ಅಥವಾ ಪ್ರತ್ಯಭಿಜ್ಞಾವಿವೃತಿವಿಮರ್ಶಿನೀ ಗ್ರಂಥಕಾರನಾದ ಅಭಿನವ ಗುಪ್ತಾಚಾರ್ಯನ ಬಳಿ ಸಾಹಿತ್ಯವನ್ನು ಕಲಿತುದಾಗಿ ಭಾರತಮಂಜರಿಯಲ್ಲಿ ಹೇಳಿಕೊಂಡಿರುವನು. ಅಭಿನವಗುಪ್ತನು ಕ್ರಿ. ಶ. ೧೦೧೪ರಲ್ಲಿ ಪ್ರತ್ಯಭಿಜ್ಞಾನದರ್ಶನ ವ್ಯಾಖ್ಯಾನವನ್ನು ಬರೆದನು. ಕ್ಷೇಮೇಂದ್ರನು ಅಭಿನವಗುಪ್ತನ ಬಳಿ ಸಾಹಿತ್ಯ ಪಾಠವನ್ನು ಮಾಡುವುದಕ್ಕೂ ಆಗಣಕಾಲದ ಕಾವ್ಯಗಳ ಪರಿಚಯವನ್ನು ಮಾಡಿಕೊಳ್ಳುವುದಕ್ಕೂ ಸುಮಾರು ೨೦-೨೫ ವರ್ಷಗಳ ವಯಸ್ಸಿನವನಾದರೂ ಆಗಿರಬೇಕೆಂದು ತೋರುವುದು. ಎಂದರೆ ಸುಮಾರು ಕ್ರಿ. ಶ. ೯೯೦ರಲ್ಲಿ ಹುಟ್ಟಿರಬೇಕು. ಇವನು ವಿರಾಗಿಯಾಗಿ ತ್ರಿಪುರೇಶಪರ್ವತದಲ್ಲಿದ್ದುಕೊಂಡು ಲೌಕಿಕವರ್ಷ ೪೧೪೧ ಅಥವಾ ಕ್ರಿ. ಶ. ೧೦೬೫ರಲ್ಲಿ ಆಳುತ್ತಿದ್ದ ಕಲಶನ ಕಾಲದಲ್ಲಿ 'ದಶಾವತಾರಚರಿತ' ವನ್ನು ಬರೆದು ಅನಂತರ ಕಾಲವಾಗಿರಬೇಕೆಂದು ಗೊತ್ತಾಗುತ್ತದೆ. ಈ ಕಾಲ

ಗಳಿಂದ ಇವನು ಕ್ರಿ. ಶ. ೧೧ನೆಯ ಶತಮಾನದ ಮಧ್ಯಕಾಲದವನೆನಬೇಕಾಗುವುದು. ಡಾ|| ಬುಹಲರವರು ಈ ಕಾಲವನ್ನೇ ಸಾಧಿಸಿರುವರು.

ಗ್ರಂಥ:— ೧. ಬೃಹತ್ಕಥಾಮಂಜರೀ
೨. ಭಾರತಮಂಜರೀ
೩. ರಾಮಾಯಣ ಮಂಜರೀ
೪. ಪವನಪಂಚಾಶಿಕಾ
೫. ಸುವೃತ್ತತಿಲಕ
೬. ವಿನಯವಲ್ಲಿ
೭. ಮುನಿಮತಮೀಮಾಂಸಾ
೮. ನೀತಿಲತಾ
೯. ಅಭಿಧಾನಕಲ್ಪಲತಾ
೧೦. ಅವಸರಸಾರ
೧೧. ಲಲಿತರತ್ನಮಾಲಾ
೧೨. ಮುಕ್ತಾವಳೀಕಾವ್ಯ
೧೩. ಸಮಯಮಾತೃಕಾ
೧೪. ಸೇವ್ಯಸೇವಕೋಪದೇಶ
೧೫. ದಶಾವತಾರಚರಿತ
೧೬. ವಾತ್ಸ್ಯಾಯನ ಸೂತ್ರಸಾರ
೧೭. ಔಚಿತ್ಯವಿಚಾರಚರ್ಚಾ
೧೮. ಪದ್ಯಕಾದಂಬರೀ
೧೯. ಶಶಿವಂಶಮಹಾಕಾವ್ಯ
೨೦. ದೇಶೋಪದೇಶ
೨೧. ನರ್ಮಮಾಲಾ
೨೨. ಚಿತ್ರಭಾರತ ನಾಟಕ
೨೩. ಕನಕಜಾನಕೀ
೨೪. ಅಮೃತತರಂಗಕಾವ್ಯ
೨೫. ಚತುರ್ವರ್ಗಸಂಗ್ರಹ
೨೬. ಕವಿಕಂಠಾಭರಣ
೨೭. ದರ್ಪದಳನ
೨೮. ಕಲಾವಿಲಾಸ
೨೯. ಚಾರುಚರ್ಯಾ
೩೦. ಲಾವಣ್ಯವತೀ
೩೧. ರಾಜಾವಳಿ
೩೨. ಲೋಕಪ್ರಕಾಶಕೋಶ

ಕ್ಷೇಮೇಂದ್ರನು ಅಭಿನವಗುಪ್ತಾಚಾರ್ಯನ ಬಳಿಯಲ್ಲಿ ಓದಿದುದಲ್ಲದೆ ಭಾಗವತ ಸಂಪ್ರದಾಯದವರಾದ ಸೋಮ ಮತ್ತು ಗಾಂಗರ ಬಳಿಯಲ್ಲಿಯೂ ವಿದ್ಯಾಭ್ಯಾಸವನ್ನು ಮಾಡಿದುದಾಗಿ ಹೇಳಿಕೊಂಡಿರುವನು. ಇವನು ಕಾವ್ಯರಚನೆಗೆ ಅನಂತರಾಜನಕಾಲಕ್ಕಿಂತಲೂ ಹಿಂದೆ ಪ್ರಾರಂಭಿಸಿರಬೇಕಾಗಿ ತೋರುತ್ತದೆ. ಪೈಶಾಚಭಾಷೆಯಲ್ಲಿ ಗುಣಾಢ್ಯನು ಬರೆದುದಾದ 'ಬೃಹತ್ಕಥೆಯನ್ನು' ಸಂಸ್ಕೃತಭಾಷೆಯಲ್ಲಿ ಬರೆದು ಅದನ್ನು ಬೃಹತ್ಕಥಾಮಂಜರೀ ಎಂದು ಕರೆದಿರುವನು. ಅನಂತರ ಭಾರತಮಂಜರೀ ರಾಮಾಯಣಮಂಜರೀ ಎಂಬುವುಗಳನ್ನು ಬರೆದು ಮುಗಿಸಿ ವಾತ್ಸ್ಯಾಯನ ಸೂತ್ರಸಾರವನ್ನು ಬರೆದನು. ಆಗಣಕಾಲದಲ್ಲಿ ಪ್ರಸಿದ್ಧವಾಗಿದ್ದ ಸಕಲವಿದ್ಯೆಗಳಲ್ಲಿಯೂ ಪಾರಂಗತನಾಗಿ ಗಣಿತ ಜ್ಯೋತಿಷ ವೈದ್ಯಶಾಸ್ತ್ರ ರಾಜಕೀಯ ಸಾಮಾಜಿಕ ನೈತಿಕ ಮತ್ತು ಶೃಂಗಾರ ಶಾಸ್ತ್ರ ಮೊದಲಾದವುಗಳಲ್ಲಿ ಪ್ರವೀಣನಾಗಿದ್ದುದಲ್ಲದೆ ಬೌದ್ಧವೇದಾಂತತತ್ವ ಮಂತ್ರಶಾಸ್ತ್ರಗಳಲ್ಲಿಯೂ ನಿಪುಣ

[1] Cashmere Reports P. 46.

ನಾಗಿದ್ದನು. ಇವನು ರಾಮಾಯಣ ಭಾರತ ಬೃಹತ್ಕಥೆಗಳನ್ನು ಬರೆದನಾದುದರಿಂದ ಇವನು ಬರೆಯುವ ಗ್ರಂಥಗಳಿಗೆ ಕಥಾವಸ್ತುಗಳನ್ನು ಸುಲಭವಾಗಿ ದೊರಕಿಸಿ ಕೊಳ್ಳುವ ಸುಯೋಗವು ದೊರಕಿತು. 'ನೀತಿಲತಾ' ಎಂಬುದನ್ನು ರಾಮಾಯಣ ಮಂಜರಿಯ ಆಧಾರದಿಂದಲೂ 'ವಿನಯವಲ್ಲಿ'ಯನ್ನು ಭಾರತಮಂಜರಿಯ ಆಧಾರ ರಿಂದಲೂ ಬರೆದಿರುವನು. 'ಮುನಿಮತ ಮಿಮಾಂಸಾ' ಎಂಬುದು ಪ್ರಾಚೀನ ಋಷಿ ಗಳ ದೂಷಣೆಯಿಂದ ಕೂಡಿದುದಾಗಿರುವುದು. ಇವನು ಬರೆದಿರುವ ಪರಾಕ್ರಮ ವರ್ಣನ ರೂಪವಾದ ಶ್ಲೋಕಗಳನ್ನು ನೋಡಿದರೆ ವೇಣೀಸಂಹಾರಕಾರನಾದ ಭಟ್ಟ ನಾರಾಯಣನಿಗೂ ಮಹಾವೀರಚರಿತಕಾರನಾದ ಭವಭೂತಿಗೂ ಹೋಲಿಸಬಹು ದಾಗಿದೆ. ಶಬ್ದ, ಅಲಂಕಾರ ಮತ್ತು ಉಪಮನೋಪಮೇಯಗಳು ಇವನಿಗೆ ಹೃದ್ಗತ ವಾಗಿದ್ದು ಯಾವುದನ್ನು ವರ್ಣಿಸಿದರೂ ಪ್ರತ್ಯಕ್ಷವಾಗಿ ನಡೆದಂತೆ ವರ್ಣಿಸುವುದು ಇವನ ಕೌಶಲವಾಗಿದ್ದುದಲ್ಲದೆ ಮೂಲಾಭಿಪ್ರಾಯಕ್ಕೆ ವಿರೋಧವಿಲ್ಲದಂತೆ ಹೇಳುವ ಜಾಣ್ಮೆಯನ್ನು ಹೊಂದಿದ್ದನು. ಹೀಗಾಗಿ ಮುಂದೆ ಮಹಾ ಕವಿಯಾಗುವುದಕ್ಕೆ ಬೇಕಾದ ಸಮಸ್ತ ವಿದ್ಯೆಗಳೆಲ್ಲವನ್ನೂ ಚಿಕ್ಕವಯಸ್ಸಿನಲ್ಲಿ ಕಲಿತು ದಾಗಿ 'ಕವಿಕಂಠಾಭರಣ'ದಲ್ಲಿ ಹೇಳಿಕೊಂಡಿರುವನು. ಕವಿತೆಯು ಸ್ವಾಭಾವಿಕವಾಗಿ ಪ್ರಕೃತಿಯನ್ನು ಹೋಲುವುದೆಂದೂ ವಿದ್ಯೆಯು ಅದಕ್ಕೆ ಸಹಾಯಮಾತ್ರವೆಂದೂ ಹೇಳಿರುವನು. ಇವನು ನೀರಸವಾದ ತರ್ಕವ್ಯಾಕರಣಗಳನ್ನೂ ವೈಯ್ಯಾಕರಣರನ್ನೂ ಹಿಯ್ಯಾಳಿಸುತ್ತಿದ್ದನು. ಯಾರು ಸರಳಹೃದಯರಲ್ಲವೋ, ಯಾರಿಗೆ ಸ್ವಾಭಾ ವಿಕ ವಿಶ್ವ ಸೌಂದರ್ಯವು ರುಚಿಸದೋ, ಯಾರಿಗೆ ಸರಳಕವಿತಾಮಾಧುರ್ಯವು ರುಚಿ ಸದೋ ಅಂತಹರು ವ್ಯಾಕರಣ ವ್ಯಾಕರಣ ತರ್ಕ ತರ್ಕ ಗಳೆಂದು ಅರಚುತ್ತಿರಲಿ ಅಂತಹರ ವಿದ್ಯವು ಕುರುಡನು ಸೂರ್ಯನನ್ನು ನೋಡಿದಂತಾಗುವದು ಎಂದು ಹೇಳು ತ್ತಿದ್ದನು. ಇವನು ಸರಸ್ವತೀ ಮಂತ್ರೋಪದೇಶವನ್ನು ಅಭಿನವಗುಪ್ತಾಚಾರ್ಯನಿಂದ ಹೊಂದಿದುದಾಗಿ ಹೇಳಿರುವನು. ಇವನ ಆಯುಷ್ಯದ ಹೆಚ್ಚು ಭಾಗವು ದೇಶಾಟನ ದಲ್ಲಿಯೂ ಪಂಡಿತಭಾಷಣದಲ್ಲಿಯೂ ಕಳೆದಿರಬೇಕಾಗಿ ತೋರುತ್ತದೆ. ಯಾವಾಗಲೂ ನಾಟಕಾಭಿನಯಗಳನ್ನು ನೋಡುವುದರಲ್ಲಿ ಇವನಿಗೆ ಆಸಕ್ತಿ ಬಹಳ. ಸಂಗೀತ ಮತ್ತು ಚಿತ್ರಕಲೆಗಳಲ್ಲಿ ಹೆಚ್ಚಾದ ನೈಪುಣ್ಯಸಂಪಾದನೆಯಿದ್ದಿತು. ಗ್ರಂಥಕಾರರನ್ನು ಬಹು ಮಾನಿಸುತ್ತಿದ್ದನು. ತಾನು ಬರೆದ ಗ್ರಂಥಗಳಮೇಲೆ ಬರೆಯುವ ಇತರರ ವಿಮರ್ಶೆ ಗಳನ್ನು ಬಹು ಜಾಣ್ಮೆಯಿಂದಲೂ ತಾಳ್ಮೆಯಿಂದಲೂ ನೋಡಿಕೊಳ್ಳುತ್ತಿದ್ದನಲ್ಲದೆ ಸಣ್ಣ ಸಣ್ಣ ಗ್ರಂಥಗಳನ್ನು ಬರೆದು ಇತರರ ದೋಷೋದ್ಘಾಟನ ಮಾಡುವುದರಲ್ಲಿ ಅದ್ವಿತೀಯನಾಗಿದ್ದನು. ಇಂತಹ ಸಣ್ಣಗ್ರಂಥಗಳಲ್ಲಿ 'ದರ್ಪದಳನವು' ಮುಖ್ಯವಾ ದುದು. ಕಲಾವಿಲಾಸ, ಸೇವ್ಯಸೇವಕೋಪದೇಶ, ಸಮಯಮಾತೃಕಾ ನರ್ಮಮಾಲಾ ಮೊದಲಾದವು ಈ ಜಾತಿಗೆ ಸೇರಿದುದು. ಇವನು ತನ್ನ ಕಾಲದಲ್ಲಿ ಅವಿವೇಕವೆಂದು

ಕಂಡುಬಂದ ಯಾವುದನ್ನೂ ಖಂಡಿಸದೆ ಬಿಟ್ಟಿರುವುದಿಲ್ಲ. ಸಮಾಜಸುಧಾರಣೆಯ ವಿಷಯದಲ್ಲಿ ಇವನಿಗೆ ಹೆಚ್ಚು ಆಸಕ್ತಿ ಇದ್ದಿತು. ಲೋಕಾನುಭವವನ್ನು ತಿಳಿಸುವುದಾದ ಕಲಾವಿಲಾಸದಲ್ಲಿ ಮೋಹ, ಡಂಭ, ಕಾಮ ಮೊದಲಾದುವುದರ ದುರ್ಲಕ್ಷಣಗಳು ಹೇಳಲ್ಪಟ್ಟು, ಹತ್ತನೆಯ ಅಧ್ಯಾಯದಲ್ಲಿ ಕರಣಿಕರ ದುರ್ಮಾರ್ಗತನವು ವರ್ಣಿತವಾಗಿದೆ. ಅವರಲಂಚಕೋರತನ, ಸುಳ್ಳು, ತಟವಟ, ಮೋಸ, ಅಕ್ಷರಸ್ಖಾಲಿತ್ಯಾಚರಣ, ಕಳ್ಳಕೈಬರಹ, 'ಸಹಿತ' ಎಂದಿರುವುದನ್ನು 'ರಹಿತ' ಎಂದು ಮಾಡುವುದು, ಕಾಗದಪತ್ರಗಳನ್ನು ಸುಟ್ಟುಹಾಕುವುದು, ಅನೇಕ ಸಮಯಗಳಲ್ಲಿ ದೊಡ್ಡದೊಡ್ಡ ಅಧಿಕಾರಿಗಳಿಗೂ ಅವರು ಬರೆದುಕಳುಹಿದ ಕಾಗದಪತ್ರಗಳು ಸರಿಯಾಗಿಲ್ಲವೆಂದು ಹೇಳುವುದರ ಮೂಲಕ ಅವರಿಗೆ ಸರಿಯಾಗಿ ವೇತನವು ದೊರೆಯದಂತೆ ಮಾಡುವಿಕೆ ಇವೇ ಮೊದಲಾದವುಗಳನ್ನು ಕೇವಲ ಅನುಭವಿಯಂತೆ ವರ್ಣಿಸಿರುವನು. ತನಗೆ ಪ್ರಾಚೀನರಾದ ಮತ್ತು ತನ್ನ ಸಮಕಾಲೀನರಾದ ಗ್ರಂಥಕಾರರ ಬರವಣಿಗೆಯನ್ನು ಬಹುಶ್ರದ್ಧೆಯಿಂದ ಪರಿಶೀಲಿಸುತ್ತಿದ್ದನು. ಈವಿಚಾರಗಳನ್ನು ಔಚಿತ್ಯವಿಚಾರಚರ್ಚಾ, ಕಂಠಾಭರಣ, ಸುವೃತ್ತತಿಲಕದಲ್ಲಿ ಅಡಕವಮಾಡಿರುವನು. ದೇಶಾಟನಾವಸರದಲ್ಲಿ ಕಾಬೂಲು, ತುರ್ಕಸ್ಥಾನ, ಚೈನಾ, ಜಲಂಧರ, ಗೌಡ, ಆಫಘಾನಿಯರೇ ಮೊದಲಾದವರ ದೇಶ, ವೇಷ, ಭಾಷೆ, ಆಚಾರ ವ್ಯವಹಾರಗಳನ್ನು ಕುರಿತು ಸಮಯಮಾತೃಕೆಯಲ್ಲಿಯೂ ಗೌಡದೇಶೀಯರ ವಂಚನೆಗಳನ್ನು (ಬಂಗಾಳಿ ವಿದ್ಯ) ಕುರಿತು ಕಲಾವಿಲಾಸದಲ್ಲಿಯೂ, ಬಾಹ್ಲೀಕರ ಮಾತಿನ ಠಕ್ಕು, ದಾಕ್ಷಿಣಾತ್ಯ ಮತ್ತು ಪೌರ್ವಾತ್ಯರನಟನೆ, ಕಿರಾತರದರ್ಪ, ಸೇವಕರ ಕಷ್ಟನಿಷ್ಠುರಗಳು, ಅಧಿಕಾರಿಗಳ ಉಚ್ಛೃಂಕಲವರ್ತನ ಇವುಗಳನ್ನು ಸೇವ್ಯಸೇವಕೋಪದೇಶಗಳಲ್ಲಿ ಹೇಳಿರುವನು. ಇವನು ತನ್ನ ಅಂತ್ಯಕಾಲದಲ್ಲಿ ಉಪದೇಶಾತ್ಮಕ ಗ್ರಂಥಗಳನ್ನು ಬರೆಯುವುದರಲ್ಲಿಯೂ, ಉಪದೇಶಿಸುವುದರಲ್ಲಿಯೂ ಕಳೆನಂತೆ ಚಾರುಚರ್ಯಾದಿಂದ ತಿಳಿಯಬರುತ್ತದೆ. ಇವನು ಮೊದಲು ಶೈವಾರಾಧಕನಾಗಿದ್ದು ಸೋಮಭಾಗವತನ ಶಿಕ್ಷಣಪ್ರಭಾವದಿಂದ ಭಾಗವತಸಂಪ್ರದಾಯವನ್ನು ಕೈಕೊಂಡಂತೆಯೂ ಕಾಲಕ್ರಮದಲ್ಲಿ ಬೌದ್ಧಮತ ತತ್ವವನ್ನು ತಿಳಿದು 'ಅವಧಾನಕಲ್ಪಲತಾ' ಎಂಬ ಗ್ರಂಥವನ್ನು ಬರೆದನು. ಇವನು ಮಹಾವೇದಾಂತಿಯೂ, ವೇದಮತ ತತ್ವದಲ್ಲಿ ಸಂಪೂರ್ಣ ನಂಬಿಕೆಯುಳ್ಳವನೂ, ಆಗಿದ್ದನು. ಶ್ರುತಿ, ಸ್ಮೃತಿ ಮತವು ಯುಕ್ತವೇದೂ ಅಂತ್ಯಕಾಲದಲ್ಲಿ ವಿಷ್ಣುಸ್ಮರಣೆಯು ಆವಶ್ಯವೆಂದೂ 'ಚಾರುಚರ್ಯಾ'ದಲ್ಲಿ ಹೇಳಿರುವನು. ಔಚಿತ್ಯವಿಚಾರಚರ್ಚಾ ಎಂಬುದು ಕವಿಕಂಠಾಭರಣಕ್ಕಿಂತ ಮೊದಲು ಬರೆದುದಾಗಿಯೂ ಶಿಷ್ಯಭಟ್ಟೋದಯಸಿಂಹನಿಗಾಗಿ ಬರೆಯಲ್ಪಟ್ಟುದಾಗಿಯೂ ಅದರಲ್ಲಿಯೇ ಹೇಳಲ್ಪಟ್ಟಿರುವುದು. ಇವನು 'ಲಲಿತಮಹಾಕಾವ್ಯ' ಎಂಬುದನ್ನು ಬರೆದಿರುವುದಾಗಿ ಕವಿಕಂಠಾ

ಭರಣದಲ್ಲಿ ಹೇಳಲ್ಪಟ್ಟಿದೆ. 'ಲೋಕಪ್ರಕಾಶ' ಎಂಬ ಗ್ರಂಥವನ್ನು ಕ್ಷೇಮೇಂದ್ರನು ಬರೆದನೆಂದು ಕೆಲವರು ಹೇಳುವರು. ಆದರೆ ಅದರಲ್ಲಿ ಕಂಡುಬರುವ ಹಿಂದುಸ್ಥಾನಿ ಮತ್ತು ಫಾರಸಿ ಶಬ್ದಗಳ ಪ್ರಯೋಗಗಳಿಂದ ನೊಗಲರಕಾಲದ ಯಾವನೋ ಇದೇ ಹೆಸರಿನವನು ಬರೆದಿರಬಹುದಾಗಿ ಹೇಳಬೇಕಾಗುತ್ತದೆ. 'ಸುವೃತ್ತತಿಲಕ'ವು ವೃತ್ತ ಲಕ್ಷಣಗಳಿಂದ ಕೂಡಿರುವುದು. ಚತುರ್ವರ್ಗಸಂಗ್ರಹವು ಪುರುಷಾರ್ಥಪ್ರತಿಪಾದಕ ವಾಗಿದೆ. ರಾಜಾವಳಿಯಲ್ಲಿ ಕಾಶ್ಮೀರರಾಜರ ಚರಿತೆಯನ್ನು ಹೇಳಿದೆ. ಕಲ್ಹಣನು ಸರಿಯಾಗಿಲ್ಲವೆಂದು ಆಕ್ಷೇಪಿಸಿದುದು ಇದೇ. ರಾಜಪುತ್ರ ಮತ್ತು ಲಕ್ಷಣಾದಿತ್ಯ ಇವರಿಬ್ಬರೂ ಕ್ಷೇಮೇಂದ್ರನ ಶಿಷ್ಯರು.

ಕ್ಷೇಮೇಂದ್ರನ ಕಾಲದ ರಾಜ್ಯಸ್ಥಿತಿ:—

ಅನಂತರಾಜನ ಆಳ್ವಿಕೆಯಲ್ಲಿ ಕಾಶ್ಮೀರವು ಸುಖಭೋಗಭಾಗ್ಯಾಗಾರವಾಗಿ ಇದ್ದಿತು. ರಾಜ್ಯಭಾರಕ್ರಮವು ಬ್ರಾಹ್ಮಣರದಾಗಿದ್ದಿತು. ಸರಕಾರದ ಉದ್ಯೋಗ ಸ್ಥರಿಗೆ ದಿವಿರ (Divira) ರೆಂದೂ, ಗುಮಾಸ್ತೆ (clerk) ಯರಿಗೆ ಕಾಯಸ್ಥ ರೆಂದೂ ಹೆಸರಿದ್ದಿತು. ನ್ಯಾಯಾಸ್ಥಾನಭಾಷೆಯು (Court-language) ಗೀರ್ವಾಣಭಾಷೆಯಾಗಿದ್ದಿತು. ರಸೀತಿ ಪತ್ರವೇ ಮೊದಲಾದುವು 'ಉಜ್ಜಮ' ಪತ್ರ ಗಳೆಂದು ಕರೆಯಲ್ಪಡುತ್ತಿದ್ದವು. ರಾಜ್ಯಶಾಸನಕಾರರ ರುಜು ಮೊಹರಿಲ್ಲವ ಕಾಗದ ಪತ್ರಗಳು ಅನಂಗೀಕಾರ ಮಾಡಲ್ಪಡುತ್ತಿದ್ದವು. ನ್ಯಾಯಾಸ್ಥಾನ (Court) ವನ್ನು ಅಧಿಕರಣಸ್ಥಾನವೆನ್ನುತ್ತಿದ್ದರು. ನ್ಯಾಯಾಸ್ಥಾನದಲ್ಲಿ ತೀರ್ಪುಹೊಂದಿದ ಪತ್ರಗಳಿಗೆ 'ಜಯಪತ್ರ' ಎಂಬ ಹೆಸರಿದ್ದಿತು. ಪಾಠಶಾಲೆಗಳನೇಕಗಳಿದ್ದುವು. ವಿದ್ಯಾಭ್ಯಾಸವು ಪುಕ್ಕಟೆಯಾಗಿ ದೊರಕುತ್ತಿತ್ತು. ಮರದ ಹಲಗೆಗೆ ಬಣ್ಣವನ್ನು ಒಳಿದು ಅದರ ಮೇಲೆ ಬರೆಯುವುದು ರೂಢಿಯಾಗಿದ್ದಿತು. ಮೊದಲು ಅಕ್ಷರಾಭ್ಯಾಸವನ್ನು ಮಾಡಿಸುವಾಗ "ಓಂಸ್ವಸ್ತಿಸಿದ್ಧಂನಮಃ ಸರಸ್ವತ್ಯೈ" ಎಂದು ಬರೆದು ಕೊಡು ತ್ತಿದ್ದರು. ಆಯುರ್ವೇದವೈದ್ಯಪ್ರಚಾರವು ಹೆಚ್ಚಾಗಿದ್ದಿತು. ವಾಗ್ಭಟನ ಅಷ್ಟಾಂಗ ಹೃದಯವೂ, ಚಕ್ರದತ್ತನ ಸಂಗ್ರಹವೆಂಬ ಪುಸ್ತಕವೂ ಆಧಾರ ಗ್ರಂಥಗಳಾ ಗಿದ್ದವು. ಆನಂದವರ್ಧನ, ರತ್ನಾಕರ, ಶಿವಸ್ವಾಮಿ, ಭಟ್ಟಕಲ್ಲಟ, ಭಟ್ಟಮುಕುಲ, ಉತ್ಪಲ, ಭಟ್ಟೇಂದುರಾಜ, ಭಟ್ಟತೋಟನೇ ಮೊದಲಾದವರು ಅಲಂಕಾರಶಾಸ್ತ್ರ ಗಳನ್ನೂ, ಕಾವ್ಯಗಳನೇಕಗಳನ್ನೂ ಬರೆದು ಪ್ರಸಿದ್ಧರಾಗಿದ್ದರು. ಅಲಂಕಾರ, ಸಾಹಿತ್ಯ, ವೇದಾಂತ, ತರ್ಕ ಮೊದಲಾದ ಗ್ರಂಥಗಳನ್ನು ಓದಬೇಕೆಂಬ ವಿದ್ಯಾರ್ಥಿಗಳಿಂದ ಯಾವ ವಿಧವಾದ ಪ್ರತಿಫಲಾಕಾಂಕ್ಷೆಯೂ ಇಲ್ಲದೆ ಪಾಠವನ್ನು ಹೇಳಿಕೊಡಲು ಅಭಿನವಗುಪ್ತನಂತಹ ಪಂಡಿತರು ಹಾತೊರೆಯುತ್ತಿದ್ದರು. ಕ್ಷೇಮೇಂದ್ರನಿಗೆ ಅನಂತ ರಾಜನೂ ಮತ್ತು ಇವನ ಮಗ ಕಲಶರಾಜನೂ ಆಶ್ರಯದಾತರಾಗಿರುತ್ತಿದ್ದರು.

ಪ್ರಕೃತ ಕ್ಷೇಮೇಂದ್ರನು ಬರೆದುದಾದ 'ಕವಿಕಂಠಾಭರಣ' 'ಚಾರುಚರ್ಯಾ' ವಿಚಾರವಾಗಿ ಕೊಂಚ ಹೇಳುವೆವು:—

ಕವಿಕಂಠಾಭರಣ:—ಇದು ಅಲಂಕಾರ ಗ್ರಂಥ. ಇದಕ್ಕೆ 'ಕವಿಕರ್ಣಿಕ' ಎಂಬ ನಾಮಾಂತರವೂ ಇರುವುದಾಗಿ ಚಾರುಚರ್ಯಾದಿಂದ ಗೊತ್ತಾಗುತ್ತದೆ. ಶಿಷ್ಯೋಪದೇಶಕ್ಕೆ ತಕ್ಕುದಾಗಿಯೂ ವಿದ್ವಾಂಸರಿಗೆ ವಿಶೇಷ ವಿಷಯಗಳನ್ನು ತಿಳಿಯಹೇಳುವುದಕ್ಕೂ ಈ ಗ್ರಂಥವನ್ನು ಬರೆದುದಾಗಿ—

ಸುವಿಭಕ್ತಿಸಮುಸ್ತಿಕಂಬುಧ್ವ್ಯೆ
ರ್ಗುಣಸಂಯುಕ್ತಮಮುಕ್ತ ಸ್ಪ್ರವ್ನೈಃ
ರಚಿತಂಪದಕ್ಕೈಃ ಸುವರ್ಣವ
ತ್ಕವಿಕಂಠಾಭರಣಂ ವಿಚಾರ್ಯತಾಂ ||

ಎಂದು ಹೇಳಿಕೊಂಡಿರುವನು. ನಮಗೆ ಇದುವರೆಗೆ ಚಿರಪರಿಚಿತವಾಗಿರುವ 'ಪ್ರತಾಪ ರುದ್ರೀಯ', 'ಕಾವ್ಯಪ್ರಕಾಶ' ಮೊದಲಾದ ಅಲಂಕಾರಗ್ರಂಥಗಳಂತೆ ಇರದೆ ಇದೊಂದು ನೂತನ ಮಾರ್ಗವನ್ನನುಸರಿಸಿದೆ. ಇತರ ಲಕ್ಷಣಗ್ರಂಥಗಳಲ್ಲಿ ಕಂಡುಬರುವುದಾದ ನಾಯಿಕಾನಾಯಕ ಲಕ್ಷಣಗಳಾಗಲಿ, ಕಾವ್ಯನಾಟಕಾದಿ ಲಕ್ಷಣಗಳಾಗಲಿ ಯಾವುವೂ ಹೇಳಲ್ಪಟ್ಟಿರುವುದಿಲ್ಲ.

ಇದರಲ್ಲಿ (೧) ಕವಿತ್ವಪ್ರಾಪ್ತಿ, (೨) ಕವಿಶಿಕ್ಷಣ (೩) ಕವಿತ್ವ ಚಮತ್ಕಾರ (೪) ಗುಣದೋಷವಿಭಾಗ (೫) ಪರಿಚಯಪ್ರಾಪ್ತಿ ಎಂಬ ಐದು ಪ್ರಕರಣಗಳಿರುವುವು. ಕವಿತ್ವಪ್ರಾಪ್ತಿಗೆ ದೈವಾನುಗ್ರಹವೂ ಮನುಷ್ಯಪ್ರಯತ್ನವೂ ಕಾರಣವೆಂದೂ, ಸರಸ್ವತೀ ಪೂಜಾದಿಗಳು ದೈವಿಕವೆಂದೂ, ಗುರುಶಿಷ್ಯ ಸಂಬಂಧವು ಮಾನುಷಿಕವೆಂದೂ ಹೇಳಲ್ಪಟ್ಟಿದೆ. ಕವಿಯು ಮೊದಲನೆಯ ಪ್ರಕರಣಾಂತ್ಯದಲ್ಲಿ ಈ ವಿಚಾರವನ್ನು ಸಂಗ್ರಹವಾಗಿ ಸೂಚಿಸಿರುವನು.

ಇತಿ ತತ ಸುಕೃತಾನಾಂ ಪ್ರಾಕ್ತನಾನಾಂವಿಪಾಕೇ
ಭವತಿ ಶುಭಮತೀನಾಂ ಮಂತ್ರಸಿದ್ಧಂ ಕವಿತ್ವಂ
ತದನುಪುರುಷ ಯತ್ನೈರ್ಧೀರ್ಘಮಭ್ಯುದೇತಿ
ಸ್ಫುರತಿಜಡಧಿಯಾಂ ಶ್ರೀಶಾರದಾ ನಾದಸೇನ ||

ಎರಡನೆಯ ಪ್ರಕರಣದಲ್ಲಿ ಕವಿಗಳನ್ನು ೧) ಛಾಯೋಪಜೀವಿ ೨) ಪದಕೋಪಜೀವಿ ೩) ಪಾದೋಪಜೀವಿ ೪) ಸಕಲೋಪಜೀವಿ ೫) ಭುವನೋಪಜೀವಿ ಎಂದು ೫ ಭಾಗಗಳಾಗಿ ವಿಂಗಡಿಸಿ ಕವಿಯು ಎಂತಹ ಶಿಕ್ಷಣವನ್ನು ಹೊಂದಬೇಕೆಂಬುದನ್ನು ಹೇಳಿರುವನು. ಕವಿಯಾಗಬೇಕೆನ್ನುವನು ಈ ಪ್ರಕರಣದಲ್ಲಿ ಹೇಳಿರುವುದಾದ

ನೂರು ವಿಷಯಗಳಲ್ಲಿಯೂ ಕ್ರಮವಾಗಿ ಶಿಕ್ಷಣವನ್ನು ಹೊಂದಲೇಬೇಕೆಂಬುದು ಕ್ಷೇಮೇಂದ್ರನ ಅಭಿಪ್ರಾಯ.

ಚಮತ್ಕಾರನಿರೂಪಣವು ೩ನೆಯ ಪ್ರಕರಣದಲ್ಲಿರುವುದು. ಚಮತ್ಕಾರವಿಚಾರವಾಗಿ ಕವಿಯು ಕೆಳಗಣ ಶ್ಲೋಕವನ್ನುದಾಹರಿಸಿರುವನು.

ರಕ್ತಸ್ತ್ವಂ ನವಪಲ್ಲವೈರಹಮಪಿ ಶ್ಲಾಘ್ಯೈಃ ಪ್ರಿಯಾಯಾಗುಣೈಃ
ತ್ವಾಮಾಯಾಂತಿಶಿಲೀಮುಖಾಃ ಸ್ಮರಧನುರ್ಮುಕ್ತಾಃ ಸಖೇಮಾಮಪಿ
ಕಾಂತಾಪಾದ ತಲಾಹತಿಸ್ತವಮುದೇತದ್ವನ್ಮಮಾ ಪ್ಯಾವಯೋಃ
ಸರ್ವಂತುಲ್ಯಮಶೋಕ ಕೇವಲಮಹಂ ............ಸಶೋಕಃಕೃತಃ ||

ಚಮತ್ಕಾರವು.—

೧) ಅವಿಚಾರ್ಯಮಾಣರಮಣೀಯತೆ
೨) ವಿಚಾರ್ಯಮಾಣರಮಣೀಯತೆ.
೩) ಸಮಸ್ತಸೂಕ್ತವ್ಯಾಪಿ.
೪) ಸೂಕ್ತೈಕದೇಶದೃಶ್ಯ
೫) ಶಬ್ದಗತ.
೬) ಅರ್ಥಗತ.
೭) ಶಬ್ದಾರ್ಥಗತ
೮) ಅಲಂಕಾರಗತ
೯) ರಸಗತ
೧೦) ಪ್ರಖ್ಯಾತವೃತ್ತಿಗತ

ಎಂದು ಹತ್ತು ವಿಧಗಳನ್ನು ಹೇಳಿ ತಾನು ಬರೆದಿರುವ ಶಶಿವಂಶಮಹಾಕಾವ್ಯ, ಪದ್ಯಕಾದಂಬರ್ಯಾದಿಗ್ರಂಥಂಗಳಿಂದ ಉದಾಹರಣೆಗಳನ್ನು ಆರಿಸಿಕೊಂಡಿರುವನು.

ನಾಲ್ಕನೆಯ ಪ್ರಕರಣದಲ್ಲಿ ಗುಣದೋಷದ ವಿಭಾಗವು ವರ್ಣಿತವಾಗಿದೆ. ಇದರಲ್ಲಿ ಅಪ್ರಯುಕ್ತ, ಅಪುಷ್ಟಾರ್ಥ-ಸಿದ್ಧಾರ್ಥಕಾದಿ ದೋಷ ಪ್ರಶಂಸೆಗಳಿರುವುವೇಹೊರ್ತು ಶ್ಲೇಷ, ಪ್ರಸಾದ, ಮಾಧುರ್ಯಾದಿಗುಣಪ್ರಶಂಸೆಗಳೊಂದೂ ಕಂಡುಬರುವುದಿಲ್ಲ. ಕಾವ್ಯದಲ್ಲಿ ಗುಣದೋಷಗಳು ಶಬ್ದಾರ್ಥರಸಗಳ ಕಾಲುಷ್ಯದಿಂದ ಹುಟ್ಟುವುವಾಗಿ ಕ್ಷೇಮೇಂದ್ರನ ಮತ. ಕಾವ್ಯಗಳು ಸಗುಣ, ನಿರ್ಗುಣ, ಸದೋಷ, ನಿರ್ದೋಷ, ಸಗುಣದೋಷಗಳೆಂದು ೫ ವಿಧಗಳು.

ಐದನೆಯ ಪ್ರಕರಣದಲ್ಲಿ ಕವಿಯಾದವನಿಗೆ ತರ್ಕ, ವ್ಯಾಕರಣ, ಭರತ, ಚಾಣಕ್ಯ, ವಾತ್ಸ್ಯಾಯನ, ಭಾರತ, ರಾಮಾಯಣ, ಮೋಕ್ಷೋಪಾಯಾತ್ಮಜ್ಞಾನ,

ಧಾತುವಾದ, ರತ್ನಪರೀಕ್ಷಾ, ವೈದ್ಯಕ, ಜ್ಯೋತಿಷ, ಧನುರ್ವೇದ, ಗಜತುರಗ, ಪುರುಷ ಲಕ್ಷಣ, ದ್ಯೂತ ಇಂದ್ರಜಾಲಾದಿ ಸಕಲ ವಿದ್ಯೆಗಳ ಪರಿಚಯವು ಇದ್ದೇತೀರಬೇಕೆಂಬುದು ಹೇಳಲ್ಪಟ್ಟಿದೆ. ಈ ವಿವಿಧ ವಿದ್ಯಾಪರಿಚಯಗಳಿಗೆ ಉದಾಹರಣೆಗಳು ಸಮರ್ಥಿಸಲ್ಪಟ್ಟಿವೆ.

ಕ್ಷೇಮೇಂದ್ರನು ಔಚಿತ್ಯವಿಚಾರಚರ್ಚಾ ಎಂಬಗ್ರಂಥದಲ್ಲಿ ಉದಾಹೃತರಾಗಿರುವ ಕವಿಗಳನ್ನಲ್ಲದೆ ಭಟ್ಟಶಿವಸ್ವಾಮಿ, ಭಟ್ಟವಾಚಸ್ಪತಿ, ದಾಮೋದರಗುಪ್ತ, ವಿದ್ಯಾನಂದ, ಭಟ್ಟಮುಕ್ತಿಕಲಶ, ಮುಕ್ತಾಕಣ, ಚಕ್ರಪಾಲ, ಆರ್ಯಭಟ್ಟ, ಇಂದ್ರಭಾನು ಈಕವಿಗಳ ಶ್ಲೋಕಗಳನ್ನು ಈ ಗ್ರಂಥದಲ್ಲಿ ಉದಾಹರಿಸಿಕೊಂಡಿರುವನು. ಇವರಲ್ಲ ಕೆಲವರ ಕಾಲವಿಮರ್ಶೆಯೂ ಗ್ರಂಥವಿಮರ್ಶೆಯೂ ಆವಶ್ಯಕವಾದುದಾಗಿರುವುದು.

ಮುಕ್ತಾಕಣನೂ ಚಕ್ರಪಾಲನೂ ಸೋದರರೆಂದು ಈ ಗ್ರಂಥದ ಎರಡನೆಯ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಇಂದ್ರಭಾನುವಿನದೆಂದು ಉದಾಹರಿಸಿಕೊಂಡಿರುವ "ಸ್ನಾತುಂವಾಂಛಸಿ......" ಎಂಬ ಶ್ಲೋಕವನ್ನು ರಿಸ್ಸು ಎಂಬವನದೆಂದು ಸುವೃತ್ತತಿಲಕದಲ್ಲಿ ಹೇಳಿರುವುದರಿಂದ ಇಂದ್ರಭಾನುವಿಗೆ ರಿಸ್ಸು ಎಂಬ ನಾಮಾಂತರವಿರಬಹುದೇ ಹೇಗೆಂಬದು ತಿಳಿಯದಾಗಿದೆ.

ಕ್ಷೇಮೇಂದ್ರನಿಗೆ ರಾಜಪುತ್ರಲಕ್ಷ್ಮಣಾದಿತ್ಯನಲ್ಲದೆ ಭಟ್ಟೋದಯಸಿಂಹನೊಬ್ಬನು ಶಿಷ್ಯನೆಂದೂ, ಭಟ್ಟೋದಯಸಿಂಹನು 'ಭಕ್ತಿಭವ' 'ಲಲಿತಾಭಿದಾನ' ಎಂಬ ಕಾವ್ಯಗಳನ್ನು ರಚಿಸಿರುವನೆಂದೂ ೫ನೆಯ ಪ್ರಕರಣದಲ್ಲ ಹೇಳಲ್ಪಟ್ಟಿದೆ.

ಭರ್ತೃಹರಿಯ ವೈರಾಗ್ಯಶತಕದಲ್ಲಿ ಕಾಲಮಹಿಮಾನುವರ್ಣನ ಭಾಗದಲ್ಲಿ ಕಂಡುಬರುವ ಈಶ್ಲೋಕವು ಚಂದ್ರಕನದೆಂದುದಾಹರಿಸಲ್ಪಟ್ಟಿವೆ.

> ಯತ್ರಾನೇಕಃ ಕ್ವಚಿದಪಿ ಗೃಹೇ ತತ್ರ ತಿಷ್ಠತ್ಯಥೈಕೋ
> ಯತ್ರಾಪ್ಯೇಕಸ್ತದನು ಬಹವಸ್ತತ್ರ ನೈಕೋಽಪಿ ಚಾಂತೇ
> ಇತ್ಥಂನೇಯೌ ರಜನಿದಿವಸೌ ದೋಲಯನ್ ದ್ವಾವಿವಾಕ್ಷೌ
> ಕಾಲಃಕಾಲ್ಯಾಸಹ ಬಹುಕುಲಃ ಕ್ರೀಡತಿಪ್ರಾಣಿಸಾರೈಃ ||

ಎಂದು ಹೇಳಿರುವುದನ್ನು ನೋಡಿದರೆ ಭರ್ತೃಹರಿಗೆ ಚಂದ್ರಕನೆಂಬ ಬೇರೆ ಹೆಸರು ಇದ್ದಿತೇ? ಹೇಗೆಂಬುದು ತಿಳಿಯದಾಗಿದೆ.

**ಚಾರುಚರ್ಯಾ:**—ಇದು ನೀತಿಪ್ರಧಾನಗ್ರಂಥ. ಉದಾಹರಣೆಗಳನ್ನು ರಾಮಾಯಣ ಭಾರತಾದಿ ಪ್ರಾಚೀನ ಗ್ರಂಥಗಳಿಂದ ಆರಿಸಿಕೊಂಡು ಹೇಳಿರುವನು. ಮಾದರಿಗಾಗಿ ಕೆಲವನ್ನು ಬರೆಯುವೆವು:—

ನಕುರ್ವೀತ ಕ್ರಿಯಾಂ ಕಾಂಚಿ ದನಭ್ಯರ್ಚ್ಯ ಮಹೇಶ್ವರಂ
ಈಶಾರ್ಚನರತಂ ಶ್ವೇತಂ ನಾಭೂನ್ನೇತುಂ ಕ್ಷಮೋ ಯಮಃ ॥

ಈಶ್ವರಾರ್ಚನವನ್ನು ಮಾಡದೆ ಯಾವ ಕೆಲಸವನ್ನೂ ಮಾಡಬಾರದು. ದೇವಾರಾಧನತತ್ಪರನಾಗಿರುವ ಶ್ವೇತನನ್ನು ಕರೆದುಕೊಂಡುಹೋಗಲು ಯಮನಿಗೂ ಸಾಧ್ಯವಾಗದೆ ಹೋದುದು.

ನಕುರ್ಯಾತ್ಪರದಾರೇಚ್ಛಾಂ ವಿಶ್ವಾಸಂ ಸ್ತ್ರೀಷುವರ್ಜಯೇತ್
ಹತೋ ದಶಾಸ್ಯಃ ಸೀತಾರ್ಥೇ ಹತಃ ಪತ್ನ್ಯಾ ವಿದೂರಥಃ

ಪರಸ್ತ್ರೀಯರನ್ನು ಆಶಿಸಬಾರದು. ಸ್ತ್ರೀಯರಲ್ಲಿ ವಿಶ್ವಾಸವನ್ನಿಡಬಾರದು. ಪರಸತಿಯನ್ನು ಆಶಿಸಿದ ರಾವಣನು ಸಂಹೃತನಾದನು. ವಿದೂರಥನಾದರೋ ಹೆಂಡತಿಯನ್ನು ನಂಬಿ ಅವಳ ಕೈಯಿಂದಲೇ ಹತನಾದನು.

ಈರ್ಷ್ಯಾಕಲಹಮೂಲಂ ಸ್ಯಾತ್ ಕ್ಷಮಾಮೂಲಂ ಹಿ ಸಂಪದಾಂ
ಈರ್ಷ್ಯಾದೋಷಾತ್ಪ್ರಾಪ ಮಹಾಪಾಪಂ ಜನಮೇಜಯಃ ॥

ಈರ್ಷ್ಯೆಯು (ಅಸಹನವು) ಕಲಹಮೂಲವು. ತಾಳ್ಮೆಯು ಸಂಪತ್ತುಗಳ ಮೂಲವು. ಈರ್ಷ್ಯಾದೋಷಕ್ಕೊಳಗಾದ ಜನಮೇಜಯನು ಬ್ರಾಹ್ಮಣ ವಧಪಾಪವನ್ನು ಹೊಂದಬೇಕಾದುದು.

ವೇಶ್ಯಾವಚಸಿ ವಿಶ್ವಾಸೀ ನಭವೇನ್ಮೋಹಕೈತವೇ
ಋಷ್ಯಶೃಂಗೋಽಪಿ ನಿಸ್ಸಂಗಃ ಸ್ವಸಂಗೀ ವೇಶ್ಯಯಾ ಕೃತಃ ॥

ಯಾವಾಗಲೂ ಮೋಸಯುಕ್ತವಾದ ವೇಶ್ಯೆಯರ ಮಾತಿನಲ್ಲಿ ವಿಶ್ವಾಸವನ್ನಿಡಕೂಡದು. ನಿಸ್ಸಂಗಾತ್ಮಕನಾದ ಋಷ್ಯಶೃಂಗನು ತಾನು ಎಂತಹವನಾದರೂ ವೇಶ್ಯೆಯಿಂದ ಸಂಸಾರಪಾಶಕ್ಕೊಳಗಾದನು.

---

## ಬಿಲ್ಹಣ.

ಕಾಶ್ಮೀರದೇಶದಲ್ಲಿ ಪ್ರವರಪುರವೆಂಬ ನಗರವಿರುವುದು. ಅದಕ್ಕೆ ಮೂರು ಕ್ರೋಶದೂರದಲ್ಲಿರುವ 'ಜಯವನ' ಎಂಬುದಕ್ಕೆ ಸಮೀಪದಲ್ಲಿ ಖೋನಮುಖವೆಂಬ ಗ್ರಾಮವಿರುವುದು. ಅಲ್ಲಿ ಗೋಪಾದಿತ್ಯಮಹೀಪಾಲನಿಂದ ಮಧ್ಯದೇಶದಿಂದ ಕರೆಯಿಸಿ ಸ್ಥಾಪಿಸಲ್ಪಟ್ಟ ಕೌಶಿಕಗೋತ್ರದ ಬ್ರಹ್ಮನಿಷ್ಠಾಗರಿಷ್ಠರಾದ ಬ್ರಾಹ್ಮಣೋತ್ತಮರು ಇರುವರು. ಅವರಲ್ಲಿ ವೇದವೇದಾಂಗವೇತ್ತನಾದ **ಮುಕ್ತಿಕಲಶ**ನೆಂಬವನಿಗೆ ರಾಜಕಲಶನೆಂಬ ಮಗನಾದನು. ಇವನಿಗೆ ಮಹಾಭಾಷ್ಯವ್ಯಾಖ್ಯಾತೃವಾದ ಜ್ಯೇಷ್ಠಕಲಶನೆಂಬ ಮಗನು ಹುಟ್ಟಿದನು. ಇವನ ಹೆಂಡತಿ ನಾಗಾದೇವಿ. ಇವರಲ್ಲಿ

ಇಷ್ಟರಾಮ, ಬಿಲ್ಹಣ, ಆನಂದನೆಂಬ ಮೂರುಜನ ಮಕ್ಕಳು. ಇವರಲ್ಲಿ ಪ್ರಕೃತ ವಿಷಯೈಕನು ಬಿಲ್ಹಣ.

ಮುಕ್ತಿಕಲಶ
I
ರಾಜಕಲಶ
I
ಜ್ಯೇಷ್ಠಕಲಶ + ನಾಗಾದೇವಿ

೧ ಇಷ್ಟರಾಮ ೨ ಬಿಲ್ಹಣ ೩ ಆನಂದ

ಇವನು ಚಿಕ್ಕತನದಲ್ಲಿ ಸಂಸ್ಕೃತಭಾಷಾಪಾರಂಗತನಾಗಿ ದೇಶಪರ್ಯಟನಾಸಕ್ತನಾಗಿ ಕಾಶ್ಮೀರವನ್ನುಬಿಟ್ಟು ಮಧುರೆ, ಬೃಂದಾವನ, ಕಾನ್ಯಕುಬ್ಜ, ಕಾಶಿ, ಪ್ರಯಾಗ ಅಯೋಧ್ಯಾ, ದಾಹಲ, ಗೂರ್ಜರ, ಸೋಮನಾಥ ಮೊದಲಾದ ದೇಶಗಳಲ್ಲಿ ಸಂಚರಿಸಿ ಆಯಾ ದೇಶದ ರಾಜರಿಂದ ಮಾನಿಸಲ್ಪಟ್ಟವನಾಗಿ ಕೊನೆಗೆ ದಕ್ಷಿಣದೇಶದಲ್ಲಿ ಚಾಳುಕ್ಯರಾಜರ ರಾಜಧಾನಿಯಾದ ಕಲ್ಯಾಣಪುರಕ್ಕೆ ಬಂದು ಚಾಳುಕ್ಯಯಶೋಭೂಷಣನೂ ತ್ರಿಭುವನಮಲ್ಲಾಪರನಾಮಧೇಯನೂ ಕರ್ಣಾಟದೇಶಾಧೀಶ್ವರನೂ ಆದ ಆಹವಮಲ್ಲನಿಂದ ಸತ್ಕೃತನಾಗಿ ಆತನಿಂದ ವಿದ್ಯಾಪತಿ † ಎಂಬ ಬಿರುದನ್ನು ಸಂಪಾದಿಸಿ ಆತನ ಕುಮಾರನಾದ ವಿಕ್ರಮಾಂಕದೇವನ ಕಾಲದಲ್ಲಿ ಅಲ್ಲಿಯೇ ಇದ್ದು ವಿಕ್ರಮಾಂಕದೇವಚರಿತವೆಂಬ ಕಾವ್ಯವನ್ನು ಬರೆದು ತನ್ನ ಶೇಷಾಯುಷ್ಯವನ್ನು ಕಲ್ಯಾಣದಲ್ಲಿ ಕಳೆದುದಾಗಿ ತೋರುತ್ತದೆ.

**ಕಾಲ:** ೧. ಬಿಲ್ಹಣನು ಕಾಶ್ಮೀರದ ರಾಜರವಿಚಾರವಾಗಿ ಹೇಳಿರುವುದನ್ನೂ ಕ್ರಿ. ಶ. ೧೦೭೬ ೧೧೨೭ರ ವರೆಗೆ ಕಲ್ಯಾಣದಲ್ಲಿ ಆಳಿದ ತ್ರಿಭುವನಮಲ್ಲವಿಕ್ರಮಾದಿತ್ಯನವಿಚಾರವಾಗಿ ಕೊಂಡಾಡಿರುವುದನ್ನೂ ನೋಡಿದರೆ ಬಿಲ್ಹಣನ ದೇಶಪರ್ಯಟನ, ವಿದ್ಯಾವೈದುಷ್ಯವೇ ಮೊದಲಾದವು ಕ್ರಿ. ಶ. ಹನ್ನೊಂದನೆಯ ಶತಮಾನದ ಉತ್ತರಾರ್ಧದಲ್ಲಿ ನಡೆದಿರಬೇಕಾಗಿ ತೋರುತ್ತದೆ.

(೨) ಕಾಶ್ಮೀರರಾಜರಾದ ಅನಂತ ಮತ್ತು ಕಲಶರಾಜರವಿಚಾರವಾಗಿ ಹೇಳುವಾಗ 'ಆಸೀತ್' ಎಂಬ ಭೂತಕಾಲಪ್ರಯೋಗದಿಂದ ಬಿಲ್ಹಣನು ವಿಕ್ರಮಾಂಕಚರಿತವನ್ನು ಬರೆಯುವವೇಳೆಗೆ ಅನಂತರಾಜನು ಮೃತಪಟ್ಟಿರಬೇಕಾಗಿ ಬೋಧೆಯಾಗುತ್ತದೆ.

---

ವಿಕ್ರಮಾಂಕದೇವಚರಿತ ಸರ್ಗ ೧೮.

† ನೀಲಛತ್ರೋನ್ನದಗಜಘಟಾಪಾತ್ರಮುತ್ರಸ್ತಚೋಲಾ
ಚ್ಚಾಲುಕ್ಯೇಂದ್ರಾದಲಭತಕೃತೀಯೋತ್ರವಿದ್ಯಾಪತಿತ್ವಂ ||
ವಿಕ್ರಮಾಂಕದೇವಚರಿತ ೧೮-೧೮೧

(೩) ಅನಂತರಾಜನು ೫೩ ವರ್ಷಗಳು ರಾಜ್ಯವನ್ನಾಳಿ ಮಗನಾದ ಕಲಶನಿಗೆ ನೆಪಮಾತ್ರಕ್ಕೆ ರಾಜ್ಯಪದವಿಯನ್ನು ಕೊಟ್ಟನಾದರೂ ಸುಮಾರು ೧೫ ವರ್ಷಗಳ ವರೆಗೆ ರಾಜ್ಯಸ್ವಾಧೀನವನ್ನು ಮಾಡದೆ ಕೊನೆಗೆ ತನ್ನ ಮಗನದುಷ್ಕೃತನಕ್ಕೆ ಬೇಸರ ಗೊಂಡು ರಾಜ್ಯಭಾರಪರಾಜ್ಮುಖನಾಗಿ 'ವಿಜಯ' ಎಂಬಕ್ಷೇತ್ರಕ್ಕೆ ಹೋದನಾದರೂ ಮಗನಹಿಂಸೆಯನ್ನು ತಾಳಲಾರದೆ ಎರಡೂವರೆ ವರ್ಷಗಳ ಅನಂತರ ಆತ್ಮಹತ್ಯ ವನ್ನು ಮಾಡಿಕೊಂಡುದಾಗಿಯೂ ಇವನ ಹೆಂಡತಿಯಾದ ಸುಭಟಾ ಅಥವಾ ಸೂರ್ಯ ಮತಿಯು ಸತಿಯನ್ನು ಆಚರಿಸಿದುದಾಗಿಯೂ ರಾಜತರಂಗಿಣಿಯು ಸಾರುತ್ತದೆ.

(೪) ಜನರಲ್ ಕನ್ನಿಂಗ್‌ಹ್ಯಾಂರವರು ಅನಂತರಾಜನ ರಾಜ್ಯಭಾರಕಾಲವು ಕ್ರಿ. ಶ. ೧೦೨೮-೧೦೮೦ರವರೆಗೆಂದೂ, ಕಲಶನ ಸಂಪೂರ್ಣ ರಾಜ್ಯಾಧಿಕಾರವು ಕ್ರಿ. ಶ. ೧೦೮೦ ೧೦೮೮ರವರೆಗೆಂದೂ, ನೆಪಮಾತ್ರಕ್ಕೆ ಕೊಟ್ಟ ರಾಜ್ಯಾಧಿಕಾರಕಾಲವು ಕ್ರಿ. ಶ. ೧೦೬೨ ಎಂದೂ ಹೇಳುವರು.†

(೫) ವಿಕ್ರಮಾಂಕ ದೇವಚರಿತವು ಚೋಳರ ಕದನದೊಡನೆ ಮುಕ್ತಾಯ ವಾಗಿರುವುದು.‡

(೬) ಕಲಶನ ಮಗ ಹರ್ಷನು ರಾಜ್ಯಭಾರ ಮಾಡುತ್ತಿದ್ದುದನ್ನು ಬಿಲ್ಹ ಣನು ನೋಡಿದುದಾಗಿಯೂ ಹರ್ಷನು ಕವಿಬಾಂಧವನೆಂದು ಕೀರ್ತಿ ಪಡೆದುದನ್ನು ಬಿಲ್ಹಣನು ಕೇಳಿದಂತೆಯೂ,

> ತ್ಯಾಗಿನಂಹರ್ಷದೇವಂಸ ಪ್ರುತ್ವಾ ಸುಕವಿಬಾಂಧವಂ
> ಬಿಲ್ಹಣೋವಂಚನಾಂಸ್ಯೇನ ವಿಮೋತಿಂತ ಮತಿಂಮುಸಿ§

ಎಂಬ ಶ್ಲೋಕದಿಂದ ಸ್ಪಷ್ಟವಡುತ್ತದೆ. ಈ ಮೇಲ್ಕಂಡ ವಿಚಾರಗಳೆಲ್ಲದರ ಸಮ್ಯಕ್ಪರಿಶೀಲನದಿಂದ ಬಿಲ್ಹಣನು ಸುಮಾರು ಕ್ರಿ. ಶ. ೧೦೩೦ ರಲ್ಲಿ ಜನ್ಮಿಸಿ ಅನಂತರಾಜನು ಕಾಶ್ಮೀರವನ್ನಾಳುತ್ತಿದ್ದ ಕಾಲದಲ್ಲಿಯೇ ಪೂರ್ಣಪಾಂಡಿತ್ಯವನ್ನು ಸಂಪಾದಿಸಿ ಮಹಾಕವಿಗಳಾದ ಸೋಮಭಟ್ಟ, ಕ್ಷೇಮೇಂದ್ರನೇ ಮೊದಲಾದ ಕವಿಗಳ ಸಮಕಾಲೀನನಾಗಿದ್ದು ಕ್ರಿ. ಶ. ೧೦೬೨ರಲ್ಲಿ ಆಳಿದ ಕಲಶರಾಜನ ಕಾಲದಲ್ಲಿ ಅವನ ಆಸ್ಥಾನದಲ್ಲಿರಲೊಪ್ಪದೆ ರಾಜಾನ್ಯತ್ರದರ್ಶನೋತ್ಸುಕನಾಗಿ ಹೊರಟು ಸಂಚರಿಸು ತ್ತಾ ಸುಮಾರು ಕ್ರಿ. ಶ. ೧೦೫೫ ರಲ್ಲಿ ಧಾರಾನಗರಾಧಿನಾಥನಾದ ಭೋಜರಾಜನು ಮೃತನಾದುದನ್ನು ಕೇಳಿ ಆತನ ದರ್ಶನಲಾಭವು ದೊರೆಯದುದಕ್ಕಾಗಿ ಚಿಂತಿಸಿ,

---

ರಾಜತರಂಗಿಣೀ VII ೧೩೫-೪೫೬.

† ವಿಕ್ರಮಾಂಕ ದೇವಚರಿತ ಮುನ್ನುಡಿ ಪುಟ ೨೦.

‡ J. R. A. S. Vol 4 P 15

§ ರಾಜತರಂಗಿಣೀ ೭ನೆಯ ತರಂಗ, ಬಿಲ್ಹಣನವರ್ಣನ

ಭೋಜಃಕ್ಷ್ಮಾಭೃತ್ಸ ಖಲುನ ಖಲೈಸ್ತಸ್ಯ ಸಾಮ್ಯಂ ನರೇಂದ್ರೈ
ಸ್ತತ್ಪ್ರತ್ಯಕ್ಷಂ ಕಿಮಿತಿಭವತಾ ನಾಗತಂ ಹಾ ಹತಾಸ್ಮಿ
ಯಸ್ಯ ದ್ವಾರೋ ಡ್ಡಮರಶಿಖರಕ್ರೋಡಪಾರಾವತಾನಾಂ
ನಾದವ್ಯಾಜಾದಿತಿಸಕರುಣಾ ವ್ಯಾಜಹಾರೇವಧಾರಾ ||*

ಎಂದು ಭೋಜಪ್ರಶಂಸಾಪರವಿಯೋಗವಮಂ ವರ್ಣಿಸಿ ಆತನ ಸಮಕಾಲೀನನೂ ದಾಹಲದೇಶಾಧೀಶ್ವರನೂ ಆದ ಭೀಮದೇವನ ಮಗ ಕರ್ಣರಾಜ § ನಿಂದ ಗೌರವಿಸಲ್ಪಟ್ಟು ಆ ಕರ್ಣರಾಜನನ್ನೇ ಕಥಾನಾಯಕನನ್ನಾಗಿ ಮಾಡಿಕೊಂಡು **ಕರ್ಣಸುಂದರೀ** ಎಂಬ ನಾಟಿಕೆಯನ್ನು ಬರೆದು ಅನಂತರ ಕಲ್ಯಾಣದ ತ್ರಿಭುವನ ಮಲ್ಲವಿಕ್ರಮಾಂಕನ ಆದರಕ್ಕೆ ಪಾತ್ರನಾಗಿ ಕ್ರಿ. ಶ. ೧೦೬೦ರಲ್ಲಿ ವಿಜಯಕ್ಷೇತ್ರದಲ್ಲಿ ಆಳಿದ ಅನಂತರಾಜನ ಮರಣವಾರ್ತೆಯನ್ನು ಕೇಳಿ ಕ್ರಿ. ಶ. ೧೦೮೮ರಲ್ಲಿ ಕಲಶನ ಮಗ ಹರ್ಷನು ರಾಜ್ಯವಾಳಿದುದನ್ನು ನೋಡಿ ಬಹುಕಾಲ ಬದುಕಿದ್ದು ಸುಮಾರು ಕ್ರಿ ಶ. ೧೧೦೦ರಲ್ಲಿ ಕಾಲಧರ್ಮವನ್ನು ಹೊಂದಿದುದಾಗಿ ಸ್ಪಷ್ಟಪಡುತ್ತದೆ. ಆದುದರಿಂದ ಇವನು ಕ್ರಿ. ಶ. ೧೧ನೆಯ ಶತಮಾನದವನೆಂದು ಹೇಳಬೇಕಾಗುತ್ತದೆ.

**ಗ್ರಂಥಗಳು** :—೧) ಕರ್ಣಸುಂದರೀನಾಟಿಕಾ.
೨) ವಿಕ್ರಮಾಂಕದೇವ ಚರಿತ.

**ಕರ್ಣಸುಂದರೀ** :—ಇದೊಂದು ನಾಟಿಕಾ. ನಾಲ್ಕು ಅಂಕಗಳಿರುವುವು. ಇದರಲ್ಲಿ ಚಾಳುಕ್ಯರಾಜನಾದ ಕರ್ಣಭೂಪಾಲನು ವಿದ್ಯಾಧರಕನ್ಯೆಯಾದ ಕರ್ಣಸುಂದರಿಯನ್ನು ವರಿಸಿದ ಕಥೆ ಕಲ್ಪಿಸಿ ಹೇಳಲ್ಪಟ್ಟಿದೆ.

**ವಿಕ್ರಮಾಂಕದೇವಚರಿತ** :—ಇದು ೧೮ ಸರ್ಗಗಳುಳ್ಳ ಕಾವ್ಯ. ಮೊದಲಣ ೧೭ ಸರ್ಗಗಳಲ್ಲಿ ಚಾಳುಕ್ಯಚರಿತ ಮೊದಲು ವಿಕ್ರಮಾಂಕನ ರಾಜ್ಯಭಾರ, ಪರಾಕ್ರಮಾತಿಶಯ ವರ್ಣನೆಗಳು ಹೇಳಲ್ಪಟ್ಟು ಚೋಳರಾಜನೊಡನೆ ನಡೆದ ಕದನದೊಡನೆ ಮುಕ್ತಾಯಮಾಡಲ್ಪಟ್ಟಿದೆ. ಹದಿನೆಂಟನೆಯ ಸರ್ಗದಲ್ಲಿ ಕವಿಯ ಜೀವನಚರಿತವಿರುವುದು. ಅಲ್ಲದೆ ಕವಿಯು ಜನ್ಮವೆತ್ತಿದ ದೇಶ, ಅದನ್ನು ಆಳಿದ ರಾಜರ ವರ್ಣನೆಗಳು, ವಿತಸ್ತಾ (ಜೀಲಂ) ಮತ್ತು ಸಿಂಧೂನದಿಗಳ ಸಂಗಮಸ್ಥಳದಲ್ಲಿದ್ದುದಾಗಿ ಕಾಶ್ಮೀರದ ಪ್ರಾಚೀನ ರಾಜಧಾನಿಯಾಗಿದ್ದ 'ಪ್ರವರಪುರ' ವರ್ಣನವಿರುವುದು. ಈಗಣಕಾಶ್ಮೀರದ ರಾಜಧಾನಿಯು ಶ್ರೀನಗರ. ಇದು ಜೀಲಂ ನದಿಯು ದಡದಲ್ಲಿ

* ವಿಕ್ರಮಾಂಕ ದೇವಚರಿತ ೧೮—೯೬.

§ ಕರ್ಣರಾಜನು ಕ್ರಿ. ಶ. ೧೦೭೨-೧೦೯೪ರ ವರೆಗೆ ಆಳಿದುದಾಗಿ ಕರ್ಣಸುಂದರೀನಾಟಿಕೆಯಿಂದ ತಿಳಿಯಬರುತ್ತದೆ. ಪು. ೨.

ಇದೆ. ಪ್ರವರಪುರನಾಮಾಂತರವೇ ಶ್ರೀನಗರವೆಂದಾಗಿರಬಹುದೇ ? ಹೇಗೆಂಬುದು ತಿಳಿಯದಾಗಿದೆ. ವಿಕ್ರಮಾಂಕಚರಿತವು ಯಾವುದಾದರೊಂದು ಕ್ರಮವನ್ನು ಅನುಸರಿಸಿ ಬರೆಯಲ್ಪಟ್ಟಿರುವುದಿಲ್ಲ. ಮೊದಲು ಚಾಳುಕ್ಯವಂಶೋತ್ಪತ್ತಿ, ಚಾಳುಕ್ಯ ವಂಶದ ಪ್ರಾಚೀನರಾಜರ ವಿಚಾರವಾಗಿ ಅಲ್ಲಲ್ಲಿ ಕೊಂಚ ಹೇಳಿ ಅನಂತರ ತೈಲಪ ನಿಂದ ಪ್ರಾರಂಭವಾಗುತ್ತದೆ. ಅನಂತರ ಆಹವಮಲ್ಲನ ಪ್ರತಾಪಾದಿವರ್ಣನಗಳು ಹೇಳಲ್ಪಟ್ಟಿರುವುದು ಹೊರ್ತು ರಾಜ್ಯಭಾರವನ್ನುಮಾಡಿದ ಎಲ್ಲಾರಾಜರನ್ನು ಕ್ರಮ ವರಿತು ಹೇಳಿರುವುದಿಲ್ಲ. ತೈಲಪನ ಹಿಂದೆ ಆಗಿಹೋದವರಲ್ಲಿ ಹಾರೀತ ಮತ್ತು ಮಾಣವ್ಯನೆಂಬವರು ಮುಖ್ಯರು. ಬಿಲ್ಹಣನು ಚಾಳುಕ್ಯವಂಶಾವಳಿಯನ್ನು ಹೀಗೆ ಹೇಳಿರುವನು:—




ವಿಕ್ರಮಾಂಕಚರಿತದ ಕಥಾಭಾಗವು ಹೀಗಿರುವುದು.

ಕರ್ಣಾಟಕಚಕ್ರೇಶ್ವರನಾದ ಆಹವಮಲ್ಲನು ಬಹುಕಾಲದಮೇಲೆ ಮೂರು ಮಕ್ಕಳನ್ನು ಪಡೆದು ಸೋಮೇಶ್ವರ, ವಿಕ್ರಮ, ಮತ್ತು ಜಯಸಿಂಹನೆಂದು ಹೆಸ ರಿಟ್ಟು ಸೋಮೇಶ್ವರನನ್ನು ಯುವರಾಜನನ್ನಾಗಿಮಾಡಿ, ಮಹಾಪರಾಕ್ರಮಿಯಾದ ವಿಕ್ರಮನನ್ನು ಶತ್ರುಗಳಾದ ಚೋಳರಾಜರಮೇಲೆ ದಂಡೆತ್ತಿಹೋಗಲು ಕಳುಹಿ

ಸಿದ ಕೊಂಚಕಾಲದಲ್ಲಿ ತಂದೆಯಾದ ಆಹವಮಲ್ಲನು ನಿಧನನಾಗಲು ವಿಕ್ರಮನು ಇದನ್ನು ಕೇಳಿ ಕಡುದುಃಖದಿಂದ ಹಿಂತಿರುಗಿ ಅಣ್ಣತಮ್ಮಂದಿರಿಬ್ಬರನ್ನೂ ಸಮಾಧಾನಗೊಳಿಸಿ ಕೆಲವುಕಾಲವಿದ್ದು, ಕೊನೆಗೆ ಈರ್ಷ್ಯಾಪರರಾಗಿ ತನ್ನಮೇಲೆ ದಾಳಿಯೆತ್ತಿ ಬಂದ ಅಣ್ಣತಮ್ಮಂದಿರಿರ್ವರನ್ನೂ ನಿಗ್ರಹಿಸಿ ಕೆಲವುಕಾಲ ಬನವಾಸೆ*ಯಲ್ಲಿದ್ದು ಅನಂತರ ಚೋಳರಾಜ$ನ ಮಗಳನ್ನು§ ಮದುವೆಯಾಗಿ ಕಾಂಚಿಯ ದಾನ್ನದ್ರೋಹಿಗಳನ್ನಡಗಿಸಿ ತನ್ನಹೆಂಡತಿಯ ತಮ್ಮsನನ್ನು ಸಿಂಹಾಸನದಮೇಲೆ ಕುಳ್ಳಿರಿಸಿ ಹಿಂತಿರುಗಿದ ಕೊಂಚದಿನಕ್ಕೆ ವೆಂಗಿಯ ಅರಸನಾದ ರಾಜಿಗನು † ಇವನನ್ನು ಕೊಂದು ಕಂಚಿಯ ಸಿಂಹಾಸನವೇರಿದುದನ್ನು ತಿಳಿದು ದಂಡೆತ್ತಿಹೋಗಿ ಅವನನ್ನು ನಿಗ್ರಹಿಸಿ ಕರಹಾಟದ ರಾಜ್ಯವನಾಳುತ್ತಿದ್ದ ಶಿಲಾಹಾರರಾಜನ ಮಗಳಾದ ಚಂದ್ರಲೇಖೆ¦ ಯನ್ನು ಮದುವೆಯಾಗಿ (ಇವಳ ಹೆಸರು ಚಾಂದಲದೇವಿಯೆಂದು ಹೇಳಲ್ಪಟ್ಟಿದೆ) § ಶತ್ರುದಮನವಂ ಮಾಡಿ ಕಪ್ಪಕಾಣಿಕೆಗಳನ್ನು ಕೊಂಡು ತನ್ನಾಳ್ವಿಕೆಯ ಜ್ಞಾಪಕಾರ್ಥವಾಗಿ ಕೋಟೆಕೊತ್ತಲಗಳನ್ನೂ, ಭವ್ಯವಾದ ಅರಮನೆ, ದೇವಾಲಯ, ಕಾಸಾರಗಳನ್ನು ಕಟ್ಟಿಸಿ ಯಶಸ್ವಿಯಾದನು. ಈ ವಿಕ್ರಮನಿಗೆ ವಿಕ್ರಮಾಂಕ, ವಿಕ್ರಮಾಂಕದೇವ, ವಿಕ್ರಮಲಾಂಛನ, ವಿಕ್ರಮಾದಿತ್ಯದೇವ, ವಿಕ್ರಮಾರ್ಕನೆಂಬ ನಾಮಾಂತರಗಳಿದ್ದುವಲ್ಲದೆ, ತ್ರಿಭುವನಮಲ್ಲ$ ಪೆರ್ಮಾಡಿ¶ ಕಾಲವಿಕ್ರಮx ನೆಂಬ ಬಿರುದುಗಳಿದ್ದುವು. ವಿಕ್ರಮನ ಸಾಮಂತರಾಜರಲ್ಲಿ ಕದಂಬಕುಲತಿಲಕನಾದ ಜಯಕೇಶಿಯು ಮುಖ್ಯನು. ವಿಕ್ರಮಾಂಕನು ಇವನ ಪರಾಕ್ರಮಾತಿಶಯಗಳಿಗೆ ಮೆಚ್ಚಿ ತನ್ನ ಮಗಳಾದ ಮೈಳಲದೇವಿಯನ್ನು ಇವನಿಗೆ ಕೊಟ್ಟನಾಗಿ.—

ನುತಾಂಚಾಲುಕ್ಯಮಾಣಿಕ್ಯ ವಿಕ್ರಮಾರ್ಕಮಹೀಪತೇಃ
ಶ್ರೀಮೈಳಲ ಮಹಾದೇವೀ ಮುಮಾಹಸ್ಸಪತಿಃಸ್ಮತಾಂ I

* ವನವಾಸೆ (ಬನವಾಸೆ) ಇದು ತುಂಗಭದ್ರಾ ಮತ್ತು ವರದಾ ನದಿಗಳ ಮಧ್ಯಪ್ರದೇಶದಲ್ಲಿ ಚಾಲುಕ್ಯರಾಜ್ಯದ ಒಂದು ಭಾಗವಾಗಿದ್ದಿತು.

$ ವೀರರಾಜೇಂದ್ರಚೋಳ.

§ ಹೆಸರು ತಿಳಿಯದು.

s ಪರಕೇಸರಿವರ್ಮ ಇವನು ವೀರರಾಜೇಂದ್ರಚೋಳನ ಹಿರಿಯಮಗನು. ಇವನಿಗೆ ಅಧಿರಾಜೇಂದ್ರನೆಂಬ ನಾಮಾಂತರವೂ ಇದ್ದಿತು.

† ಇವನಿಗೆ ರಾಜೇಂದ್ರಚೋಳನೆಂದೂ ಹೆಸರು.

§ J. R. A. S. Vol. IV P. 13.

$ Bilbana Inscription.

¶ Kalhana's Inscription.

x ವಿಕ್ರಮಾಂಕಚರಿತ ಮುನ್ನುಡಿ ಪುಟ ೩೦.

I J. R. A. S. B. B. Vol. IV P. 279.

ಯಾಪಾರಿಜಾತ ದ್ರುಮಪಲ್ಲವಾಭಾಂ ಕಾಂತಿಂ ನಿತಾಂತಂ ಕರಪಲ್ಲವೇನ
ಪುಷ್ಣಾತಿಪುಷ್ಣಾತಿ ಸದರ್ಥಿಸಾರ್ಥಂ ತೇನೈವದಾನಾಂಬುಸುಧಾನ್ವಿತೇವ|| ೦

ಎಂಬ ಶ್ಲೋಕದಿಂದ ಗೊತ್ತಾಗುತ್ತದೆ. ತ್ರಿಭುವನಮಲ್ಲ ವಿಕ್ರಮಾದಿತ್ಯನು ತನ್ನ ಹೆಸರಿನ ಶಕವನ್ನು ಸ್ಥಾಪಿಸಿ ಅದನ್ನು ಚಾಲುಕ್ಯವಿಕ್ರಮವರ್ಷವೆಂದು ಕರೆದಿರುವನು. ಈ ವಿಚಾರವಾಗಿ ಹೇಳಲ್ಪಟ್ಟಿರುವ ಶಿಲಾಲೇಖನಗಳು ದೊರೆಯುವುವು. ಅವುಗಳ ಒಂದರಲ್ಲಿ.—

"ಆಹವದೇವನಮಗಂಸೋಮೇಶ್ವರೋರ್ವೀಶ್ವರಂಗನುಜಂವಿಕ್ರಮಚಕ್ರಿಚಕ್ರಧರರೂಪಂ ವಿಕ್ರಮಾದಿತ್ಯಂ ನಂದನರೇಂದ್ರರ್ಕಳತೇಜಂ ಅಡ್ಡಿಹುದು ಯಿನ್ಯಾಕೆಂದ ತನ್ನ ಆಣೆಗೋಸಗೆಯಾಗಲ್ ಶಕನಾಮಂತಳೆದು ಚಾಲುಕ್ಯಾಂಕಮಂ ಮಾಡಿದಂ"§ ಎಂದೂ, ಮತ್ತೊಂದರಲ್ಲಿ:—

"ಬಲ್ಲಾಳ್ತನದಿಂ ರಿಪುನೃಪರೆಲ್ಲರಂ ಏಕಾಂಗದಿಂ ಒರಗಿಸಿ ಧರಣೀವಲ್ಲಭಮಾದಂ ತ್ರಿಭುವನಮಲ್ಲಂ ಚಾಲುಕ್ಯವಿಕ್ರಮಾದಿತ್ಯನೃಪಂ ಎಸೆವ ಶಕವರುಷಮಂ ಮಾಣಿಸಿ ವಿಕ್ರಮ ವರುಷಮೆಂದು ತನ್ನಯಪೆಸರಂ ವಸುಮತಿಗೆನೆಗಳ್ಚಿದಂ ಸಾಹಸಿಕಂ ಜಗದೇಕದಾನಿ ಧರ್ಮಾಪಿನೋದಂ" ಎಂದಿರುವುದು.s

ವಿಕ್ರಮನ ಮಗನಾದ ಮೂರನೆಯ ಸೋಮೇಶ್ವರನು ತನ್ನ ತಂದೆಯಂತೆ ಮಹಾ ಪರಾಕ್ರಮಶಾಲಿಯಾಗಿ ಭೂಲೋಕಮಲ್ಲನೆಂದು ಖ್ಯಾತಿಗೊಂಡುದಲ್ಲದೆ ವಿದ್ಯಾವಿನೋದಿಯಾಗಿ 'ಮಾನಸೋಲ್ಲಾಸ' ಅಥವಾ 'ಅಭಿಲಷಿತಚಿಂತಾಮಣಿ' ಎಂಬ ಗ್ರಂಥವನ್ನು ಬರೆದಿರುವನು.'

ಯಾಜ್ಞವಲ್ಕ್ಯಸ್ಮೃತಿಗೆ ಮಿತಾಕ್ಷರಟೀಕೆಯನ್ನು ಬರೆದು ಹೆಸರುಗೊಂಡ ವಿಜ್ಞಾನೇಶ್ವರನು ವಿಕ್ರಮಾಂಕನ ಆಸ್ಥಾನ ಪಂಡಿತನೂ ಬಿಲ್ಹಣನ ಗೆಳೆಯನೂ ಆಗಿದ್ದನು. ವಿಕ್ರಮಾಂಕಚರಿತದಲ್ಲಿ ಚಾಲುಕ್ಯವಂಶ ವಿಚಾರವೂ ಮತ್ತು ವಿಕ್ರಮನ ಶೌರ್ಯವರ್ಣನವೂ ಹೆಚ್ಚಾಗಿ ಹೇಳಲ್ಪಟ್ಟಿರುವುದಾದರೂ ಇತರ ರಸಪ್ರೋಷಣೆಯೂ ಅಲ್ಲಲ್ಲಿ ಮಾಡಲ್ಪಟ್ಟಿವೆ. ತನಗೆ ಆಶ್ರಯವನ್ನಿತ್ತ ರಾಜನ ಕುಲಚರಿತವನ್ನು ಕಾವ್ಯರೂಪದಲ್ಲಿ ಬರೆಯುವುದರಲ್ಲಿ ಇವನನ್ನು ಬಾಣನಿಗೆ ಎರಡನೆಯವನೆನ್ನಬಹುದು. ವಿಕ್ರಮಾಂಕಚರಿತದಲ್ಲಿ ಚೋಳಕುವರಿಯೊಡನೆ ನಡೆದ ವಿವಾಹ

---

೦ E. C. VII. Skrpr PP 98-9.
§ ಹೈದರಾಬಾದು ಸುರಪುರಜಿಲ್ಲೆಯೊಳಗೆ ಎದರಾವೆಹಳ್ಳಿಯಲ್ಲಿರುವ ಶಾಸನ
s Indian antiquary Vol· VIII P. 87.
' ವಿಕ್ರಮಾಂಕ ದೇವಚರಿತ ಮುನ್ನುಡಿ ಪುಟ ೪೧.

ಸಮಾರೋಹವೂ ೭, ೮, ೯ನೆಯ ಸರ್ಗಗಳಲ್ಲಿ ಹೇಳಲ್ಪಟ್ಟಿರುವ ಋತುವರ್ಣನಾದಿಗಳೂ ೯, ೧೦, ೧೧ರಲ್ಲಿ ವರ್ಣಿತರಾಗಿರುವ ರಾಜಕುವರರ ಆನಂದವಿಹರಣದ ಸೊಬಗೂ, ೧೨ರಲ್ಲಿ ರಾಜನನ್ನು ನೋಡಿ ಪ್ರಣಯಕಾತುರರಾದ ಸುಂದರಿಯರ ವರ್ಣನವೂ ಕಾವ್ಯಕ್ಕೆ ಕಳೆಯನ್ನು ಬೀರುವುದಾಗಿದೆ.

ವಿಕ್ರಮಾಂಕ ಚರಿತದಲ್ಲಿ ಕಂಡುಬರುವ. —

ಯಸ್ಯಾತೃಪ್ತಃ ಸ್ಫಟಿಕಗಿರಿಣಾ ತಂ ವಿನಿಕ್ಷಿಪ್ಯ ವಾಮೇ
ಪ್ರಾಲೇಯಾದ್ರೇಃ ಕ್ಷಣಮಭಿಮುಖೋ ದಕ್ಷಿಣಃ ಪಾಣಿರಾಸೀತ್
ತಂ ಪೌಲಸ್ತ್ಯಂ ವಿದಳಿತವತಃ ಸೂಕ್ತಿಭಿಃ ಸ್ಯಂದಶೀತಾಂ
ಸೀತಾಭರ್ತುರ್ವ್ಯರಚಯದಸೌ ರಾಜಧಾನೀಮಯೋಧ್ಯಾಂ ॥†

ಎಂಬ ಶ್ಲೋಕಮಾತ್ರದಿಂದ ಬಿಲ್ಹಣನು ರಾಮಚರಿತವೆಂಬ ಗ್ರಂಥವನ್ನು ಬರೆದಿರುವುದಾಗಿ ಊಹಿಸಲವಕಾಶವಿರುವುದಾಗಿ ಹೇಳುವರು. ಅಂತಹ ಊಹೆಗೆ ಮೇಲೆಹೇಳಿದ ಶ್ಲೋಕ ಒಂದರಿಂದಲೇ ಸಾಕಾಗದಾಗಿ ನಮಗೆ ತೋರುವುದು.

"ಚೋರಪಂಚಾಶಿಕಾ" ಎಂಬುದನ್ನು ಬಿಲ್ಹಣನು ಬರೆದುದಾಗಿ ಬಹುಜನ ಮತವಿರುವುದು. ಅದರ ಸಾಧನೆಗಾಗಿ ವಿಧವಿಧವಾದ ಕಲ್ಪನಾಕಥೆಗಳೂ ದೊರೆಯುವುವು.

(೧) ಗುರ್ಜರದೇಶದ ರಾಜ, ವೈರಿಸಿಂಹಭೂಪಾಲನ ಮಗಳಾದ 'ಶಶಿಲೇಖೆ'ಯನ್ನು ಇವನು ಮದುವೆಯಾದಂತೆ ಹೇಳುವುದಾದ ಬಿಲ್ಹಣಚರಿತ‡ವೆಂಬ ಖಂಡ ಕಾವ್ಯವು ಉತ್ತರದೇಶದಲ್ಲಿಯೂ

(೨) 'ಯಾಮಿನೀಪೂರ್ಣತಿಲಕಾ' ಎಂಬರಾಜಕನ್ಯೆಯು ಈತನನ್ನು ಮದುವೆಯಾದುದಾಗಿ ಹೇಳುವ ಬಿಲ್ಹಣವೆಂಬ, ಆಂಧ್ರಲೇಖಾತ್ಮಕ ಸಂಸ್ಕೃತಗ್ರಂಥವು ಆಂಧ್ರದೇಶದಲ್ಲಿಯೂ §

(೩) ಬರ್ದವಾನದ ವೀರಸಿಂಹನ ಪುತ್ರಿ ರೂಪಸೀ ಆದ 'ವಿದ್ಯಾ' ಎಂಬುವಳನ್ನು ಕಾಂಚೀನಗರದ ರಾಜನಾದ ಗುಣಸಿಂಧುವಿನ ಕುಮಾರ ಸುಂದರನೆಂಬವನು ವರಿಸಿದುದಾಗಿ ಹೇಳುವ ವಿದ್ಯಾಸುಂದರ ಕಥೆಯು ವಂಗದೇಶದಲ್ಲಿಯೂ $

† ವಿಕ್ರಮಾಂಕ ದೇವಚರಿತ ಸ. ೧೮—೯೪.

‡ Kavyamala Series Vol. XIII P 145—169.

§ Bilhana Published by V. Ramaswami Sastrulu & Sons 192, Esplanade Madras.

$ Bengali Language and Literature by Dinesh Cabendrasen P. 637-663.

(೪) 'ವಿದ್ಯಸುಂದರ' ಎಂಬ ಸಂಸ್ಕೃತಮೂಲ, ಹಿಂದೀಭಾಷಾಟೀಕಾತ್ಮಕವಾದ ಪುಟ್ಟಗ್ರಂಥವು ಮುಂಬಯಿ ಪ್ರಾಂತ್ಯದಲ್ಲಿಯೂ ¶

(೫) 'ಚೌರೀಸುರತ ಪಂಚಾಶಿಕಾ' ಅಥವಾ 'ಚೌರಪಂಚಾಶಿಕಾ' ಎಂಬ ೫೦ ಶ್ಲೋಕಪೂರ್ಣಾತ್ಮಕ ಗ್ರಂಥವು ಕಾಶ್ಮೀರದಲ್ಲಿಯೂ ‡ ದೊರೆಯುವುವು. ಈ ಪಂಚಾಶಿಕಾತ್ಮಕ ೫೦ ಶ್ಲೋಕಗಳು ಎಲ್ಲದರಲ್ಲಿಯೂ ಒಂದೇಯಾಗಿ ಹೇಳಲ್ಪಟ್ಟು ಇರುವುದನ್ನೂ ಇತ್ತೀಚಿನವರು ಮನೋರಂಜಕ ಕಥೆಗಳಿಗೆ ಅಣಿಮಾಡಿ ಜೋಡಿಸಿ ಹೇಳಿರುವುದಾಗಿ ತೋರುವುದರಿಂದಲೂ, ಉಳಿದ ಹಲವರು 'ಚೋರ'ಶಬ್ದ ಪ್ರಯೋಗವಿರುವುದರಿಂದ " ಯಸ್ಯಾಶ್ಚೋರಶ್ಚಿಕುರನಿಕರಃ ಕರ್ಣಪೂರೋಮಯೂರೋ " ಎಂಬ ಶ್ಲೋಕದಲ್ಲಿ ಕಂಡುಬರುವ ಚೋರಕವಿಯು ಸುರತಪಂಚಾಶಿಕಾಕಾರನಾಗಿರಬೇಕೆಂದೂ ಹೇಳುವರು.

ವಂಗಸಾಹಿತ್ಯ ಚರಿತಕಾರರಾದ ದಿನೇಶಚಂದ್ರಸೇನರು ವಿದ್ಯಾಸುಂದರನ ಕಥೆಯಲ್ಲಿ ಹೇಳಲ್ಪಟ್ಟಿರುವ ೫೦ ಶ್ಲೋಕಗಳು ಸಂಸ್ಕೃತದಲ್ಲಿ ಚೋರಪಂಚಾಶಿಕೆಯೆಂದು ಹೆಸರುಗೊಂಡಿರುವುದಾಗಿಯೂ ಅವು 'ವಿದ್ಯಾ' ಎಂಬವಳ ವಿಚಾರವಾಗಿ ಹೇಳಿದ ಪ್ರಣಯನಿವೇದಾತ್ಮಕ ವಿಷಯವೆಂದೂ ಅವುಗಳನ್ನು ಕಾಳಿಯ ಪರವಾಗಿ ಅರ್ಥ ಮಾಡಬಹುದಾಗಿಯೂ ಹೇಳುವರು । ಈ ವಿದ್ಯಾಸುಂದರ ಕಥೆಗನುಸಾರವಾಗಿ ಚೋರಪಂಚಾಶಿಕೆಯ ಮೊದಲನೆಯ ಶ್ಲೋಕದಲ್ಲಿ 'ವಿದ್ಯಾ' ಎಂಬವಳ ವಿಚಾರವನ್ನೇ ತೆಗೆದುಕೊಂಡು ಹೇಳಲ್ಪಟ್ಟಿದೆ. ಅದು ಹೀಗಿರುವುದು.

ಅದ್ಯಾಪಿತಾಂ ಕನಕಚಂಪಕ ದಾಮಗೌರೀಂ
ಫುಲ್ಲಾರವಿಂದನಯನಾಂತನು ರೋಮರಾಜಿಂ
ಸುಪ್ತೋತ್ಥಿತಾಂಮದನ ವಿಹ್ವಲಲಾಲಸಾಂಗೀಂ
**ವಿದ್ಯಾಂ** ಪ್ರಮಾದಗಳಿತಾಮಿವಚಿಂತಯಾಮಿ ||

ಈ ವಿದ್ಯಾಸುಂದರ ಕಥೆಯು ಭವಿಷ್ಯೋತ್ತರ ಪುರಾಣದ ಬ್ರಹ್ಮಖಂಡದಲ್ಲಿ ವರ್ಣಿತವಾಗಿದೆ.$

ಪ್ರಾಚ್ಯೋಜ್ಜಯಿನೀಪ್ರಾಂತ್ಯದವರು ಉದಯನ ಮತ್ತು ವಾಸವದತ್ತಾ ವಿಚಾರವಾದ ಕಥೆಗಳಲ್ಲಿ ಅಭಿಮಾನಗೊಂಡು ವಿಧವಿಧವಾಗಿ ಕಥೆಗಳನ್ನು ಬರೆದಿರು

¶ Vidya Sundara Published by Khemaraja Krishnadass Bombay.

‡ ಕರ್ಣಸುಂದರೀನಾಟಿಕಾ ಪ್ರಸ್ತಾವನಾ ಮತ್ತು ಬಿಲ್ಹಣ ಚರಿತ ಪುಟ ೩.

| Bengali Language & Literature P. 651

$ The Indian Antiquary Vol. XX P. 419.

ವಂತೆ ವಂಗೀಯರು ವಿದ್ಯಾಸುಂದರ ಕಥೆಯಲ್ಲಿ ಅಭಿಮಾನಗೊಂಡು ವಿಧವಿಧವಾಗಿ ತಮ್ಮ ಕಾವ್ಯಗಳಲ್ಲಿ ವರ್ಣಿಸಿ ಕೀರ್ತಿಶೇಷರಾಗಿರುವರು. ಈ ಕಥೆಯು ಬಹು ಪ್ರಾಚೀನ ಕಾಲದಿಂದಲೂ ವಂಗದೇಶದಲ್ಲಿ ಅನುಸರಿಸಿ ಬಂದಿರುವುದಾಗಿ ತೋರುತ್ತದೆ. ಕ್ರಿ. ಶ. ೧೬ನೆಯ ಶತಮಾನದಲ್ಲಿ ಗೋವಿಂದದಾಸ ಕೃಷ್ಣರಾಮನೂ, ೧೭ನೆಯ ಶತಮಾನದಲ್ಲಿ ಕ್ಷೇಮಾನಂದಮಧುಸೂದನನೂ ಕ್ರಿ. ಶ. ೧೮ನೆಯ ಶತಮಾನದಲ್ಲಿ ರಾಮಪ್ರಸಾದ ಮತ್ತು ಭಾರತಚಂದ್ರನೂ ಈ ವಿದ್ಯಾಸುಂದರ ಕಥೆಯನ್ನು ಬರೆದಿರುವರು. ಇಂತಹ ಸುಂದರವಾದ ಕಥೆಯು ಯಾವದಿರಬೇಕೆಂದು ತರ್ಕಿಸುವರಿಗಾಗಿ ವಿದ್ಯಾಸುಂದರ ಕಥಾಸಾರವನ್ನು ಬರೆಯುವೆವು :—

ಕಾಂಚೀನಗರದರಾಜನಾದ ಸಿಂಧುವಿನ ಮಗ, ಸುಂದರನೆಂಬವನು ಬರ್ದವಾನದ ದೊರೆ ವೀರಸಿಂಹನ ಮಗಳಾದ 'ವಿದ್ಯಾ' ಎಂಬವಳ ಸೌಂದರ್ಯವನ್ನೂ, ವಿದ್ಯಾವೈದುಷ್ಯವನ್ನೂ, ವಿದ್ಯಾಕೌಶಲದಲ್ಲಿ ತನ್ನನ್ನು ಗೆದ್ದವರನ್ನು ಮದುವೆಯಾಗುವಳೆಂಬ ಪ್ರತಿಜ್ಞೆಯನ್ನು ಕೇಳಿ ಯಾರಿಗೂ ತಿಳಿಯದಂತೆ ತಾನೊರ್ವನೇ ಹೊರಟು ವೀರಸಿಂಹನ ಬಕುಳಪುಷ್ಪೋದ್ಯಾನದಲ್ಲಿ ವಿಹರಿಸುತಿರ್ದು ಪುಷ್ಪಾಪಚಯಕ್ಕಾಗಿ ಅಲ್ಲಿಗೆ ಬಂದ ಮಾಲಾಕಾರಳಾದ ಹೀರೆಯ ಪರಿಚಯವನ್ನು ಮಾಡಿಕೊಂಡು ಅವಳೊಡನೆ ಮನೆಗೆ ಹೋಗಿ ತಾನೂ ಪುಷ್ಪಮಾಲೆಯನ್ನು ಕಟ್ಟಿಕಳುಹಿಸುವುದರ ಮೂಲಕ ವಿದ್ಯಾಸುಂದರಿಗೆ ತನ್ನ ಮನೋಭಿಪ್ರಾಯವನ್ನು ತಿಳುಹಿಸಿ ಹೀರೆಯ ಮೂಲಕ ಅವಳ ದರ್ಶನಲಾಭವನ್ನು ಹೊಂದಿ ಪರಸ್ಪರಸೇರುವಿಕೆಗೆ ಅವಕಾಶ ದೊರೆಯದೆ ವಿರಹನಮ್ರನಾಗಿ ಕಾಳಿಯನ್ನು ಭಕ್ತಿಯಿಂದ ಪ್ರಾರ್ಥಿಸಲು ಪ್ರಸನ್ನಳಾದಾ ಗೌರಿಯು ಒಂದು ಉಕ್ಕಿನ ತುಂಡನ್ನು ಕೊಟ್ಟು ಇದರ ಮೂಲಕ ಎಂತಹ ಕೆಲಸವನ್ನಾದರೂ ಕೈಗೂಡಿಸಿಕೊಳ್ಳಲಾಗುವುದೆಂದು ಅನುಗ್ರಹಿಸಿ ಮರೆಯಾಗಲು, ಸುಂದರನು ಸಂತುಷ್ಟನಾಗಿ ಆ ಉಕ್ಕುತುಂಡಿನ ಮೂಲಕ ಹೀರೆಯ ಮನೆಯಿಂದ ರಾಜಪುತ್ರಿಯ ಬಳಿಗೆ ಸುರಂಗಮಾರ್ಗವನ್ನು ಕಲ್ಪಿಸಿ ತನ್ಮೂಲಕ ರಾಜಪುತ್ರಿಯ ಬಳಿಗೆ ಹೋಗಿಬರುತ್ತಿರಲು ಇದನ್ನು ಕಾವಲಿನವರು ಕಂಡು ರಾಣಿಯಲ್ಲಿ ಬಿನ್ನವಿಸಿಕೊಳ್ಳಲು ಆಕೆಯು ಹಾಹಾಕಾರಗೊಂಡು ರಾಜನಿಗೆ ಈ ವಿಚಾರವನ್ನು ಅರಿಕೆ ಮಾಡಲಾಗಿ ರಾಜನು ಕೋಪಗೊಂಡು ಗೂಢಚಾರರಮೂಲಕ ಕಳ್ಳನನ್ನುಹಿಡಿತರಿಸಿ ಸಮ್ಮುಖದಲ್ಲಿ ನಿಲ್ಲಿಸಿಕೊಂಡು.—

ರಾಜ.—ಎಲೈ ನೀನು ಯಾರು ? ನಿನ್ನ ಹೆಸರೇನು ?
ಸುಂ. —ನನ್ನ ಹೆಸರು ವಿದ್ಯಾಪತಿ (ವಿದ್ಯೆಯೆಂಬವಳ ಗಂಡ)
ರಾ.—ನಿನ್ನ ತಂದೆಯ ಹೆಸರೇನು ?
ಸುಂ.—'ವಿದ್ಯಾ' ಎಂಬವಳ ಮಾವ.

ರಾ.—ನಿನ್ನ ವಾಸಸ್ಥಾನವಾವುದು?
ಸುಂ.—ನನ್ನ ವಾಸಸ್ಥಾನವು ವಿದ್ಯಾನಗರ.
ರಾ.—ನಿನ್ನ ಜಾತಿ.

ಸುಂ.—ವಿದ್ಯೆಯ ಜಾತಿ. (ಎಂದರೆ ಕ್ಷತ್ರಿಯನು) ಎಂದು ಭಾವಗರ್ಭಿತವಾಗಿ ಆಡಿದುದನ್ನೂ ಅವನ ನಿರ್ಭೀಕತೆಯನ್ನೂ ನೋಡಿ ಶಿರಚ್ಛೇದನ ಮಾಡಲಾಜ್ಞಾಪಿಸಲು ಸುಂದರನು ವಿದ್ಯಾಸುಂದರಿಯ ವಿಯೋಗ ದುಃಖವನ್ನು ಸಹಿಸಲಾರದೆ ಕಾಳಿಯನ್ನು ಈ ೫೦ ಶ್ಲೋಕಗಳಿಂದ ಧ್ಯಾನಿಸಿದನಂತರ, ಭವಾನಿಯು ವೈದೋರಿ ಕೊಲೆಗಡುಕರನ್ನು ದೂರಮಾಡಿ ಸುಂದರನನ್ನು ಅನುಗ್ರಹಿಸಿ ಮರೆಯಾಗಲು ರಾಜನು ಇವುಗಳೆಲ್ಲವನ್ನೂ ವಿಚಾರಿಸಿ ಚೋರನು ರಾಜಕುವರನೆಂದೂ ಗುಣಸಿಂಧು ರಾಜನ ಮಗನೆಂದೂ, ತಿಳಿದು ಸುಂದರನಿಗೆ ವಿದ್ಯೆಯನ್ನು ಕೊಟ್ಟು ವಿವಾಹ ಸಮಾರೋಹ ಮಂಬೆಳೆಯಿಸಿ ಬಾಳಿದನೆಂದೂ ಮೇಲೆಹೇಳಿದ ೫೦ ಶ್ಲೋಕಗಳೇ 'ಚೋರಪಂಚಾಶಿಕಾ' ಯೆಂದೂ ಕರೆಯಲ್ಪಟ್ಟುದಾಗಿ ಅನ್ನದಾಮಂಗಳವೆಂಬ ಗ್ರಂಥದಲ್ಲಿ ಈ ಕಥೆ ಹೇಳಲ್ಪಟ್ಟಿದೆ. ಅನ್ನದಾಮಂಗಳಕ್ಕೆ ಕಾಳಿಕಾಮಂಗಳವೆಂದೂ ನಾಮಾಂತರವಿರುವುದು. ಅನ್ನದಾ, ಚಂಡಿ ಇವು ಕಾಳಿಯ ಪ್ರತಿನಾಮಗಳು. ಕಥೆಯೂ ಮುಗಿದುದು.

ಈ ಕಥೆಯನ್ನೋದುವುದರಿಂದ ಚೋರಪಂಚಾಶಿಕಾಕಾರನು ಬಿಲ್ಹಣನಲ್ಲವೆಂದು ನಿಶ್ಚಯವಾಗಿಯೂ ಸ್ಪಷ್ಟಪಡುವುದು. ಇದಲ್ಲದೆ 'ವಿದ್ಯಾಪತಿ' ಎಂಬ ಶಬ್ದದಿಂದ ತರ್ಕಿಸುವುದಾದರೆ ಮೇಲೆ ಹೇಳಿದ ವಿದ್ಯಾಪತಿ (ವಿದ್ಯೆಯಗಂಡ)ಗೂ ವಿದ್ಯಾಪತಿಯೆಂದು ಬಿರುದನ್ನು ಹೊಂದಿದ ಬಿಲ್ಹಣನಿಗೂ ಯಾವ ಸಂಬಂಧವೂ ಇರದು. ಕಾಲವೂ ಮೇಳೈಸದು. ಒಂದುವೇಳೆ ಚೋರಪಂಚಾಶಿಕೆಯು ಬಿಲ್ಹಣನ ಹೆಸರಿನಲ್ಲಿ ಮುದ್ರಿತವಾಗಿರುವುದರಿಂದ ಅವನಿಂದಲೇ ಬರೆಯಲ್ಪಟ್ಟುದಾಗಿ ಸಂಶಯಗ್ರಸ್ತರಾದವರಿಗೆ ಖಂಡಿತವಾಗಿಯೂ ಅದು ಸಾಧುವಲ್ಲವೆಂದೂ ಬಿಲ್ಹಣನು ಬರೆದುದಾಗಿದ್ದರೆ 'ಚೋರಪಂಚಾಶಿಕಾ' ಎಂದು ಕರೆಯುವದಕ್ಕೆ ಬದಲು 'ಬಿಲ್ಹಣಪಂಚಾಶಿಕಾ' ಎಂದು ಕರೆಯಬಹುದಾಗಿದ್ದಿತೆಂದೂ, ಬಿಲ್ಹಣನ ಇತರ ಗ್ರಂಥಗಳಲ್ಲಿ ಹಾಗೆ ಎಲ್ಲಿಯಾದರೂ ಹೇಳಬಹುದಾಗಿದ್ದಿತೆಂದೂ, ಅಥವಾ ವರ್ಣನಸಾಮ್ಯ, ನಾಮಸಾಮ್ಯಗಳಾಗಲೀ ದೊರೆಯಬಹುದಾಗಿದ್ದಿತೆಂದೂ, ಸಕಲ ಶಾಸ್ತ್ರಾರ್ಥಸಂಪನ್ನನಾದ ಬಿಲ್ಹಣನು ಇಂತಹ ಕಾವ್ಯವನ್ನು ಬರೆರುವನೆಂಬದು ನಿರಾಧಾರವೆಂದೂ ಶೋಚನೀಯವೆಂದೂ, ಬಿಲ್ಹಣನು ಅಂತಹ ಅಶ್ಲೀಲಪಥಗಾಮಿಯಾಗಿದ್ದರೆ ವಿಕ್ರಮಾಂಕನಂತಹ ರಾಜಾಶ್ರಯವೂ, ಮಿತಾಕ್ಷರಕಾರನಾದ ವಿಜ್ಞಾನೇಶ್ವರನ ಗೆಳೆತನವು ದೊರೆಯುತ್ತಿರಲಿಲ್ಲವೆಂದೂ, ಜಾಣಾಕ್ಷರು ತಿಳಿದುಕೊಳ್ಳಬಹುದಾಗಿದೆ. ಇನ್ನುಳಿದಿರುವುದು 'ಚೋರ'ಶಬ್ದವಿಚಾರ. ಚೋರನೆಂಬ ಕವಿಯೊಬ್ಬನು ಇದು

ದಾಗಿ "ಯಸ್ಯಾಶ್ಚೋರಶ್ಚಿಕುರನಿಕರಃ" ಎಂಬಶ್ಲೋಕವಮಾತ್ರದಲ್ಲಿ ಹೊರ್ತು ಮತ್ತೆಲ್ಲಿಯೂ ದೊರೆಯುವಂತಿಲ್ಲ. ಇವನ ವಿಚಾರವಾಗಿ ನಮಗೆ ಏನೂ ತಿಳಿಯದು. ಮಹಾಕವಿಗಳ ಜತೆಯಲ್ಲಿ ಸೇರಿಸಿ ಹೇಳಲ್ಪಟ್ಟಿರುವುದರಿಂದ ಇವನೂ ಕವಿಯಾಗಿದ್ದಿರಬಹುದಾಗಿ ಊಹಿಸಲು ಅವಕಾಶವಿದೆ. ಆದರೆಶ್ಲೋಕದಲ್ಲಿ ಕಂಡುಬರುವ ಕವಿಗಳು ಭಿನ್ನಭಿನ್ನಕಾಲದವರಾಗಿರುವುದರಿಂದ ಶ್ಲೋಕವು ವಿಶ್ವಾಸಾರ್ಹವಾಗಿ ತೋರುವುದಿಲ್ಲ.

ಬೊಂಬಾಯಿಯಲ್ಲಿ ಅಚ್ಚಾಗಿರುವ ಸಂಸ್ಕೃತ 'ಕಾವ್ಯಮಾಲಾ' ಗುಚ್ಛದಲ್ಲಿ* ಕಂಡುಬರುವ ಬಿಲ್ಹಣಚರಿತಾಂತ್ಯದಲ್ಲಿ "ಇತಿ ಕಾಶ್ಮೀರಕ ಬಿಲ್ಹಣ ಕವಿವಿರಚಿತಂ, ಬಿಲ್ಹಣಚರಿತಾಪರನಾಮಧೇಯಂ ಚಂದ್ರಲೇಖಾಸಕ್ತ ಬಿಲ್ಹಣಕಾವ್ಯಂ" ಎಂಬದು ಪ್ರಮಾದದಿಂದ ತಪ್ಪಾಗಿ ಹೇಳಲ್ಪಟ್ಟಿರಬೇಕೆಂದು ಬೋಧೆಯಾಗುತ್ತದೆ. ಹಾಗಲ್ಲದಿದ್ದರೆ ಇವನಾವನೋ ಮತ್ತೊರ್ವ ಬಿಲ್ಹಣನಾಗಿರಬೇಕು.

ಇವನ ಕವಿತಾ ಧಾಟಿಯನ್ನು ತಿಳಿಹಿಸುವುದಕ್ಕೆ ಈ ಶ್ಲೋಕಗಳು ಸಾಕಾಗಿರುವುವು:—

ವಿಕ್ರಮಾಂಕದೇವಚರಿತದಲ್ಲಿ ಲೋಕಬೋಧಕವಾದ ತಂದೆಮಕ್ಕಳ ಭಾಷಣವು ಹೀಗಿರುವುದು:—

ತಂದೆಯಾದ ಆಹವಮಲ್ಲನು ಹಿರಿಯಮಗನಾದ ಸೋಮೇಶ್ವರನನ್ನು ಬಿಟ್ಟು ಎರಡನೆಯ ಮಗನಾದ ವಿಕ್ರಮಾಂಕನಿಗೆ ರಾಜ್ಯವನ್ನು ಕೊಡಬೇಕೆಂದಿರುವುದನ್ನರಿತು ವಿಕ್ರಮನು ತಂದೆಯಬಳಿ ಸಾರ್ದು, ಸಾಂಜಲಿಪುಟನಾಗಿ:—

(೧) ವಿಚಾರಚಾತುರ್ಯಮಪಾಕರೋತಿ ತಾತಸ್ಯ ಭೂಯಾನ್ಮಯಿ ಪಕ್ಷಪಾತಃ
ಜ್ಯೇಷ್ಠೇತಸೂಜೇ ಸತಿ ಸೋಮದೇವೇ ನಯೌವರಾಜ್ಯೇಽಸ್ತಿಮಮಾಧಿಕಾರಃ

ಕೇಳು! ತಂದೆ! ಮಹಾರಾಜನಾದ ನಿನಗೆ ನನ್ನಲ್ಲಿರುವ ಅಸೀಮಪ್ರೇಮರೂಪವಾದೀಪಕ್ಷಪಾತವು ನಿನ್ನ ವಿಚಾರಚತುರತೆಯನ್ನು ಹಾಳುಮಾಡುವುದಾಗಿದೆ. ಎಂದರೆ ನೀನು ವಿಚಾರಹೀನನೆಂಬ ದೋಷಾರೋಪಣೆಗೆ ಒಳಗಾಗುವೆ. ಅಣ್ಣನಾದ ಸೋಮದೇವನು ರಾಜ್ಯವನ್ನಾಳುವುದಕ್ಕೆ ಶಕ್ತನಾಗಿರುವಲ್ಲಿ ಯುವರಾಜಪದವಿಯನ್ನು ಹೊಂದಲು ನನಗಾವವಿಧವಾದ ಅಧಿಕಾರವೂ ಇರದು.

(೨) ಚಾಲುಕ್ಯವಂಶೋಽಪಿ ಯದಿಪ್ರಯಾತಿ ಪಾತ್ರತ್ವಮಾಚಾರವಿಪರ್ಯಯಸ್ಯ
ಅಹೋ! ಮಹದ್ವೈಶಸಮಾಃ ಕಿಮನ್ಯದನಂಕುಶೋ ಭೂತ್ಕಲಿಕುಂಜರೋಯಂ

* Kavyamala Ser es Part XIII P. I45—169.

ಇದುವರೆಗೆ ಧರ್ಮಮಾರ್ಗರತರೆಂಬ ಪ್ರಸಿದ್ಧವಾದ ಈ ಚಾಲುಕ್ಯವಂಶವು ವಂಶಪರಂಪರಾಚಾರವಿಪರ್ಯಾಸವುಳ್ಳದ್ದಾಗಿ ಹೋಗಿಬಿಟ್ಟಿದೆಂಬುದನ್ನು ಕೇಳಲು ಇದೇ ವಂಶದಲ್ಲಿ ಜನ್ಮಾವತರಣ ಮಾಡಿದ ನಾನು ದುಃಖಿಸುವುದಲ್ಲದೆ, ಧರ್ಮ ಹ್ರಾಸಯುಕ್ತವಾದ 'ಕಲಿ' ಎಂಬ ಆನೆಯು ಅನಂಕುಶವುಳ್ಳದಾಗಿಹೋಯಿತೆಂದು ಭಾವಿಸುತ್ತೇನೆ. (ಎಂದರೆ ಆನೆಗೆ ಅಂಕುಶವು ಸನ್ಮಾರ್ಗದರ್ಶಿ. ಧರ್ಮ ವಿಹೀನವಾದ ಈ ಕಲಿಎಂಬಾನೆಗೆ ರಾಜನೀತಿಚತುರತೆ ಎಂಬ ಅಂಕುಶವಿರಲೇ ಬೇಕು. ನೀನು ಯಾವುದನ್ನೂ ಯೋಚಿಸದೆ ನನಗೆ ರಾಜ್ಯವನ್ನು ಕೊಡುವ ದರಿಂದ ಧರ್ಮಚ್ಯುತನಾಗುವೆಯಾದುದರಿಂದ ನಾನು ದುಃಖಿಸುವೆನು ಎಂದಭಿ ಪ್ರಾಯವು.)

(೩) ಲಕ್ಷ್ಮ್ಯಾಃ ಕರಂಗ್ರಾಹಯಿತುಂ ತದಾದೌ
ತಾತಸ್ಯ ಯೋಗ್ಯಃ ಸ್ವಯಮಗ್ರಜೋ ಮೇ
ಕಾರ್ಯಂ ವಿಪರ್ಯಾಸಮಲೀಮಸೇನ
ನ ಮೇ ನೃಪಶ್ರೀ ಪರಿರಂಭಣೇನ ||

ಆದುದರಿಂದ ಈ ರಾಜ್ಯಲಕ್ಷ್ಮಿಯ ಪಾಣಿಗ್ರಹಣವನ್ನುಮಾಡಿಸಲು ತಂದೆ ಯಾದ ನಿನಗೆ ನನ್ನ ಅಣ್ಣನು ಯೋಗ್ಯನಾಗಿರುವನು. ಈ ಮರ್ಯಾದೆಯನ್ನು ನೀನು ಅತಿಕ್ರಮಿಸುವುದಾದರೆ ರಾಜ್ಯಲಕ್ಷ್ಮಿಯು ಇಂತಹ ಧರ್ಮಹ್ರಾಸದಿಂದ ದೂಷಿತ ಳಾಗುವಳಾದುದರಿಂದ ಅಂತಹ ಮಲಿನ ದೂಷಿತಳಾದ ರಾಜ್ಯಲಕ್ಷ್ಮಿಯನ್ನು ಗ್ರಹಣ ಮಾಡಲು ನಾನು ಸರ್ವಾತ್ಮನಾ ಆಶಿಸುವುದಿಲ್ಲ.

(೪) ಜ್ಯೇಷ್ಠಂಪರಿಮ್ಲಾನಮುಖಂವಿಧಾಯ
ಭವಾಮಿಲಕ್ಷ್ಮೀಪ್ರಣಯೋನ್ಮುಖಶ್ಚೇತ್
ಕಿಮನ್ಯದನ್ಯಾಯಪರಾಯಣೇನ
ಮಯ್ಯೈವಗೋತ್ರೇಲಿಖಿತಃ ಕಳಂಕಃ ||

ರಾಜ್ಯಲಕ್ಷ್ಮಿಯು ತನಗೆ ದೊರಕಲಾರಳೆಂದು ಕೇವಲ ಮ್ಲಾನಮುಖನಾದ ಸೋದರನನ್ನು ಬಿಟ್ಟು ನಾನು ರಾಜ್ಯವನ್ನು ಹೊಂದಲು ಇಷ್ಟಪಡುವೆನಾದರೆ, ಅನ್ಯಾಯಪರಾಯಣನಾದ ನನ್ನಿಂದಲೇ ಈ ಚಾಲುಕ್ಯವಂಶಕ್ಕೆ ಅಪಕೀರ್ತಿ ಬಂದಂತಾಗುವುದಿಲ್ಲವೆ !

(೫) ತಾತಶ್ಚಿರಂ ರಾಜ್ಯಮಲಂಕರೋತು
ಜ್ಯೇಷ್ಠೋ ಮಮಾರೋಹತು ಯೌವರಾಜ್ಯಂ
ಸಲೀಲಮಾಕ್ರಾಂತದಿಗಂತರೋಹಂ
ದ್ವಯೋಃ ಪದಾತಿವ್ರತಮುದ್ವಹಾಮಿ ||

ಆದುದರಿಂದ ತಂದೆಯೇ! ನನ್ನ ಅಣ್ಣನು ರಾಜ್ಯವನ್ನು ಅಲಂಕರಿಸುವನಾಗಲಿ. ಯುವರಾಜತ್ವವನ್ನು ನನಗೆ ಅನುಗ್ರಹಿಸುವನಾಗು. ನಾನು ಈ ವಿಶಾಲ ರಾಜ್ಯದ ರಕ್ಷಣಾವೇಕ್ಷಣಭಾರವನ್ನು ನಿಮ್ಮರ್ವರ ಆಜ್ಞೆಯಂ ಶಿರನಾಧರಿಸಿ ಆಳು ಒಲದಿಂದ ವಹಿಸಿಕೊಳ್ಳುವೆನು.

(೬) ರಾಮಸ್ಯಪಿತ್ರಾಭರತೋಭಿಷಿಕ್ತಃ
ಕ್ರಮಂ ಸಮುಲ್ಲಂಘ್ಯ ಯದಾತ್ಮರಾಜ್ಯೇ
ತೇನೋದ್ಧಿತಾ ಸ್ತ್ರೀಜಿತ ಹತ್ಯಕೀರ್ತಿ
ರದ್ಯಾಪಿ ತಸ್ಯಾಸ್ತಿ ದಿಗಂತರೇಷು ||

ದಶರಥನು ಹಿರಿಯಮಗನಾದ ರಾಮನಿಗೆ ರಾಜ್ಯವನ್ನು ಕೊಡುವುದು ಬಿಟ್ಟು ಧರ್ಮವಿರುದ್ಧವಾಗಿ ಭರತನಿಗೆ ರಾಜ್ಯವನ್ನು ಕೊಟ್ಟುದರ ದೆಸೆಯಿಂದ ದಶರಥನು ಸ್ತ್ರೀಜಿತನಾಗಿ ಕುಲಗೌರವಕೀರ್ತಿನಾಶಕನಾದನೆಂಬ ಅಪಕೀರ್ತಿಯು ಇನ್ನೂ ದಿಕ್ಕು ದಿಕ್ಕುಗಳಲ್ಲಿ ಮೊಳಗುತ್ತಿರುವುದಿಲ್ಲವೇ !

(೭) ಚಾನಾಮಿಮಾರ್ಗಂ ಭವತೋಪದಿಷ್ಟ
ಮಮಾಪಿ ಚಾಲುಕ್ಯಕುಲೇಪ್ರಸೂತಿಃ
ಕಿಂತ್ವತ್ರ ಲಕ್ಷ್ಮೀರ್ಗುಣವಂಧಹೀನೇ
ನಿಸರ್ಗಲೋಲಾಕಥಮೇತಿ ದಾರ್ಢ್ಯಂ ||

ತಂದೆಯೇ ! ನಾನು ನಿನ್ನಿಂದ ಧರ್ಮೋಪದಿಷ್ಟನಾಗಿರುವೆನು. ಅಲ್ಲದೆ ನನ್ನ ಜನ್ಮಾವತರಣವೂ ಈ ಚಾಲುಕ್ಯವಂಶದಲ್ಲಿಯೇ. ಮತ್ತೇನಂದರೆ ಅಣ್ಣನು ಗುಣ ಹೀನನೆಂದೂ ಸ್ವಭಾವಚಪಲಳಾದ ಲಕ್ಷ್ಮಿಯು ಇಂತಹವನಲ್ಲಿ ಹೇಗೆ ನೆಲೆಯಾಗಿ ನಿಲ್ಲುವಳೆಂದೂ ಶಂಕಿಸುವೆಯಾ ?

(೮) ಯದಿಗ್ರಹಸ್ತ್ಯನರಾಜಸ್ಯ ದೂತಾಃ
ಕಾರುಣ್ಯಶೂನ್ಯಃ ಶಶಿಶೇಖರೋವಾ
ತ್ವೈರೇಷತಾತೋ ಭವಿತಾಕೃತಾರ್ಥ
ಸ್ತದ್ವ್ಯಾರ್ಯತಾಂಕೀರ್ತಿವಿಪರ್ಯಯೋಮೇ ||

ನನ್ನ ಅಣ್ಣನಿಗೆ ರಾಜ್ಯಪ್ರಾಪ್ತಿಯಾಗದಂತಹ ಪ್ರತಿಕೂಲಗ್ರಹವಿರುವುದಾದರೆ ಅಥವಾ ಅವನು ರಾಜ್ಯವಾಳುವುದು ಕಾರುಣ್ಯಶೂನ್ಯನಾದ ಆ ಮಹೇಶ್ವರನಿಗೆ ಇಷ್ಟವಿರುವುದಿಲ್ಲವೆಂದಾದರೆ ಹಾಯ್ ! ಇಂತಹ ಕೀರ್ತಿವಿಪರ್ಯಸ್ತವಾಗುವುದಾದ ರಾಜ್ಯಭಾರಾರೋಪಣ ವಿಚಾರವನ್ನು ನನ್ನಲ್ಲಿಡದಹಾಗೆ ಸರ್ವೇಶ್ವರನು ನಿವಾರಿಸಲಿ.

(೯) ಅಶಕ್ತಿರಸ್ಯಾಸ್ತಿ ನ ದಿಗ್ಜಯೇಷು
ಯಸ್ಯಾನುಜೋಹಂ ಶಿರಸಾಧೃತಾಜ್ಞಃ
ಸ್ಥಾನಸ್ಥ ಏವಾದ್ಭುತಕಾರ್ಯಕಾರೀ
ವಿಭರ್ತು ರಕ್ಷಾಮಣಿನಾ ಸಮತ್ವಂ ||

ಹೆಚ್ಚೇಕೆ! ನನ್ನ ಅಣ್ಣನು ದಿಗ್ವಿಜಯದಲ್ಲಿ ಅಪ್ರತಿಮಶೂರನು. ನಾನು ಅಂತಹ ಶೂರನ ತಮ್ಮನು. ಅವನ ಆಜ್ಞೆಯನ್ನು ಶಿರಸಾಧರಿಸಿ ಅದರಂತೆ ಆಚರಿಸುವನಾಗಿರುವೆನು. ಅವನು ರಾಜಧಾನಿಯಲ್ಲಿದ್ದುಕೊಂಡು ರಾಜಕೀಯಾದ್ಭುತ ವಿಷಯಗಳಿಗೆ ಗಮನಕೊಡಲಿ. ನಾನು ಕೇವಲ ರಕ್ಷಾಮಣಿಯಂತೆ ಅವನ ಛಾಯಾನುವರ್ತಿಯಾಗಿದ್ದುಕೊಂಡಿರುವೆನು.

*ಸಾಹಿತ್ಯಪಾಥೋನಿಧಿಮಂಥನೋತ್ಥಂ
ಕರ್ಣಾಮೃತಂ ರಕ್ಷತ ಹೇ ಕವೀಂದ್ರಾಃ
ಯತ್ತಸ್ಯದೈತ್ಯಾ ಇವಲುಂಠನಾಯ
ಕಾವ್ಯಾರ್ಥಚೋರಾಃ ಪ್ರಗುಣೀಭವಂತಿ ||

ಎಲೈ ಕವಿಗಳೇ! ನೀವು ಎಷ್ಟೋ ಕಷ್ಟಪಟ್ಟು ಸಾಹಿತ್ಯ ಸಮುದ್ರವನ್ನು ಮಥಿಸಿತಂದ ಕರ್ಣಾಮೃತವನ್ನುರಕ್ಷಿಸಿಕೊಳ್ಳಿ. ಏಕೆಂದರೆ ಈ ಕರ್ಣಾಮೃತವನ್ನು ಕದ್ದುಕೊಂಡು ಹೋಗುವರಾದ ರಾಕ್ಷಸರಂತಿರುವ ಕಾವ್ಯಾರ್ಥಚೋರರು ಹೆಚ್ಚುತ್ತಿರುವರು.

ಗೃಹ್ಣಂತುಸರ್ವೇ ಯದಿ ವಾ ಯಥೇಚ್ಛಂ
ನಾಸ್ತಿಕ್ಷತಿಃ ಕ್ವಾಪಿಕವೀಶ್ವರಾಣಾಂ
ರತ್ನೇಷು ಲುಪ್ತೇಷು ಬಹುಷ್ವಮರ್ತ್ಯೈ
ರದ್ಯಾಪಿ ರತ್ನಾಕರಏವ ಸಿಂಧುಃ||

ಸಮಸ್ತರೂ ಅವರವರಿಗೆ ಬೇಕುಬೇಕಾದಷ್ಟು ಕಾವ್ಯಾಮೃತವನ್ನು ತೆಗೆದು ಕೊಂಡು ಹೋಗಲಿ. ಅದರಿಂದ ಕವೀಶ್ವರರಿಗೆ ಯಾವ ಕೊರತೆಯೂ ಉಂಟಾಗದು. ಸಮುದ್ರದಿಂದ ಎಷ್ಟೋ ರತ್ನಗಳು ಅಪಹರಿಸಿಕೊಳ್ಳಲ್ಪಟ್ಟುವಾದರೂ ಈ ಹೊತ್ತಿಗೂ ಸಮುದ್ರನು ರತ್ನಾಕರನೇ.



* ಈ ಎರಡು ಶ್ಲೋಕಗಳನ್ನು ಅಪ್ಪಯ್ಯದೀಕ್ಷಿತರು ಆಕ್ಷೇಪಾಲಂಕಾರಕ್ಕೆ ಉದಾಹರಿಸಿಕೊಂಡಿರುವರು.

# ಭೋ ೧ ಜ

ಸಂಸ್ಕೃತ ಸಾಹಿತ್ಯದಲ್ಲಿ ಭೋಜನಾಮಕರನೇಕರು ದೊರೆಯುವರು. ಪ್ರಕೃತವಿಷಯೈಕನು ಧಾರಾನಗರದ ಭೋಜನಾಗಿರುವನು. ಇವನು ಪರಮಾರ ವಂಶೋತ್ಪನ್ನನು. ಇವನ ತಂದೆ ಸಿಂಧುಲ ಅಥವಾ ಸಿಂಧುರಾಜ. ಇವನ ದೊಡ್ಡಪ್ಪ ಮುಂಜ. (ವಾಕ್ಪತಿ) ತಾತ ಶ್ರೀಹರ್ಷ (ಸೀಯಕ.) ಇವನು ಶೈವಸಂಪ್ರದಾಯದವನು.

ಉದಯಪುರ ಪ್ರಶಸ್ತಿಯಿಂದ ಮತ್ತು ಪರಿಮಳಾಪರನಾಮಧೇಯ ಪದ್ಮಗುಪ್ತ ವಿರಚಿತ ನವಸಾಹಸಾಂಕಚರಿತದ ೧೧ನೆಯ ಸರ್ಗದಿಂದ ಪರಮಾರವಂಶದ ಮೂಲಪುರುಷನು ವಸಿಷ್ಠನಿಂದ ಅಗ್ನಿಕುಂಡದಲ್ಲಿ ಜನ್ಮಿಸಿದುದಾಗಿ ತಿಳಿಯು ಬರುತ್ತದೆ.*

ಇದಲ್ಲದೆ ಭೋಜನು 'ಸರಸ್ವತೀಕಂಠಾಭರಣ' ದಲ್ಲಿ, ನಾಯಕಗುಣಗಳಲ್ಲಿ ಮಹಾಕುಲೀನತ್ವೋದಾಹರಣೆಗೆ ತನ್ನ ವಂಶವಿಚಾರವಾಗಿ ಹೇಳಿಕೊಂಡಿರುವನು.† ನಾಯಕಗುಣೇಷು ಮಹಾಕುಲೀನತ್ವಂಪುಂಸೋಯಥಾ:—

ವಾಸಿಷ್ಠೈಃ ಸುಕೃತೋದ್ಭವೋಽಧ್ವರಶತೈರಸ್ತ್ಯಗ್ನಿಕುಂಡೋದ್ಭವೋ |
ಭೂಪಾಲಃ ಪರಮಾರ ಇತ್ಯಧಿಪತಿಃ ಸಪ್ತಾಬ್ಧಿಕಾಂಚೀಭುವಃ
ಅದಾಪ್ಯದ್ಭುತಹರ್ಷಗದ್ಗದಗಿರೋ ಗಾಯಂತಿಯಸ್ಯೋದ್ಭಟಂ ||
ವಿಶ್ವಾಮಿತ್ರಜಯೋರ್ಜಿತಸ್ಯ ಭುಜಯೋರ್ವಿಸ್ಫೂರ್ಜಿತಂ ಗುರ್ಜರಾಃ ||

ಎಂದಿರುವುದು.

ಭೋಜಕೃತ "**ಯೋಗಸೂತ್ರವೃತ್ತಿ**"ಯಲ್ಲಿ ಕಂಡುಬರುವ —

ಶಬ್ದಾನಾಮನುಶಾಸನಂ ವಿದಧತಾ ಪಾತಂಜಲೇ ಕುರ್ವತಾ
ವೃತ್ತಿಂ ರಾಜಮೃಗಾಂಕ ಸಂಜ್ಞಮಪಿ ಚವ್ಯಾತನ್ವತಾವೈದ್ಯಕೇ
ವಾಕ್ಚೇತೋವಪುಷಾಂ ಮಲಃ ಫಣಿಭೃತಾಂಭರ್ತ್ರೇವಯೇನೋದ್ಧೃತಃ
ತಸ್ಯಶ್ರೀ**ರಣರಂಗಮಲ್ಲ**ನೃಪತೇಃ ವಾಚೋಜಯಂತ್ಯುಜ್ವಲಾಃ ||

---

* ಅಸ್ತ್ಯುರ್ವೀಧ್ರಪ್ರತೀಚ್ಯಾಂ ಹಿಮಗಿರಿತನಯಃ ಸಿದ್ಧದಾಂಪತ್ಯಸಿದ್ಧೇಃ
ಸ್ಥಾನಂ ಚ ಜ್ಞಾನಭಾಜಾಮಭಿಮತಫಲದೋಽಖರ್ವಿತಃ ಸೋಽರ್ಬುದಾಖ್ಯಃ
ವಿಶ್ವಾಮಿತ್ರೋ ವಸಿಷ್ಠಾದಹರತಬಲತೋಯತ್ರ ಗಾಂ ತತ್ಪ್ರಭಾವಾ
ಜ್ಜಜ್ಞೇ ವೀರೋಽಗ್ನಿಕುಂಡಾದ್ರಿಪುಬಲನಿಧನಂ ಯಶ್ಚಕಾರೈಕ ಏವ ||
ಮಾರಯಿತ್ವಾ ಪರಾನ್ ಧೇನುಮಾನಿನ್ಯೇ ಸ ತತೋ ಮುನಿಃ
ಉವಾಚ ಪರಮಾರಾಖ್ಯಃ ಪಾರ್ಥಿವೇಂದ್ರೋ ಭವಿಷ್ಯಸಿ ||
(Epigraphica Indica Vol. I Pt 5.)

† ಸರಸ್ವತೀಕಂಠಾಭರಣ ಪುಟ ೬೦೪.

ಎಂಬ ಶ್ಲೋಕದಿಂದ ಮಹಾರಾಜಾಧಿರಾಜನಾದ ಭೋಜನಿಗೆ ರಣರಂಗಮಲ್ಲನೆಂಬಾಪರನಾಮವೂ ಇದ್ದುದಾಗಿ ಬೋಧೆಯಾಗುತ್ತದೆ.

ಪರಮಾರವಂಶದ ಮೂಲಪುರುಷನು ಉಪೇಂದ್ರನೆಂಬವನು. ಮಾಲವದಲ್ಲಾಳಿದ ಪರಮಾರವಂಶಾವಳಿಯೂ ಅವರಸಮಯವೂ ಹೀಗೆ ಹೇಳಿರುವುದು.—

| ಹೆಸರು. | | ಕಾಲ. |
|---|---|---|
| ಉಪೇಂದ್ರ | .... ... | ಕ್ರಿ. ಶ. ೮೦೦-೮೨೫ |
| ವೈರಿಸಿಂಹ (೧) | ... ... | ,, ೮೨೫-೮೫೦ |
| ಸೀಯಕ (೧) | ... ... | ,, ೮೫೦-೮೭೫ |
| ವಾಕ್ಪತಿ (೧) | ... ... | ,, ೮೭೫-೯೧೪ |
| ವೈರಿಸಿಂಹ (೨) ವಜ್ರಟಾಪರನಾಮಕ | ... | ,, ೯೧೪-೯೪೧ |
| ಸೀಯಕ( ೨) ಹರ್ಷಾಪರನಾಮಕ | ... | ,, ೯೪೧-೯೭೭? |
| ಮಹಾರಾಜಾಧಿರಾಜ ವಾಕ್ಪತಿ (೨) ಮುಂಜಾಪರನಾಮಕ | | ,, ೯೭೭-೯೯೭ |
| ಸಿಂಧುರಾಜ (ಸಿಂಧುಲ) | ... ... | ,, ೯೯೭-೧೦೧೦ |
| ಭೋಜದೇವ (೧) | ... ... | ,, ೧೦೧೦-೧೦೫೦ |

ಪರಮಾರವಂಶದ ವಿಚಾರವಾಗಿ ಉದಯಪುರಪ್ರಶಸ್ತಿ, ನವಸಾಹಸಾಂಕಚರಿತ, ನಾಗಪುರಪ್ರಶಸ್ತಿ, ತಿಲಕಮಂಜರೀ ಮತ್ತು ಇಂಡಿಯನ್ ಆಂಟಿಕ್ವೇರಿಯಲ್ಲಿ ಹೇಳಿರುವುದು ಕಂಡುಬರುತ್ತದೆ. ಅವುಗಳೆಲ್ಲದರ ಸಮಾಲೋಚನದಿಂದ ಹೀಗೆ ಹೇಳಲಾಗುತ್ತದೆ. (ಮುಂದಣ ಪುಟವನ್ನು ನೋಡಿ.)

**ಕಾಲ**:—ಧಾರಾನಗರವನ್ನು ಭೋಜನು ಸುಮಾರು ಕ್ರಿ. ಶ. ೧೦೧೮-೧೦೬೦ರ ವರೆಗೆ ಆಳಿದುದಾಗಿ ವಿನ್ಸೆಂಟು ಸ್ಮಿತ್ತರು ಹೇಳುವರು.

ಡಾ. ಬುಹಲರವರೂ, ಡಾ. ಸ್ಟೈಯಿನ್ನರವರೂ ಭೋಜನು ಕಲಶನ ಸಮಕಾಲೀನನೆನ್ನುವುದರ ಮೂಲಕ ಭೋಜನ ಜೀವಿತಸಮಯವು ಕ್ರಿ. ಶ. ೧೦೬೩ ಎಂದಿರುವರು.$

ಭೋಜರಾಜನ ಉತ್ತರಾಧಿಕಾರಿಯಾದ ಜಯಸಿಂಹನ ಶಾಸನಪತ್ರ ಸಮಯವು ಕ್ರಿ. ಶ. ೧೦೫೫ ಎಂದೂ ಇವನ ಉತ್ತರಾಧಿಕಾರಿಯಾದ ಉದಯಾದಿತ್ಯನ ಲೇಖವು ಕ್ರಿ. ಶ. ೧೦೫೯ ಎಂದೂ ಹೇಳಲ್ಪಟ್ಟಿರುವುದರಿಂದ ಭೋಜರಾಜನ ಜೀವಿತ ಸಮಯವು ಕ್ರಿ. ಶ. ೧೦೫೫ಕ್ಕಿಂತ ಮುಂಚೆಯಾಗಿರಬೇಕೆಂದೂ ಆ ಸಮಯದಲ್ಲಿ ಗುರ್ಜರ ಮತ್ತು ಚೇದಿದೇಶದ ಅರಸರು ಒಂದಾಗಿ ಧಾರಾನಗರವನ್ನು

* Vincent Smith's Early History of India P 395

$ Introduction to Saraswathi Kantabharana P. 14.

## ಪರಮಾರ ವಂಶಾವಳಿಃ

| ಉದಯಪುರ ಪ್ರಶಸ್ತಿತಃ | ನವಸಾಹಸಾಂಕ ಚರಿತಃ | ನಾಗಪುದಪ್ರಶಸ್ತಿತಃ | ತಿಲಕಮಂಜರೀತಃ | ಇಂಡಿಯನ್ ಆಂಟಿಕ್ವೈರಿ |
| --- | --- | --- | --- | --- |
| ಪರಮಾರ | ಪರಮಾರ | ಪರಮಾರ | ಪರಮಾರ | |
| ಉಪೇಂದ್ರರಾಜ | ಉಪೇಂದ್ರರಾಜ | | | |
| ವೈರಿಸಿಂಹ (೧) | | | | |
| ಸೀಯಕ | | | | |
| ವಾಕ್ಪತಿ (೧) | ವಾಕ್ಪತಿ | | | ಕೃಷ್ಣರಾಜ |
| ವೈರಿಸಿಂಹ (೨) ವಜ್ರರ | ವೈರಿಸಿಂಹ | ವೈರಿಸಿಂಹ | ವೈರಿಸಿಂಹ | ವೈರಿಸಿಂಹ |
| ಹರ್ಷ | ಸೀಯಕ-ಹರ್ಷ | ಸೀಯಕ | ಶ್ರೀಹರ್ಷ ಸೀಯಕ | ಸೀಯಕದೇವ |
| ವಾಕ್ಪತಿ, ಸಿಂಧುರಾಜ | ವಾಕ್ಪತಿ ಉತ್ಪಲರಾಜ - | ಮುಂಜ | ಮುಂಜ ವಾಕ್ಪತಿ | ವಾಕ್ಪತಿರಾಜ ಅಮೋಘವರ್ಷ |
| | ಸಿಂಧುರಾಜ ನವಸಾಹಸಾಂಕ, ಕುಮಾರನಾರಾಯಣ | ಸಿಂಧುರಾಜ | ಸಿಂಧುರಾಜ | ಸಿಂಧುರಾಜ |
| ಭೋಜದೇವ | ಭೋಜದೇವ | ಭೋಜದೇವ | ಭೋಜದೇವ | ಭೋಜದೇವ |

ಮುತ್ತಿದಾಗ ಜ್ವರಗ್ರಸ್ತನಾಗಿದ್ದ ಭೋಜನು ಮೃತನಾಗಿರಬೇಕೆಂದೂ ಬೋಧೆಯಾಗುತ್ತದೆ.‡

ಭೋಜರಾಜನು ಕೊಟ್ಟಿರುವ ದಾನಶಾಸನದಕಾಲವು ವಿ.ಸಂ. ೧೦೭೬ ಮಾಘ ಶುದಿ ೫ ಅಥವಾ ಕ್ರಿ. ಶ. ೧೦೧೯ ಆಗುತ್ತದೆ. ಭೋಜನು ಕ್ರಿ. ಶ. ೧೦೪೨ರಲ್ಲಿ **'ರಾಜಮೃಗಾಂಕ'** ಎಂಬ 'ಕರಣ' (ಖಗೋಳಶಾಸ್ತ್ರಸಂಬಂಧವಾದ) ಗ್ರಂಥವನ್ನು ಬರೆದುದಾಗಿ ಅಹರ್ಗಣಸಾಧನವನ್ನು ಸೂಚಿಸುವ ಅದರ ಪ್ರಾರಂಭ ಶ್ಲೋಕದಿಂದ ಗೊತ್ತಾಗುತ್ತದೆ.†

ಭೋಜನ ತಂದೆಯಾದ ಸಿಂಧುಲನು ಗತಾಯುವಾದ ಸಮಯವು ಕ್ರಿ. ಶ. ೧೦೧೦ ಎಂದು ಚರಿತ್ರೆಯು ಹೇಳುತ್ತದೆ. ಒಂದುವೇಳೆ ಶಾಸನದಲ್ಲಿ ಹೇಳಿರುವ ಕ್ರಿ. ಶ. ೧೦೧೯ ಆಗಲಿ, ಅಥವಾ ವಿನ್ಸೆಂಟುಸ್ಮಿತರು ಹೇಳಿರುವ ಕ್ರಿ. ಶ. ೧೦೧೮ ಆಗಲಿ ಭೋಜನು ಸಿಂಹಾಸನಕ್ಕೆ ಬಂದಿರಬೇಕೆನ್ನುವುದಾದರೆ ಭೋಜನು ಸಿಂಹಾಸನಕ್ಕೇರಿದ ಮತ್ತು ಸಿಂಧುಲನು ಮೃತನಾದ ಕಾಲದ ಮಧ್ಯಕಾಲದ ೮-೯ ವರ್ಷಗಳಲ್ಲಿ ರಾಜ್ಯವು ಅನಾಯಕವಾಗಿದ್ದಿತೆಂದು ಹೇಳಬೇಕಾಗುವುದು. ಈ ಅನಾಯಕತ್ವದ ವಿಚಾರವಾಗಿ ಅಥವಾ ಪರವಾರವಶಂದವರ ಕೈಬಿಟ್ಟು ಅನ್ಯಾಕ್ರಾಂತವಾದ ವಿಚಾರವಾಗಿ ಚರಿತ್ರೆಯಲ್ಲಿ ಎಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲ.

ಬಲ್ಲಾಳಸೇನನ ಭೋಜಪ್ರಬಂಧದಲ್ಲಿ ಸಿಂಧುಲನು ಅಣ್ಣನೆಂದೂ ಪರಲೋಕಯಾತ್ರಾಸಮಯದಲ್ಲಿ ತಮ್ಮನಾದ ಮುಂಜನಕೈಲಿ ಚಿಕ್ಕವನಾದ ಭೋಜನನ್ನಿರಿಸಿ ರಕ್ಷಿಸತಕ್ಕುದೆಂದು ಹೇಳಿದಂತೆ ಇರುವುದು. ಇದರಿಂದ ಸಿಂಧುಲನ ತಮ್ಮನು ಮುಂಜನೆಂದೂ ಮುಂಜನು ಭೋಜನ ಚಿಕ್ಕಪ್ಪನೆಂದೂ ಹೇಳಿದಂತಾದುದು. ಒಂದುವೇಳೆ ಕಾಲಸಾಧನೆಗಾಗಿ ಸಿಂಧುಲನು ಕ್ರಿ. ಶ. ೧೦೧೦ರಲ್ಲಿ ಮೃತನಾಗಿ ತಮ್ಮನಾದ ಮುಂಜನು ಕ್ರಿ. ಶ. ೧೦೧೯ರ ವರೆಗೆ ರಾಜ್ಯಭಾರವನ್ನು ಮಾಡಿರಬಹುದಾಗಿ ಊಹಿಸುವುದಾದರೆ.—

(೧) "ವಂಶೋಽಸ್ಮಿನ್ವೈರಿಸಿಂಹಃ ಕ್ಷಿತಿಪತಿರಭವತ್ ಭೂರಿಭೂತಿಪ್ರಭಾವ...
.........।

(೨) ತಸ್ಮಾದ್ವೈ.................. ಶ್ರೀಸೀಯಕೋಭೂನ್ನೃಪಃ।

(೩) ತಸ್ಮಾದ್ವೈರವರೂಥಿನೀ ಬಹುವಿಧಪ್ರಾರಬ್ಧಯುದ್ಧಾಧ್ವರ
ಪ್ರಧ್ವಂಸೈಕಪಿನಾಕಪಾಣಿರಜನಿ ಶ್ರೀಮುಂಜರಾಜೋನೃಪಃ........।

(೪) ತಸ್ಯಾಸೀದಥ ಪಾರ್ಥಿವಃ ಪೃಥುಯಶಾಃ ಶ್ರೀಸಿಂಧುರಾಜೋನೃಪಃ.......
.........।

‡ Epigraphica Indica.

† ಸರಸ್ವತೀಕಂಠಾಭರಣದ ಮುನ್ನುಡಿ ಪುಟ ೧೪.

(೫) ತತೋ್ನುರ್ಭುವನೈಕ ಭೂಷಣಮಭೂದ್ಭೂಪಾಲಚೂಡಾಮಣಿ
ಧ್ಪ್ರಾಯಾಡಂಬರಚುಂಬಿತಾಂಘ್ರಿಕಮಲಃ ಶ್ರೀಭೋಜದೇವೋನೃಪಃ ||

ಎಂಬವುಗಳಲ್ಲಿ ಕಂಡುಬರುವುದಾದ ವೈರಿಸಿಂಹನಮಗ ಸೀಯಕ. ಇವನ ಮಗ ಮುಂಜ. ಇವನ ಕನಿಷ್ಠ ಸೋದರನಾದ ಸಿಂಧುಲ. ಇವನಮಗ ಭೋಜನೆಂದು ಹೇಳುವ ಊಹೆಯು ತಪ್ಪೆಂದೂ, ವಂಶಾವಳಿಯಂತೆ ಮುಂಜನ ಅನಂತರ ಸಿಂಧುಲನೆಂದೂ, ಅವನಮಗ ಭೋಜನು ಕ್ರಿ. ಶ. ೧೦೧೦ರಲ್ಲಿ ಸಿಂಹಾಸನವೇರಿರಬೇಕೆಂದೂ ಸ್ಪಷ್ಟಪಡುತ್ತದೆ. ಇದೇ ವಿಚಾರವು ನವಸಾಹಸಾಂಕಚರಿತದ ೧೧ನೆಯ ಅಧ್ಯಾಯದಲ್ಲಿಯೂ, ಧನಪಾಲನ ತಿಲಕಮಂಜರಿಯಲ್ಲಿಯೂ ೪೦, ೪೧, ೪೨, ೪೩ ನೆಯ ಶ್ಲೋಕಗಳಿಂದ ಸಿದ್ಧಾಂತವಾಗುತ್ತದೆ. ಆದುದರಿಂದ ಸಿಂಧುವಿನ ತಮ್ಮ ಮುಂಜನೆಂದು ಊಹಿಸುವುದು ತಪ್ಪಾಗುತ್ತದೆ. ಬಲ್ಲಾಳಕೃತಭೋಜ ಪ್ರಬಂಧವು ಚರಿತ್ರೆಯಲ್ಲ. ಕೇವಲಮನೋರಂಜಕ ಗ್ರಂಥ. ಅಥವಾ 'ಕಟ್ಟುಕಥೆಗಳಮೊಟ್ಟೆ' ಎಂದರೂ ಸಲ್ಲುವುದು.

ಭೋಜನು ಕಲಶರಾಜನ ಸಮಕಾಲೀನನಲ್ಲ. ಕಲಶನ ತಂದೆಯಾದ ಅನಂತರಾಜನ ಸಮಕಾಲೀನನೆಂದೂ, ಅನಂತರಾಜನು ಕ್ರಿ. ಶ. ೧೦೨೮-೧೦೮೦ರ ವರೆಗೆ ಕಾಶ್ಮೀರವನ್ನಾಳಿದನೆಂದೂ ಭೋಜನೂ ಮತ್ತು ಅನಂತರಾಜನೂ, ವಿದ್ಯಾಪಕ್ಷಪಾತಿಗಳೂ, ಕವಿಜನಾಶ್ರಯರೂ, ದಾನವೀರರೂ ಆಗಿದ್ದರೆಂದು.—

ಸಚಭೋಜನರೇಂದ್ರಶ್ಚ ದಾನೋತ್ಕರ್ಷೇಣವಿಶ್ರುತೌ
ಸೂರೀತಸ್ಮಿನ್ಕ್ಷಣೇತುಲ್ಯಂ ದ್ವಾವಾಸ್ತಾಂಕವಿಬಾಂಧವೌ ||§

ಎಂದು ಕಲ್ಹಣನು ಹೊಗಳಿ ಬರೆದಿರುವನು. ಅನಂತರಾಜನು ಕಲಶನಿಗೆ ರಾಜ್ಯಭಾರವನ್ನು ಕೊಟ್ಟಂತೆ ಮಾಡಿದುದು ಕ್ರಿ. ಶ. ೧೦೬೫ರಲ್ಲಿ. ಆ ವೇಳೆಗೆ ಭೋಜರಾಜನು ಪಾರ್ಥಿವ ಶರೀರವನ್ನು ಬಿಟ್ಟು ಸ್ಮೃತಿಶೇಷನಾಗಿದ್ದನು. ಈ ಕಾರಣಗಳಿಂದ ಭೋಜರಾಜನ ಕಾಲವು ಕ್ರಿ. ಶ. ೧೦೧೦-೧೦೫೫ರ ವರೆಗೆಂದು ನಿಶ್ಚಯ ಪಡುವುದು.

**ಗ್ರಂಥಗಳು:**—ಭೋಜರಾಜನು ಜ್ಯೋತಿಷ (astronomy) ಶಿಲ್ಪ (architecture) ಮತ್ತು ಕಾವ್ಯ (poetry) ಮೊದಲಾದ ಅನೇಕ ಗ್ರಂಥಗಳನ್ನು ಬರೆದಿರುವುದಾಗಿ ಹೇಳಲ್ಪಟ್ಟಿದೆ. ಭೋಜರಾಜನ ಹೆಸರಿನಲ್ಲಿ ಈ ಗ್ರಂಥಗಳು ಇರುವುವಾಗಿ ತಿಳಿಯಬರುತ್ತದೆ. ಅವನ್ನು ಹೀಗೆ ವಿಂಗಡಿಸಬಹುದು.

* Epigraphica Indica Vol. II P. 183-185.

§ ರಾಜತರಂಗಿಣೀ ೭—೨೫೯.

೧. **ಖಗೋಳ ಮತ್ತು ಜ್ಯೋತಿಷ**: –( Astronomy and Astrology. )

ರಾಜಮಾರ್ತಾಂಡ

* ರಾಜಮೃಗಾಂಕ

ವಿದ್ವಜ್ಜನವಲ್ಲಭ

ಆದಿತ್ಯಪ್ರತಾಪಸಿದ್ಧಾಂತ

೨ **ವೈದ್ಯ**:—(Medicine)

ಆಯುರ್ವೇದ ಸರ್ವಸ್ವಂ

† ರಾಜಮಾರ್ತಾಂಡ

ವಿಶ್ರಾಂತವಿದ್ಯಾವಿನೋದ

**ಪಶುವೈದ್ಯ**:—(Veterinary Manual)

ಶಾಲಿಹೋತ್ರ

೩. **ಶಿಲ್ಪ**: —(architecture)

ಸಮರಾಂಗಣ ಸೂತ್ರಧಾರ

೪. **ವ್ಯಾಕರಣ**:—(Grammar)

ಶಬ್ದಾನುಶಾಸನ

೫. **ವೇದಾಂತ**: —(Philosophy)

ರಾಜಮಾರ್ತಾಂಡ

,, (ಪತಂಜಲಿಯ ಯೋಗಸೂತ್ರವ್ಯಾಖ್ಯಾನ)

ತತ್ತ್ವಪ್ರಕಾಶ

ಸಿದ್ಧಾಂತ ಸಂಗ್ರಹ

ಶಿವತತ್ತ್ವರತ್ನಕಲಿಕಾ

೬. **ಧರ್ಮಶಾಸ್ತ್ರ**:—

ವ್ಯವಹಾರ ಸಮುಚ್ಚಯ

‡ ಚಾರುಚರ್ಯಾ

೭. **ಅರ್ಥಶಾಸ್ತ್ರ**:—

ಚಾಣಕ್ಯನೀತಿ (ದಂಡಶಾಸ್ತ್ರ)

---

* ಇದಕ್ಕೆ ಕರಣಮೃಗಾಂಕವೆಂದೂ ಹೆಸರು. ಸಂಸ್ಕೃತಕವಿಜೀವಿತವು ಪುಟ ೧೪೭-೧೪೯

† Edited & Published by Vaidya Jadaviji Tricumji Acharya

‡ ಕ್ಷೇಮೇಂದ್ರನು ಚಾರುಚರ್ಯಾ ಎಂಬ ಗ್ರಂಥವನ್ನು ಬರೆದಿರುವನು. ಇದು ಬೇರೆಗ್ರಂಥವಾಗಿರಬಹುದು.

§ ಪುತ್ರಮಾರ್ತಾಂಡ

೮. **ಅಲಂಕಾರ.**—

ಸರಸ್ವತೀ ಕಂಠಾಭರಣ

$ ಶೃಂಗಾರಪ್ರಕಾಶ

೯. **ಕಾವ್ಯ:**—(Poetry and Prose)

ವಿದ್ಯಾವಿನೋದ

x ಪ್ರಾಕೃತ ಕಾವ್ಯಗಳು

ರಾಮಾಯಣ ಚಂಪೂ

ಶೃಂಗಾರಮಂಜರೀ

ಸುಭಾಷಿತ ಪ್ರಬಂಧ

೧೦. **ಕೋಶ:**—(Lexicography)

ನಾಮಮಾಲಿಕಾ

೧೧. **ಶತಕಗಳು:**—

A { ಪ್ರಾಕೃತಕೂರ್ಮ ಶತಕ
ಅವನೀಶತಕ }

೧೨. **ನಾಟಿಕಾ:**—

A ಪಾರಿಜಾತ ಮಂಜರೀ

೧೩. **ಕಾರಿಕಾ:** —

A ಭರ್ತೃಹರಿಕಾರಿಕಾ

೧೪. **ಟೀಕಾ:**—

A ಮನುಸಂಹಿತಾಟೀಕಾ

೧೫. **ಸ್ತೋತ್ರ:**—

C ಮಹಾಕಾಳೀ ವಿಜಯ

೧೬. **ನೌಕಾವಿಷಯಕ ಗ್ರಂಥ:**—

T ಯುಕ್ತಿಕಲ್ಪತರು

---

§ BhojaRaja Published by annamalai University P. 79

$ ಸರಸ್ವತೀ ಕಂಠಾಭರಣ, ಮುನ್ನುಡಿ ಪುಟ ೧೧

x Bhoja Raja P. 70

A ಸರಸ್ವತೀ ಕಂಠಾಭರಣದ ಮುನ್ನುಡಿ ಪುಟ ೧೧

C Bhoja Raja P. 70 Published by Annamalai University

T 'ಯುಕ್ತಿಕಲ್ಪತರು' ಎಂಬ ನೌಕಾವಿಷಯಕ ಗ್ರಂಥವು ಸಮಗೆ ದೊರೆತಿದೆ. ಈ ಹೆಸರಿನ ವೇದಾಂತ ಗ್ರಂಥವಾವುದೆಂಬುದು ತಿಳಿಯದು

ಮೇಲೆ ಹೇಳಿದ ಗ್ರಂಥಗಳಲ್ಲಿ ಅನೇಕ ಗ್ರಂಥಗಳು ಉಪಲಬ್ಧವಿಲ್ಲ. ದೊರೆಯ ಬಹುದಾದವುಗಳನ್ನು ಏಕ ಕರ್ತೃಕಗಳೆನಲಾಗುವುದಿಲ್ಲ. ಪ್ರಕೃತದೊರೆತಿರುವ ಭೋಜನ ಹೆಸರಿನ ಪುಸ್ತಕಗಳು;—

೧. ಚಂಪೂ ರಾಮಾಯಣ
೨. ಪಾತಂಜಲ ಸೂತ್ರವೃತ್ತಿ } ರಾಜಮಾರ್ತಾಂಡ
೩. ರಾಜಮಾರ್ತಾಂಡ }
೪. ತತ್ತ್ವಪ್ರಕಾಶ
೫. ಸರಸ್ವತೀ ಕಂಠಾಭರಣ
೬. ಶೃಂಗಾರಪ್ರಕಾಶ

(೧) ಚಂಪೂರಾಮಾಯಣ:—

ಚಂಪೂರಾಮಾಯಣಕಾರನು ಗ್ರಂಥಾಂತ್ಯದಲ್ಲಿ "ವಿದರ್ಭರಾಜ ವಿರಚಿತೇ ಚಂಪೂರಾಮಾಯಣೇ" ಎಂದಿರುವುದರಿಂದ ಈ ಗ್ರಂಥಕಾರನು ಬೇರೆಯೆಂದೂ ಭೋಜನಲ್ಲವೆಂದೂ ಸ್ಪಷ್ಟಪಡುವುದು. ಚಂಪೂರಾಮಾಯಣಕ್ಕೆ ವ್ಯಾಖ್ಯಾನಕಾರ ನಾದ ರಾಮಚಂದ್ರಬುಧೇಂದ್ರನೂ, ಯುದ್ಧಕಾಂಡವನ್ನುಬರೆದ ಲಕ್ಷ್ಮಣಸೂರಿಯೂ ವಿದರ್ಭರಾಜನನ್ನು ಭೋಜನೆಂದು ಕರೆದಿರುವುದರ ಹೊರ್ತು ಬೇರೆಯಾವ ಪ್ರಮಾ ಣವೂ ದೊರೆಯುವಂತಿಲ್ಲ. ವಿದರ್ಭದೇಶದ ವಿಚಾರವು ಸರಿಯಾಗಿ ತಿಳಿಯದೆ, ಅಲ್ಲಿ ಭೋಜರಾಜನೆಂಬವನಿದ್ದುದನ್ನು ಚರಿತೆಯು ಹೇಳುವುದಿಲ್ಲವಾದುದರಿಂದ ಚಂಪೂ ರಾಮಾಯಣಕರ್ತನು ಯಾವನೋಭೋಜನಾಮಕನಾದ ವಿದರ್ಭರಾಜನೋರ್ವನು.

(೨) ಪಾತಂಜಲ ಸೂತ್ರವೃತ್ತಿ:—ಪತಂಜಲಿಯು ವಾಙ್ಮನಶ್ಶರೀರಗಳ ಮಲಾ ಪನಯನಾರ್ಥವಾಗಿ ಮೂರುವಿಧ ಗ್ರಂಥಗಳನ್ನು ಬರೆದಿರುವುದಾಗಿ—

ಸೂತ್ರಾಣಿ ಯೋಗಶಾಸ್ತ್ರೇ ವೈದ್ಯಶಾಸ್ತ್ರೇಚ ವಾರ್ತಿಕಾನಿತತಃ
ಕೃತ್ವಾಪತಂಜಲಿಮುನಿಃ ಪ್ರಚಾರಯಾಮಾಸಜಗದಿದಂತ್ರಾತುಂ ||

ಎಂಬ ಶ್ಲೋಕದಿಂದ ಗೊತ್ತಾಗುತ್ತದೆ. ಇದಲ್ಲದೆ ಶ್ರೀಸದಾಶಿವೇಂದ್ರಸರಸ್ವ ತಿಗಳು ತಾವು ಬರೆದಿರುವ 'ಯೋಗಸುಧಾಕರ' ಎಂಬ ಯೋಗಸೂತ್ರವೃತ್ತಿಯಲ್ಲಿ:—

ಶ್ರೀಮತ್ಪತಂಜಲೇಸ್ತಸ್ಯ ಪದದ್ವಂದ್ವಮನಿಂದಿತಂ
"ವಂದೇ ಯೇನ ಮನಃಕಾಯವಾಚಾಂಶುದ್ಧಿರಕಾರ್ಯಸೌ" ||

ಎಂದು ಹೇಳಿರುವುದರಿಂದಲೂ ನಿಶ್ಚಿತವಾಗುವುದು. ಅದರಂತೆ ವಾಕ್ಶುದ್ಧಿ ಗಾಗಿ ಅವರ ವ್ಯಾಕರಣಮಹಾಭಾಷ್ಯವೂ ಮನಶ್ಶುದ್ಧಿಗಾಗಿ ಯೋಗಶಾಸ್ತ್ರವೂ ಬರೆಯಲ್ಪಟ್ಟಿರುವುದು. ಇದರಂತೆ ಕಾಯಶುದ್ಧಿಗಾಗಿ ಅವರಿಂದ ಬರೆಯಲ್ಪಟ್ಟು ದಾದ ವೈದ್ಯಗ್ರಂಥವು ಇರಬೇಕೆಂಬುದರಲ್ಲಿ ಸಂಶಯವಿರದು. ಆದರೆ ಗ್ರಂಥವಾವು

ದೆಂಬುದು ತಿಳಿಯದು. ಈ ಭೋಜನೂ ಪತಂಜಲಿಯಂತೆ ಮೂರುವಿಧ ಗ್ರಂಥಗಳನ್ನು ಬರೆದಿರುವುದಾಗಿ ತಾನು ಬರೆದಿರುವ ಯೋಗಸೂತ್ರವೃತ್ತಿಯಲ್ಲಿ ಹೇಳಿ ಕೊಂಡಿರುವನು. ಅಲ್ಲದೆ, ತಾನು ಬರೆದಿರುವ ಯೋಗಸೂತ್ರವೃತ್ತಿಯನ್ನು 'ರಾಜಮಾರ್ತ್ತಾಂಡ' ಎಂದು ಕರೆದಿರುವನು. ಈ ಹೇಳಿಕೆಗೆ ಅನುಸಾರವಾಗಿ ಭೋಜರಾಜನ ಹೆಸರಿನ 'ರಾಜಮಾರ್ತ್ತಾಂಡ' ಎಂಬ ವೈದ್ಯಗ್ರಂಥವು ದೊರೆಯುವುದು. ಗ್ರಂಥಾರಂಭದಲ್ಲಿಯೂ, ಗ್ರಂಥಾಂತ್ಯದಲ್ಲಿಯೂ "ಶ್ರೀಮಹಾರಾಜಭೋಜರಾಜವಿರಚಿತೋ ರಾಜಮಾರ್ತ್ತಾಂಡಾಖ್ಯೋಯೋಗಸಂಗ್ರಹಃ" ಎಂದು ಹೇಳಲ್ಪಟ್ಟಿರುವುದರಿಂದ ಭೋಜನು ರಾಜಮಾರ್ತ್ತಾಂಡವೆಂಬ ವ್ಯಾಕರಣವನ್ನು ಬರೆದಿರಬೇಕೆಂದು ಊಹಿಸಿದರೆ ತಪ್ಪಾಗದು. ಆದರೆ ಭೋಜರಾಜನ ಹೆಸರಿನಲ್ಲಿ ಶಬ್ದಶಾಸ್ತ್ರಗ್ರಂಥವಾವುದೂ ಇದ್ದುದಾಗಿ ಕಂಡುಬರುವುದಿಲ್ಲ. ಒಂದೆ ಹೇಳಲ್ಪಟ್ಟಿರುವುದಾದ, "ಶಬ್ದಾನಾಮನುಶಾಸನಂ ..............ಜ್ಜ್ವಲಾಃ ಎಂಬ ಶ್ಲೋಕದಲ್ಲಿ ಕಂಡುಬರುವ ಶಬ್ದಾನುಶಾಸನವೆಂಬ ವ್ಯಾಕರಣವೇ ವಾಕ್ಯಶುದ್ಧಿಗಾಗಿ ಬರೆದುದೆನ್ನುವುದಾದರೆ ರಾಜಮಾರ್ತ್ತಾಂಡವೆಂಬ ಹೆಸರು ಅದಕ್ಕಿರುವುದೋ ಇಲ್ಲವೋ ಎಂಬುದನ್ನು ಗ್ರಂಥಪರಿಚಯವಿಲ್ಲದೆ ಹೇಳುವುದು ಸಾಧುವಾಗಿ ತೋರುವುದಿಲ್ಲ. ಹೀಗೆ ಹೇಳುವುದರಿಂದ ಅವನು ಇತರಗ್ರಂಥಗಳನ್ನು ಬರೆಯಲಿಲ್ಲವೆಂದು ಹೇಳುವ ಸಾಹಸಕ್ಕೆ ನಾವು ಹೋಗುವುದಿಲ್ಲ.

ಇದಲ್ಲದೆ ಮಾಳವದೇಶದ ಪರಮಾರವಂಶದಲ್ಲಿ ಭಿನ್ನ ಭಿನ್ನ ಕಾಲಗಳಲ್ಲಿ ಎಂದರೆ ಸುಮಾರು ಕ್ರಿ. ಶ. ೫೭೫ರಲ್ಲಿ, ಕ್ರಿ. ಶ ೬೬೫ರಲ್ಲಿ, ಕ್ರಿ. ಶ. ೧೦೪೪ರಲ್ಲಿ ಭೋಜರಾಜನೆಂಬುವರು ಮೂವರು ಆಳಿದುದಾಗಿಯೂ, ಅವರು ಪ್ರಸಿದ್ಧರೂ, ಯೋದ್ಧರೂ ಮತ್ತು ವಿದ್ಯಾವಿಲಾಸಿಗಳಾಗಿದ್ದುದಾಗಿಯೂ, ಇವರಲ್ಲಿ ರಾಜಮಾರ್ತಾಂಡಕಾರನಾದ ಭೋಜನಾರೆಂಬುದು ತಿಳಿಯದಾಗಿ: –

> "ಪ್ರಮಾರವಂಶೋದ್ಭೂತಾ ಭೋಜನಾಮಾನಸ್ತ್ರಯೋ.........ಪ್ರಸಿದ್ಧಾಃ ಪರಾಕ್ರಮಶಾಲಿನೋ ವಿದ್ಯಾವಿಲಾಸಿನಶ್ಚ । ತೇಷುಕತಮೋಯಂ ರಾಜಮಾರ್ತ್ತಾಂಡಪ್ರಣೇತಾ ಭೋಜ ಇತಿ ನಿರ್ಣೇತುಂ ನಕಿಂಚಿದಪಿಸಾಧನಮುಪಲಭೇ" ಎಂದು ಸಾಶಂಕರಾಗಿ ಹೇಳಿರುವುದು ಕಂಡುಬರುತ್ತದೆ.§

ಪ್ರಕೃತ ದೊರೆಯುವುವಾದ ಶಾಸನ, ಪ್ರಶಸ್ತಿ, ಮತ್ತು ಭೋಜನ ವಿಚಾರವಾಗಿ ಹೇಳುವ ಮುಖ್ಯಗ್ರಂಥಗಳಲ್ಲಿ ಇವನಿಗಿಂತ ಹಿಂದೆ ಆಳಿಹೋದ ಇಬ್ಬರು ಭೋಜರಾಜರಹೆಸರು ಇರುವಂತೆಲ್ಲಿಯೂ ಕಂಡುಬರುವುದಿಲ್ಲ. ಪರಮಾರ ಭೋಜವಂಶಾವಳಿಯು ಉಪೇಂದ್ರರಾಜ (ಕೃಷ್ಣರಾಜ) ನಿಂದಾರಂಭಿಸಲ್ಪಟ್ಟುದಾಗಿ ಭಿನ್ನ ಭಿನ್ನ

§ ತತ್ವಪ್ರಕಾಶದ ಮುನ್ನುಡಿ ಪುಟ ೧

ಗ್ರಂಥಗಳಲ್ಲಿ, ಶಾಸನ, ಪ್ರಶಸ್ತಿಗಳಲ್ಲಿ, ಕಂಡುಬರುವುದನ್ನು ಮೊದಲೇ ಹೇಳಿರುವೆವು. ಅದರಂತೆ ಭೋಜರಾಜನು ಮೊದಲನೆಯವನು ಹೊರ್ತು ಮೇಲೆ ಹೇಳಿರುವಂತೆ ಮೂರನೆಯವನಲ್ಲ. ಈ ಕಾರಣಗಳಿಂದ ತತ್ತ್ವಪ್ರಕಾಶದ ಮುನ್ನುಡಿಕಾರರ ಹೇಳಿಕೆಯು ಆದರಣೀಯವಾಗದು.

ರಾಜಮಾರ್ತಾಂಡವೆಂಬ ವೈದ್ಯಗ್ರಂಥಕರ್ತೃತ್ವವಿಚಾರವಾಗಿ ಇಷ್ಟು ಹೇಳಬಹುದಾಗಿದೆ:—

ಮುಖಪತ್ರದಲ್ಲಿ 'ಶ್ರೀಭೋಜಮಹಾರಾಜ ವಿರಚಿತೋ ರಾಜಮಾರ್ತಾಂಡಃ' ಎಂದೂ, ಗ್ರಂಥಾಂತ್ಯದಲ್ಲಿನ ಶ್ಲೋಕವು:—

ಸಮಸ್ತಸಾಧೋಸಧಿವೀಚಿಸಂಚಯ
ಪ್ರವರ್ತಿತಾಂದೋಳನ ಕೇಳಿಕೀರ್ತಿನಾ
ಪ್ರಕಾಶಿತೋ ಭೋಜನೃಪೇಣ ದೇಹಿನಾಂ
ಹಿತಾಯ ನಾನಾವಿಧಯೋಗಸಂಗ್ರಹಃ ||

ಎಂದಿರುವುದರಿಂದಲೂ, 'ಶ್ರೀ ಮಹಾರಾಜಭೋಜರಾಜ ವಿರಚಿತೋ ರಾಜಮಾರ್ತಾಂಡನಾಮಾ' ಎಂಬ ಗದ್ಯದಿಂದಲೂ ಈ ಭೋಜರಾಜನೇ ಬರೆದುದೆಂದು ಸ್ಪಷ್ಟವಾಗುತ್ತದೆ. ರಾಜಮಾರ್ತಾಂಡವೆಂಬ ಯೋಗಸೂತ್ರ ವೃತ್ತಿಯನ್ನು ಬರೆದಿರುವುದರ ವಿಚಾರವಾಗಿ,

ಉತ್ಸೃಜ್ಯ ವಿಸ್ತರಮುದಸ್ಯ ವಿಕಲ್ಪಜಾಲಂ
ಫಲ್ಗುಪ್ರಕಾಶಮವಧಾರ್ಯ ಚ ಸಮ್ಯಗರ್ಥಾನ್
ಅಂತಃ ಪತಂಜಲಿಮುನೇಃ ವಿವೃತಿರ್ಮಯೇಽಯಂ
ಆತನ್ಯತೇ ಬುಧಜನಪ್ರತಿಬೋಧಹೇತುಃ || ಅಥ ಯೋಗಾನುಶಾಸನಂ ||೧||

ಅನೇನಸೂತ್ರೇಣ ಶಾಸ್ತ್ರಸ್ಯ ಸಂಬಂಧಾಭಿಧೇಯ ಪ್ರಯೋಜನಾನಿ ಆಖ್ಯಾಯಂತೇ .... ... .... ....ಎಂದೂ, ಗ್ರಂಥಾಂತ್ಯದಲ್ಲಿಃ—

ಸರ್ವೇಯಸ್ಯ ಯಶಃಪ್ರತಾಪವಸತೇಃ ಪಾದಾಂತಸೇವಾಸತಿ
ಪ್ರಭ್ರಶ್ಯನ್ಮಕುಟೇಷು ಮೂರ್ಧಸು ದಧತ್ಯಾಜ್ಞಾಂ ಧರಿತ್ರೀಭೃತಃ
ಯದ್ವಕ್ತ್ರಾಬ್ಜಮವಾಪ್ಯ ಸರ್ವಮಸಮಂ ವಾಗ್ದೇವತಾಪಿಶ್ರಿತಾ
ಸಃ ಶ್ರೀಭೋಜ ಮಹೀಪತಿಃ ಫಣಿಪತೇಃ ಸೂತ್ರೇಷುವೃತ್ತಿಂ ವ್ಯಧಾತ್ ||

'ಇತಿ ಶ್ರೀಮಹಾರಾಜಾಧಿರಾಜ ಶ್ರೀಭೋಜದೇವವಿರಚಿತಾಯಾಂ ರಾಜಮಾರ್ತಾಂಡಾಭಿಧಾಯಾಂ ಪತಂಜಲಯೋಗಶಾಸ್ತ್ರವೃತ್ತೌ ಕೈವಲ್ಯಪಾದಶ್ಚತುರ್ಥಃ' ಎಂದು ಹೇಳಲ್ಪಟ್ಟಿರುವುದರಿಂದ ಹಿಂದೆ ಸೂಚಿತವಾಗಿರುವ ಈ ಭೋಜನೇ ಧಾರಾ

ನಗರೇಶ್ವರನೆಂದೂ, ಇವನೇ ಇದರ ಕರ್ತೃವೆಂದೂ, ಅನ್ಯಭೋಜರಾರೂ ಪರಮಾರ ವಂಶಾವಳಿಯಲ್ಲಿ ಕಂಡುಬರದೆ ಇರುವುದರಿಂದ ಇವನ ಹೊರ್ತು ಮತ್ತಾರೂ ಅಲ್ಲ ವೆಂದು ಸ್ಪಷ್ಟವಾಗುತ್ತದೆ.

(೩) ತತ್ತ್ವಪ್ರಕಾಶ:—ಇದನ್ನೂ ಭೋಜದೇವನು ಬರೆದುದಾಗಿ.—

ಯಸ್ಯಾಖಿಲಂ ಕರತಲಾಮಲಕಕ್ರಮೇಣ
ದೇವಸ್ಯ ವಿಸ್ಫುರತಿ ಚೇತಸಿ ತತ್ತ್ವಜಾತಂ
ಶ್ರೀಭೋಜದೇವನೃಪತಿಃ ಸ ಶಿವಾಗಮಾರ್ಥ
ತತ್ತ್ವಪ್ರಕಾಶಮಸಮಾನಮಿದಂ ವ್ಯಧತ್ತ ||

ಎಂಬ ಗ್ರಂಥಾಂತ್ಯಶ್ಲೋಕದಿಂದ ತಿಳಿಯಬರುತ್ತದೆ. ಇದರಲ್ಲಿ ೬ ಪರಿಚ್ಛೇದ ಗಳಿರುವು. ಇದರಲ್ಲಿ ಧಾರಾನಗರದ ಭೋಜರಾಜನೆಂದು ಸ್ಪಷ್ಟವಾಗಿ ಹೇಳದಿದ್ದರೂ ಶೈವಸಂಪ್ರದಾಯ ಪ್ರವರ್ತಕನಾದ ಈತನೇ ಬರೆದಿರಬಹುದಾದ ಊಹೆಯು ನ್ಯೂನತೆಯಾಗದು. ಇದಕ್ಕೆ ಶ್ರೀಕುಮಾರನೆಂಬವನು 'ತಾತ್ಪರ್ಯ ದೀಪಿಕಾ' ಎಂಬ ವ್ಯಾಖ್ಯಾನವನ್ನು ಬರೆದಿರುವುದಾಗಿ "ಇತಿ ಭಾರದ್ವಾಜ ಕುಲಾಲಂಕರಣಭೂತೇನ ಶಂಕರಸೂನುನಾವಿಧಿವಿಹಿತ ಸೋಮರಸಾಸ್ವಾದನ ಪರಿತೋಷಿತಾ ಶಿವಾಂಘ್ರಿ ಕಮಲದ್ವಯಾಸಕ್ತ ಮಧುಕರಾಯಮಾಣ ಮಾನಸೇನ ಶ್ರೀಮತಾಶ್ರೀಕುಮಾರೇಣ ರಚಿತಾ ತತ್ತ್ವಪ್ರಕಾಶ ತಾತ್ಪರ್ಯದೀಪಿಕಾ ಪರಿಪೂರ್ಣಾ" ಎಂಬ ಗ್ರಂಥಾಂತ್ಯ ಗದ್ಯ ದಿಂದ ತಿಳಿಯಬರುತ್ತದೆ. ಗ್ರಂಥವಿಷಯವು ಸುಲಭವಾಗಿಯೂ ಶೈವತತ್ತ್ವನಿರ್ಣಯ ಬೋಧಕವಾಗಿಯೂ ಆಪಾತತಃ ರಮಣೀಯವಾಗಿರುವುದರಿಂದ ಇದಕ್ಕೆ ತತ್ತ್ವ ಪ್ರಕಾಶವೆಂಬ ಹೆಸರು ಸಲ್ಲುತ್ತದೆ. ಇದರ ಒಂದು ಶ್ಲೋಕವನ್ನು ಮಾದರಿಗಾಗಿ ಬರೆಯುವೆವು.

ಕರ್ಮಾನಾದಿಪ್ರೋಕ್ತಂ ಧರ್ಮಾಧರ್ಮಾತ್ಮಕಂ ವಿಚಿತ್ರಂಚ
ಮಾಯಾಚವಸ್ತುರೂಪಾ ಮೂಲಂವಿಶ್ವಸ್ಯ ನಿತ್ಯಾ ಸಾ ||
ತತ್ತ್ವಪ್ರಕಾಶ ೧—೧೮.

(೪) ಸರಸ್ವತೀಕಂಠಾಭರಣ:—ಇದು ಅಲಂಕಾರ ಗ್ರಂಥ. ಇದರಲ್ಲಿ ೫ ಪರಿ ಚ್ಛೇದಗಳಿರುವುವು. ಇದಕ್ಕೆ ರತ್ನೇಶ್ವರನೆಂಬುವನು 'ದರ್ಪಣ' ಎಂಬ ವ್ಯಾಖ್ಯಾನ ವನ್ನೂ' ಹರಿನಾಥನು 'ಮಾರ್ಗಣ' ಎಂಬ ವ್ಯಾಖ್ಯಾನವನ್ನೂ ಲಕ್ಷ್ಮೀನಾಥಭಟ್ಟ ನೆಂಬವನು 'ದುಷ್ಕರಚಿತ್ರಪ್ರಕಾಶಿಕಾ' ಎಂಬ ವ್ಯಾಖ್ಯಾನವನ್ನೂ ಬರೆದಿರುವುವಲ್ಲದೆ ಜಗದ್ಧರನೂ ಮತ್ತು ಹರಿಕೃಷ್ಣವ್ಯಾಸನೂ ಟೀಕೆಯನ್ನು ಬರೆದಿರುವರು$ ಗ್ರಂಥದ ಮುಖಪತ್ರದಲ್ಲಿ ಸಂಶಯಕ್ಕೆ ಆಸ್ಪದವಿಲ್ಲದಂತೆ "ಧಾರೇಶ್ವರ ಶ್ರೀಭೋಜದೇವ ವಿರ

$ S. K De's History of Sanskrit poetics Vol I P. 144

ಚಿತಂ ಸರಸ್ವತೀ ಕಂಠಾಭರಣಂ" ಎಂದೂ ಗ್ರಂಥಾಂತ್ಯದಲ್ಲಿ "ಇತಿ ಶ್ರೀಮಹಾ ರಾಜಾಧಿರಾಜ ಶ್ರೀ ಭೋಜದೇವವಿರಚಿತೇ ಸರಸ್ವತೀ ಕಂಠಾಭರಣಾಲಂಕಾರೇ" ಎಂದು ಹೇಳಿ ಮುಗಿಸಲ್ಪಟ್ಟಿರುವುದು.

ಧ್ವನಿರ್ವರ್ಣಾಃಪದಂವಾಕ್ಯಮಿತ್ಯಾಸ್ಪದಚತುಷ್ಟಯಂ
ಯಸ್ಯಾಸ್ಸೂಕ್ಷ್ಮಾದಿಭೇದೇನ ವಾಗ್ದೇವೀಂತಾಮುಪಾಸ್ಮಹೆ ||

ಎಂಬ ಮಂಗಳಾಚರಣದಲ್ಲಿಯೇ ತನ್ನ ಗ್ರಂಥೋದ್ದೇಶವನ್ನು ಸೂಚಿಸಿ ಸಾಧಿಸಿರುವನು.

(೫) ಶೃಂಗಾರಪ್ರಕಾಶ:—ಸರಸ್ವತೀಕಂಠಾಭರಣ ಕಾರನಾದ ಭೋಜನೇ ಇದನ್ನೂ ಬರೆದುದಾಗಿದೆ. ಇದು ಲಕ್ಷಣಗ್ರಂಥ. ಇದರಲ್ಲಿ ೩೬ ಭಾಗಗಳಿರುವುವು. ಇದಕ್ಕಿಂತ ದೊಡ್ಡದಾದ ಅಲಂಕಾರಗ್ರಂಥವು ಇದುವರೆಗೆ ಯಾವುದೂ ದೊರೆತಿರುವುದಿಲ್ಲ. ಇದರಲ್ಲಿ ೧-೮ರ ವರೆಗೆ ವ್ಯಾಕರಣ ವಿಚಾರವೂ ೯-೧೦ ದೋಷಗಳ ವಿಚಾರವೂ ೧೧ ೧೨ ಮಹಾಕಾವ್ಯಲಕ್ಷಣ, ರೂಪಕ ವಿಚಾರಗಳೂ, ಉಳಿದ ೨೪ ಭಾಗಗಳಲ್ಲಿ ರಸವಿವೇಚನೆಯೂ ಮಾಡಲ್ಪಟ್ಟಿರುವುದಲ್ಲದೆ ಶೃಂಗಾರರಸದ ವಿಚಾರವಾಗಿ ಹೆಚ್ಚಾಗಿ ಹೇಳಲ್ಪಟ್ಟಿರುವುದರಿಂದ ಈ ಗ್ರಂಥಕ್ಕೆ ಶೃಂಗಾರಪ್ರಕಾಶವೆಂಬ ಹೆಸರೇ ಕೊಡಲ್ಪಟ್ಟಿದೆ. ಶಾರದಾ ತನಯನು ಬರೆದುದಾದ ಭಾವಪ್ರಕಾಶವು ಭೋಜನಿಂದ ಬರೆಯಲ್ಪಟ್ಟುವಾದ ಲಕ್ಷಣಗ್ರಂಥಗಳ ಸಾರಾಂಶ ಮಾತ್ರ

ಭೋಜನು ಸರಸ್ವತೀಕಂಠಾಭರಣ ಎಂಬೊಂದು ಸಂಸ್ಕೃತ ಪಾಠಶಾಲೆಯೊಂದನ್ನೂ, ಬಾವಿಯೊಂದನ್ನೂ ಕಟ್ಟಿಸಿದುದಾಗಿ ಹೇಳಲ್ಪಟ್ಟಿದೆ.†

ಇವನು ತನ್ನ ಹೆಸರಿನಲ್ಲಿ ಭೋಜಸಾಗರವೆಂಬ ವಿಶಾಲಕಾಸಾರವನ್ನು ಕಟ್ಟಿಸಿದನು. ಇದು ೨೫೦ ಚದುರ ಮೈಲಿಗಳ ವಿಶಾಲತೆಯನ್ನೊಳಗೊಂಡು ಭೂಪಾಲ ಸಂಸ್ಥಾನದ ಆಗ್ನೇಯ ದಿಕ್ಕಿನಲ್ಲಿದ್ದು ಕ್ರಿ. ಶ. ೧೫ನೆಯ ಶತಮಾನದವರೆಗೆ ಆಗಣ ಕಲಾನೈಪುಣ್ಯವನ್ನು ಜಗತ್ತಿಗೆ ಸಾರುತ್ತ ಲೋಕವನ್ನು ಬೆಡಗುಗೊಳಿಸುತ್ತಿದ್ದಿತು.‡

ಲೋಕಬೋಧಕವಾದ ಮಹಾರಾಜಾಧಿರಾಜ ಭೋಜರಾಜನ ದಾನಪತ್ರದ ಶ್ಲೋಕಗಳೆರಡನ್ನು ಬರೆದುಮುಗಿಸುವೆವು.

ವಾತಾಭ್ರವಿಭ್ರಮಮಿದಂ ವಸುಧಾಧಿಪತ್ಯ
ಮಾಪಾತಮಾತ್ರಮಧುರೋ ವಿಷಯೋಪಭೋಗಃ

* Sanskrit Poetics Vol. I P. 144.

† ಸರಸ್ವತೀ ಕಂಠಾಭರಣದ ಮುನ್ನುಡಿ ಪುಟ ೧೮.

‡ Vincent Smith's Early History of India P 396.

ಪ್ರಾಣಾಸ್ತೃಣಾಗ್ರಜಲಬಿಂದು ಸಮಾ ನರಾಣಾಂ
ಧರ್ಮಸ್ಸಖಾಪರಮಹೋ ಪರಲೋಕಯಾನೇ ||

ಈ ಪ್ರಭುತ್ವವಾದರೋ ಮಹಾವಾಯುಪಥದಲ್ಲಿರುವ ಮೇಘಶೋಭೆಯಂತೆ ಕೇವಲ ಅಸ್ಥಿರವಾದುದು. ವಿಷಯಸುಖಗಳಾದರೋ ತತ್ತತ್ಕಾಲದಲ್ಲಿ ಮಾತ್ರವೇ ರುಚಿಸತಕ್ಕದಾಗಿರುವುದು. ಪ್ರಾಣಗಳಾದರೋ ತೃಣಾಗ್ರಜಲಬಿಂದುವಿನಂತೆ ಕ್ಷಣಿಕಗಳು. ಅಹೋ! ಮೋಕ್ಷೇಚ್ಛುಗಳಿಗೆ ಪರಲೋಕಸಾಧನಕ್ಕೆ ಧರ್ಮವೆಂಬ ಸ್ನೇಹಿತನು ಹೊರ್ತು ಮತ್ತಾವುದೂ ಇಲ್ಲ.

ಭ್ರಮತ್ಸಂಸಾರಚಕ್ರಾಗ್ರ
ಧಾರಾಧಾರಾಮಿಮಾಂಶ್ರಿಯಂ
ಪ್ರಾಪ್ಯಯೇನದದುಸ್ತೇಷಾಂ
ಪಶ್ಚಾತ್ತಾಪಃಪರಂಫಲಂ ||

ಗಿರ್ರನೆ ತಿರುಗುತ್ತಿರುವ ಈ ಭವಸಂಸಾರಚಕ್ರದಲ್ಲಿ ಐಶ್ವರ್ಯವುಳ್ಳವನು ಪಾತ್ರವರಿತು ದಾನಮಾಡದೇ ಹೋದಲ್ಲ ಅಂತಹವನಿಗೆ ಕೊನೆಯಲ್ಲಿ ಪಶ್ಚಾತ್ತಾಪ ಪಡುವುದೇ ಫಲವಾಗಿರುವುದು.



## ಧ ನ ಪಾ ಲ

ಆಸೀದ್ದ್ವಿಜನ್ಮಾಖಿಲ**ಮಧ್ಯದೇಶೇ** ಪ್ರಕಾಶಶಾಂಕಾಶ್ಯನಿವೇಶಜನ್ಮಾ
ಅಲಬ್ಧದೇವರ್ಷಿರಿತಿ ಪ್ರಸಿದ್ಧಿಂ ಯೋದಾನವರ್ಷಿತ್ವವಿಭೂಷಿತೋಽಪಿ ||
ಶಾಸ್ತ್ರೇಷ್ವಧೀತೀಕುಶಲಃ ಕಲಾಸು ಬಂಧೇಚಬೋಧೇಚ ಗಿರಾಂಪ್ರಕೃಷ್ಟಃ
ತಸ್ಯಾತ್ಮಜನ್ಮಾ ಸಮಭೂನ್ಮಹಾತ್ಮಾ ದೇವಃಸ್ವಯಂಭೂರಿವ**ಸರ್ವದೇವಃ**
ತಜ್ಜನ್ಮಾ ಜನಕಾಂಘ್ರಿಪಂಕಜರಜಃಸೇವಾಪ್ತವಿದ್ಯಾಲವೋ
ವಿಪ್ರಃ **ಶ್ರೀಧನಪಾಲ** ಇತ್ಯವಿಶದಾಮೇತಾಮಬಧ್ನಾತ್ಕಥಾಂ" *

ಎಂಬುದರಿಂದಲೂ "ಪುರಾಪ್ರಸಿದ್ಧವಿಶಾಲಾಯಾಂ ವಿಶಾಲಾಯಾಂಪುರಿ ಮಧ್ಯದೇಶ§ಜನ್ಮಾಕಾಶ್ಯಪಗೋತ್ರಃ ಸರ್ವದೇವನಾಮಾದ್ವಿಜಃ" ಎಂದು ಹೇಳುವ ಪ್ರಬಂಧ ಚಿಂತಾಮಣಿಯಿಂದಲೂ.

* ತಿಲಕಮಂಜರೀ ಪುಟ ೬ ಶ್ಲೋ ೫೧, ೫೨, ೫೩.

§ ಉತ್ತರಕ್ಕೆ ಹಿಮಾಲಯ ದಕ್ಷಿಣಕ್ಕೆ ವಿಂಧ್ಯ ಪಶ್ಚಿಮಕ್ಕೆ ವಿನಾಶಿನಿ, ಪೂರ್ವಕ್ಕೆ ಪ್ರಯಾಗ ಈ ಮಧ್ಯದ ಪ್ರದೇಶಕ್ಕೆ ಮಧ್ಯದೇಶವೆಂದು ಹೆಸರು.

ಸವಃಪಾತುಜಿನಃಕೃತ್ಸ್ನವಿನಾಕ್ಷ್ತೇಯಃ ಪ್ರತಿಕ್ಷಣಂ
ರೂಪೈರನಂತೈಕೇಕ ಜಂತೋರ್ವ್ಯಾಪ್ತಂಜಗತ್ತ್ರಯಂ ||

ಎಂಬ ಮಂಗಳಾಚರಣದಿಂದ ಇವನು ಜೈನಬ್ರಾಹ್ಮಣನು. ಮಧ್ಯದೇಶಕ್ಕೆ ಸೇರಿದ ವಿಶಾಲನಗರದವನು. ಕಾಶ್ಯಪಗೋತ್ರದವನು, ಸರ್ವದೇವನ ಮಗನೆಂಬುದು$ ಸ್ಪಷ್ಟವಾಗುತ್ತದೆ, ಇವನು ಸಕಲಶಾಸ್ತ್ರಾರ್ಥಗಳನ್ನು ತಂದೆಯ ಬಳಿಯಲ್ಲಿ ಕಲಿತು ಧಾರಾನಗರಾಧಿನಾಥನಾದ ಮುಂಜರಾಜನಿಂದ 'ಸರಸ್ವತಿ 'ಎಂಬ ಬಿರುದನ್ನು ಹೊಂದಿದುದಾಗಿ.—

ಅಳ್ಪಿಷ್ಠೋಽಪಿ ವಿವಿಕ್ತಸೂಕ್ತಿ ರಚನೇಯಃ ಸರ್ವವಿದ್ಯಾಬ್ಧಿನಾ
ಶ್ರೀಮುಂಜೇನ **ಸರಸ್ವತೀತಿ** ಸದಸಿಕ್ಷೋಣೀಭೃತಾವ್ಯಾಹೃತಃ ‡

ಎಂಬುದರಿಂದ ತಿಳಿಯಬರುತ್ತದೆ. ಇವನು ಕಾಲಕ್ರಮದಲ್ಲಿ ಭೋಜರಾಜನ ಸಭಾಪಂಡಿತನಾಗಿ "ಮಹಾಕವಿ" ಎನಿಸಿಕೊಂಡನು.

**ಕಾಲ:**—ಇವನು ಮುಂಜನ ಆಸ್ಥಾನದಲ್ಲಿದ್ದು ಭೋಜನ ಸಭಾಮಂಡನಾಯಮಾನನಾಗಿದ್ದುದರಿಂದ ಇವನನ್ನು ಕ್ರಿ. ಶ. ಹನ್ನೊಂದನೆಯ ಶತಮಾನದವನೆನಬೇಕಾಗುವುದು.

**ಗ್ರಂಥಗಳು:**—(೧) ತಿಲಕಮಂಜರೀ (೨) ಋಷಭಪಂಚಾಶಿಕಾ. ಇವುಗಳಲ್ಲಿ ತಿಲಕಮಂಜರೀಯೆಂಬುದು ದೊಡ್ಡಕಾವ್ಯ. ಋಷಭಪಂಚಾಶಿಕೆಯು ೫೦ ಶ್ಲೋಕಗಳಿಂದಕೂಡಿರುವ ಪ್ರಾಕೃತನಿಬದ್ಧ ಗ್ರಂಥ.

ಜಿನಾಗಮ ಕಥೆಗಳನ್ನು ತಿಳಿಯಬೇಕೆಂಬ ಕುತೂಹಲಚಿತ್ತನಾದ ಭೋಜರಾಜನಿಗೋಸ್ಕರ 'ತಿಲಕಮಂಜರೀ' ಎಂಬ ಕಾವ್ಯವನ್ನು ಬರೆದುದಾಗಿ.—

ನಿಶ್ಶೇಷವಾಙ್ಮಯವಿದೋಽಪಿ ಜಿನಾಗಮೋಕ್ತಾಃ
ಶ್ರೋತುಂಕಥಾಃ ಸಮುಪಜಾತಕುತೂಹಲಸ್ಯ
ತಸ್ಯಾವದಾತಚರಿತಸ್ಯ ವಿನೋದಹೇತೋಃ
ರಾಜ್ಞಃ ಸ್ಫುಟಾದ್ಭುತರಸಾರಚಿತಾಕಥೇಯಂ ||

ಎಂಬ ಶ್ಲೋಕದಿಂದ ವ್ಯಕ್ತವಾಗುತ್ತದೆ. ತಿಲಕಮಂಜರಿಯು ಕೆಲವು ಭಾಗಗಳು ಬಾಣನ ಕಾದಂಬರಿಯನ್ನು ಹೋಲುವುವಾದರೂ, ಶೈಲಿಯು ಪೇಶಲವಾಗಿರದೆ

$ ಮೇರುತುಂಗಾಚಾರ್ಯನು ತನ್ನ ಗ್ರಂಥದಲ್ಲಿ ಧನಪಾಲ, ಶೋಭನರೆಂಬ ಸೋದರದ್ವಯವನ್ನು ಸಾಧಿಸಿರುವನು. ಹಾಗೆ ಇದ್ದುದಾಗಿದ್ದರೆ ಧನಪಾಲನು ತಿಲಕಮಂಜರಿಯಲ್ಲಿ ಬರೆಯದೇ ಇರುತ್ತಿರಲಿಲ್ಲ.

‡ ತಿಲಕಮಂಜರೀ ಪುಟ ೬ ಶ್ಲೋಕ ೫೩

ಮೇಲೆ ಹೇಳಿದ ಪ್ರತಿಜ್ಞೆಯಂತೆ ಅಲ್ಲಲ್ಲಿ ಅದ್ಭುತರಸಗಳೊಡನೆ ಕೂಡಿರುವುದಾದರೂ, ಕೆಲವು ಭಾಗಗಳು ರಸಯುಕ್ತವಾಗಿಯೂ ರಮಣೀಯವಾಗಿಯೂ ಇರುವುವು.

ಅಯೋಧ್ಯಾಧಿಪನಾದ ಮೇಘವಾಹನನಿಗೆ ಮದಿರಾವತಿ ಎಂಬ ಹೆಂಡತಿ. ಬಹುಕಾಲಾನಂತರ ಇವರಿರ್ವರಿಗೆ ಹರಿವಾಹನನೆಂಬ ಮಗನು ಜನ್ಮಿಸಿದಂತೆಯೂ ಕಾಲಕ್ರಮದಲ್ಲಿ ಯೌವನಸಂಪನ್ನನಾದ ಇವನಿಗೂ ವಿದ್ಯಾಧರಕನ್ಯೆಯಾದ ತಿಲಕಮಂಜರಿಗೂ ವಿವಾಹವು ನಡೆದು ಪರಸ್ಪರಾನುರಾಗವರ್ತಿಗಳಾಗಿ ಸುಖದಿಂದ ಇದ್ದರೆಂಬುದು ಕಥಾವಸ್ತು.

ಇದರಲ್ಲಿ ವೈತಾಳಿಕನು ಹೇಳುವ ಪ್ರಭಾತಾರಂಭವರ್ಣನವು ಹೀಗಿರುವುದು:—

ಗೇಹಾದೇವ್ಯಾಃ ಸುಷಿರನಿಪತನ್ಮಾರುತೋತ್ಥಾನವೇಣೌ
ಧೃತ್ವಾ ಕೋಣಂ ವಿರಚಿತಲಯೋ ವಾದಯನ್ ದಂತವೀಣಾಂ
ರಾತ್ರೌ ದ್ವಿತ್ರೈಃ ಸಹ ಸಹಚರೈಃ ಸೇವತೇ ತ್ವದ್ದ್ವಿಪಕ್ಷೈಃ
ಕಿಂ ಸಂಗೀತಂ ನಹಿ ನಹಿ ಮಹೀನಾಥ ಹೇಮಂತ ಶೀತಂ ||
ಇಯಂ ಪ್ರ್ಯೋಮಾಂಭೋಧೇಸ್ತಟಮಿವ ಜವಾತ್ಪ್ರಾಪ್ಯ ತಪನಂ
ನಿಶಾನ್ವೈರ್ವಿಶ್ಲಿಷ್ಯದ್ಘನ ಘಟಿತ ಕಾಷ್ಠಾ ವಿಘಟಿತೇ
ಅಸಾವಸ್ತಾಮೂಲತ್ರುಟಿತಕರಸಂತಾನತನಿಕಃ
ಪ್ರಯಾತ್ಯಸ್ತಂ ಸ್ರಸ್ತಃ ಶಿತಪಟ ಇವ ಶ್ವೇತಕಿರಣಃ ||
ಭವತ್ಯಾವಿರ್ಭಾವಃ ಶಿಖರಪರಿಪಾಟ್ಯಾ ಶಿಖರಿಣಾಂ
ವನಾನಾಂ ವೃಕ್ಷಶ್ರೀರಕಲಿತವಿವೇಕಾ ವಿಕಸತಿ
ಸಸೀಮಾಸಗ್ರಾಮಾಸನಗರ ಸರಿದ್ದ್ವೀಪವಲಯಾ
ತಮಿಸ್ರಾ ದುಸ್ಮಜ್ಜತ್ಯುದಧಿಜಲಮಧ್ಯಾದಿವ ಮಹೀ ||
ಯಥಾ ಸ್ಥೂಲಂ ಮೂಲೇsವತರತಿ ದೃಶಾಮರ್ಧನಿಕರೋ
ಯಥಾ ಸೂಕ್ಷ್ಮಂ ಲಕ್ಷ್ಮೀಂ ತ್ಯಜತಿ ವಿಧುರಸ್ತಾರಕಗಣಃ
ಯಥಾ ವೃದ್ಧಂಬಂಧಃ ಕಮಲಮುಕುಲಾನಾಂ ವಿಘಟತೇ
ಯಥಾ ನಿಮ್ನಂ ಭೂಮ್ನಾ ರಚಯತಿ ಪದಂ ಧ್ವಾಂತನಿಚಯಃ ||
ಅಯಂ ವಾರಸ್ತ್ರೀಣಾಂ ಸುರತವಿಧಿವೈಜಾತ್ಯ ಪಿಶುನ
ಸ್ತಿರೋಧತ್ತೇ ಕಾಂಚಿಧ್ವನಿಬಹಲಿತಃ ಕಂರನಿನದಃ ||
ಅಸಾವಸ್ತಾವೃತ್ತಿಪ್ರಸೃತರವರೇಖಾವಿಲಿಖಿತೈ
ರ್ಗಲಚ್ಛಿದ್ರೈರ್ನಿದ್ರಾಂ ವ್ರಜತಿ ರತಿಪಾರಾವತಗಣಃ ||
ಅವಶ್ಯಾಯಸ್ಪಂದೈ ರಭಸರತನಿಷ್ಪಂದವಪುಷಾಂ
ವಿಲಾಸಿದ್ವಂದ್ವಾನಾಂ ದ್ರುತನಿಬಿಡಿತಾಶ್ಲೇಷವಿಧಯಃ
ವಿಶಂಕೋ ಮೌಖರ್ಯಂ ಭವನವಲಭೀಜಾಲಕಭುವಾಂ
ಧುತಕ್ರೀಡೋದ್ಯಾನದ್ರುಮವಿತತಯೋ ವಾಂತಿ ಮರುತಃ ||

ಪ್ರಭಾತಪ್ರಾಯಾಸೌ ರಜನಿರರುಣಜ್ಯೋತಿರರುಣಂ
ರುಣದ್ಧೀದಂ ರೋದೋ ದಿಶಿದಿಶಿ ತಮಸ್ತಾಮ್ಯತಿತಮಾಂ
ಪ್ರಭಾಚ್ಛಿದ್ರಶ್ಚಂದ್ರೋ ದಲತಿ ದಲವೈತ್ರೀ ಜಲರುಹಾಂ
ರಹೋಽನುತ್ಸಾಹಸ್ಯ ಶ್ಲಥಯ ನೃಪ ನಿದ್ರಾಸುಖರಸಂ ॥*

ತಿಲಕಮಂಜರಿಯು ಹರಿವಾಹನನಿಗೆ ಬರೆದ ವಿಜ್ಞಾಪನಾ ಪತ್ರಿಕೆಯು ಇಂತಿರುವುದು:—

"ಸ್ವಸ್ತಿ ಏಕಶೃಂಗಾಚಲಕ್ಷತಾವಾಸಂ ಮಹಾರಾಜಪುತ್ರ ಶ್ರೀ ಹರಿವಾಹನ ಮುದೀರ್ಣದುರ್ವಾರದುಃಖಾತಿಲಕಮಂಜರೀ ದೂರಾನತೇನ ಮೂರ್ಧ್ನಾ ಪ್ರಣಮ್ಯ ವಿಜ್ಞಾಪಯತಿ: —

ಆಶ್ಲಿಷ್ಯ ಕಂಠಮಮುನಾ ಮುಕ್ತಾಹಾರೇಣ ಹೃದಿನಿವಿಷ್ಟೇನ
ಸ ರುಷೇವ ವಾರಿತೋಮೇ ತ್ವದುರಃ ಪರಿರಂಭಣಾರಂಭಃ ॥§

ಗದ್ಯದಮಾದರಿ:—

"ಅಥಪಲ್ಲವಾಂತರಾಲಪಾತಿಭಿರುದ್ವೇಲ್ಲಿತಾರವಿಂದಿನೀದಲಕಲಾಪೈರುಲ್ಲಸಿತಾಂಬುರುಹ ಪರಾಗರಾಶಿಭಿರುತ್ಸಂಗಿತತರಂಗಶಿಖರಶೀಕರಸಾರೈಃ ಸರಲೀಕೃತ ಸಾರಸಕ್ರೇಂಕಾರವಿರುತಿಭಿಃ ಸೌರಭಾಹೃತ ಭ್ರಮರೀನಿಕರಹ್ಯಂಕಾರ ಮನೋಹರೈಃ ಸಂತಾಪಹಾರಿಭಿಃ ಸರಃ ಸಮೀರೈಃ ಸರಭಸಪರಿರಭ್ಯ ಮಾಣಸರ್ವಾಂಗಃ ಪ್ರಭೂತಕಾಲ ಪರಿಹೃತದರ್ಶನಾಯ ಪ್ರಸ್ತುತಪರಿಹಾಸಯೇವ ಕುತೋಽಪ್ಯಾಗತನಿದ್ರಯಾ ಮುದ್ರಿತನಯನಯುಗಳಃ ಸ್ವಪ್ನೇ ರಸಾತಲಾತ್ತತ್ಕ್ಷದಲಮೇವೋದ್ಗತಮನೇಕ ಪುಷ್ಪಸ್ತಬಕಸಂಬಾಧ ವಿಟಪಚ್ಛನ್ನಮಚ್ಛಿನ್ನಸಂತಾನ ಮಧುಕರಸಹಸ್ರೋಪಸೇವಿತ ಮುತ್ಫುಲ್ಲ ವಲ್ಲೀ ನಿಕರಪರಿಕರಿತಯಾ ಕಿಂಚಿವಾಸನ್ನವರ್ತಿನ್ಯಾಪರಿಮ್ಲಾನಸಕಲಾವಯವಯಾಪಿಪ್ರತಿಕಾಲೋಸ್ಮೀಲದಧಿಕಾಧಿಕಸೌಕುಮಾರ್ಯಾ ಮಂಗಲ ಲಕ್ಷ್ಮೀ ಮುದ್ವಹಂತ್ಯಾಭಿನವಕಲ್ಪಲತಯಾ ಸಮಾಹಿತಾಶ್ಲೇಷಮಾಪತ್ಯಾಭಿಮಾಯಾತಂ ಪಾರಿಜಾತದ್ರುಮಮದ್ರಾಕ್ಷೀತ್ ॥§

---

* ತಿಲಕಮಂಜರೀ ಪುಟ ೨೯೩.

§ Ibid ಪುಟ ೩೨೪.

§ Ibid ಪುಟ ೧೬೪—೧೬೯.

# ಮ ಮ್ಮ ಟ

ಇವನನ್ನು ರಾಜಾನಕ ಮಮ್ಮಟನೆಂದೂ ಕರೆಯುವುದುಂಟು. ಇವನು ಕಾಶ್ಮೀರದವನು. ಕಾವ್ಯಪ್ರಕಾಶಕ್ಕೆ ವ್ಯಾಖ್ಯಾನಕಾರರಲ್ಲೊಬ್ಬನಾದ ಭೀಮಸೇನನು ಮಮ್ಮಟನು ಜಯ್ಯಟನ ಮಗನೆಂದೂ ಇವನಿಗೆ ಕಯ್ಯಟ ಮತ್ತು ಉವ್ವಟರೆಂಬ ಇಬ್ಬರು ಸೋದರರು ಇದ್ದರೆಂದೂ, ಉವ್ವಟನು ವೇದಗ್ರಂಥಗಳನೇಕಗಳಿಗೆ ವ್ಯಾಖ್ಯಾತೃವೆಂದೂ ಹೇಳಿರುವುದಲ್ಲದೆ, ಅವಂತಿಯಲ್ಲಿ ಭೋಜರಾಜನ ಆಳ್ವಿಕೆಯಲ್ಲಿ ಬರೆದುದಾಗಿ ಹೇಳಿರುವನು.*

ಉವ್ವಟನು ತನ್ನ ತಂದೆಯ ಹೆಸರು ವಜ್ರಟನೆಂದು ಹೇಳಿಕೊಂಡಿರುವುದರಿಂದ ಜಯ್ಯಟನಲ್ಲವೆಂಬುದು ಸ್ಪಷ್ಟವಾಗುವುದು.†

ಡಾ. ಹಾಲರವರೂ‡ ಮತ್ತು ವೀಬರಪಂಡಿತರೂ§ ಇವನನ್ನು ನೈಷಧಕಾರನ ಸೋದರಮಾವ (maternal uncle) ನೆಂದು ಹೇಳಿರುವರು.

ಡಾ. ಅಫ್ರೆಹಿಟರವರು ಕೇಶವಮಿಶ್ರನ ಹೇಳಿಕೆಯನ್ನು ಪುಷ್ಟೀಕರಿಸಿ ಮಮ್ಮಟನನ್ನು ಮಹಿಮಭಟ್ಟನೆನ್ನುವರು. ಕೇಶವಮಿಶ್ರನ ಹೇಳಿಕೆಯು ವ್ಯಕ್ತಿವಿವೇಕಕಾರನನ್ನು ಹೇಳುವುದು ಹೊರ್ತು ಮಮ್ಮಟನ ವಿಚಾರವಾದುದಲ್ಲ. ಕೇಶವಮಿಶ್ರನು ಮಹಿಮನದೆಂದು ಉದಾಹರಿಸಿರುವ ಶ್ಲೋಕವು ಧ್ವನ್ಯಾಲೋಕದ ವೃತ್ತಿಯಲ್ಲಿ ಕಂಡುಬರುವುದು.$ ಇದೇ ಶ್ಲೋಕವು ವ್ಯಕ್ತಿವಿವೇಕದಲ್ಲಿ ಇತರ ಶ್ಲೋಕಗಳೊಡನೆ ಹೇಳಲ್ಪಟ್ಟಿರುವುದು. ವ್ಯಕ್ತಿವಿವೇಕಕಾರನು ಆ ಶ್ಲೋಕಗಳನ್ನು ಎಲ್ಲಿಂದ ತೆಗೆದುಕೊಂಡು ಹೇಳಿರುವನೆಂಬುದನ್ನು ಕೇಶವಮಿಶ್ರನು ಲಕ್ಷಿಸದೆ ಅದನ್ನು ಮಹಿಮ್ನ (ಮಹಿಮಭಟ್ಟ) ಎಂಬುವನ ಹೆಸರಿನಲ್ಲಿ ತಪ್ಪಾಗಿ ಹೇಳಿರುವುದು ಕಂಡುಬರುತ್ತದೆ.x ಈ ವಿಚಾರಗಳಾವುವೂ ಮಮ್ಮಟನ ಕಾವ್ಯಪ್ರಕಾಶದಲ್ಲಿ ಎಲ್ಲಿಯೂ ಹೇಳಿರುವಂತಿಲ್ಲ. ರುದ್ರಭಟ್ಟನು ರುದ್ರಟನಾದಂತೆ, ಮಹಿಮಭಟ್ಟನು ಮಮ್ಮಟನೆಂದು ಊಹಿಸಿ ಹೇಳುವ ಡಾ. ಅಫ್ರೆಹಿಟರವರ ಹೇಳಿಕೆಯು ಸಮರ್ಥನವಾಗದು.

* Introduction to Kavyaprakasha P. 6-7.

† S. K. De's Sanskrit Poetics P 55

‡ Introduction to Vasavadatta P. 55.

§ History of Indian Literature P. 232.

$ ಧ್ವನ್ಯಾಲೋಕವೃತ್ತಿ ಪುಟ ೧೪೫.

x ವ್ಯಕ್ತಿವಿವೇಕ ಪುಟ ೩೧—೧೧೪.

**ಕಾಲ** :—ಇವನ ಕಾಲವನ್ನು ಖಂಡಿತವಾಗಿ ಹೇಳಲಾಗದಿದ್ದರೂ ಕಾವ್ಯ ಪ್ರಕಾಶಕ್ಕೆ ಬರೆಯಲ್ಪಟ್ಟಿರುವ ಎರಡು ವ್ಯಾಖ್ಯಾನಗಳಿಂದ ಇವನ ಕಾಲವನ್ನು ಕಂಡುಹಿಡಿಯಬಹುದಾಗಿದೆ.

(೧) ಮಾಣಿಕ್ಯಚಂದ್ರನು ಕಾವ್ಯಪ್ರಕಾಶದ ವ್ಯಾಖ್ಯಾನಪೂರ್ತಿಯಾದ ಕಾಲವು ಸಂವತ್ ೧೨೧೬ ಅಥವಾ ಕ್ರಿ. ಶ. ೧೧೬೦ ಎಂದು ಸ್ಪಷ್ಟವಾಗಿ ಹೇಳಿರುವನು.

(೨) ರುಯ್ಯಕನು ತನ್ನ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ಹೇಳದಿದ್ದರೂ ಬಾಹ್ಯ ಪ್ರಮಾಣಗಳಿಂದ ರುಯ್ಯಕನು ಕ್ರಿ. ಶ. ೧೨ನೆಯ ಶತಮಾನದ ಮಧ್ಯಕಾಲದಲ್ಲಿ ದ್ದವನೆಂದು ತಿಳಿಯಬರುತ್ತದೆ.

(೩) "ಭೋಜನೃಪತೇಸ್ತತ್ತ್ಯಾಗಲೀಲಾಯತಂ" ಎಂದು ಮಮ್ಮಟನು ಉದಾಹರಿಸಿಕೊಂಡಿರುವ ಯಾವುದೋ ಶ್ಲೋಕಮಾತ್ರದಿಂದ ಮಮ್ಮಟನು ಭೋಜನ ಸಮಕಾಲೀನನೆಂದು ಹೇಳಲಾಗುವುದಿಲ್ಲ. ಏಕೆಂದರೆ ಈ ಶ್ಲೋಕದ ಮುಖ್ಯ ಗುರಿಯು ಭೋಜನ ದಾತೃತ್ವವನ್ನು ಕೊಂಡಾಡುವುದಾಗಿರುವುದು. ಆದರೆ ವ್ಯಾಖ್ಯಾನಕಾರರ ಮತವನ್ನು ಮನ್ನಿಸಿ ಧಾರಾನಗರದಲ್ಲಾಳಿದ ಭೋಜನೇ ಸರಸ್ವತೀಕಂಠಾಭರಣಕಾರನೆಂದೂ ಹೇಳುವುದಾದರೆ ಮಮ್ಮಟನು ಭೋಜನಿಗಿಂತ ಈಚಿನವನೂ ರುಯ್ಯಕನ ಪ್ರಾಚೀನನೂ ಆಗಿರಬೇಕು. ಎಂದರೆ ಕ್ರಿ. ಶ. ೧೧ನೆಯ ಶತಮಾನದ ಉತ್ತರಾರ್ಧದವನೆಂದು ತರ್ಕಿಸಬಹುದಾಗಿದೆ.

**ಗ್ರಂಥಗಳು** :—ಇವನು ಕಾವ್ಯಪ್ರಕಾಶವೆಂಬ ಅಲಂಕಾರ ಗ್ರಂಥವನ್ನು ಬರೆದಿರುವುದಲ್ಲದೆ 'ಶಬ್ದವ್ಯಾಪಾರಪರಿಚಯ' ಎಂಬ ಮತ್ತೊಂದು ಗ್ರಂಥವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಈ ಗ್ರಂಥವಾವುದೆಂಬುದು ತಿಳಿಯದು. ಕಾವ್ಯ ಪ್ರಕಾಶಕ್ಕೆ ಆನಂದನೆಂಬ ಕವಿಯು ಬರೆದಿರತಕ್ಕ 'ನಿದರ್ಶನ' ಎಂಬ ವ್ಯಾಖ್ಯಾನದಿಂದ ಮಮ್ಮಟನು ಪರಿಕರಾಲಂಕಾರದವರೆಗಿನ ಹತ್ತು ಉಲ್ಲಾಸಗಳನ್ನುಮಾತ್ರವೇ ಬರೆದುದೆಂತಲೂ ಉಳಿದವುಗಳನ್ನು ಅಲ್ಲಟನೆಂಬವನು ಬರೆದುದಾಗಿ "ಕೃತಃ ಶ್ರೀಮಮ್ಮಟಾಚಾರ್ಯವರ್ಯೈಃ ಪರಿಕರಾವಧಿಃ ಪ್ರಬಂಧಃ ಪೂರಿತಃ ಶೇಷೋವಿಧಾಯಾಲಟ ('ಅಕ' ಅಥವಾ 'ಲ್ಲಟ') ಸೂರಿಣಾ" ಎಂದು ಗ್ರಂಥಾಂತ್ಯದಲ್ಲಿ ಹೇಳಿರುವ ಗದ್ಯದಿಂದ ಗೊತ್ತಾಗುತ್ತದೆ. ಇದೇ ವಿಚಾರವನ್ನು ಕ್ರಿ. ಶ. ೧೩ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಅರ್ಜುನವರ್ಮನು ತಾನು ಬರೆದಿರುವ 'ಅಮರುಶತಕ'ದ ವ್ಯಾಖ್ಯಾನದಲ್ಲಿ "ಯತೋದಾಹೃತಂದೋಷನಿರ್ಣಯೇ ಮಮ್ಮಟಾಲಕಾಭ್ಯಾಂ" ಎಂದು ಹೇಳಿ ಸ್ಪಷ್ಟಪಡಿಸಿರುವನು. ರತ್ನಕಂಠನು ಈ ಅಲಕನನ್ನು ಅಲಂಕಾರ ಸರ್ವಸ್ವಕ್ಕೆ ವ್ಯಾಖ್ಯಾನಕಾರನಾದ ರಾಜಾನಕ ಅಲಕನೆಂದು ಹೇಳಿರುವನು. ಕಾವ್ಯ ಪ್ರಕಾಶವು ಕಾರಿಕಾ, ವೃತ್ತಿ ಮತ್ತು ಉದಾಹರಣೆಗಳಿಂದ ಕೂಡಿಕೊಂಡಿರುವುದು.

ಕಾರಿಕೆಯನ್ನೂ, ವೃತ್ತಿಯನ್ನೂ ಮಮ್ಮಟನೇ ಬರೆದುದಾಗಿದೆ. ಉದಾಹರಣೆಗಳನ್ನು ಆಗ ಪ್ರಚುರವಾಗಿದ್ದ ಉದ್ದಾಮ ಗ್ರಂಥಗಳಿಂದಾರಿಸಿ ತೆಗೆದುಕೊಂಡಿರುವನು. ಇದರಲ್ಲಿ ಉದಾಹೃತವಾಗಿರುವ ಅನೇಕ ಗ್ರಂಥಗಳು ಈಗಲೂ ಪ್ರಚಾರದಲ್ಲಿರುವುವು. ಕೆಲವು ಕಾರಿಕೆಗಳನ್ನು ಪ್ರಸಿದ್ಧರಾದ ಭರತ ವಾಮನಾದಿ ಗ್ರಂಥಗಳಿಂದ ಹಾಗೆ ಹಾಗೆಯೇ ತೆಗೆದುಕೊಂಡು ಅಲ್ಲಲ್ಲಿ ಸ್ವಲ್ಪ ಬದಲುಮಾಡಿ ಹೇಳಿರುವನು. ಕಾವ್ಯಪ್ರಕಾಶವು ಹೆಸರಿಗೆ ತಕ್ಕಂತೆ ಕಾವ್ಯಲಕ್ಷಣಗಳನ್ನು ಹೇಳುವುದು. ಇದು ಬಹುದುರವಗಾಹ ಗ್ರಂಥವಾದುದರಿಂದ ಇದಕ್ಕೆ ಬಹುಜನರು ವ್ಯಾಖ್ಯಾನವನ್ನು ಬರೆದಿರುವರು. ಹಾಗೆ ಬರೆಯಲ್ಪಟ್ಟಿರುವುದಾದರೂ ಇನ್ನೂ ಕಟುವಾದುದಾಗಿಯೇ ಇರುವುದು. ಸಂಸ್ಕೃತ ಗ್ರಂಥಗಳಲ್ಲಿ ಇಷ್ಟೊಂದು ವ್ಯಾಖ್ಯಾನ ಕಾರಣವಾದ ಗ್ರಂಥವು ಮತ್ತೊಂದು ದೊರೆಯದು. ಹೀಗೆ ಬರೆಯಲ್ಪಟ್ಟಿರುವ ವ್ಯಾಖ್ಯಾನಗಳನೇಕಗಳು ಇನ್ನೂ ಅಚ್ಚಾಗದೆ ಹಸ್ತಪ್ರತಿಕೆಯಲ್ಲಿರುವುವು. ಪ್ರಸಿದ್ಧವಾದ ಕೆಲವನ್ನು ಇಲ್ಲಿ ಕೊಟ್ಟಿದೆ:—

| ವ್ಯಾಖ್ಯಾನಕಾರರ ಹೆಸರು | | ವ್ಯಾಖ್ಯಾನದ ಹೆಸರು. |
|---|---|---|
| ರಾಜಾನಕರುಯ್ಯಕ | .... | ಸಂಕೇತ |
| ಮಾಣಿಕ್ಯಚಂದ್ರ | .... | ಸಂಕೇತ |
| ನರಹರಿ (ಸರಸ್ವತೀತೀರ್ಥ) | ... | ಬಾಲಚಿತ್ತಾನುರಂಜಿನೀ |
| ಜಯಂತ ಭಟ್ಟ | .... | ದೀಪಿಕಾ [ಜಯಂತಿ] |
| ಸೋಮೇಶ್ವರ | .... | ಕಾವ್ಯಾದರ್ಶ |
| ಶ್ರೀಧರ | .... | ವಿವೇಕ |
| ಚಂಡೀದಾಸ | ... | ದೀಪಿಕಾ |
| ವಿಶ್ವನಾಥ | .... | ದರ್ಪಣ |
| ಭಾಸ್ಕರ | .... | ಸಾಹಿತ್ಯದೀಪಿಕಾ |
| ಪರಮಾನಂದ ಚಕ್ರವರ್ತಿ | .... | ವಿಸ್ತಾರಿಕಾ |
| ಗೋವಿಂದ ಠಾಕೂರ | .... | ಪ್ರದೀಪ |
| ಜಯರಾಮನ್ಯಾಯಪಂಚಾನನ | .... | ತಿಲಕ [ಜಯರಾಮೀ] |
| ಶ್ರೀವತ್ಸಲಾಂಛನ ಮತ್ತು ಸದ್ಬುದ್ಧಿಮಿಶ್ರ | | ಸಾರಬೋಧಿನೀ |
| ರವಿ ಮತ್ತು ರತ್ನಪಾಣಿ | .... | ಮನೋಹರ [ಕಾವ್ಯದರ್ಪಣ] |
| ಮಹೇಶ್ವರ | .... | ನ್ಯಾಯಾಲಂಕಾರ [ಆದರ್ಶ] |
| ರಾಜಾನಕ ಆನಂದ | .... | ನಿದರ್ಶನ [ಶಿತಕಂಠವಿಬೋಧನಾ] |
| ರಾಜಾನಕ ರತ್ನಕಂಠ | ... | ಸಾರಸಮುಚ್ಚಯ |
| ನೃಸಿಂಹಠಾಕೂರ | .... | ನೃಸಿಂಹಮಾನಸ |

ವೈದ್ಯನಾಥತತ್ಸತ್ [ಉದಾಹರಣ ಚಂದ್ರಿಕಾ] ಸುಧಾಸಾಗರ [ಸುಧೋದಧಿ]
ಭೀಮಸೇನ ದೀಕ್ಷಿತ }
ಬಲದೇವ ವಿದ್ಯಾಭೂಷಣ } ....ವಿದ್ಯಾಭೂಷಣ [ಸಾಹಿತ್ಯಕೌಮುದೀ]
ನಾಗೋಜಿ [ನಾಗೇಶಭಟ್ಟ] ... ಲಘುದ್ಯೋತಕ ಬೃಹದ್ದ್ಯೋತಕ

ಬಳಕೆಯಲ್ಲಿಲ್ಲದ ಅಪರೂಪವ್ಯಾಖ್ಯಾನಕಾರರು ಮತ್ತು ಅವರ ವ್ಯಾಖ್ಯಾನಗಳ ಕೆಲವನ್ನು ಇಲ್ಲಿ ಕೊಟ್ಟಿದೆ.

| ವ್ಯಾಖ್ಯಾನಕಾರರು | | ವ್ಯಾಖ್ಯಾನಗಳು |
|---|---|---|
| ಕಲಾಧರ | .... | ಕಾಂತಾವಳಿ |
| ಕೃಷ್ಣದ್ವಿವೇದಿ | ... | ಮಧುರರಸಾ |
| ಕೃಷ್ಣಶರ್ಮ | .... | ರಸಪ್ರಕಾಶ |
| ಗೋಪಾಲ | ... | ಸಾಹಿತ್ಯಚೂಡಾಮಣಿ |
| ಗೋಪೀನಾಥ | .... | ಸುಮನೋಮನೋಹರ |
| ಜಗದೀಶತರ್ಕಾಲಂಕಾರ ಭಟ್ಟಾಚಾರ್ಯ | .... | ರಹಸ್ಯಪ್ರಕಾಶ |
| ಜನಾರ್ದನವ್ಯಾಸ | .... | ಶ್ಲೋಕದೀಪಿಕಾ |
| ದೇವನಾಥತರ್ಕಪಂಚಾನನ | ... | ಕಾವ್ಯಕೌಮುದೀ |
| ನೃಸಿಂಹಸೂರಿ | ... | ಋಜುವೃತ್ತಿ |
| ನಾಗರಾಜಕೇಶವ | .... | ಪದವೃತ್ತಿ |
| ಮಧುಮತಿಗಣೇಶ | .... | ಕಾವ್ಯದರ್ಪಣಾ |
| ಯಜ್ಞೇಶ್ವರ | .... | ವ್ಯಾಖ್ಯಾ |
| ರಘುದೇವ | .... | ಕಾರಿಕಾರ್ಥಪ್ರಕಾಶಿಕಾ |
| ರಾಘವ | ... | ಅವಸೂರಿ ಟಿಪ್ಪಣಿ |
| ರಾಮಚಂದ್ರ | .... | ಕಾವ್ಯಪ್ರಕಾಶಸಾರ |
| ರಾಮನಾಥವಿದ್ಯಾವಾಚಸ್ಪತಿ | ... | ರಹಸ್ಯಪ್ರಕಾಶಿಕಾ |
| ರಾಮಕೃಷ್ಣ | ... | ಭಾವಾರ್ಥ [ಕವಿನಂದಿನೀ] |
| ವಿದ್ಯಾಚಕ್ರವರ್ತಿ | ... | ಸಂಪ್ರದಾಯಪ್ರಕಾಶಿಕಾ |
| ವೆಂಕಟಾಚಲಸೂರಿ | ... | ಸುಬೋಧಿನೀ |
| ಶಿವನಾರಾಯಣದಾಸ | .... | ಸರಸ್ವತೀಕಂಠಾಭರಣ (ದೀಪಿಕಾ) |

ಇವುಗಳಲ್ಲದೆ ಇನ್ನೂ ಎಷ್ಟೋವ್ಯಾಖ್ಯಾನಗಳಿರುವುವು.

---

## ಶಂಭುಕವಿ.

ಇವನು ಬ್ರಾಹ್ಮಣನು. ಕಾಶ್ಮೀರದವನು. ಇವನ ಮಾತಾಪಿತೃಗಳಾರೆಂಬುದು ತಿಳಿಯದು.

**ಕಾಲ:**---ಕ್ರಿ. ಶ. ೧೦೮೮ ರಿಂದ ೧೧೦೦ ರ ವರೆಗೆ ಕಾಶ್ಮೀರದಲ್ಲಾಳಿದ ಹರ್ಷದೇವನ ಆಶ್ರಿತನಾದುದರಿಂದ ಕ್ರಿ. ಶ. ೧೧ನೆಯ ಶತಮಾನದವನು.

**ಗ್ರಂಥ:**---ಇವನು 'ರಾಜೇಂದ್ರಕರ್ಣಪೂರ' ಎಂಬ ೭೫ ಶ್ಲೋಕಗಳುಳ್ಳ ಚಿಕ್ಕ ಗ್ರಂಥವನ್ನು ಬರೆದಿರುವನು. ಈಗ್ರಂಥವು ತನ್ನ ಆಶ್ರಯದಾತನಾದ ಶ್ರೀಹರ್ಷದೇವನ ಸ್ತುತಿಪರರೂಪವಾಗಿರುವುದು. ಈಗ್ರಂಥದ ಹತ್ತೊಂಭತ್ತನೆಯ ಶ್ಲೋಕದಲ್ಲಿ---

ಶೇಷ ಕ್ಲೇಶಮಶೇಷಮುತ್ಸೃಜ ಭಜತ್ವಂ ಕೂರ್ಮ ಕರ್ಮಸ್ವತಂ
ಸ್ವೈರಂ ಖೇಲತ ಸಿಂಧುಸೈಕತತಲಾ ಕುಂಜೇಷು ದಿಕ್ಕುಂಜರಾಃ
ಅಸ್ಯೇತಾಂ ಸಕುಲಾಚಲಾಂ ಸನಗರಾಂ ಸಾಂಭೋನಿಧಿಂ ಸಾಪಗಾಂ
ಸದ್ವೀಪಾಂ ಚ ಭುವಂ ಬಿಭರ್ತಿ ಹಿ ಭುಜಃ ಶ್ರೀಹರ್ಷಪೃಥ್ವೀಭುಜಃ ||

ಎಂದು ಹೇಳಿಕೊಂಡಿರುದುವು ಕಂಡುಬರುತ್ತದೆ. ಇವನ ಅನೇಕ ಶ್ಲೋಕಗಳು ಸುಭಾಷಿತಾವಳಿಗಳಲ್ಲಿ ಕಂಡುಬರುತ್ತವೆ. ಶೈಲಿಯು ಮೃದುವಾಗಿ ವಿಷಯವು ಮಧುರವಾಗಿದೆ: ಮಾದರಿಗಾಗಿ ಎರಡು ಶ್ಲೋಕಗಳನ್ನು ಬರೆಯುವೆವು.

ನಿರ್ಮೂರ್ತಂ ಭುವನೇ ಮುಹೂರ್ತಮಮೃತಂ ಮನ್ಯೇಭೃಶಂ ವಾಸರಂ
ಸಾರಂ ವೇದ್ಮಿ ತದೇವ ನೈವ ಚ ಗುಣೈರಾಯಾಮಿನೀ ಯಾಮಿನೀ
ಶ್ರೀವಾಸೋ ಯಶಸಾಂ ಪದಂ ಸುಮನಸಾಮಸ್ಯಾಸ್ಪದಂ ಸಂಪದಾಂ
ಯತ್ರಾಗಚ್ಛತಿ ಗೋಚರಂ ನಯನಯೋಃ ಕಾಶ್ಮೀರಮಾನಧ್ವಜಃ || ೪೨
ಔದಾರ್ಯಂ ಸಧನೇ ನಯೋಗುಣಜನೇ ಲಜ್ಜಾ ಕುಲಸ್ತ್ರೀಜನೇ
ಸತ್ಕಾವ್ಯಂ ವದನೇ ಮದೋದ್ಧುರದನೇ ಪುಂಸ್ಕೋಕಿಲಃ ಕಾನನೇ
ರೋಲಂಬಃ ಕಮಲೇ ನಖಾಂಕರಚನಾ ಕಾಂತಾಕಪೋಲಸ್ಥಲೇ
ತನ್ವೀತಲ್ಪತಲೇ ಭವಾನಪಿ ವಿಭೋ ಭೂಮಂಡಲೇ ಮಂಡನಂ || ೫೪

ಇದಲ್ಲದೆ ಇವನು "ಅನ್ಯೋಕ್ತಿಮುಕ್ತಾಲತಾ" ಎಂಬ ಶತಕವನ್ನು ಬರೆದಿರುವದಾಗಿ ತಿಳಿಯಬರುವದಾದರೂ ಗ್ರಂಥವು ಉಪಲಬ್ಧವಿಲ್ಲ.

---

## ಸೋಮದೇವಭಟ್ಟ.

ಇವನು ಕಾಶ್ಮೀರದವನು. ರಾಮಭಟ್ಟನ ಮಗನು* ಬ್ರಾಹ್ಮಣನು. ಅನಂತರಾಜನ ಆಸ್ಥಾನಪಂಡಿತನು. ಕ್ರಿ. ಶ. ೧೧ನೆಯ ಶತಮಾನದವನು. ಅನಂತರಾಜನ

* ಕಥಾಸರಿತ್ಸಾಗರ, ಮುನ್ನುಡಿ ಪುಟ ೨.

ಪಟ್ಟಮಹಿಷಿಯಾದ ಸೂರ್ಯಾವತಿಯ ಪ್ರೋತ್ಸಾಹದಿಂದ **ಕಥಾಸರಿತ್ಸಾಗರ**ವೆಂಬ ಗ್ರಂಥವನ್ನು ಬರೆದಿರುವನು. ಇದರಲ್ಲಿ ಸುಮಾರು ೨೨೦೦೦ ಶ್ಲೋಕಗಳಿದ್ದು ೧೨೪ ತರಂಗಗಳಾಗಿಯೂ ೧೮ ಲಂಬಕಗಳಾಗಿಯೂ ಭಾಗಿಸಿ ಬರೆಯಲ್ಪಟ್ಟಿರುವುದು. ಇದರಲ್ಲಿ ಕೌಶಾಂಬೀನಾಥನಾದ ಉದಯನನ ವಿಚಾರವು ವಿಪುಲವಾಗಿ ಬರೆಯಲ್ಪಟ್ಟಿರುವುದು.



## ಮ ಹಿ ಮ ಭ ಟ್ಟ .

ಇವನನ್ನು "ರಾಜಾನಕ ಮಹಿಮ್ನ" "ಮಹಿಮಕ" "ಮಹಿಮಭಟ್ಟ" ಎಂದೂ ವ್ಯಕ್ತಿವಿವೇಕಕಾರನೆಂದೂ ಕರೆಯುವರು. ಹೆಸರಿನಿಂದ ಇವನು ಕಾಶ್ಮೀರದವನೆಂದು ಬೋಧೆಯಾಗುವುದು. ಇವನು ಶ್ರೀಧೈರ್ಯನೆಂಬವನ ಮಗನು. ಮಹಾಕವಿ ಶ್ಯಾಮಲನ ಶಿಷ್ಯನು.‡

ಕಾಲ:---ಕ್ರಿ. ಶ. ೧೧ನೆಯ ಶತಮಾನದ ಆದಿಭಾಗದವನಾದ ಲೋಚನಕಾರ ಅಭಿನವ ಗುಪ್ತನ ಹೇಳಿಕೆಯನ್ನು ಅನೇಕ ಕಡೆ ಇವನು ಖಂಡಿಸಿ ಹೇಳಿರುವುದರಿಂದ ಅಭಿನವಗುಪ್ತನಿಗಿಂತ ಈಚಿನವನೂ ಕ್ರಿ. ಶ. ೧೨ನೆಯ ಶತಮಾನದ ಪೂರ್ವಾರ್ಧದವನಾದ ರುಯ್ಯಕನು ಮಹಿಮಭಟ್ಟನನ್ನು ಹೇಳಿಕೊಂಡಿರುವುದರಿಂದ ರುಯ್ಯಕನಿಗಿಂತ ಹಿಂದಲವನೂ ಎಂದರೆ ೧೧ನೆಯ ಶತಮಾನದ ಮಧ್ಯಕಾಲದವನೆಂದೂ ಸ್ಪಷ್ಟಪಡುವದು.

ಗ್ರಂಥಗಳು:---ಇವನು 'ವ್ಯಕ್ತಿವಿವೇಕ' ಎಂಬ ಅಲಂಕಾರ ಗ್ರಂಥವನ್ನು ಬರೆದಿರುವನು. ಇದಕ್ಕೆ ರಾಜಾನಕರುಯ್ಯಕನು ವ್ಯಾಖ್ಯಾನವನ್ನು ಬರೆದಿರುವನು. ಇದಲ್ಲದೆ ತತ್ತ್ವೋಕ್ತಿಕೋಶವೆಂಬ ಮತ್ತೊಂದು ಗ್ರಂಥವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಗ್ರಂಥವು ಉಪಲಬ್ಧವಲ್ಲ.

---

## ಪು ರು ಷೋ ತ್ತ ಮ .

ಇವನು ಬ್ರಾಹ್ಮಣನು. ಕ್ರಿ. ಶ. ೧೧ನೆಯ ಶತಮಾನದಲ್ಲಾಳಿದ 'ಧೃತಸಿಂಹ' ರಾಜನ ಆಶ್ರಯದಲ್ಲಿ "ತ್ರಿಕಾಂಡಶೇಷ" ಎಂಬ ಕೋಶಗ್ರಂಥವನ್ನು ಬರೆದನು. ಈ ಧೃತಸಿಂಹನಾರೆಂಬುದಾಗಲಿ ಎಲ್ಲಿ ಆಳಿದನೆಂಬುದಾಗಲಿ ತಿಳಿಯದು. †

‡ S. K. De's Sanskrit Poetics P. 152

† Classical History of Sanskrit Literature P. 119

## ಲೋ ಲಂ ಬ ರಾ ಜ §

ಇವನು ಬ್ರಾಹ್ಮಣನು. ದಕ್ಷಿಣದೇಶಸ್ಥನು. ಚಿಕ್ಕತನದಲ್ಲಿಯೇ ತಾಯಿ ತಂದೆಗಳನ್ನು ಕಳೆದುಕೊಂಡು ಅಣ್ಣನ ಪೋಷಣೆಯಲ್ಲಿರುತ್ತಿದ್ದು ಅತ್ತಿಗೆಯ ಬೈಗಳನ್ನು ಸಹಿಸಲಾರದೆ ಕುಪಿತನಾಗಿ ಮನೆಯನ್ನು ಬಿಟ್ಟು ದೇಶಾಟನವನ್ನು ಮಾಡುತ್ತ ಸಪ್ತಶೃಂಗಕ್ಕೆ ಹೋಗಿ "ಹರಿವಿಲಾಸ" ಎಂಬ ಗ್ರಂಥವನ್ನು ಬರೆದನು. ಕೃಷ್ಣನು ನಂದನ ಮನೆಯಲ್ಲಿ ಬೆಳೆದುದು ಮೊದಲು ಉದ್ಧವನಬಳಿಗೆ ಹೋದನೆಂಬ ವರೆಗಿನಕಥೆಯು ಬರೆಯಲ್ಪಟ್ಟಿರುವುದು. ಇವನು ಹರಿಹರ ರಾಜನ ಆಸ್ಥಾನದಲ್ಲಿದ್ದುದಾಗಿತಿಳಿಯಬರುತ್ತದೆ. ಈ ರಾಜನು ಯಾರೆಂದಾಗಲಿ ಎಲ್ಲಿ ಆಳಿದವನೆಂಬುದಾಗಲಿ ತಿಳಿಯಬರುವುದಿಲ್ಲ. ಇವನು ಭೋಜರಾಜನ ಸಮಕಾಲೀನನೆಂದು ತಿಳಿಯಬರುವುದರಿಂದ ಇವನು ಕ್ರಿ. ಶ. ೧೧ ನೆಯ ಶತಮಾನದವನೆಂದು ಹೇಳಬೇಕಾಗಿದೆ. ಭಾಷೆಯು ಸರಳವಾಗಿಯೂ ಶೈಲಿಯು ಮೋಹಕರವಾಗಿಯೂ ಕಥಾಸಂವಿಧಾನಚತುರತೆಯು ರಸಿಕಾಹ್ಲಾದಕರವಾಗಿಯೂ ಇರುವುದು.

---

## ಕೃ ಷ್ಣ ಮಿ ಶ್ರ

"ಪುರಾಕಿಲವಿದ್ವದ್ವೃಂದಲಲಾಮಭೂತೋಽಖಿಲವಿದ್ಯೋಧದಿಪಾರದೃಶ್ವೇವಾಸೀತ್ಕೃಷ್ಣಮಿಶ್ರಾಖ್ಯೋದಂಡೀ" ಎಂಬುದರಿಂದ ಇವನು ಸಂನ್ಯಾಸಿಯಾಗಿರಬೇಕೆಂದು ಬೋಧೆಯಾಗುವುದು. ಇವನು ಔತ್ತರೇಯನೆಂದೂ, ವಂಗೀಯನಾಗಿರಬಹುದೆಂದೂ ಊಹಿಸಬಹುದಾಗಿದೆ. ಇವನ ಮಾತಾಪಿತೃಗಳಾರೆಂಬುದು ತಿಳಿಯದು. ಗ್ರಂಥಪ್ರಸ್ತಾವನದಿಂದ ಕೃಷ್ಣಮಿಶ್ರನು ತನ್ನ ಶಿಷ್ಯನಾದ ಗೋಪಾಲಭೂಪಾಲನಿಗೆ ಶಾಂತರಸಯುಕ್ತವಾದ ಈ ಗ್ರಂಥವನ್ನು ರಚಿಸಿಕೊಟ್ಟಂತೆಯೂ ಈ ಗೋಪಾಲನು ತನ್ನ ಮಿತ್ರನಾದ ಚಂದ್ರವಂಶದ ಕೀರ್ತಿವರ್ಮನ ರಾಜ್ಯಾಭಿಷೇಕ ಸಮಯದಲ್ಲಿ, ಇದನ್ನು ಅಭಿನಯಿಸಿದುದಾಗಿಯೂ ತಿಳಿಯಬರುತ್ತದೆ.

**ಕಾಲ:**—ಕೀರ್ತಿವರ್ಮನು ಚಾಂಡಿಲ್ಯ (ಚಂದೇಲ)ವಂಶದವನೆಂದೂ ಕ್ರಿ ಶ. ೧೧೯೦ರ ಸುಮಾರಿನಲ್ಲಿ ರಾಜ್ಯವಾಳಿದುದಾಗಿಯೂ ಕೆಲವು ಶಾಸನಗಳಿಂದ ತಿಳಿಯಬರುತ್ತದೆ. ಈ ಕೀರ್ತಿವರ್ಮನು ಎಲ್ಲಿ ಆಳಿದನೆಂಬ ವಿಚಾರವು ಸರಿಯಾಗಿತಿಳಿಯುವಂತಿಲ್ಲ. ಕೀರ್ತಿವರ್ಮನು ಚೇದಿದೇಶವನ್ನಾಳುತ್ತಿದ್ದ ಕಲಚೂರಿವಂಶದ ಕರ್ಣರಾಜನಿಂದ ಪರಾಜಿತನಾಗಿ ರಾಜ್ಯವು ಕೈಬಿಟ್ಟುಹೋಗಲು ಕೀರ್ತಿವರ್ಮನ ಸೇನಾನಿಯಾದ ಗೋಪಾಲನು ಅದನ್ನು ತಿಳಿದು ಕರ್ಣರಾಜನ ಮೇಲೆ ದಂಡೆತ್ತಿ ಕೀರ್ತಿವರ್ಮನಿಗೆ

---

§ ಲೋಲಂಬರಾಜೀಯವೆಂಬ ವೈದ್ಯಗ್ರಂಥಕಾರನು ಇವನಲ್ಲ.

ಹೋದರಾಜ್ಯವನ್ನು ಪುನಃ ದೊರಕಿಸಿಕೊಟ್ಟು ರಾಜ್ಯಶಾಸನ ದಕ್ಷನಾಗಿ ಕೆಲವುಕಾಲ ವಿದ್ದು ಅನಂತರ ಬ್ರಾಹ್ಮಣ ಸಹಜವಾದ ಶಾಂತಿಯಿಂದ ಶೇಷಾಯುಷ್ಯವನ್ನು ಕಳೆದಂತೆ ತಿಳಿದುಬರುತ್ತದೆ. ಈ ಕರ್ಣರಾಜನು ವಿಕ್ರಮಾಂಕದೇವನ ಸಮಕಾಲೀನನಾಗಿದ್ದನೆಂದು ವಿಕ್ರಮಾಂಕದೇವ ಚರಿತದಿಂದ ವ್ಯಕ್ತವಾಗುತ್ತದೆ.

ಕಾಲಃ ಕಾಲಂಜರಗಿರಿಪತೇರ್ಯಃ ಪ್ರಯಾಣೇ ಧರಿತ್ರೀಂ
ತುಖ್ಖಾರಾಣಾಂ ಖುರಪುಟರವೈಃ ಕ್ಷ್ಮಾಪಶೂನ್ಯಾಂ ಚಕಾರ
ಶ್ರೀದಾಹಾಲಕ್ಷ್ಮಿತಿಪರಿವೃಢಃ ಸೋಽಪಿಯಂಪ್ರಾಪ್ಯವೃತ್ತಂ
ಕರ್ಣಃ ಕರ್ಣಾಮೃತರಸಭರಾಸ್ವಾದ ಮಂತಸ್ತತಾನ ||

ಎಂದು ಹೇಳಿರುವುದರಿಂದ ಕರ್ಣ, ವಿಕ್ರಮಾಂಕ, ಕೀರ್ತಿವರ್ಮ ಈ ಮೂವರೂ ಸಮಕಾಲೀನರೆಂದಾದುದು. ವಿಕ್ರಮಾಂಕದೇವನು ಕ್ರಿ. ಶ. ೧೦೭೬-೧೧೨೬ ರವರೆಗೆ ರಾಜ್ಯವಾಳಿದುದಾಗಿ ಸ್ಪಷ್ಟಪಡುವುದರಿಂದಲೂ ಇವನ ಸಮಕಾಲೀನರಾದ ಕೀರ್ತಿವರ್ಮನೂ, ಕರ್ಣರಾಜನೂ ಕ್ರಿ. ಶ. ಹನ್ನೊಂದನೆಯ ಶತಮಾನಾಂತ್ಯದಲ್ಲಿದ್ದವರಾದುದರಿಂದ ಕೀರ್ತಿವರ್ಮನ ಸಮಕಾಲೀನನಾದ ಕೃಷ್ಣಮಿಶ್ರನು ಕ್ರಿ. ಶ. ಹನ್ನೊಂದನೆಯ ಶತಮಾನಾಂತ್ಯದವನೆಂಬುದು ಸ್ಪಷ್ಟವು.

'ಫಲರತ್ನಮಾಲಾ' ಎಂಬ ಒಂದಾನೊಂದು ಜ್ಯೋತಿಷಗ್ರಂಥಕಾರನಾದ ಕೃಷ್ಣಮಿಶ್ರನೊಬ್ಬನು ದೊರೆಯುವನು. ಅವನು:—

ಶ್ರೀವಿಕ್ರಮಾಂಕೋಜಗತೀತಲೇಽಸ್ಮಿನ್
ಜೀಯಾನ್ಮನುಪ್ರಖ್ಯಯಶಾನರೇಂದ್ರಃ
ಪ್ರಮೋಷಯಂ ಕೋಟಿಸುವರ್ಣತೋಮಾ
ಸಬಾಂಧವಂ ಸಪ್ತತಿವತ್ಸರಾಣಿ ||

ಎಂಬ ಶ್ಲೋಕದಲ್ಲಿ ವಿಕ್ರಮಾಂಕನ ಹೆಸರನ್ನು ಹೇಳಿರುವುದರಿಂದ ಪ್ರಬೋಧಚಂದ್ರೋದಯಕಾರನೂ, ಫಲರತ್ನಮಾಲಾಕಾರನೂ ಬೇರೆಬೇರೆ ವ್ಯಕ್ತಿಗಳೇ ಅಥವಾ ಒಬ್ಬನೇ ಎಂಬದು ವಿಚಾರಾಸ್ಪದವಾಗಿದೆ.

**ಗ್ರಂಥ:**— ಇವನು ಪ್ರಬೋಧಚಂದ್ರೋದಯವೆಂಬ ಆರು ಅಂಕಗಳುಳ್ಳ ನಾಟಕವನ್ನು ಬರೆದಿರುವನು. ಪ್ರಬೋಧಚಂದ್ರೋದಯ ನಾಟಕದ ಎರಡನೆಯ ಅಂಕದಲ್ಲಿ ಕಂಡುಬರುವ.—

ನೈವಾಶ್ರಾವಿ ಗುರೋರ್ಮತಂ ನ ವಿದಿತಂ ಕೌಮಾರಿಲಂ ದರ್ಶನಂ
ತತ್ತ್ವಜ್ಞಾನಮಹೋ ನ ಶಾಲಿಕಗಿರಾಂ ವಾಚಸ್ಪತೇಃ ಕಾ ಕಥಾ

ಸೂಕ್ತಂ ನಾಪಿ **ಮಹೋದಧೇ**ರಧಿಗತಂ **ಮಾಹಾವ್ರತೀ** ನೇಕ್ಷಿತಾ
ಸೂಕ್ಷ್ಮಾ ವಸ್ತುವಿಚಾರಣಾ ನೃಪಪಶುಭಿಃ ಸ್ವಸ್ಥೈಃ ಕಥಂ ಸ್ಥೀಯತೇ ||೨-೩

ಎಂಬ ಶ್ಲೋಕದಲ್ಲಿ ಮಹಾ ಪ್ರಖ್ಯಾತರಾದ ಪ್ರಭಾಕರ, ಕುಮಾರಿಲ, ಶಾಲಿಕನಾಥ ಮತ್ತು ವಾಚಸ್ಪತಿಮಿಶ್ರ ಇವರ ಜತೆಯಲ್ಲಿ ಪ್ರಾಚೀನಮೀಮಾಂಸಾಕಾರರದ ಮಹೋದಧಿ ಮತ್ತು ಮಹಾವ್ರತರ ಹೆಸರು ಹೇಳಲ್ಪಟ್ಟಿದೆ. ಚಾರಿತ್ರಿಕ ದೃಷ್ಟಿಯಿಂದ ಈ ಇರ್ವರೂ ಮುಖ್ಯರು. ವ್ಯಾಖ್ಯಾನಕಾರನು ಇವರಿರ್ವರವಿಚಾರವಾಗಿ ಕೆಲವು ಹೆಚ್ಚು ವಿಷಯಗಳನ್ನು ತಿಳಿಸಿರುವನು. "ಮಹೋದಧಿರ್ನಾಮ ಶಾರಿಕನಾಮಾ (ಶಾಲಿಕನಾಥ) ಸಹ ಬ್ರಹ್ಮಚಾರೀ ಗುರುಮತೇನಿಬಂಧನ ಕರ್ತಾ ಭವನಾಥವತ್| ..................**ಮಹಾವ್ರತೋ** ನಾಮ ಭಟ್ಟಮತಾನುವರ್ತೀ ಮಹೋದಧಿ ಪ್ರತಿಸ್ಪರ್ಧೀ...............ಇದಾನೀಮಾಚಾರ್ಯಮತೇ ಭವದೇವಮತಸ್ಯ ಗುರುಮತೇ ಭವನಾಥಮತಸ್ಯೈವಪ್ರಾಚುರ್ಯಮಿತಿ ಗ್ರಂಥಕಾರೈರನುಲ್ಲಿಖಿತಮಪಿ ಮತದ್ವಯಮುಸ್ಮಾಭಿರುಕ್ತಂ||* ಎಂಬುದರಿಂದ ಮಹೋದಧಿಯು ಪ್ರಭಾಕರನ ಶಿಷ್ಯನಾಗಿದ್ದು ಅವನ ಅನುಯಾಯಿಯಾಗಿಯೂ. ಶಾಲಿಕನಾಥನಸಹಾಧ್ಯಾಯಿಯಾಗಿಯೂ ಇದ್ದನೆಂದೂ, ಮಹಾವ್ರತನು ಕುಮಾರಿಲನ ಶಿಷ್ಯನೂ, ಅವನ ಅನುಯಾಯಿಯಾಗಿದ್ದನು ಎಂದು ಹೇಳಿರುವುದು ವ್ಯಕ್ತವಾಗುಗುತ್ತದೆ. ಪ್ರಬೋಧಚಂದ್ರೋದಯಕಾರನಾದ ಕೃಷ್ಣಮಿಶ್ರನು ತಾನು ಈ ನಾಟಕವನ್ನು ಬರೆಯುವ ವೇಳೆಗೆ ಸುಮಾರು ಕ್ರಿ. ಶ. ೭ನೆಯ ಶತಮಾನದವರಾದ ಮಹೋದಧಿ ಮತ್ತು ಮಹಾವ್ರತರ ಗ್ರಂಥಗಳನ್ನು ದೊರಕಿಸಿಕೊಂಡಿರಬೇಕಾಗಿ ಬೋಧೆಯಾಗುತ್ತದೆ. ಪ್ರಬೋಧಚಂದ್ರೋದಯದ ವ್ಯಾಖ್ಯಾನಕಾರನು ಈ ಮೇಲ್ಕಂಡವರ ಅಭಿಪ್ರಾಯಗಳು ಎಲ್ಲಿಯೂ ಹೇಳಲ್ಪಟ್ಟಿರುವುದಿಲ್ಲವೆಂದು ಹೇಳುವನಾದರೂ ಭವನಾಥನ "ನ್ಯಾಯವಿವೇಕ"§ ಎಂಬ ಗ್ರಂಥದಲ್ಲಿ ಇವರಿರ್ವರ ವಿಚಾರವಾಗಿ ಹೇಳಲ್ಪಟ್ಟಿರುವುದಾಗಿ ಒಕ್ಕಣಿಸಿರುವನು.† ಇದನ್ನೇಕೆ ಬರೆದನೆಂಬ ವಿಚಾರವಾಗಿ ಇವನು ಸಂನ್ಯಾಸಿಯಾಗಿದ್ದು ಈತನಲ್ಲಿ ಅನೇಕರು ಪಾಠ ಪ್ರವಚನಗಳನ್ನು ಓದುತ್ತಿದ್ದಂತೆಯೂ, ಅವರಲ್ಲೊಬ್ಬನು ವೇದಾಂತ ವಿಷಯಪರಾಙ್ಮುಖನಾಗಿ ಶೃಂಗಾರರಸಪ್ರಧಾನವಾದ ಕಾವ್ಯನಾಟಕಾದಿ ಗ್ರಂಥಗಳನ್ನು ಮಾತ್ರವೇ ಓದುತ್ತಿದ್ದಹಾಗೂ ಅವನಿಗೆ ಶೃಂಗಾರಾದಿರಸಗಳ ಮೂಲಕ ವೇದಾಂತ ವಿಚಾರವನ್ನು ಬೋಧಿಸುವುದಕ್ಕಾಗಿ ಈ ನಾಟವನ್ನು ಬರೆದುದಾಗಿ ವಿದ್ವತ್ಸಂಪ್ರದಾಯಕ್ರಮಾಗತಕಥೆಯೂ ಇರುವುದು ಈ ನಾಟಕವಿಷಯವೇನೆಂಬುದನ್ನು ಗ್ರಂಥದ ಹೆಸರಿನಿಂದಲೇ ಊಹಿಸ

* ಪ್ರಬೋಧಚಂದ್ರೋದಯ. Nirnaya Sagara Edition P 53.

§ ನ್ಯಾಯವಿವೇಕ ಪುಟ ೧೦೪—೧೧೦.

† Journal of oriental Research Vol II P. 62-63.

ಬಹುದಾಗಿದೆ. ಇದರ ರಸವು ಶಾಂತರಸವೆಂದು ಸೂತ್ರಧಾರನು "ಶಾಂತರಸಪ್ರಯೋಗಾಭಿನಯೇನಾತ್ಮಾನಂ" ಎಂದು ಹೇಳಿಕೊಂಡಿರುವುದರಿಂದ ಸ್ಪಷ್ಟವು.

ಪ್ರಬೋಧಚಂದ್ರೋದಯದ ಕಥಾಸಾರ: —

ಈಶ್ವರನಿಂದ ಮಾಯೆಯಲ್ಲಿ ಮನಸ್ಸೆಂಬ ಮಗನು ಹುಟ್ಟಿದನು. ಆ ಮಗನಿಗೆ ಪ್ರವೃತ್ತಿ ಮತ್ತು ನಿವೃತ್ತಿ ಎಂಬ ಇಬ್ಬರು ಮಡದಿಯರು. ಮೊದಲನೆಯ ಹೆಂಡತಿಯಾದ ಪ್ರವೃತ್ತಿಯು ಮಹಾಮೋಹ, ಕಾಮ, ಕ್ರೋಧ, ಅಹಂಕಾರ, ಮದ ಮಾತ್ಸರ್ಯ ಮೊದಲಾದ ಮಕ್ಕಳನ್ನೂ ರತಿ ಹಿಂಸೆ ಮೊದಲಾದ ಸೊಸೆಯರನ್ನೂ ಲೋಭ, ತೃಷ್ಣಾಮೊದಲಾದ ಮುಮ್ಮಕ್ಕಳನ್ನೂ ಅನೃತಮೊದಲಾದ ಮರಿಮಕ್ಕಳನ್ನೂ ಪಡೆದು ಮೂರುಲೋಕಗಳನ್ನೂ ವ್ಯಾಪಿಸಿದಳು. ಮಹಾಮೋಹನು ಅಜ್ಞಾತವನ್ನೊಂದಿರೊಡಗೂಡಿ ತಂದೆಯನ್ನು ಕ್ಷಣಮಾತ್ರವೂ ಎಡೆಬಿಡದೆ ಕಲಿ, ಚಾರ್ವಾಕ, ಸೌಗತ ಕ್ಷಪಣಕ ಸೋಮಸಿದ್ಧಾಂತ, ತಾಮಸೀಶ್ರದ್ಧಾ ರಾಜಸೀಶ್ರದ್ಧಾ ಮೊದಲಾದವರ ಸಹಾಯದಿಂದ ತನ್ನ ತಂದೆಯ ರಾಜ್ಯವನ್ನು ತನ್ನಾಳ್ವಿಕೆಗೆ ಒಳಪಡಿಸಿಕೊಂಡಿದ್ದನು ನಿವೃತ್ತಿಯ ಮಗನಾದ ವಿವೇಕನು ಮತಿಯೆಂಬ ಸತಿಯಿಂದೊಡಗೂಡಿ ಯಮನಿಯಮಾದ್ಯಷ್ಟ ಮಂತ್ರಿಗಳ ನೆರವನ್ನು ಪಡೆದು ಧರ್ಮನ ಮಗಳಾದ ಶ್ರದ್ಧೆಯಿಂದಲೂ ಅವಳ ಮಗಳಾದ ಶಾಂತಿಯಿಂದಲೂ ಶಾಂತಿಯ ಸಖಿಯರಾದ ಕರುಣಾ, ಮೈತ್ರೀ, ಮುದಿತಾ, ಉಪೇಕ್ಷಾ ಇವರಸಹಾಯದಿಂದಕೂಡಿ ವಿಷ್ಣುಭಕ್ತಿಯ ಅನುಗ್ರಹದಿಂದ ವಸ್ತುವಿಚಾರ, ಕ್ಷಮಾ, ಸಂತೋಷ ಮೊದಲಾದ ಸಭ್ಯರೊಡನೆಬೆರೆದು ಕಾಮಾದಿಗಳನ್ನು ಗೆದ್ದು ಹಿರಿಯಹೆಂಡತಿಯಾದ ಪ್ರವೃತ್ತಿಯ ವಿರಹದಿಂದ ಮನಸ್ಸೆಂಬ ಮಗನನ್ನು ತಪ್ತನಾಗುವಂತೆ ಮಾಡುವನು.

ಅನಂತರ 'ಮನಸ್ಸು'ಎಂಬ ಮಗನು ಸರಸ್ವತಿಯಿಂದ ವೈರಾಗ್ಯಬೋಧೆಯನ್ನು ಪಡೆದು ಮೀಮಾಂಸಾ, ಶ್ರೌತವಿದ್ಯಾ ಇವುಗಳಲ್ಲಿ ಸ್ಥಳವನ್ನು ಹೊಂದದೆ ಮುಂದಾಗಿ ತರ್ಕವಿದ್ಯೆಗೆಸಿಲುಕಿ ನರಳಿ ಗೀತಾ ಎಂಬ ಮಿತ್ರಳೊಡಗೂಡಿದ ಉಪನಿಷದ್ದೇವಿಯಲ್ಲಿ ನುರಕ್ತನಾಗಿ ಪ್ರಬೋಧಚಂದ್ರನೆಂಬ ಮಗನನ್ನೂ ವಿದ್ಯಾಎಂಬ ಮಗಳನ್ನೂಪಡೆದು ಮಧುಮತೀ ಮೊದಲಾದವರ ಮಾಯೆಗೆ ಒಳಗಾಗದೆ ಪುಣ್ಯಪೂತನಾದ ಪುರುಷನಿಗೆ ನಿತ್ಯಸುಖವನ್ನುಂಟುಮಾಡುವನು. ಇದನ್ನು ಇನ್ನೂ ಸಂಗ್ರಹಿಸಿಹೇಳುವುದಾದರೆ ಮತಿವಿವೇಕವೇ ಕಥಾನಾಯಕ. ಪ್ರಬೋಧಚಂದ್ರೋದಯವೇ ಕಥಾವಿಷಯ. ಬೌದ್ಧಕಾಪಾಲಾದಿಮತಖಂಡನವೂ; ಕಾಮಕ್ರೋಧಾದಿನಿರಸನವೂ ಶಮದಮಾದಿಷಟ್ಕಸಂಪತ್ತಿಯಿಂದಕೂಡಿ ವಿವೇಕವನ್ನು ಬೋಧಿಸುವುದರಮೂಲಕ ಅವಾಙ್ಮಾನಸಗೋಚರನಾದ ಪರಬ್ರಹ್ಮಪದಾರ್ಥನಿರೂಪಣದಿಂದ ಸಚ್ಚಿದಾನಂದ ಪದವಿಯನ್ನು ದೊರಕಿಸಿಕೊಡುವುದಾಗಿದೆ ಎಂದು ಹೇಳಬೇಕಾಗುವುದು ಅಥವಾ ಅದ್ವೈತವೇ

ಕಥಾವಸ್ತು ಎಂದರೂ ಸಲ್ಲುವುದು. 'ಶಾಂತ' ರಸದ ಜೊತೆಗೆ ಇತರ ರಸಗಳೂ ಅಲ್ಲಲ್ಲಿ ಜೋಡಣೆಯಾಗಿರುವುವು.

ರಾಮಾಯಣದಲ್ಲಿ ರಾಮರಾವಣರಿಗೆ, ಮಹಾಭಾರತದಲ್ಲಿ ಕೌರವ ಪಾಂಡವರಿಗೆ ಯುದ್ಧವು ಜರುಗಿದಂತೆ, ಈ ಪ್ರಬೋಧಚಂದ್ರೋದಯ ನಾಟಕದಲ್ಲಿ ಮಾನವ ಪ್ರಕೃತಿಯಲ್ಲಿ ಕಂಡುಬರುವ ಸುಗುಣ ದುರ್ಗುಣ ಸಂಕುಲ ಸಮರವು ನಿರೂಪಿತ ವಾಗಿದೆ. ಇಂತಹ ಅಧ್ಯಾತ್ಮ ವಿಷಯ-ಗಳನ್ನೊಳಗೊಂಡಿರುವ ಮತಗ್ರಂಥಗಳು ಲಕ್ಷೋಪಲಕ್ಷವಿರುವುವಾದರೂ ಮನೋಹರವಾದ ನವರಸಪೋಷಣೆಗಳ ಮೂಲಕ ಸಮಾಜ ಕಲ್ಯಾಣವನುದ್ದೇಶಿಸಿ ವಿಲಕ್ಷಣಪಾತ್ರಗಳುಳ್ಳ ಇಂತಹ ದೃಶ್ಯಕಾವ್ಯ ಗಳು ಅತ್ಯಂತವಿರಳವೆನಬೇಕಾಗುವುದು.

ಮಹಾಮೇಧಾವಿಯಾದ **ಬನಿಯರ್** ಎಂಬವನು ಆಂಗ್ಲಭಾಷೆಯಲ್ಲಿ "ಯಾತ್ರಿಕರ ಪರ್ಯಟನ" (Pligrims Progress) ಎಂಬ ಗದ್ಯಗ್ರಂಥವನ್ನು ಬರೆದಿರುವನು.

ಕವಿಪುಂಗವನಾದ ಗೀಟೆ (Goethe) ಯು "ಫಾಸ್ಟ್" ಎಂಬ ಲೋಕೋ ತ್ತರ ಗ್ರಂಥವನ್ನುಬರೆದು ಇರುವನು.

ಸರಸಕವಿತಾಮಾಧುರೀಧುರೀಣನಾದ ವೇಂಕಟನಾಥನು ಸಂಕಲ್ಪಸೂರ್ಯೋ ದಯವೆಂಬ ನಾಟಕವನ್ನು ಸಂಸ್ಕೃತದಲ್ಲಿ ಬರೆದು ಕೀರ್ತಿಶೇಷನಾಗಿರುವನು. ಇದ ಲ್ಲದೆ ಪಿಂಗಲಿಸೂರಣಾರ್ಯನೆಂಬವನು 'ಕಳಾಪೂರ್ಣೋದಯವೆಂಬ ಗ್ರಂಥವನ್ನು ಆಂಧ್ರಭಾಷೆಯಲ್ಲಿಯೂ, ಅನಂತನಾರಾಯಣಸೂರಿಯು ಮಾಯಾವಿಜಯವೆಂ ಬುದನ್ನೂ, ವಾದಿಚಂದ್ರನು ಜ್ಞಾನಸೂರ್ಯೋದಯವೆಂಬುದನ್ನೂ ಬರೆದಿರುವುದಲ್ಲದೆ ಪದ್ಮಸುಂದರನ ಜ್ಞಾನಚಂದ್ರೋದಯ, ಕವಿಕರ್ಣಪೂರನ ಚೈತನ್ಯಚಂದ್ರೋದಯ; ಗೋಕುಲನಾಥೋಪಾಧ್ಯಾಯ ಪಿರಚಿತ ಅಮೃತೋದಯ, ಯಶಃಪಾಲನಮೋಹ ರಾಜಪರಾಜಯ ಇವು ಈ ಜಾತಿಗೆ ಸೇರಿದವುಗಳಾಗಿರುವುವು.

ಪ್ರಬೋಧ ಚಂದ್ರೋದಯ ನಾಟಕದಲ್ಲ ಚಾರಿತ್ರಕ ವಿಷಯುಗಳಾಗಲೀ ಸಾಂಘಿಕ ವಿಚಾರಗಳಾಗಲಿ, ಅಂತರ್ನಿಬದ್ಧ, ಅನ್ಯೋಪದಿಷ್ಟ ಭಾಗಗಳಾಗಲಿ ಯಾವುವೂ ಇಲ್ಲದೆ, ಸ್ವಾಭಾವಿಕತತ್ವವನ್ನು ಮೀರದೆ ಕಥಾನಿರ್ಮಾಣವು ಅತ್ಯಂತ ವಿಶದವಾಗಿಯೂ, ಆಡಂಬರ ಶೂನ್ಯವಾಗಿಯೂ ಕಲ್ಪಿಸಿ ಬರೆಯಲ್ಪಟ್ಟಿರುವುದರಿಂದ ಕೇವಲ ನಾಟಕದೃಷ್ಟಿಯಿಂದಲೇ ಪರಿಶೀಲಿಸುವ ರಸಿಕ ಜಿಜ್ಞಾಸುಗಳಿಗೆ ಅಲ್ಲಲ್ಲಿ ಕೊಂಚ ನೀರಸವಾಗಿ ತೋರಬಹುದಾಗಿದೆ. ಪ್ರಬೋಧ ಚಂದ್ರೋದಯಕ್ಕೆ 'ಚಂದ್ರಿಕಾ' ಮತ್ತು 'ಪ್ರಕಾಶ' ಎಂಬವ್ಯಾಖ್ಯಾನವಿರುವುದು. ಇದರಲ್ಲಿ ಲೋಕಾ ಯತ (ಚಾರ್ವಾಕ)ಮತ ತತ್ವವು ಹೀಗೆಂದು ಹೇಳಿರುವುದು.—

" ಸರ್ವಧಾ ಲೋಕಾಯತಮೇವ ಶಾಸ್ತ್ರಂ, ಯತ್ರಪ್ರತ್ಯಕ್ಷಮೇವಪ್ರಮಾಣಂ ಪೃಥಿವ್ಯಪ್ತೇಜೋವಾಯವಸ್ತತ್ತ್ವಾನಿ, ಅರ್ಥಕಾಮೌ ಪುರುಷಾರ್ಥೌ, ಭೂತಾನ್ಯೇವಚೇತಯಂತೇ, ನಾಸ್ತಿಪರಲೋಕಃ, ಮೃತ್ಯುರೇವಾಪವರ್ಗಃ||·"

ಚಾರ್ವಾಕಮತವೇ ಶಾಸ್ತ್ರ ಪ್ರತ್ಯಕ್ಷವಾದುದೇ ಪ್ರಮಾಣ. ಕಾಣುವ ಪೃಥ್ವಿವಾಯ್ವಾದಿಗಳೇ ಭೂತಗಳು. ಅರ್ಥಕಾಮಗಳೇ ಪುರುಷಾರ್ಥ. ಸಮಷ್ಟಿ ರೂಪದಿಂದ ಭೂತಗಳೇ ಜ್ಞಾನವನ್ನುಂಟುಮಾಡುವುವು. ಪರಲೋಕವಿಲ್ಲ. ಮರಣವೇ ಮೋಕ್ಷ

ಇದರಲ್ಲಿನವಾರಾಣಸಿಯ ವರ್ಣನ :—

" ಇಯಂ ಚ ನಾತಿದೂರೇ ದರ್ಶನಪಥಮವತೀರ್ಣಾ ತ್ರಿಭುವನಪಾವನೀ ವಾರಾಣಸೀನಾಮನಗರೀ |

ಅವಿಘಾರಾಯಂತ್ರಸ್ಖಲಿತ ..........ಪತಾಕಾವಲಿರಿಯಂ || ಪ್ರ. ಚಂ. ೪—೨.

ಏತಾಶ್ಚ ಪ್ರತಿಮುಕುಲಂ ಲಗ್ನಮಧುಪಾವಲೀರಣಿತಮುಖರಾ ಜೃಂಭಾಭರ ವಿಗಲನ್ಮಕರಂದಬಿಂದುದುರ್ದಿನಾಃ ಕುಸುಮಸುರಭಯೋ ನಾತಿದೂರೇ ಶ್ಯಾಮಾಯಮಾನಘನಚ್ಛಂದಚ್ಛಾಯಾತರವೋ ನಗರಪರ್ಯಂತೋದ್ಯಾನ ಭೂಮಯಃ| ಯತ್ರೈತೇ ಮರುತೋಽಪಿ ಗೃಹೀತಪಾಶುಪತವ್ರತಾ ಧೂಲಿ ಮುದ್ಧೂಲಯಂತಸ್ತಾಪಸಾ ಇವ ಲಕ್ಷ್ಯಂತೇ ! ತಥಾಹಿ —

ತೋಯಾರ್ದ್ರಾಃ ಸುರಸರಿತಃ ಸಿತಾಃ ಪರಾಗೈ
ರರ್ಚಂತಶ್ಚ್ಯುತಕುಸುಮೈರಿವೇಂದುಮೌಲಿಂ
ಪ್ರೋದ್ಗೀತಾಂ ಮಧುಪರುತೈಃ ಸುತ್ತಿಂ ಪಠಂತೋ
ನೃತ್ಯಂತಿ ಪ್ರಚಲಲತಾಭುಜೈಃ ಸಮೀರಾಃ || ೪-೨೫

ಈ ಪತ್ತನದ ಬಳಿಯಣ ಕೈದೋಟಗಳು:—

ಹೂಗಳ ಮೇಲೆ ಕುಳಿತುಕೊಂಡು ಝೇಂಕರಿಸುವ ದುಂಬಿಗಳಿಂದಲೂ ಅರಳಿದ ಹೂಗಳಿಂದ ಸುರಿವ ಮರಂಗಂಗಳಿಂದಲೂ ದಟ್ಟವಾಗಿರುವ ಗಿಡಗಳ ನೆರಳಿನಿಂದಲೂ ಕಂಗೊಳಿಸುತ್ತಿರುವುವು. ಪುಷ್ಪ ಧೂಳಿಯನ್ನು ಧರಿಸಿರುವ ಪವನನು ಪಾಶುಪತವ್ರತವನ್ನು ಧರಿಸಿ ಇಲ್ಲಿ ತಪಸ್ಸುಮಾಡುತ್ತಿರುವ ಮುನಿಜನರಂತೆ ಕಾಣುವನು. ಇನ್ನೂ:—

ಸಮೀರಣನು ಅಮರಗಂಗೆಯಲ್ಲಿ ಮಿಂದು ಅಲುಗಿಸುವುದರಿಂದ ಅಲ್ಲಾಡುವ ಲತೆಗಳ ನರ್ತನಗಳಿಂದಲೂ, ಭ್ರಮರಗಳ (ಸ್ತುತಿಪರ) ಝೇಂಕಾರ ಗೀತಂಗಳಿಂದಲೂ ಕೂಡಿ ಪುಷ್ಪಗಳ ಶುಭ್ರಪರಾಗಂಗಳಿಂದ ಪರಶಿವನನ್ನು ಅರ್ಚಿಸುತ್ತಿರುವನೋ ಎಂಬಂತೆ ನಲಿಯುತ್ತಿರುವನು.

* ಪ್ರಬೋಧಚಂದ್ರೋದಯನಾಟಕ ಪ್ರಸ್ತಾವನೆ.

ಪ್ರಭವತಿ ಮನಸಿ ವಿವೇಕೋ ವಿದುಷಾಮಪಿ ಶಾಸ್ತ್ರಸಂಭವಸ್ತಾವತ್
ನಿಪತಂತಿ ದೃಷ್ಟಿವಿಶಿಖಾ ಯಾವನ್ನೇಂದೀವರಾಕ್ಷೀಣಾಂ || ೧—೧೧.

ಮನುಷ್ಯನು ಮಹಾವಿದ್ವಾಂಸನೂ ವಿವೇಕಿಯೂ ಆಗಿದ್ದರೂ ಅಂತಹ ವಿವೇಕವು ಯುವತಿಯ ದೃಷ್ಟಿಬಾಣವು ನೆಡುವವರೆಗೆ. ಅನಂತರ ಆ ವಿವೇಕವು ಇರದು.

ಆದಿಕೇಶವನಸ್ತುತಿಯು ಹೀಗಿರುವುದು:—

"ಜಯ ಜಯ ಭಗವನ್ ಅಸುರಜಯಚಕ್ರಚೂಡಾಮಣಿಶ್ರೇಣಿನೀರಾಜಿತೋಪಾಂತಪಾದದ್ವಯಾಂಭೋಜ ರಾಜನ್ನಖದ್ಯೋತಖದ್ಯೋತಕಿರ್ಮೀರಿತಸ್ವರ್ಣಶಿರಸ್ಫುರದ್ವೈತವಿಭ್ರಾಂತಿಸಂತಾನಸಂತಪ್ತವಂದಾರು ಸಂಸಾರನಿದ್ರಾಪಹಾರೈಕದಕ್ಷ ಕ್ಷಮಾಮಂಡಲೋದ್ಧಾರಸಂಭಾರಸಂಘಟ್ಟದಂಷ್ಟ್ರಾಗ್ರಕೋಟಿಸ್ಫುರದ್ಭೈರವಚಕ್ರ ಕ್ರಮಾಕ್ರಾಂತಲೋಕತ್ರಯ ಪ್ರಬಲಭುಜಬಲೋದ್ಧೃತಗೋವರ್ಧನಚ್ಛತ್ರ ನಿವಾರಿತಾಖಂಡಲೋದ್ಯೋಜಿತಾಕಾಂಡಚಂಡಾಂಬುವಾಹಾತಿವರ್ಷತ್ರಸದ್ಗೋಕುಲತ್ರಾಣವಿಸ್ಮಾಪಿತಾಶೇಷವಿಶ್ವ ಪ್ರಭೋ ವಿಬುಧರಿಪುವಧೂವರ್ಗಸೀಮಂತಸಿಂದೂರಸಂಧ್ಯಾಮಯೂಖಚ್ಛಟೋನ್ಮಾರ್ಜನೋದ್ದಾಮಧಾಮಾಧಿಪ ತ್ರಸ್ತದೈತ್ಯೇಂದ್ರವಕ್ಷಸ್ತಟೀಪಾಟನಾಕುಂಠಭಾಸ್ವನ್ನಖಶ್ರೇಣಿಪಾಣಿದ್ವಯಸ್ರಸ್ತಸಿಸಾರಿರಕ್ತಾರ್ಣವಾಮಗ್ನಲೋಕತ್ರಯ ತ್ರಿಭುವನರಿಪುಕೈಟಭೋದ್ದಂಡಕಂಠಾಸ್ಥಿಕೂಟಸ್ಫುಟೋನ್ಮಾರ್ಜಿತೋದ್ದಾಮಚಕ್ರಸ್ಫುರಜ್ಜ್ಯೋತಿರುಲ್ಲಾಸಿತೋದ್ದಾಮದೋರ್ದಂಡಖಂಡೇಂದುಚೂಡಾಪ್ರಿಯ ಪ್ರೌಢದೋರ್ದಂಡವಿಭ್ರಾಂತಮಂಥಾಚಲಕ್ಷುಬ್ಧದುಗ್ಧಾಂಬುಧಿಪ್ರೋಸ್ಥಿತಶ್ರೀಭುಜವಲ್ಲೀಸಂಶ್ಲೇಷಸಂಕ್ರಾಂತಪೀನಸ್ತನಾಭೋಗಪತ್ರಾವಳೀಲಾಂಛಿತೋರಸ್ಥಲಸ್ಥೂಲಮುಕ್ತಾಫಲೋದಾರ ಹಾರಪ್ರಭಾಮಂಡಲಸ್ಫುರತ್ಕಂಠವೈಕುಂಠ ಭಕ್ತಸ್ಯ ಲೋಕಸ್ಯ ಸಂಸಾರಮೋಹಚ್ಛಿದಂ ದೇಹಿ ಬೋಧೋದಯಂ ದೇವ ತುಭ್ಯಂ ನಮಃ ||



## ಯಾ ದ ವ ಪ್ರ ಕಾ ಶ

ಇವನು ಮೊದಲು ಅದ್ವೈತಸಂನ್ಯಾಸಿ, ಏಕದಂಡಿ, ರಾಮಾನುಜಾಚಾರ್ಯನ (೧೦೧೭-೧೧೩೭.) ಪೂರ್ವಾಶ್ರಮದ ವಿದ್ಯಾಗುರು. "ಸತ್ಯಂಜ್ಞಾನಮನಂತಂಬ್ರಹ್ಮ" "ಸರ್ವಂಖಲ್ವಿದಂ ಬ್ರಹ್ಮ" "ತಸ್ಯಯಥಾಕಾಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ಶ್ರುತಿವಚನಗಳಿಗೆ ಅರ್ಥಮಾಡುವಲ್ಲಿ ಗುರುಶಿಷ್ಯರೊಳಗೆ ವಿವಾದವುಂಟಾಗಿ ಯಾದವಪ್ರಕಾಶನು ಶಿಷ್ಯನ ಅಶ್ರೇಯಸ್ಸನ್ನು ಕೋರುವನು.

ರಾಮಾನುಜಾಚಾರ್ಯನ ಚಿಕ್ಕಮ್ಮನ ಮಗನಾದ ಗೋವಿಂದಭಟ್ಟನೆಂಬವನು ಅಣ್ಣನ ಸಹಪಾಠಿಗಾಗಿ ಕಂಚಿಯಲ್ಲಿಯೇ ಯಾದವ ಪ್ರಕಾಶನಬಳಿ ವ್ಯಾಸಂಗಮಾಡುತ್ತಿದ್ದನು. ಒಂದಾನೊಂದು ಕಾಲದಲ್ಲಿ ಗುರುವು ತನ್ನ ಶಿಷ್ಯರೊಡನೆ ಗಂಗಾಯಾತ್ರೆಗೆಹೋಗಿ ಮಾಘಸ್ನಾನ ಮಾಡುತ್ತಿರುವಕಾಲದಲ್ಲಿ ತನ್ನದೊಂದು ಲಿಂಗವು ಗೋವಿಂದಭಟ್ಟನ ಕೈಗೆ ಬಂದು ಸೇರುವಂತೆ ಮಾಡಿ—"ಏನಾಶ್ಚರ್ಯವಿದು? ನಿಮ್ಮಲ್ಲಿ ಪರಿಪೂರ್ಣವಾದ ಶಿವಾನುಗ್ರಹವಿದೆ! ಇನ್ನು ಮುಂದೆ ಈ ಲಿಂಗವೇ ನಿಮಗೆ ಆರಾಧ್ಯದೇವತೆ!" ಎಂದು ಹೇಳಿ ಶಿವಾಧಿಕ್ಯವನ್ನು ಬೋಧಿಸಿ "ಉಳ್ಳಂಗೈಕ್ಕೊಣರ್ನ್ದ ನೈನಾರ್" ಎಂದು ಗೋವಿಂದಭಟ್ಟನಿಗೆ ಹೆಸರಿಟ್ಟನು. ಮುಂದೆ ರಾಮಾನುಜಾಚಾರ್ಯನು ಯತ್ಯಾಶ್ರಮಸ್ವೀಕಾರಮಾಡಿದ ಬಳಿಕ ಯಾದವ ಪ್ರಕಾಶನು ತನ್ನ ತಾಯಿಯ ಅಭೀಷ್ಟದ ಮೇರೆಗೆ ರಾಮಾನುಜಾಚಾರ್ಯರಲ್ಲಿಗೆ ಹೋಗಿ ಪ್ರದಕ್ಷಿಣ ನಮಸ್ಕಾರಮಾಡಿ ಅವರಿಂದ ಪ್ರಾಯಶ್ಚಿತ್ತವನ್ನು ಹೊಂದಿ ಶಿಷ್ಯನಾಗಿ ತ್ರಿದಂಡಸಂನ್ಯಾಸಧಾರಣಮಾಡಿ "ಗೋವಿಂದಯೋಗಿ "ಎಂಬ ಹೆಸರಿನಿಂದ ಶ್ರೀವೈಷ್ಣವನಾದನು. ಸಂನ್ಯಾಸಿಯಾದವನು ಏಕದಂಡಿಯಾಗಿರಬೇಕೇ ತ್ರಿದಂಡಿಯಾಗಿರಬೇಕೇ ಎಂಬ ವಿಚಾರದಲ್ಲಿ ಇದೇ ಕಾಲದಲ್ಲಿ ವಾದ ವಿವಾದಗಳು ಹುಟ್ಟಿರಲು ಯಾದವ ಪ್ರಕಾಶನು ರಾಮಾನುಜಾಚಾರ್ಯರ ಅಪ್ಪಣೆಯಿಂದ "ಯತಿಧರ್ಮಸಮುಚ್ಚಯ" ಎಂಬ ಗ್ರಂಥವನ್ನು ಬರೆದು ಅವರಲ್ಲಿ ತ್ರಿದಂಡಸಂನ್ಯಾಸವನ್ನೇ ಸ್ವೀಕರಿಸಿದನು. ಇವನು ಕ್ರಿ. ಶ. ೧೧ ನೆಯ ಶತಮಾನದಲ್ಲಿ ವೈಜಯಂತೀ ಎಂಬ ಕೋಶವನ್ನು ಬರೆದಿರುವನು. †ಎಂದು ತಿಳಿಯುವುದಾದರೂ ನಮ್ಮ ಮನೋದೇವತೆಯು ಗ್ರಂಥಕರ್ತೃತ್ವ ವಿಚಾರದಲ್ಲಿ ಇವನಲ್ಲವೇದೇಶಂಕಿಸುತ್ತದೆ. ಇತರ ಪ್ರಮಾಣಗಳು ದೊರೆತು ಗ್ರಂಥವು ಇವನದೆಂದು ಸಾಧಿಸುವುದಾದರೆ, ಆಗ ಕ್ರಮಪಡಿಸಿಕೊಳ್ಳುವೆವು.

---

## ಸೋಡ್ಢಲ.

"ಜನ್ಮಾಸ್ಯ ಕವೇರ್ಗುರ್ಜರಸ್ಯ ದಕ್ಷಿಣಪಿಭಾಗೇಲಾಠದೇಶೇ | ಯದಯಂ ಕವಿರಾರಂಭ ಏವಮಾಹ, "ತಸ್ಮಿನ್ನಶೇಷಭುವನ ವಿಖ್ಯಾತನಾಮನಿ ಮಹಾವಂಶೇ ದಲಿತಕಲಿಕಲಂಕಸಂಹತಿರಮ್ಮತಮಯಾಕಾರಕವಾನೀಯೋ ಸರ್ವದಾಪ್ರವಾಹ ಇವ ಭೂತಿಲೋಕಮಧಿಷ್ಠಿತೋ ಲಾಠದೇಶಮಾಸಿದುಮೇಶವಂಶಾವತೀರ್ಣಸ್ಯ ಮಹಾತ್ಮನಶ್ಚಂಡಪತೇರಂಗಜನ್ಮಾ ಸೋಲ್ಲಪೇಯೋ ನಾಮೇ" (ಪೃ ೧೨ ಪ ೬) ತಿ | ತತ್ರೈವಾಪು ಪದಮಿದಮಪ್ಯಾಹ "ಪ್ರಥಮತಃ ಪುತ್ರೋಪು ಪಂಪಾವತೀಸೂನು

---

* Life of Ramanujacharya Tamil Edition

† History of Sanskrit Literature P 180

ಸ್ಸೋಡ್ಢಲೋ ನಾಮ, ಸ ಖಲು ಸ್ವರ್ಲೋಕ ಶೋಭಾವಿಲುಂಠಿನಂ ಲಾಟ ದೇಶಮಧ್ಯಾಸೀತ್ " (ಪೃ ೧೨ ಪ ೧೧) ಇತಿ | ಅಥ ಲಾಟದೇಶೇ ಕಸ್ಮಿನ್ನ ಗರೇ ಗ್ರಾಮೇ ವಾಸ್ಯ ಜನ್ಮ? ಇದಂ ತು ನ ನಿಶ್ಚೇತುಂ ಶಕ್ಯತೇ | ಜನ್ಮ ಚಾಸ್ಯ ಕಾಯಸ್ಥವಂಶೇ | ಕಾಯಸ್ಥವಂಶಶ್ಚಾಧುನಾಽಪ್ಯನೇಕಧಾ ತತ್ರ ತತ್ರ ಪ್ರರೂಢಃ ಪ್ರವರ್ತತೇ | ಕವಿರಯಮಾತ್ಮನೋಽನ್ವಯಸ್ಯ ಮೂಲ ಪುರುಷಂ ಭ್ರಾತರಂಶಿಲಾದಿತ್ಯಸ್ಯ ನಾಮ್ನಾ ಕಲಾದಿತ್ಯಂ ಶ್ರೀಕಂಠ ಪಾರ್ಶ್ವಪರಿಚರಸ್ಯ ಕಾಯಸ್ಥಸಂಜ್ಞಸ್ಯ ಗಣವಿಶೇಷಸ್ಯಾವತಾರಂ ನಿರೂಪ ಯನ್ನಾರಂಭೇ ಸ್ತೌತಿ | ವಿಶೇಷಯತಿ ಚ ನಿಜವಂಶಂ, " ವಾಲಭೋ ನಾಮ ಕಾಯಸ್ಥವಂಶ (ಪೃ ೧೧ ಪ ೨೮)" ಇತಿ ಯಸ್ಮಾತ್ ವಲಭೀನಗ ರ್ಯಾಮಾಸೀದಸ್ಯ ವಂಶಸ್ಯ ಕೂಟಸ್ಥಃ ಕಲಾದಿತ್ಯಸ್ತಸ್ಮಾದ್ವಾಲಭ ಇತಿ ವಿಶೇಷಃ | ನಿಬಂಧಾರಂಭೇ ವಂಶಮಾತ್ಮನಃ ಪ್ರಪಂಚಯಂಸ್ತಥಾ ಶಿಲಾ ದಿತ್ಯಕಲಾದಿತ್ಯಯೋಸ್ಸಂವಾದೇ " ದೇವ ಕ್ಷತ್ರಿಯಾದುತ್ಪನ್ನ (ಪೃ ೬ ಪ ೧೨)" ಇತ್ಯಾದಿ ಕಲಾದಿತ್ಯವಚನಮನುವರ್ದ್ಯ ವ್ಯನಕ್ತ್ಯಾತ್ಮನ ಸ್ಸಂಭೂತಿಂ ಕ್ಷತ್ರಿಯಾನ್ವವಾಯೇ |

ಅಯಂ ಚ ಕವಿನೋದಾಹೃತಸ್ಸ್ವಾನ್ವಯಕ್ರಮಃ | ಕಂಟಸ್ಥಃ ಕಲಾದಿತ್ಯಃ | ತಸ್ಯಾನ್ವಯೇ ಸಮುದ್ಭೂತ್ ಚಂಡಪತಿಃ (೧) ತಸ್ಯಸೂನುಃ ಸೋಲ್ಲ ಪೇಯಃ (೨) ತಸ್ಯಸೂನುಸ್ಸೂರಃ (೩) ತಸ್ಯಸೂನುಃ ಕವಿರಸೌ **ಸೋಡ್ಢಲಃ** (೪).

ನರ್ಮದಾನದಿಯಿಂದ ಪರಿಪೂತವಾದ ಲಾಟದೇಶದವನು. ಇದು ಗುಜ ರಾತಿನ ದಕ್ಷಿಣದಿಕ್ಕಿನ ಹೆಸರು. ಕಾಯಸ್ಥವಂಶದವನು• ಕ್ಷತ್ರಿಯನು. ಕಾಯಸ್ಥ ವಂಶದಲ್ಲಿ ಅನೇಕಭಾಗಗಳಿರುವುವಾದರೂ ಇವನು ಕಾಯಸ್ಥಜಾತಿಯ "ವಾಲಭಿ" ಎಂಬ ಶಾಖೆಯವನು. ಶಿವನ ಬಳಿಯಲ್ಲಿರುವ ಪ್ರಮಥಗಣಗಳಲ್ಲೊಬ್ಬನಾದ "ಕಾಯಸ್ಥ" ಗಣ ಮೂರ್ತಿಯಾದ ಕಲಾದಿತ್ಯನೇ ಮೂಲಪುರುಷ. ಇವನು ಶಿಲಾ ದಿತ್ಯನ ಸೋದರನು. ಈ ಕಲಾದಿತ್ಯನ ವಂಶದಲ್ಲಿ ಚಂಡಪತಿಯೆಂಬವನು ಜನ್ಮ ಗ್ರಹಣಮಾಡಿದನು. ಇವನ ಮಗನ ಹೆಸರು ಸೋಲ್ಲಪೇಯನೆಂದು. ಇವನ ಮಗನ ಹೆಸರು ಸೂರನೆಂದು. ಇವನ ಮಗನೇ ಕವಿಸೋಡ್ಢಲ. ಇವನ ಜನ್ಮ ಭೂಮಿ ಯಾವುದೆಂಬುದು ಗ್ರಂಥದಲ್ಲಿ ತಿಳಿಯಬರುವಂತಿಲ್ಲವಾದರೂ ಇವನು ತನ್ನ ಜನ್ಮಭೂಮಿಯಲ್ಲಿಯೇ ಇದ್ದು ಪ್ರಸಿದ್ಧಿಗೆ ಬಂದುದಾಗಿ ಹೇಳಲಾಗು ವುದಿಲ್ಲ. ಚಿಕ್ಕತನದಲ್ಲಿಯೇ ಪಿತೃವಿಯೋಗವನ್ನು ಹೊಂದಿದ ಇವನನ್ನು ಗಂಗಾಧರನೆಂಬ ಇವನ ಸೋದರಮಾವನು ಬೆಳೆಸಿದನು. ಇವನಿಗೆ ಚಂದ್ರನೆಂಬ ಆಚಾರ್ಯನ ಬಳಿ ಶಿಕ್ಷೆಯಾದುದು. ಇವನು ವಿದ್ಯಾಭ್ಯಾಸವನ್ನು ಮುಗಿಸಿಕೊಂಡು

ತನ್ನ ದೇಶವನ್ನುಬಿಟ್ಟು ಆಗ ಕೊಂಕಣಕ್ಕೆ ರಾಜಧಾನಿಯಾಗಿದ್ದ "ಸ್ಥಾನಕಪತ್ತನ" (ಈಗಣ ಠಾಣ)ಕ್ಕೆ ಬಂದು ಆಗ ಅಲ್ಲಿಕ್ರಮವಾಗಿ ಆಳಿದ ಚಿತ್ತರಾಜ, ನಾಗಾರ್ಜುನ, ಮತ್ತು ಮುಮ್ಮಣಿರಾಜರ ಆಶ್ರಯವನ್ನು ಹೊಂದಿದುದಲ್ಲದೆ ಲಾಠದೇಶದ ಚಾಲುಕ್ಯರಾಜನಾದ ವತ್ಸರಾಜನ ಗೌರವಕ್ಕೂ ಪಾತ್ರನಾಗಿದ್ದನು. ಮೇಲೆ ಹೇಳಿದ ಮೂವರು ರಾಜರೂ ಸೋದರರಂತಿದ್ದರಲ್ಲದೆ, ವತ್ಸರಾಜನ ಸಮಕಾಲೀನರೂ ಆಗಿದ್ದರು.

**ಕಾಲ:**—ಕೊಂಕಣದ ಸಿಂಹಾಸನಕ್ಕೆ ಮೊದಲುಬಂದ ಜ್ಯೇಷ್ಠಪುತ್ರನ ಹೆಸರು ಚಿತ್ತರಾಜನೆಂದು. ಇವನು ಬಂದುದು ಕ್ರಿ. ಶ. ೧೦೨೬ ಎಂದು ಬರೆಸಿದ ಲೋಹ ಶಾಸನವಿದೆ. ಕೊನೆಯವನಾದ ಮುಮ್ಮಣಿರಾಜನು ಕ್ರಿ. ಶ. ೧೦೬೦ರಲ್ಲಿ ಸಿಂಹಾಸನಕ್ಕೆ ಬಂದುದಾಗಿ ಹೇಳುವಶಿಲಾಶಾಸನವು ದೊರೆಯುತ್ತದೆ.† ಕವಿಯು ಈ ಮೂವರು ರಾಜರಬಳಿಯಲ್ಲಿಯೂ ಇದ್ದುದಾಗಿ ಹೇಳಿಕೊಂಡಿರುವುದರಿಂದ ಇವನು ಕ್ರಿ. ಶ. ೧೦೨೬—೧೦೬೦ರ ವರೆಗೆ ಇದ್ದುದಾಗಿಯೂ ಇವನು ಕ್ರಿ. ಶ. ೧೧ನೆಯ ಶತಮಾನದವನೆಂಬದೂ ಸ್ಪಷ್ಟವಾಗಿದೆ.

**ಗ್ರಂಥ**.-ಇವನು "ಉದಯ ಸುಂದರೀ ಕಥಾ" ಎಂಬ ಚಂಪೂ ಗ್ರಂಥವನ್ನು ಬರೆದಿರುವನು. ಶೈಲಿಯು ಕಾದಂಬರೀಕಾರನಾದ ಮಹಾಕವಿ ಬಾಣನನ್ನು ಹೋಲುವುದು. ಇವನನ್ನು ಗುರ್ಜರದೇಶದ ಬಾಣಕವಿಯೆಂದರೂ ಸಲ್ಲುವುದು. ಇದನ್ನು ಸೋಡ್ಢಲನು ಕ್ರಿ. ಶ. ೧೦೨೬—೧೦೫೦ ರ ಮಧ್ಯಕಾಲದಲ್ಲಿ ಬರೆದಿರಬೇಕಾಗಿ ತೋರುತ್ತದೆ. ಹೇಗೆಂದರೆ ಇವನು ತನ್ನ ಗ್ರಂಥದಲ್ಲಿ "ಶೂರ್ಪಾರಕಾತ್ ಸಮಾನತೇನ"‡ ಎಂದು ಹೇಳಿರುವುದರಿಂದ ಲಾಟದೇಶದ ವತ್ಸರಾಜನು ಇದ್ದಾಗಲೇ ಬರೆದಿರಬೇಕಾಗಿ ಊಹಿಸಲಾಗುತ್ತದೆ. ಹೇಗೆಂದರೆ ವತ್ಸರಾಜನ ಮಗ ತ್ರಿಲೋಚನಪಾಲನು ಕ್ರಿ. ಶ. ೧೦೫೦ರಲ್ಲಿ ಕೊಟ್ಟ ದಾನಶಾಸನವು ದೊರೆಯುತ್ತದೆ. ಆದುದರಿಂದ ತ್ರಿಲೋಚನಪಾಲನು ಸಿಂಹಾಸನಕ್ಕೆ ಬರುವ ಹೊತ್ತಿಗೆ ಎಂದರೆ ಕ್ರಿ. ಶ. ೧೦೫೦ರ ಮೊಳಗೆ ವತ್ಸರಾಜನು ಸ್ಮೃತಿಶೇಷನಾಗಿರಬೇಕಾಗಿ ತೋರುತ್ತದೆ.

ಇದಲ್ಲದೆ ಈ ಗ್ರಂಥವು ಮುಗಿದ ಕೆಲವು ದಿವಸಗಳ ಅನಂತರ ಮುಮ್ಮಣಿರಾಜನು ಇದನ್ನು ಓದಿಸಿಕೇಳಿ ಬಹುಮಾನಿಸಿದುದಾಗಿ ತಿಳಿಯಬರುವುದರಿಂದ ಈ

Indian antiquary Part 5 P 277.

† Journal of the B B. R. A S. Part 12 P. 329.

‡ ಉದಯ ಸುಂದರೀ ಕಥಾ ಪುಟ ೧೫೬ ೧-೨.

ಕಾವ್ಯವು ಕ್ರಿ. ಶ. ೧೦೨೬-೧೦೫೦ರ ಮಧ್ಯದಲ್ಲಿ ನಿರ್ಮಿಸಲ್ಪಟ್ಟುದಾಗಿ ಸಿದ್ಧವಾಗುತ್ತದೆ. ಇವರಲ್ಲಿ ಕಥಾಸಂವಿಧಾನ ಚತುರತೆಯು ಹೆಚ್ಚಾಗಿರುವಂತೆ ತೋರದಿದ್ದರೂ ಗದ್ಯಭಾಗಗಳಿಗಿಂತ ಪದ್ಯಭಾಗವೇ ರಮ್ಯವಾಗಿರುವಂತೆ ನಮಗೆ ತೋರುತ್ತದೆ. ಅಲ್ಲಲ್ಲಿ ಸಮಯಕ್ಕೆ ತಕ್ಕುವಾದ ಬೋಧಪರ ಶ್ಲೋಕಗಳು ಇವನ ರಚನೆಗೆ ಮೆರಗು ಕೊಟ್ಟಂತಾಗಿದೆ. ಕಾದಂಬರೀಕಾರನಾದ ಬಾಣನದು ಮನಮೋಹನ ಶೈಲಿ. ಇವನದೂ ಕೊಂಚ ಹಾಗೆ. ಹಲವೆಡೆ ಶಬ್ದಾರ್ಥಚಾತುರ್ಯವೂ, ಸರಸಪದಪ್ರಯೋಗಗಳೂ, ವರ್ಣನಾದಕ್ಷತೆಯೂ ಚೆಲುವಾಗಿವೆ. ಮಾದರಿಗಾಗಿ ಕೆಲವನ್ನು ಒರೆದಿದೆ. ಇದರಲ್ಲಿ ಕವಿವಂಶನಿವೇದನ ಎಂಬುದು ಮೊದಲನೆಯ ಉಚ್ಛ್ವಾಸ. ಶುಕಲಾಭವೆಂಬದು ಎರಡನೆಯದು. ಮೂರನೆಯದು ಚಿತ್ರಸಂದರ್ಶನ. ಕುಮಾರಕೇಸರಿಸಮಾಗಮವೆಂಬುದು ನಾಲ್ಕನೆಯದು. ತಾಪಸೀರಕ್ಷಣವೆಂಬದು ಐದನೆಯದು. ತಾರಾವಳೀದರ್ಶನವೆಂಬದು ಆರನೇಯದು. ಉಭಯಮೇಳಕವೆಂಬದು ಏಳನೆಯದು. ಸರ್ವಾನಂದನೆಂಬ ಎಂಟು ಉಚ್ಛ್ವಾಸಗಳಿರುವುವು.

ಇದರಲ್ಲಿ ಕಂಡುಬರುವ ದುರ್ಗಾಸ್ತುತಿ :—

ವಿದ್ಯುತ್ಪುಂಜೋಗ್ರನೇತ್ರಂ ಪೃಥುಚಪಲಲಲಜ್ಜಿಹ್ವಮುದ್ವರ್ತಗಲ್ಲಂ
　ಸೃಕ್ಕಾಂತೋದಗ್ರದಂಷ್ಟ್ರಾಪ್ರಕಟವಿಸರಲಸ್ಥೂಲಪಿಂಗೋರ್ಧ್ವಕೇಶಂ
ವಕ್ತ್ರಂ ಕಲ್ಪಾಂತಕಾಲಪ್ರಬಲಘನಘಟಾಘೋಷಘೋರಾಟ್ಟಹಾಸಂ
　ಚಂಡಾಯಾಃ ಸ್ವರ್ಗಾರಿವರ್ಗಗ್ರಸನರಸಕಷದ್ದಂತದಂಡಂ ನಮಾಮಿ ||
　　　　　　　　ಉದಯಸುಂದರೀ ಕಥಾ ಪುಟ ೯೨.

ಪ್ರೇತವನವರ್ಣನ.—

ಪ್ರೇತೈಃ ಭಿಕ್ಷಾಯಮಾಣೈರ್ಜಲಂ ಸಿಲರ್ಯಮಾನಾವಿಷಂ
　ವೇತಾಲೀಭಿರುಪಾಸ್ಯಮಾನಮಭಿತಃ ಕಂಕಾಲರಂಕಾದವ್ಯೈಃ
ಅಂತಶ್ಛೇದಮುದಂಚಿತಾನಲಚಿತಾಚುಲ್ಲೀಭಿರುದ್ಭಾಸಿತಂ
　ಪಶ್ಯ ಪ್ರೇತವನಂ ಮಹಾಸವಿಮಾವಿಶಾಷಾಮಸೃಗ್ಭೋಜಿನಾಂ ||
ಮೌಲೌ ಬದ್ಧಾಂತ್ರರಜ್ಜುಃ ಪ್ರಜಪದಜಗರಗ್ರಂಥಿಗಾಢೋಗ್ರನಾಗ
　ಸ್ರಗ್ಗ್ರಾಸಾಃ ಸ್ಕಂಧಪೀಠೇ ಕೃತವಮಲಘುದಲಂ ಚಾಸ್ಥಿದಂಡಂ ದಧಾನಃ
ಫೇತ್ಕಾರೈರ್ದತ್ತತರ್ಕ್ಕಃ ಸಕಲವಪಿಕುಲಂ ಕಂಪಯನ್ ಕೌಣಪಾನಾಂ
　ವೇತಾಲಸ್ತಾಲದೀರ್ಘೋ ಭ್ರಮತಿ ಪಿತೃವನೇ ಪತ್ತನೇ ದಂಡಪಾಣಿಃ
ದೋರ್ದಂಡೋತ್ಕ್ಷೇಪವೇಗಾನಿಲನಿಬಿಡಭೃತಶ್ರೋತ್ರನಾಸಾಂಧರಂಧ್ರ
ಧ್ವಾನೈರ್ಲೋಲಾಸ್ಥಿಯಂತ್ರಕ್ವಣಸಪಟುಖಟತ್ಕಾರಸ್ಪೃಷ್ಟೈಃ ಪಾಟ್ಯೈಃ(ವಾದ್ಯೈಃ)
ಕುರ್ವಾಣಃ ಸ್ವಾಂಗ ಏವ ಪ್ರಗುಣಯತಿ ಲಯಾಲಂಬಿನೀ ಗೀತವಾದ್ಯೇ
　ನೃತ್ಯತ್ಯೇಷೋಽತ್ರ ಪಾತ್ರೀಕೃತರುಧಿರಸುರಾನಂದನೀಜಃ ಪಿಶಾಚಃ ||
ಏಕಂ ಕಕ್ಷಾಂತರೇಽನ್ಯಪೃಥುನಿ ಕರತಲೇ ಪಶ್ಯ ಶೇಷಂ ಚ ಮಾಂಸಂ
　ಭೃತ್ವಾ ವಕ್ತ್ರೋಽಪಸರ್ಪನ್ ಹಟಹರಣಪರೈರಾವೃತೋ ಭೂತಡಿಂಭೈಃ

ಸಂಭ್ರಾಂತೋ ಯಾತಿ ರುದ್ಧಶ್ಚಲತಿ ಕರಧೃತಃ ಕ್ರೋಧತೋ ಹುಂಕರೋತಿ
ಸ್ವಾಪ್ತೋಽಂಗೇ ಕೂರ್ಪರೇಣ ಪ್ರಹರತಿ ರಸತಿ ನ್ಯಂಚಿತಾ ಪ್ರೇತರಜ್ಞಃ
ಉದಯಸುಂದರೀ ಕಥಾ ಪುಟ ೯೦—೯೧ ||

ಇದರ ಭೀಭತ್ಸರಸಗಂಭೀರವನ್ನು ಆರ್ಯಕ್ಷೇಮೀಶ್ವರನ ಚಂಡಕೌಶಿಕ ನಾಟಕದಲ್ಲಿ ಬರುವ ಭೀಭತ್ಸರಸಕಾತರತೆಯೊಡನೆ ಹೋಲಿಸಿನೋಡಿ.

ಸೂರ್ಯೋದಯವರ್ಣನ : —

ಕಾಲಕ್ರಮಾದುಪರತಿಂ ಸಮುಪೇತವತ್ಯಾ
ವ್ಯಸ್ತೀಭವತ್ಸಟಿತನಷ್ಟಕಲೇವರಾಯಾಃ
ರಾತ್ರೇಃ ಕಪಾಲಮಿವ ಪಾಂಡುರಮಸ್ತಶೈಲ
ಕೂಲೇ ಲುಲೋಟ ಸರಭೀ (ಶು) ಹಿಮಾಂಶುಬಿಂಬಂ ||
ನಾದ್ಯಾಪ್ಯುಪೈತಿ ಭೃಗುಭೌಮ ಗುರುಪ್ರಧಾನ
ಸ್ತಾರಾಗಣೋಽಯಮಿತಿ ಕೋಪಕಷಾಯಿತಸ್ಯ
ಅಹ್ನಃ ಕಟಾಕ್ಷಲತಿಕೇವ ಹ್ಯಟತ್ಯುದಸ್ಥಾ
ದಾಶೋಣರೋಚಿ ರುದಯಾಚಲಪಾರ್ಶ್ವಸಂಧ್ಯಾ ||
ಪ್ರಾತಃ ಪ್ರಿಯಾ ರಚಿ ತಮಚ್ಛರುಚೋಽ(ಂಬರ)ಸ್ಯ
ಲಜ್ಜಾ (ಪರ್ಯಾ ?)ಯವಿದ್ರುಮದಲದ್ಯುತಿಸೋದರಾಭಂ
ಪೂರ್ವಾಚಲೇಃ ಸಮುದಭೂನ್ನವಪಟ್ಟಸೂತ್ರ
ಸತ್ಕುಂಚಿಕಾತಿಲಕ ಚಿಹ್ನ ಮಿವಾರ್ಕಬಿಂಬಂ || (ಪುಟ ೧೧೫)

ವೀಧೀವರ್ಣನ:—

ಯತ್ರಾಽಽಯಾಂತಿ ವಿಭೂತಿಮಿಂದ್ರನಗರನ್ಯಕ್ಕಾರಮಾತನ್ವತೀಂ
ದ್ರಷ್ಟುಂ ಮೇರುಗಿರೇಃ ಸ್ಥಲಾತ್ಸುಮನಸೋ ನಿತ್ಯಂ ತಥಾ ಹ್ಯಂಬರೇ
ದೃಶ್ಯಂತೇ ಸುರಸದ್ಮಹೇಮಕಲಶತ್ವಿಟ್ಛಟ್ಟಿಕಾನಾಂ ಮಿಷಾತ್
ತೇಷಾಂ ಕಾಂಚನಧೂಲಿಪಾಂಸುಲಪದ್ಧೈರಾಪಿಂಜರಾವೀಥಯಃ || ಪುಟ ೨೨)

ಕ್ಷೇತ್ರಪಾಲವರ್ಣನ;—

ಧೃತ್ವಾವೇಶಪ್ರಸಕ್ತ್ಯಾಜ್ವಲದನಲಮುಖೋನ್ಮುಕ್ತಪೇತ್ಕಾರಘೋರೈಃ
ಕ್ರೂರೈರುತ್ತಾಲತಾಲವ್ಯತಿಕರಮುಖರೀಭೂತಭೂಷಾಸ್ಥಿಮಾಲೈಃ
ಕ್ರೀಡಂತಂ ಪ್ರೇತರಂಗೈಃ ಕುಣಪಭುವಿ ಮಹಾಜಂಗಲಗ್ರಾಮಲೋಭ
ಭ್ರಾಮ್ಯದ್ಭಲ್ಲೂಕಭೂ (ಘೂ?) ಕಪ್ರಕರಪರಿಗತಂ ಕ್ಷೇತ್ರಪಾಲಂನಮಾಮಿ
|| (ಪುಟ ೬೧)

ವಸಂತಾಗಮವರ್ಣನ:—

ಭೂಮಿಃ ಕೋಮಲಸಾಂದ್ರಕಂದಲವತೀ ಮೇಘಾವನದ್ಧಂನಭೋ
ನೃತ್ಯನ್ಮತ್ತಮಯೂರಮಂದ್ರಮಧುರಧ್ವಾನೋಪರುದ್ಧಾ ದಿಶಃ

ವಾತಾಶ್ಚ ।ಪ್ರಸರತ್ಕದಂಬಕುಸುಮಸ್ಪರ್ಶಪ್ರಸನ್ನಾ ನಸೇ
ವಾಂತಿ ಸ್ಮ್ಯರಮಸಂಗರಾಗಜಲಧಿಂ ಕಲ್ಲೋಲಯಂತೋ ಹೃದಿ ||
(ಪುಟ ೧೮೩)

ಮೃದುಸಮಾರಣ ವರ್ಣನ:—

ಭೂಭ್ರುಭೂಮಿಂ ಕೇರಲೀನಾಂ ಮುರುಲಮೃಗದೃಶಾಂ ವಿಭ್ರಮೋತ್ತಂಸದೇಶಂ
ಚೋಲೀನಾಂ ಚಾರುಕಾಂಚೀವಿಷಯಮಪಿ ವಲೀಮಂಡಲಂ ಸಿಂಹಲೀನಾಂ
ಆಕ್ರಮ್ಯಾಂಬೋಧಿತೀರೇ ತರುಕುಸುಮರಜಸ್ತಂಭಮುತ್ತಂಭಯಂತೋ
ಯಾಮ್ಯಾಃ ಪುಷ್ಪಾಯುಧಸ್ಯ ವ್ಯದಧತ ಮರುತೋ ರಾಜ್ಯಮೇಕಾಂತಪತ್ರಂ||
(ಪುಟ ೧೨೨)

ಶ್ಲೋಕಮಾಧುರ್ಯಕ್ಕೆ.

ಕಿಂ ವಕ್ತ್ರದ್ಯುತಿಮತ್ಸರೈಕರಿಪುಣಾ ಚಂದ್ರೇಣ ದೂರೀಕೃತಾ
ನಕ್ಷತ್ರೈರ್ಭೃಶರಮ್ಯನಿರ್ಮಲರದಜ್ಯೋತ್ಸ್ನಾರ್ಥಿಭಿಃ ಕಿಂ ಹೃತಾ
ಯಾಮಿನ್ಯಾ ಘನಕೇಶಪಾಶತಿಮಿರಂ ಪ್ರೇಮ್ಣಾ ಸಮಾಲಿಂಗ್ಯ ಕಿಂ
ನೀತಾ ಕಂತ ಬಹಿಃ ಸ್ಥಿತಾಽದ್ಯ ಸುಚಿ ರಾದಾಸಾದ್ಯ ತುಚ್ಛೋದರೀ||
(ಪುಟ ೧೮೬)

ಅಥವಾ

ಸಾ ನೂನಮಿಂದುಕಿರಣಾಂಚಲಚೋಧಿತೇನ
ಭಸ್ಮೀಕೃತಾ ಪ್ರಬಲಮಾರಮಹಾಬಲೇನ
ಉತ್ಕ್ಷಿಪ್ಯ ಚಾಥ ಕುಮುದಾಕರಮಾರುತೇನ
ನೀತಾ ಭವಿಷ್ಯತಿ ಸುದೂರವಿಃಕೋಮೃಗಾಕ್ಷೀ (ಪುಟ ೧೮೬)

ಲಾಲಿತ್ಯಕ್ಕೆ.

ಮಾಭೈರ್ಭೀರು ಯದೇಷ ರಾಘುವವಟುರ್ದೇವೋ ಮುರಾರಿಃ ಸ್ವಯಂ
ಗೋಲಾಂಗೂಲಭಟೌ ಇಮೌ ಚ ಮರುತಸ್ತೇ ದುರ್ನಿವಾರಾಃ ಕಿಲ
ಸ್ವರ್ಬಂದೀಹಟನಿಗ್ರಹೋದ್ಯತಭುಜಾದಂಡೋ ಯದಾಽಹಂ ತದಾ
ಕಿಂ ನಾಸೌ ಮುರಜಿತ್ಸ್ಮರಾ ನ ಕಿಮಮೀ ಯೇನಾತಿಭೀತಾ ಪ್ರಿಯೇ ||
(ಪುಟ ೧೧೦)

ಸೂಕ್ತಿಮಾಲೆ.

ಮುಕ್ತಕವೃತ್ತೈಃ ಕವಿನಾ ಕ್ವೈವ ಕಿಲಾಽಸೌ ವಿನಾ ಪ್ರಬಂಧೇನ
ತಾರಾಭಿರ್ನ ವಿರಾಜತಿ ಶೂನ್ಯಾ ಚಂದ್ರೇಣ ಗಗನಶ್ರೀಃ || (ಪುಟ ೧೩)
ಆತ್ಮಾ ಶುಭಾಶುಭಮಯಂ ಧನಮೇಷ ಹೃತ್ವಾ
ಯೋಽನ್ಯಂತರೇಷ್ವಪಿ ನಿವಿಶ್ಯ ತಿರೋದಧಾತು
ಅನ್ವಿಷ್ಯ ನೂನಮಚಿ ರಾದನುಮಾಗಳಲಗ್ನೈ

ಲಾಬಧ್ಯತೇಽತ್ರ ಸುಖದುಃಖಶತೈಸ್ತಥಾಽಪಿ ॥ (ಪುಟ ೩೮)
ಗೃಧ್ರಾಂಧಕಾರನಿರಂಧ್ರೇ ರಣೇ ರಾಗಾಂಧಯಾಽಸ್ಯ ಸಿ
ಯಸ್ಯ ನೀಲಾಂಶುಕಚ್ಛಿನ್ನಶ್ಚಿತ್ರಂ ದೃಷ್ಟೋ ಜಯಶ್ರಿಯಾ ॥
ತ್ರೈಲೋಕ್ಯ ಶ್ರೀರಸೌ ದಾಸೀ ತಾವದುಚ್ಛೃಂಖಲಾಯತೇ
ಯಾವದ್ವೀರಃ ಕೃತಾಸ್ಕಂದೋ ನ ದೋರ್ದಂಡಮುದಂಚತಿ ॥ (ಪುಟ ೫೫)

ಗದ್ಯದ ಮಾದರಿ:—

ಯಸ್ಯ ಚ ನಿಜಾವಸರವರ್ತಿನಂ ಸಿರಾಜನೋಪಹಾರ ಮಾತನ್ವತಸ್ತತ್ಕಾಲ ಮಿಲಿತಸಕಲ ಬಲಭರನಮಿತಮೇದಿನೀಸೀಠಪೃಷ್ಠಸ್ಯ ಕಮಠಪತೇರ್ವಲ್ಗದ ವಿರಲವಿಲೋಲವಾಜಿ ವಿನ್ಯಸ್ತಖುರನಿಷ್ಠುರ ಖಟತ್ಕಾರನಿಬಿಡಾರವಚ್ಛಲೇನ ಭಜ್ಯಮಾನ ಪೃಥುಕಟಾಹ ಕರ್ಪರಧ್ವನಿರಭೂತಪೂರ್ವೋ ಭಾರತಸಮರ ಸಂಘಟ್ಟೇಽಪಿ ವಿಸಂಕಟಾಭೋಗಮುಲ್ಲಲಾಸ । ಯಸ್ಯ ಚ ಸಮರಸಂಹ ತಾರತಿಕುಲಕುಟುಂಬಿನೀಭ್ಯಃ ಕುಂಕುಮಾಲೇಪಮಾದಾಯ ಶಕ್ತಿಮಾರ್ ಪಾದಲೇಪಸಿದ್ಧ ಇವ ಮನುಷ್ಯಜನಾಗೋಚರೇಷು ಸಂಚಚಾರ ಪರಿತಃ ಪ್ರದೇಶೇಷು ಪ್ರತಾಪಃ ಯಸ್ಯ ಚ ಸಿಕ್ತಮುಪ್ಪದಾ ವೃದ್ಧೋಚಿತಂ ಚರಿತ ಮಾದ್ದತ್ಯ ತ್ರಿಪಥಗಾಮಿನ್ಯಾ ಗೀರ್ವಾಣಸರಿತಃ ಸ್ರೋತಸಾಂ ತ್ರಯೇಽಪಿ ಸ್ನಾತುಮಖಿಲಮಂತೀವ ಬಭ್ರಾಮ ಭುವನತ್ರಯಂ ಕೀರ್ತಿಃ । ಯಸ್ಯ ಚ ಮಹಾಪಂಕಮಗ್ನಾಽಽದಿಕೂರ್ಮಪೃಷ್ಠಾವಸ್ಥಾನ ಲಗ್ನಮಂಭಸಾ ಧಾರಾ ಗತೇನ ಕ್ಷಾಲಯಿತುಮವಾತ್ಮನಃ ಪಂಕಮಾವಾಸಿತಾ ಕೃಪಾಣೇ ಕಾಶ್ಯಪೀ । ಯಸ್ಯ ಚ ಸ್ವಭರ್ಾನುಭಯಸ್ಥಾನಂ ಚಂದ್ರಮಸೋ ಮಂಡಲಮುಪಹಾ ಯತದನುಕಾರಹಾರಿಣಿ ಹಾರಪ್ರಭಾವಯಮಂಡಲಿತೇ ವಕ್ಷಸಿ ಬಭೂವ ಸುಸ್ಥಿತಾಲಕ್ಷ್ಮೀಃ । (ಪುಟ ೨೩)

# ೧೨ನೆಯ ಶತಮಾನ.

## ರಾ ಜಾ ನ ಕ ರು ಯ್ಯ ಕ .

ಇವನು ಕಾಶ್ಮೀರದವನು. ರಾಜಾನಕತಿಲಕನ ಮಗನು. ಇವನಿಗೆ ರುಚಕನೆಂದೂ ಹೆಸರಿದ್ದಿತು.

**ಕಾಲ**:—ರುಯ್ಯಕನ ಶಿಷ್ಯನಾದ ಮಂಖ್ವಕನು "**ಶ್ರೀಕಂಠಚರಿತ**" ಎಂಬ ಮಹಾಕಾವ್ಯವನ್ನು ಕ್ರಿ. ಶ. ೧೧೩೫-೧೧೪೫ ರಲ್ಲಿ ಬರೆದುದಾಗಿ ಡಾ. ಬುಹಲರವರ ಮತವಿರುವುದು.§ ಮಂಖ್ವಕನ ಸೋದರನಾದ ಅಲಂಕಾರ (ಲಂಕಕ)ನು ಕಾಶ್ಮೀರದಲ್ಲಿ ಆಳಿದ ಸುಸ್ಸಲ ಮತ್ತು ಕ್ರಿ. ಶ. ೧೧೨೯-೧೧೫೦ರಲ್ಲಿ ಆಳಿದ ಜಯಸಿಂಹ ಇವರ ಬಳಿ ಪ್ರಧಾನನಾಗಿದ್ದನು. ಮಂಖ್ವಕನು ರುಯ್ಯಕನ ಶಿಷ್ಯನೆಂದು ಹೇಳಿಕೊಂಡಿರುವುದರಿಂದ ರುಯ್ಯಕನೂ ಮಂಖ್ವಕನೂ ಸಮಕಾಲೀನರೆಂದೂ ಅಥವಾ ಕ್ರಿ. ಶ. ೧೨ನೆಯ ಶತಮಾನದ ಪೂರ್ವಾರ್ಧದಲ್ಲಿದ್ದವರೆಂದೂ ನಿಶ್ಚಯವಾಗುತ್ತದೆ.

**ಗ್ರಂಥಗಳು**:—ಇವನು ಅನೇಕ ಗ್ರಂಥಗಳನ್ನು ಬರೆದಿರುವುದಾಗಿ ಕಂಡು ಬಂದರೂ ಪ್ರಕೃತ ನಾಲ್ಕು ಗ್ರಂಥಗಳು ಮಾತ್ರವೇ ಅಚ್ಚಾಗಿ ನಮಗೆ ದೊರೆತಿರುವುವು. (೧) ಅಲಂಕಾರ ಸೂತ್ರ (೨) ಕಾವ್ಯಪ್ರಕಾಶ ಸಂಕೇತ (ಬೃಹತ್ಸಂಕೇತ) (೩) ಅಲಂಕಾರಮಂಜರಿ (೪) ಸಾಹಿತ್ಯಮೀಮಾಂಸಾ.

ಇವನದೆಂದು ಹೇಳುವ ಇತರ ಗ್ರಂಥಗಳು:—(೧) ಅಲಂಕಾರಾನುಸಾರಿಣೀ (೨) ವ್ಯಕ್ತಿವಿವೇಕ (ವಿಚಾರ) ವ್ಯಾಖ್ಯಾನ (೩) ನಾಟಕಮೀಮಾಂಸಾ (೪) ಹರ್ಷಚರಿತವಾರ್ತ್ತಿಕಾ (೫) ಸಹೃದಯಲೀಲಾ (೬) ಅಲಂಕಾರವಾರ್ತ್ತಿಕಾ (೭) ಶ್ರೀಕಂಠಸ್ತವ.

**ಅಲಂಕಾರಸೂತ್ರ**:—ಇದು ಲಕ್ಷಣಗ್ರಂಥ. ಇದರಲ್ಲಿ ೮೬ ಸೂತ್ರಗಳಿರುವುವು. ಈ ಸೂತ್ರಗಳಿಗೆ 'ಮಂಖ್ವಕನು' ಅಲಂಕಾರ ಸರ್ವಸ್ವವೆಂಬ ವೃತ್ತಿಯನ್ನು ಬರೆದಿರುವನು. ಈ ವೃತ್ತಿಗೆ ಸಮುದ್ರಬಂಧನೆಂಬವನು ವ್ಯಾಖ್ಯಾನವನ್ನು ಬರೆದಿರುವನು. ಇದು 'ರಾಜಾನಕ ಶ್ರೀರುಯ್ಯಕ ಪ್ರಣೀತಂ ಅಲಂಕಾರಸೂತ್ರಂ, ಶ್ರೀಮಂಖುಕ ಪ್ರಣೀತಯಾ ಅಲಂಕಾರ ಸರ್ವಸ್ಯ ವ್ಯಾಖ್ಯಯಾವೃತ್ತ್ಯಾ ಸಮುದ್ರಬಂಧ ಕೃತ ವ್ಯಾಖ್ಯಾಸನಾಥಯಾ ಸಮೇತಂ" ಎಂಬುದರಿಂದ ಗೊತ್ತಾಗುತ್ತದೆ. ಆದರೆ ಕಾವ್ಯಮಾಲೆಯಲ್ಲಿ ಮುದ್ರಿತವಾಗಿರುವ ಇದರ ವೃತ್ತಿಯಲ್ಲಿ "ನಿಜಾಲಂಕಾರ ಸೂತ್ರಾಣಾಂ ವೃತ್ತ್ಯಾಂತಾತ್ಪರ್ಯಮುಚ್ಯತೇ" ಎಂದು ಹೇಳಲ್ಪಟ್ಟಿರುವುದರಿಂದ ಸೂತ್ರ ಮತ್ತು

§ Dr Buhler opcit P. 50 F.

ವೃತ್ತಿ ಈ ಎರಡನ್ನೂ ಒಬ್ಬನೇ ಬರೆದಿರುವುದಾಗಿ ಬೋಧೆಯಾಗುವುದಲ್ಲದೆ ಕೊನೆಯಲ್ಲಿ 'ಸಂಪೂರ್ಣಮಿದಮಲಂಕಾರ ಸರ್ವಸ್ವಂ' ಎಂದು ಹೇಳಲ್ಪಟ್ಟಿರುವುದರಿಂದ ಸೂತ್ರ ಮತ್ತು ವೃತ್ತಿಗಳೆರಡೂ ಸೇರಿ ಅಲಂಕಾರ ಸರ್ವಸ್ವವೆಂದೆನಿಸಿಕೊಂಡಿರಬಹುದಾಗಿ ತೋರುತ್ತದೆ. ಇದಲ್ಲದೆ ಗ್ರಂಥಾಂತ್ಯದಲ್ಲಿ 'ಕೃತಿಸ್ತತ್ರಭವದ್ರಾಜಾನಕ ರುಯ್ಯಕಸ್ಯ' ಎಂದು ಗ್ರಂಥಕರ್ತೃತ್ವವು ರುಯ್ಯಕನ ಹೆಸರಿನಲ್ಲಿ ಹೇಳಲ್ಪಟ್ಟಿದೆ.

ತ್ರಿವೇಂದ್ರಂನಲ್ಲಿ ಮುದ್ರಿತವಾಗಿರುವ ಗ್ರಂಥಾಂತ್ಯದಲ್ಲಿ,

ಇತಿಮಂಖುಕೋವಿತೇನೇ ಕಾಶ್ಮೀರಕ್ಷಿತಿಪಸಾಂಧಿವಿಗ್ರಹಿಕಃ
ಸುಕವಿಮುಖಾಲಂಕಾರಂ ತದಿದಮಲಂಕಾರಸರ್ವಸ್ವಂ ||

ಎಂದು ಹೇಳಿ "ಸಮಾಪ್ತಂಚೇದಮಲಂಕಾರಸರ್ವಸ್ವಂ" ಎಂದು ಹೇಳಿದೆ. ವೃತ್ತಿವ್ಯಾಖ್ಯಾನಕಾರನಾದ ಸಮುದ್ರಬಂಧನು.

ಮಂಖುಕ ನಿಬಂಧವಿವೃತೌ ವಿಹಿತಾಯಾಮಿಹ ಸಮುದ್ರಬಂಧೇನ
ಗುಣಲೇಶಮಾತ್ರಮಿತ್ಯ್ಯರ್ಥವಿಶೇಷ್ಯಾದೋಷದರ್ಶಿಭಿಸ್ಸದ್ಭಿಃ ||

ಎಂದೂ "ಇತ್ಯಲಂಕಾರ ಸರ್ವಸ್ವವ್ಯಾಖ್ಯಾನಂ ಸಂಪೂರ್ಣಂ" ಎಂದು ಸ್ಪಷ್ಟಪಡಿಸಿರುವುದರಿಂದ ಭಿನ್ನಭಿನ್ನ ಕರ್ತೃತ್ವವೆಂಬುದು ವಿಶದವಾಗುತ್ತದೆ.

'ಗುರ್ವಲಂಕಾರಸೂತ್ರಾಣಾಂ' ಎಂಬಲ್ಲಿನ ಗುರುಶಬ್ದ ಪ್ರಯೋಗದಿಂದ ಸೂತ್ರಕಾರನಾದ ರುಯ್ಯಕನ ವೃತ್ತಿಯನ್ನು ಮಂಖುಕನು ಬರೆದಿರಬೇಕಾಗಿ ಬೋಧೆಯಾಗುತ್ತದೆ. ಮಂಖುಕನು ತಾನು ಬರೆದಿರುವ ಶ್ರೀಕಂಠಚರಿತ ಮಹಾಕಾವ್ಯದಲ್ಲಿ.

ತಂ ಶ್ರೀರುಯ್ಯಕಮಾಲೋಕ್ಯ ಸಪ್ರಿಯಂಗುರುಮಗ್ರಹೀತ್
ಸೌಹಾರ್ದಪ್ರಶ್ರಯರಸ ಸ್ರೋತಸ್ಸಂಭೇದಮಜ್ಜನಂ ||

ಎಂದು ಹೇಳಿಕೊಂಡಿರುವುದರಿಂದ ರುಯ್ಯಕನು ಗುರುವೆಂಬುದು ಸ್ಪಷ್ಟಪಡುತ್ತದೆ. ಪಂಡಿತ ಸುಶೀಲಕುಮಾರಡೇಯರು (S. K. De.) ಸೂತ್ರ ಮತ್ತು ವೃತ್ತಿಕಾರನು ರುಯ್ಯಕನೆಂದೂ, ರುಯ್ಯಕನು ಮಂಖುಕನ ಅನಂತರದವನೆಂದೂ ಸುಮಾರು ಕ್ರಿ. ಶ. ೧೨ನೆಯ ಶತಮಾನದ ಮಧ್ಯ ಅಥವಾ ಉತ್ತರಾರ್ಧವು ರುಯ್ಯಕನ ಗ್ರಂಥರಚನಾವಳಿಯ ಕಾಲವೆಂದೂ ಹೇಳುವರು. ಆದರೆ ಈ ಹೇಳಿಕೆಯು ಮೇಲಿನ ಆಧಾರಗಳಿಂದ ಭಿನ್ನವಿಸುವುದು. ರುಯ್ಯಕನು ಮಂಖ್ಖುಕನ ಶ್ರೀಕಂಠ ಚರಿತದಲ್ಲಿ ಐದು ಶ್ಲೋಕಗಳನ್ನು ಉದಾಹರಿಸಿಕೊಂಡ ಮಾತ್ರದಿಂದಲೇ ಮಂಖ್ಖುಕನ ಅನಂತರ ರುಯ್ಯಕನೆಂದು ಹೇಳುವುದಕ್ಕಿಂತಲೂ ಗುರುಶಿಷ್ಯರಿಗೆ ಸಮಕಾಲವನ್ನು ಹೇಳಿ ಆಚಾರ್ಯನಾದ ರುಯ್ಯಕನು ಶಿಷ್ಯನ ಘನಪಾಂಡಿತ್ಯಕ್ಕೆ ಮೆಚ್ಚಿ

ಮೆಚ್ಚಿ, ಅವನ ಗ್ರಂಥದ ಶ್ಲೋಕಗಳನ್ನು ಉದಾಹರಿಸಿಕೊಂಡಿರಬಹುದಾಗಿ ಹೇಳು ವುದಾದರೆ ತಪ್ಪಾಗದು. ರುಯ್ಯಕನ ಅಲಂಕಾರಸೂತ್ರಕ್ಕೆ ಮಂಖ್ಯಕನಲ್ಲದೆ ರಾಜಾನಕ ಅಲಕ ಮತ್ತು ಜಯರಥ ಇವರೂ ವ್ಯಾಖ್ಯಾನವನ್ನು ಬರೆದಿರುವರು.



## ಹೇಮಚಂದ್ರ

ಹೇಮಚಂದ್ರನು ಸಂವತ್ ೧೧೪೫ (ಕ್ರಿ. ಶ. ೧೦೮೯) ರಲ್ಲಿ ಅಹಮ್ಮದಾಬಾದ ಡಿಸ್ಟ್ರಿಕ್ಟಿಗೆ ಸೇರಿದ 'ದಂಧುಕಾ' ಎಂಬ ಊರಿನಲ್ಲಿ ಮೋಢಬನಿಯಾಕುಟುಂಬದಲ್ಲಿ ಜನ್ಮಗ್ರಹಣಮಾಡಿದನು. ಇವನ ಹೆಸರು ಚಂಗದೇವ. ಪಾಹಿನೀ ಮತ್ತು ಚಚ್ಚಗರೆಂಬರೇ ಇವನ ತಾಯಿತಂದೆಗಳು. ಒಂದಾನೊಂದುದಿವಸ ಪೂರ್ಣತಲಗಚ್ಛದ ದೇವಚಂದ್ರಸೂರಿಯು ದಂಧುಕಕ್ಕೆ ಬಂದನು. ಚಂಗದೇವನು ತನ್ನ ಸೋದರ ಮಾವನಾದ ನೇಮಿಚಂದ್ರನೊಡನೆ ದೇವಚಂದ್ರಸೂರಿಯ ಉಪನ್ಯಾಸವನ್ನು ಕೇಳು ವುದಕ್ಕೆ ಹೋಗಿ, ಚಂಗದೇವನು ತನ್ನನ್ನು ಜಿನಮತಕ್ಕೆ ಸೇರಿಸಿಕೊಂಡು ತತ್ವೋಪ ದೇಶವನ್ನು ಮಾಡುವಂತೆ ದೇವಚಂದ್ರನನ್ನು ಪ್ರಾರ್ಥಿಸಿದನು. ದೇವಚಂದ್ರನು ಇವನ ವಿಲಕ್ಷಣ ಜಾಗ್ರುತಬುದ್ಧಿಯನ್ನು ನೋಡಿ, ಇವನಾರೆಂಬದನ್ನು ನೇಮಿ ಚಂದ್ರಸೂರಿಯಿಂದ ತಿಳಿದು ಸ್ವಾಭಾವಿಕವಾಗಿಯೂ ಮತಸಂಬಂಧವಾದ ವಿಚಾರದಲ್ಲಿ ಆಸಕ್ತಿಯು ಹೆಚ್ಚಿರುವುದನ್ನು ನೋಡಿ ಈಹುಡುಗನು ತೀರ್ಥಂಕರರಂತೆ ಲೋಕ ಕಲ್ಯಾಣಕಾರನೆಂದೂ, ಜೈನಮತ ಪ್ರಕ್ರಿಯಾಬದ್ಧನಾಗಿ ಭವಬದ್ಧರನ್ನು ಮುಕ್ತರ ನ್ನಾಗಿ ಮಾಡುವನೆಂದೂ ತಿಳಿದು ತಂದೆಯ ಅಪ್ಪಣೆಯನ್ನು ಪಡೆದು ತನ್ನ ಸ್ಥಳಕ್ಕೆ ಬರುವಂತೆ ಹೇಳಿದನು. ಮಗನಿಗೆ ಆಶ್ರಮವನ್ನು ಕೊಡಿಸುವುದು ತಂದೆಯಾದ ಚಚ್ಚನಿಗೆ ಇಷ್ಟವಿರಲಿಲ್ಲವಾದರೂ ಹುಡುಗನು ಆಶ್ರಮಸ್ವೀಕಾರ ಮಾಡಬೇಕೆಂದು ಮುಷ್ಕರಹಿಡಿದು ದೇವಚಂದ್ರನೊಡನೆ ಕ್ಯಾಂಬೆಗೆಹೋಗಿ ಅಲ್ಲಿ ಆಶ್ರಮಗ್ರಹಣಮಾಡಿ ದನು. ಆಶ್ರಮಸ್ವೀಕಾರವು ಸಂವತ್ ೧೧೫೪ ಅಥವಾ ಕ್ರಿ. ಶ. ೧೦೯೮ರಲ್ಲಿ ನಡೆದು ಚಂಗದೇವನಿಗೆ ಸೋಮಾನಂದನೆಂದು ನಾಮಕರಣವಾದುದು. ಸ್ವಲ್ಪ ದಿವಸಗಳಲ್ಲಿ ಈ ಹುಡುಗನು ಜೈನಮತಗ್ರಂಥ, ಪುರಾಣೇತಿಹಾಸಾದಿಗಳನ್ನು ಕಲಿತು ಅದ್ವಿತೀಯ ಪಂಡಿತನಾದನು. ದೇವಚಂದ್ರಸೂರಿಯು ಇವನ ವಿದ್ವತ್ತಿಗೆ ತಲೆದೂಗಿ 'ನಾಗರಿ'ನಲ್ಲಿ ಸಂವತ್ ೧೧೬೬ (ಕ್ರಿ ಶ. ೧೧೧೦)ರಲ್ಲಿ ಇವನನ್ನು ಸೂರಿಯನ್ನಾಗಿ ಮಾಡಿ 'ಹೇಮ ಚಂದ್ರ' ಎಂದು ನಾಮಕರಣಮಾಡಿದನು. ಇವನ ಶರೀರವು ಸುವರ್ಣದಂತೆ ಇದ್ದು ದರಿಂದಲೂ ಸಕಲಾಹ್ಲಾದಕರನಾದ ಚಂದ್ರನಂತೆ ತನ್ನ ಸವಿಮಾತಿನಿಂದ ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದುದರಿಂದಲೂ ಇವನನ್ನು ಹೇಮಚಂದ್ರನೆಂದು ಕರೆದುದಾಗಿ ಹೇಳಿದೆ. ಇವನ ವಿದ್ಯಾಪ್ರೌಢಿಮೆಯನ್ನು ಕೇಳಿ ಜಯಸಿಂಹ ಸಿದ್ಧರಾಜನು

ಕ್ರಿ.ಶ.೧೧೪೪-೧೧೪೩ರಲ್ಲಿ ತನ್ನಾಸ್ಥಾನಕ್ಕೆಬರಮಾಡಿಕೊಂಡು ಮನ್ನಣೆಯನ್ನುಮಾಡಿದನು. ಈ ಕಾಲದಲ್ಲಿ ಹೇಮಚಂದ್ರನು '**ಸಿದ್ಧಹೇಮ**' ಎಂಬ ವ್ಯಾಕರಣವನ್ನು ರಚಿಸಿದನು. ಈತನ ಉಪದೇಶಬಲದಿಂದ ಸಿದ್ಧರಾಜನು ಜೈನಮತವನ್ನು ಮನ್ನಿಸಿ 'ರಾಜವಿಹಾರ' ಮತ್ತು 'ಸಿದ್ಧವಿಹಾರ' ಎಂಬೆರಡು ಜೈನಬಸದಿಗಳನ್ನು ತನ್ನ ರಾಜಧಾನಿಯಲ್ಲಿಯೂ ಮತ್ತು ಸಿದ್ಧಪುರದಲ್ಲಿಯೂ ಕಟ್ಟಿಸಿಕೊಟ್ಟನು. ಸಿದ್ಧರಾಜನು ಯಾವಾಗಲೂ ಹೇಮಚಂದ್ರನ ಬಳಿಯಲ್ಲಿಯೇ ಇರುತ್ತಿದ್ದನು. ಸಿದ್ಧರಾಜನ ಅನಂತರ ಗುಜರಾತಿನ ಕುಮಾರಪಾಲನು ಸಿಂಹಾಸನವನ್ನೇರಿದನು. ಸಿದ್ಧರಾಜನ ಕಾಲದಲ್ಲಿ ಮಾನ್ಯಮತವಾಗಿದ್ದ ಜೈನಮತವು ಕುಮಾರಪಾಲನ ಕಾಲದಲ್ಲಿ ಸಂಸ್ಥಾನದ ಪ್ರಬಲ ಮತವಾದುದು. ಕುಮಾರಪಾಲನಿಗೆ ಸಂವತ್ ೧೨೧೬ ಕ್ರಿ. ಶ. ೧೧೬೦ರಲ್ಲಿ, ಜೈನಮತ ದೀಕ್ಷೆಯು ಕೊಡಲ್ಪಟ್ಟಿತು. ಹೇಮಚಂದ್ರನ ಉಪದೇಶದಂತೆ ಇವನು ತನ್ನ ರಾಜ್ಯದಲ್ಲಿ ಪ್ರಾಣಿವಧೆಯನ್ನು ನಿಲ್ಲಿಸಿದನು. ದೊಡ್ಡದೊಡ್ಡ ಜೈನಬಸದಿಗಳನ್ನು ಕಟ್ಟಿಸಿದನು. ಮದ್ಯಪಾನ, ವ್ಯಭಿಚಾರ, ಚೌರ್ಯ, ದ್ಯೂತಗಳನ್ನು ನಿಲ್ಲಿಸಿದುದಲ್ಲದೆ ಅಪುತ್ರರಾಗಿ ಸತ್ತವರ ಆಸ್ತಿಗಳನ್ನು ಸರಕಾರಕ್ಕೆ ತೆಗೆದುಕೊಳ್ಳುವುದನ್ನು ನಿಲ್ಲಿಸಿದನು. ಹೇಮಚಂದ್ರನ ವ್ಯಾಕರಣಗ್ರಂಥದಲ್ಲಿ ೮ ಪರಿಚ್ಛೇದಗಳಿರುವುವು. ಇದಕ್ಕೆ ತಾನೇ ೮೪,೦೦೦ ಪರಿಮಿತಿಯುಳ್ಳ ಒಂದು ನ್ಯಾಸವನ್ನೂ "ಅಷ್ಟಾದಶಸಹಸ್ರೀ" ಎಂಬ ವ್ಯಾಖ್ಯಾನವನ್ನೂ ಬರೆದನು. ವ್ಯಾಕರಣಸೂತ್ರಗಳನ್ನು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುವುದಕ್ಕೂ ಚಾಲುಕ್ಯರಾಜರ ಪರಾಕ್ರಮವೈಭವಗಳನ್ನು ತಿಳಿಯಹೇಳುವುದಕ್ಕೂ 'ದ್ವ್ಯಾಶ್ರಯ' ಎಂಬ ಕಾವ್ಯವನ್ನು ಬರೆದನು. ಕುಮಾರಪಾಲನ ವಿಚಾರವಾಗಿ ಹೇಳಿರುವ ಪ್ರಾಕೃತಭಾಗವು ಕುಮಾರಪಾಲನ ಕಾಲದಲ್ಲಿಯೇ ಇದಕ್ಕೆ ಸೇರಿಸಲ್ಪಟ್ಟಿರುವುದು. ಅನೇಕಾರ್ಥಸಂಗ್ರಹಯುಕ್ತವಾದ ಅಭಿಧಾನಚಿಂತಾಮಣಿ, ದೇಶೀಮಾಲಾ ಮತ್ತು ನಿಘಂಟುವಿವೇಕವೆಂಬ ವ್ಯಾಖ್ಯಾನದೊಡಗೂಡಿದ ಕಾವ್ಯಾನುಶಾಸನ, ಛಂದೋನುಶಾಸನ, ಪ್ರಮಾಣಮೀಮಾಂಸಾ ಇವುಗಳೆಲ್ಲವೂ ಸಿದ್ಧರಾಜನ ಕಾಲದಲ್ಲಿಯೇ ಬರೆಯಲ್ಪಟ್ಟಿದ್ದುವು. ಕುಮಾರಪಾಲನ ಕಾಲದಲ್ಲಿ ಬರೆದವುಗಳೆಲ್ಲವೂ ಕೇವಲ ಮತಗ್ರಂಥಗಳು. ಯೋಗಶಾಸ್ತ್ರ, ವೀತರಾಗಸ್ತುತಿ ಇವು ಕುಮಾರಪಾಲನಿಗೆ ಬೋಧಿಸುವುದಕ್ಕಾಗಿ ಬರೆಯಲ್ಪಟ್ಟುವು. 'ತ್ರಿಷಷ್ಟಿಶಲಾಕಾಪುರುಷಚರಿತ'ಎಂಬುದುಕುಮಾರಪಾಲನು ಕೇಳಿಕೊಂಡಂತೆ ಬರೆದುದಾಗಿದೆ. ಹೇಮಚಂದ್ರನು ಕಾವ್ಯಾನುಶಾಸನವೆಂಬ ಅಲಂಕಾರಗ್ರಂಥವನ್ನು ವೃತ್ತಿಸಮೇತವಾಗಿ ಬರೆದು ಅದಕ್ಕೆ "ಅಲಂಕಾರಚೂಡಾಮಣಿ" ಎಂಬ ವ್ಯಾಖ್ಯಾನವನ್ನು ಬರೆದಿರುವನು. ಕುಮಾರಪಾಲನು ಸಾಯುವ ಆರುತಿಂಗಳು ಮುಂಚೆ ಇವನು ತನ್ನ ೮೪ನೆಯ ವಯಸ್ಸಿನಲ್ಲಿ ಸಂವತ್ ೧೨೨೯ ಅಥವಾ ಕ್ರಿ. ಶ. ೧೧೭೩ರಲ್ಲಿ ಕೀರ್ತಿಶೇಷನಾದನು.‡

‡ Introduction to Moharaja Parajaya. Gaikwad Oriental Series P. 13 14.

# ಸು ಭ ಟ

ಇವನಾರೆಂಬುದೂ ಎಲ್ಲಿಯವನೆಂಬುದೂ ತಿಳಿಯದು.

**ಕಾಲ:**—ಇವನು ಕುಮಾರಪಾಲದೇವನನ್ನು ಸ್ತುತಿಸಿರುವನು. ಕುಮಾರಪಾಲನು ಕ್ರಿ. ಶ. ೧೧೪೪-೧೧೭೩ರವರೆಗೆ ಗುರ್ಜರದೇಶ (ಗುಜರಾತ)ವನ್ನಾಳಿದನು. ಪಂಡಿತವರ ಹೇಮಚಂದ್ರನೂ ಇವನೂ ಸಮಕಾಲೀನರು x ಹೇಮಾಚಾರ್ಯಕೃತ ಕುಮಾರಪಾಲಚರಿತವು ಪ್ರಾಕೃತನಿಬದ್ಧ ಗ್ರಂಥವಾಗಿ ಹೆಸರುಗೊಂಡಿದೆ. ಸುಭಟನ ವಿಚಾರವಾಗಿ :—

ಸುಭಟೇನ ಪದನ್ಯಾಸಃ ಸ ಕೋऽಪಿ ಸಮಿತೌ ಕೃತಃ
ಯೇನಾಧುನಾಪಿ ಧೀರಾಣಾಂ ರೋಮಾಂಚೋ ನಾಪಿಜೀಯತೇ ॥ ೦

ಎಂದು ಹೇಳಲ್ಪಟ್ಟಿರುವುದು. ಕ್ರಿ. ಶ. ೧೩ನೆಯ ಶತಮಾನಾರಂಭದಲ್ಲಿದ್ದ ಸೋಮೇಶ್ವರನು ಇವನನ್ನು ಹೇಳಿರುವುದರಿಂದ ಇವನು ಕ್ರಿ. ಶ. ೧೨ನೆಯ ಶತಮಾನದಲ್ಲಿದ್ದವನೆಂಬುದು ಸ್ಪಷ್ಟವಾಗುವುದು.

**ಗ್ರಂಥ:**---ಇವನು ದೂತಾಂಗದವೆಂಬ ನಾಟಕವನ್ನು ಬರೆದಿರುವುದಾಗಿ "ಭೋಭೋಃ ಸಾಮಾಜಿಕಾಃ ಶ್ರುಣುತ ಸಾವಧಾನಾಃ ಯದದ್ಯ ವಸಂತೋತ್ಸವೇ ದೇವಶ್ರೀಕುಮಾರಪಾಲದೇವಸ್ಯ ಯಾತ್ರಾಯಾಂ ಪದವಾಕ್ಯಪ್ರಮಾಣಪಾರಂಗತೇನ ಮಹಾಕವಿನಾ ಶ್ರೀಸುಭಟೇನ ವಿನಿರ್ಮಿತಂ ದೂತಾಂಗದಂನಾಮ ಚ್ಛಾಯಾನಾಟಕ ಮಭಿನೇತವ್ಯಂ" ಎಂಬ ಸೂತ್ರಧಾರನ ಹೇಳಿಕೆಯಿಂದ ಗೊತ್ತಾಗುತ್ತದೆ. ಇದು ರೂಪಕ ಭೇದವಾದ "ಛಾಯಾ"ನಾಟಕ S ಜಾತಿಗೆ ಸೇರಿದುದು. ಈ ನಾಟಕವು ತನ್ನ ಸ್ವಂತ ಕವಿತೆಯಲ್ಲವೆಂದೂ ಪ್ರಾಚೀನ ಕವಿಗಳುಹೇಳಿರುವ ಶ್ಲೋಕಗಳನ್ನಾರಿಸಿಕೊಂಡು ರಸಪೋಷಣೆಯನ್ನು ಮಾಡಿರುವುದು ಹೊರ್ತು ಸ್ವನಿರ್ಮಿತವಲ್ಲವೆಂದು ತಾನೇ:—

ಸ್ವನಿರ್ಮಿತಂ ಕಿಂಚನ ಗದ್ಯಪದ್ಯ
ಬಂಧಂ ಕಿಯತ್ಪ್ರಾಕ್ತನಸತ್ಕವೀಂದ್ರೈಃ
ಪ್ರೋಕ್ತಂಗೃಹೀತ್ವಾ ಪ್ರವಿರಚ್ಯತೇಸ್ಮ
ರಸಾಢ್ಯಮೇತತ್ಸುಭಟೇನ ನಾಟ್ಯಂ ॥ ಪುಟ ೧೫ ಶ್ಲೋಕ ೫೬

ಎಂದು ಹೇಳಿಕೊಂಡಿರುವನು.

x ಸುಭಾಷಿತಾವಳಿಯ ಮುನ್ನುಡಿ ಪುಟ ೧೩೯

೦ ಕೀರ್ತಿಕೌಮುದೀ ೧೨೪

S ಛಾಯಾನಾಟಕ ಎಂದರೆ:—

ರಾಮನು ಅಂಗದನ ಮೂಲಕ ರಾವಣನಿಗೆ ಹೇಳಿಕಳುಹಿಸಿದ ಸಂದೇಶವು ಹೀಗಿರುವುದು.—

ಅಜ್ಞಾನಾದಥವಾಧಿಪತ್ಯರಭಸಾದಸ್ಮತ್ಪರೋಕ್ಷೇಹೃತಾ
ಸೀತೇಯಂ ಪ್ರವಿಮುಚ್ಯತಾಮಿತಿವಚೋ ಗತ್ವಾದಶಾಸ್ಯಂವದ
ನೋಚೇಲ್ಲಕ್ಷ್ಮಣಮುಕ್ತಮಾರ್ಗಣಗಣಚ್ಛೇದೋಚ್ಛಲಚ್ಛೋಣಿತ
ಚ್ಛತ್ರಚ್ಛನ್ನದಿಗಂತಮಂತಕಪುರಂಪುತ್ರೈರ್ವೃತೋಯಾಸ್ಯಸಿ ॥ ೯ ॥

ವತ್ಸ! ಅಂಗದ! ೧ ನೀನು ರಾವಣನ ಬಳಿಗೆಹೋಗಿ:—

ರಾವಣ! ಅಜ್ಞಾನದಿಂದಲೋ ಅಥವಾ ಅಧಿಕಾರಮತ್ತತೆಯಿಂದಲೋ ಹೇಗೋ ನಮ್ಮ ಪರೋಕ್ಷದಲ್ಲಿ ಅಪಹರಿಸಿಕೊಂಡು ಹೋಗಿರುವ ಸೀತೆಯನ್ನು ಬಿಟ್ಟುಕಳುಹೆಂದೂ ಹಾಗೆ ಅವನು ಕಳುಹಲೊಲ್ಲನಾದರೆ ಲಕ್ಷ್ಮಣನಿಂದ ಬಿಡಲ್ಪಡುವುದಾದ ಕ್ರೂರಬಾಣಗಳಿಂದ ಛಿನ್ನಾಭಿನ್ನವಾಗಿ ಕತ್ತರಿಸಲ್ಪಟ್ಟು ರಕ್ತಧಾರಾವೃತನಾಗಿರುವ ನಿನ್ನ ಮಕ್ಕಳೊಡನೆ ಯಮನ ಪತ್ತನವನ್ನು ಹೊಂದುವುದಾಗಿಯೂ ತಿಳಿಸುವನಾಗು.

ಅಂಗದನಿಗೂ ರಾವಣನಿಗೂ ನಡೆದುದಾದ ಸಂಭಾಷಣೆಯು ಎಷ್ಟು ಚೆಲುವಾಗಿಯೂ ಭಾವಾರ್ಥಗರ್ಭಿತವಾಗಿಯೂ ಇರುವುದು:—

ರಾವಣನು ಅಂಗದನನ್ನುಕುರಿತು,

ರಾ: —ರಾಮಃ ಕಿಂಕುರುತೇ-ರಾಮನು ಏನುಮಾಡುವನು ?

ಅಂ: —ನಕಿಂಚಿತ್-ಏನೂ ಇಲ್ಲ

ರಾ: —ಅಪಿ ಚ ಪ್ರಾಪ್ತಃ ಪಯೋಧೇಸ್ತಟಂ ಕಸ್ಮಾತ್ಸಾಂಪ್ರತಂ-ಹಾಗಾದರೆ ಈಗ ಸಮುದ್ರದ ತಟಕ್ಕೆ ಏಕೆ ಬಂದಿರುವನು ?

ಅಂ:—ಏವಮೇವಹಿ-ಏನೋ ಹಾಗೆಯೇ(ಕಾರಣಾಂತರದಿಂದಬಂದಿರುವನು)

ರಾ: —ತತೋಬದ್ಧಃ ಕಿಮಂಭೋನಿಧಿಃ-ಹಾಗಾದರೆ ಸಮುದ್ರಕ್ಕೆ ಏಕೆ ಸೇತುವೆಯನ್ನು ಕಟ್ಟಿದನು ?

ಅಂ: —ಕ್ರೀಡಾಭಿಃ-(ಇಚ್ಛಾಮಾತ್ರ) ಕ್ರೀಡೆಗಾಗಿ.

ರಾ:—ಕಿಮುನೌನನೇತ್ರಿಪುರತೋಲಂಕೇಶ್ವರೋವರ್ತತೇ-ಏನು! ಅವನಿಗೆ ಈ ಲಂಕೇಶ್ವರನಿರುವನೆಂಬುದು ಗೊತ್ತಿಲ್ಲವೋ

೧ ವಾಲಿಯು ಮಹಾಪರಾಕ್ರಮಶಾಲಿ ಮತ್ತು ರಾವಣನ ಜೀವದಗೆಳೆಯನು. ಅಂಗದನು ತನ್ನ ತಂದೆಯಾದ ವಾಲಿಯನ್ನು ಕೊಂದ ರಾಮನಲ್ಲಿ ವಿರುದ್ಧಭಾವದಿಂದ ವರ್ತಿಸಬೇಕಾದುದು ಲೋಕರೂಢಿ. ಅಂತಹುದರಲ್ಲಿ ರಾಮನು ಅಂಗದನನ್ನು ದೂತಕಾರ್ಯಕ್ಕೆ ನಿಯಮಿಸಿದುದೂ, ಅದರಂತೆ ಅಂಗದನು ಕೈಗೊಂಡು ನಡೆಸಿದುದೂ ಹೆಚ್ಚುವಿಶೇಷ— ರಾಮಕಾರ್ಯಕ್ಕೆ ಪೂರ್ವದರೀತಿ,

ಅಂ:—ಜಾನಾತ್ಯೇವ ವಿಭೀಷಣೋऽಸ್ಯನಿಕಟೇಲಂಕಾಪದೇಸ್ಥಾಪಿತಃ|| ೨೬— ಗೊತ್ತಿಲ್ಲದೆ ಏನು! ಲಂಕೇಶ್ವರನು ಸಮೀಪಗತನಾದ ವಿಭೀಷಣನೆಂದು ತಿಳಿದು ಕೊಂಡಿರುವನು. (ಹೊರ್ತು ರಾವಣನೆಂದಲ್ಲ)

---

## ಜಲ್ಹಣ*

ಇವನು ಕಾಶ್ಮೀರದವನು. ಕಾಶ್ಮೀರಕ್ಕೆ ಸೇರಿದ ರಾಜಪುರೀ† ರಾಜನಾದ ಸೋಮಪಾಲನಬಳಿ ಸಂಧಿವಿಗ್ರಹನಿಯೋಗಿ (ಮಂತ್ರಿ) ಯಾಗಿದ್ದುದಾಗಿ ರಾಜ ತರಂಗಿಣಿಯು ಹೇಳುತ್ತದೆ.§ ಜಲ್ಹಣನ ವಿಷಯವಾಗಿ ಮಹಾಕವಿ ಮಂಖ್ಯಕನು ಶ್ರೀಕಂಠಚರಿತದಲ್ಲಿ ಈ ರೀತಿಯಾಗಿ ಒಕ್ಕಣಿಸಿರುವನು.

ಯಥಾಚರತಿವಕ್ರೇಣ ವಾಗ್ಯಸ್ಯಚತುರೈಃ ಪದೈಃ
ಸರಸ್ವತ್ಯೈವಿನಿರ್ಮಾತುಮುಧ್ಯತೇವ ಪ್ರದಕ್ಷಿಣಂ—೨೫—೭೩
ವಕ್ರಮೈರ್ಹರವಕ್ರಮ್ಲೋ ಮುರಾರಿಮನುಧಾವಕಃ
ಶ್ರೀರಾಜಶೇಖರಗಿರೋ ನೀವೀಯಸ್ಯೋಕ್ತಿಸಂಪದಾಂ—೭೪
ಶ್ರೀಮದ್ರಾಜಪುರೀ ಸಂಧಿವಿಗ್ರಹಸ್ಯ ನಿಯೋಗಿನಂ
ಅರ್ಥಾನರ್ಥ(ರ್ಘ)ವಚೋಭಿಸ್ತಂ ಜಲ್ಹಣಂವಿಸಯಾಂಚಿತ್ಯೈಃ||—೭೫

**ಕಾಲ:**—ಸೋಮಪಾಲನು ಸುಶ್ಶಲನಿಂದ ಕ್ರಿ. ಶ. ೧೧೨೧ರಲ್ಲಿ ವಿಜಿತ ನಾದನು. ಈ ಆಧಾರದಿಂದ ಸೋಮಪಾಲನ ಬಳಿಯಲ್ಲಿದ್ದ ಜಲ್ಹಣನು ೧೨ನೆಯ ಶತಮಾನಕ್ಕೆ ಸೇರಿದವನು.

**ಗ್ರಂಥಗಳು:**—ಇವನು 'ಸೋಮಪಾಲವಿಲಾಸ' ಎಂಬ ಕಾವ್ಯವನ್ನೂ 'ಮುಗ್ಧೋಪದೇಶ' ಎಂಬ ಗ್ರಂಥವನ್ನೂ ಬರೆದಿರುವನು. ಸೋಮಪಾಲವಿಲಾಸ ಕಾವ್ಯದಲ್ಲಿತನ್ನೊಡೆಯನಾದ ಸೋಮಪಾಲದೇವನ ಚರಿತವು ವರ್ಣಿತವಾಗಿರುವುದು. ಇದಕ್ಕೆ "ಅಲಂಕಾರಾನುಸಾರಿಣೀ" ಎಂಬ ಟೀಕೆಯು ಇರುವುದು. ಮುಗ್ಧೋಪ ದೇಶವು ಹೆಸರಿಗೆ ತಕ್ಕಂತೆ ಬೋಧಪ್ರದವಾಗಿಯೂ ರೂಪಾಜೀವೆಯರ ವರ್ತನವನ್ನು

* ಸೂಕ್ತಿಮುಕ್ತಾವಳೀಸಂಗ್ರಹ ಕಾರನಾದ ಆರೋಹಕಭಗದತ್ತಜಲ್ಹಣನು ಇವನಲ್ಲ.

† ರಾಜಪುರೀಕಾಶ್ಮೀರದೇಶಸಂಲಗ್ನೈವ 'ರಾಜವೇರೀ' 'ರಾಜೌರೀ' ಇತ್ಯಾದಿನಾಮಭಿಃ ಪ್ರಸಿದ್ಧಾವರ್ತತೇ. ತತ್ರತಸ್ಮಿನ್ಕಾಲೇಸೋಮಪಾಲಮಹೀಪತಿರಾಸೀತ್ ಯಸ್ಯಾ ಯಂಜಲ್ಹಣಸಂಧಿವಿಗ್ರಹನಿಯೋಗೀ,

§ ರಾಜಪುರ್ಯಾಮಾಕುಲತ್ವಂ ನೀತುಯಾಮಾಸನಾಪತತ್
ತದ್ಭರ್ತುಃ ಸೋಮಪಾಲಸ್ಯದೂತಸ್ಸ್ವಸ್ಯಾಂತಿಕಂಚಿತಾತ್ ||
ರಾಜತರಂಗಿಣೀ ಲಂಬಕ ೮ ಪುಟ ೧೬೬೭.

ತಿಳಿಯ ಹೇಳುವುದಾಗಿಯೂ ಇರುವುದು. ಮಾದರಿಗಾಗಿ ಒಂದು ಶ್ಲೋಕವನ್ನು ಕೊಟ್ಟಿದೆ.

ಅಜೀವಃಕಪಟಾನುರಾಗಕಲಯಾ ದೋಷೋನದುಶ್ಶೀಲತಾ
ವೈಧವ್ಯಂಚನಬಾಧತೇ ಸದಸತೋಸ್ಸಂಭಾವನಾವ್ಯತ್ಯಯಾತ್
ಯತ್ಕಿಂಚಿತ್ಕರಣೇಪರಸ್ಸ್ಮರಣೇ ವ್ರೀಡಾನಪೀಡಾಕರೀ
ನೋವಾರಾಜಭಯಂಚ ಹೀಬತಸುಖಂಜೀವಂತಿವಾರಸ್ತ್ರಿಯಃ ||

ಅಹಹ! ಈ ಸೂಳೆಯರಿಗೆ ಆಜೀವವೂ ಕಳ್ಳಪ್ರೇಮದಿಂದಲೇ ದ್ರವ್ಯ ಸಂಪಾದನೆ. ದುಶ್ಶೀಲವೇ ಇವರ ಸ್ವಭಾವ. ವೈಧವ್ಯದಭಯವಿಲ್ಲ. ತುಂಬಿದ ಸಭೆಯಲ್ಲಿ ಗೌರವ. ಏನುಮಾಡಿದರೂ ನಾಚಿಕೆ ಇಲ್ಲ. ರಾಜಭಯವು ಮೊದಲೇ ಇಲ್ಲ. ಛಿ ಛಿ! ವಾರಾಂಗನೆಯರು ಹೇಗೂ ಸುಖದಿಂದ ಜೀವಿಸುವರಲ್ಲವೆ!

---

## ಕಲ್ಹಣ

ಇವನು ಕಾಶ್ಮೀರದವನು. ಕಾಶ್ಮೀರದ ಸುಶ್ಶಲನ ಮಗ ಜಯಸಿಂಹನ ಕಾಲದವನೆಂದು ಇವನ ಗ್ರಂಥದ

ಸುತಸ್ಸುಶ್ಶಲಭೂಭರ್ತುಃ ಸಂಪ್ರತ್ಯಪ್ರತಿಮಕ್ಷಮಃ
ನಂದಯರ್ಮೇದಿನೀಮಾಸ್ತೇ **ಜಯಸಿಂಹೋ** ಮಹೀಪತಿಃ ||

ಎಂಬುದರಿಂದಲೂ, ಇವನು ಶಕ ಸಂ ೧೦೭೦ ಅಥವಾ ಕ್ರಿ. ಶ. ೧೧೪೮ರಲ್ಲಿದ್ದನೆಂಬುದು,

ಲೌಕಿಕಾಬ್ದೇಚತುರ್ವಿಂಶೇ ಶಕಕಾಲಸ್ಯಸಾಂಪ್ರತಂ
ಸಪ್ತತ್ಯಾಭ್ಯಧಿಕಂಯಾತಂ ಸಹಸ್ರಂಪರಿವತ್ಸರಾಃ

ಎಂಬ ಗ್ರಂಥಮುಖಸ್ಥ ಶ್ಲೋಕದಿಂದಲೂ ತಿಳಿಯಬರುತ್ತದೆ.

**ಗ್ರಂಥ:**—ಇವನು ಕಾಶ್ಮೀರದಲ್ಲಿ ಆಳಿಹೋದ ಪ್ರಾಚೀನರಾಜರ ಚರಿತ್ರೆಗಳೆಲ್ಲವನ್ನೂ ಬರೆದು ಅದನ್ನು "ರಾಜತರಂಗಿಣೀ" ಎಂದು ಕರೆದಿರುವನು. ಇದರಲ್ಲಿ ೮ ತರಂಗಗಳಿರುವವು. ಇದರಲ್ಲಿ ಕಾಶ್ಮೀರರಾಜರ ಚರಿತೆಯೇ ಅಲ್ಲದೆ ಇತರದೇಶದ ರಾಜರ ಮತ್ತು ಕವಿಗಳ ಚರಿತೆಯು ಅಲ್ಲಲ್ಲಿ ದೊರೆಯುವುವಾದುದರಿಂದ ಚಾರಿತ್ರ ವಿಷಯಸಂಶೋಧಕರಿಗೆ ಇದು ಬಹು ಪ್ರಯೋಜನವೂ ಪ್ರಮಾಣಗ್ರಂಥವೂ ಆಗಿರುವುದು.

---

## ಕಾ ೦ ಚ ನಾ ಚಾ ರ್ಯ

ಇವನು ಕಪ್ಪಿಮುನಿವಂಶೀಯನಾದ ನಾರಾಯಣನೆಂಬವನ ಮಗನು. ಬ್ರಾಹ್ಮಣನು. ಕ್ರಿ. ಶ. ೧೨ನೆಯ ಶತಮಾನದವನು. ಇವನು "ಧನಂಜಯ" ಎಂಬ ಒದಂಕನಾಟಕವನ್ನು ಒರೆದಿರುವನು. ಇದು ರೂಪಕಭೇದವಾದ ವ್ಯಾಯೋಗಜಾತಿಗೆ ಸೇರಿದುದು. ಕೌರವರಿಂದ ತೆಗೆದುಕೊಂಡು ಹೋಗಲ್ಪಟ್ಟ ವಿರಾಟನ ಹಸುಗಳನ್ನು ಅರ್ಜುನನು ಬಿಡಿಸಿಕೊಂಡು ಬಂದ ವಿಚಾರವು ವರ್ಣಿತವಾಗಿದೆ.§



## ವಾ ಸು ದೇ ವ

ಇವನು ಬ್ರಾಹ್ಮಣನು. ಭಾರತಗುರುವಿನ ಶಿಷ್ಯನು. ಇವನು ಕುಲಶೇಖರವರ್ಮನ ಸಮಕಾಲೀನನೆಂಬುದು: –

ತಸ್ಯ ಚ ವಸುಧಾಮವತಃ ಕಾಲೇ ಕುಲಶೇಖರಸ್ಯ ವಸುಧಾಮವತಃ
ವೇದಾನಾಮಧ್ಯಾಯೀ ಭಾರತ ಗುರುರಭವದಾದ್ಯನಾಮಧ್ಯಾಯೀ
ಸಮಜನಿಕಶ್ಚಿತ್ತಸ್ಯ ಪ್ರವಣಃ ಶಿಷ್ಯೋನುವರ್ತಿಕಶ್ಚಿತ್ತಸ್ಯ
ಕಾವ್ಯಾನಾಮಾಲೋಕೇ ಪಟು ಮನಸೋ ವಾಸುದೇವನಾಮಾಲೋಕೇ ||*

ಎಂಬ ಶ್ಲೋಕದಿಂದ ತಿಳಿಯಲಾಗುತ್ತದೆ:—

**ಕಾಲ:**—ಕುಲಶೇಖರವರ್ಮನು ಕ್ರಿ. ಶ. ೧೨ನೆಯ ಶತಮಾನದವನಾದುದರಿಂದ ಇವನ ಸಮಕಾಲೀನನಾದ ವಾಸುದೇವನು ಕ್ರಿ. ಶ. ೧೨ನೆಯ ಶತಮಾನದವನು.

**ಗ್ರಂಥ:** —ಇವನು 'ಯುಧಿಷ್ಠಿರವಿಜಯ' ಎಂಬ ಮಹಾಕಾವ್ಯವನ್ನು ಬರೆದಿರುವನು. ಇದರಲ್ಲಿ ೮ ಆಶ್ವಾಸಗಳಿರುವುವು. ಇದಕ್ಕೆ ರಾಜಾನಕ ರತ್ನಕಂಠನು "ಶಿಷ್ಯಹಿತ" ಎಂಬ ಟೀಕೆಯನ್ನು ಕ್ರಿ. ಶ ೧೬೭೧ರಲ್ಲಿ ಬರೆದಿರುವನು. ವಾಸುದೇವ 'ವಿಜಯ'ಎಂಬ ಕಾವ್ಯವನ್ನು ಬರೆದ ವಾಸುದೇವ¦ ಕವಿಯೊಬ್ಬನು ದೊರೆಯುವನು. ಇವರು ಭಿನ್ನಭಿನ್ನವ್ಯಕ್ತಿಗಳೇ ಹೇಗೆಂಬುದು ಹೇಳಲಾಗದಾಗಿದೆ.

§ History of classical Literature P.
* ಯುಧಿಷ್ಠಿರವಿಜಯ ಸ. ೧—೮.
¦ Kavyamala Series Book. No 9 P.

ಇವರ ಮಾದರಿಯ ಶ್ಲೋಕಗಳು: —

ಅಥ ರಭಸೇನಾನೀಕಂ ವ್ಯಾತ್ಯಸರಿಪ್ಲೋಸುನಾ ಸಸೇನಾನೀಕಂ
ಕುಪಿತಃ ಶೌರ್ಯಾಭರಣಾಸ್ತ್ರಸ್ಫೂರ್ಯುರ್ದ್ವಾಯ ಶಕ್ರಶೌರ್ಯಾಭರಣಃ
ತಾನಭಿದುದ್ರಾವ ತತಃಸರೋಷವಾರ್ಷತ್ರಚಮೂಭೃದುದ್ರಾವತತ್ರಃ
ಸಕಟುಕಲಾಸಿಃ ಕುಂತೀಪುತ್ರವಲೌಘಃ ಶತೀಕಲಾವೀಕುಂತಿಃ



## ಮಂಖ್ಯಕ.

ಇವನನ್ನು ಮಂಖುಕನೆಂದೂ, ಕರ್ಣಿಕಾರಮಂಖ, ಪಂಡಿತಮಂಖನೆಂದೂ$ ಕರೆಯುವುದುಂಟು. ಇವನು ಕಾಶ್ಮೀರದವನು. ವಿಶ್ವವರ್ತನ ಮಗನು ಎಂಬುದು "ಶ್ರೀರಾಜಾನಕ ವಿಶ್ವವರ್ತಸೂನೋರ್ಮಹಾಕವಿರಾಜ ರಾಜಾನಕ ಶ್ರೀಮಂಖಸ್ಯ ಕೃತೌ ಶ್ರೀಕಂಠಚರಿತೇ ಮಹಾಕಾವ್ಯೇ" ಎಂದು ಪ್ರತಿಸರ್ಗಾಂತ್ಯದಲ್ಲಿ ಹೇಳಿಕೊಂಡಿರುವುದರಿಂದ ತಿಳಿಯಬಹುದಾಗಿದೆ.

**ಕಾಲ:**—ಇವನು ಕ್ರಿ. ಶ. ೧೧೨೯-೧೧೫೦ ರ ವರೆಗೆ ಆಳಿದ ಸುಶ್ಶಲನ ಮಗ ಜಯಸಿಂಹನ ಸಮಕಾಲೀನನು.

**ಗ್ರಂಥಗಳು:**—ಇವನು ಶ್ರೀಕಂಠಚರಿತವೆಂಬ ಮಹಾಕಾವ್ಯವನ್ನು ಬರೆದಿರುವನು. ಇದರಲ್ಲಿ ೨೫ ಸರ್ಗಗಳಿರುವುವು. ಈಶ್ವರನು ತ್ರಿಪುರಾಸುರನನ್ನು ಗೆದ್ದು ತ್ರಿಪುರವನ್ನು ಭಸ್ಮಮಾಡಿ ಹೇಗೆ ಲೋಕವನ್ನುದ್ಧರಿಸಿದನೆಂಬುದು ಇದರಲ್ಲಿ ಪ್ರತಿಪಾದಿಸಲ್ಪಟ್ಟಿರುವುದು. ಶೈಲಿಯು ಕಟುತರ. ಅನೇಕ ಶ್ಲೋಕಗಳು ಶ್ಲೇಷಯುಕ್ತವಾಗಿವೆ. ಇವನು ಈ ಕಾವ್ಯವಲ್ಲದೆ "ಮಂಖ್ಯಕೋಶ" ಎಂಬದನ್ನು ಬರೆದಿರುವುದಾಗಿ ತಿಳಿಯುಬರುತ್ತದೆ. ಗ್ರಂಥವು ಉಪಲಬ್ಧವಿಲ್ಲ.

ತನ್ನ ಕಾಲದಲ್ಲಿ ಮುಖ್ಯರಾದ ರಮ್ಯದೇವ, ಲೋಷ್ಠದೇವ, ಪ್ರಭಾಕರ, ಶ್ರೀಗರ್ಭ, ಶ್ರೀಕಂಠ, ಶ್ರೀದೇವಧರ, ಗರ್ಗ, ತ್ರೈಲೋಕ್ಯ, ದಾಮೋದರ, ಭಟ್ಟಪ್ರಭಾಕರ, ಜಿಂದುಕ, ಅಲಕದತ್ತ, ಶ್ರೀವತ್ಸ, ಶ್ರಯಾನಂದ, ಪದ್ಮರಾಜ, ಗುಣ್ಣ, ಜನಕರಾಜ, ತೇಜಕಂಠನೇ ಮೊದಲಾದ ಕವಿಪುಂಗವರ ಹೆಸರುಗಳನ್ನು ತನ್ನ ಕಾವ್ಯದ ಕೊನೆಯಸರ್ಗದಲ್ಲಿ ಹೇಳಿಕೊಂಡಿರುವನು. ಇವನ ಕಾವ್ಯಕ್ಕೆ ಜೋನರಾಜನೆಂಬವನು ವ್ಯಾಖ್ಯಾನವನ್ನು ಬರೆದಿರುವನು. ಮಂಖ್ಯಕನಿಗೆ ಲಂಕಕನೆಂಬ ಅಣ್ಣನೊಬ್ಬನಿದ್ದುದಾಗಿಯೂ ಅವನಿಗೆ ಅಲಂಕಾರನೆಂಬಾಪರನಾಮವಿದ್ದುದಾಗಿಯೂ ತಿಳಿಯುಬರು

$ ಕವಿತಾಕೌಮುದೀ ಪುಟ ೨೨೫

ತ್ತದೆ. ರಾಜತರಂಗಿಣಿಯಲ್ಲಿ ಅಲಂಕಾರನೆಂಬ ವ್ಯವಹಾರವಿರುವದು ಹೊರ್ತು ಲಂಕಕನೆಂದಿರುವುದಿಲ್ಲ. ಶ್ರೀಕಂಠಚರಿತದಲ್ಲಿ ಅಲಂಕಾರನೆಂಬ ಹೆಸರಲ್ಲದೆ ಲಂಕಕನೆಂದೂ ಇರುವುದು. ಮಂಖ್ಯಕನಿಗೆ ಶೃಂಗಾರನೆಂಬ ಮತ್ತೊಬ್ಬ ಅಣ್ಣನಿದ್ದುದಾಗಿ ಸುಶೀಲಕುಮಾರಡೇ (S. K. De.) ಯವರು ಹೇಳಿರುವರು.

ಇವನ ಕೆಲವು ಶ್ಲೋಕಗಳನ್ನು ಮಾದರಿಗಾಗಿ ಹೇಳಿದೆ :—

ವಿತೀರ್ಣಶಿಕ್ಷಾ ಇವ ಹೃತ್ಪದಸ್ಥಸರಸ್ವತೀವಾಹನರಾಜಹಂಸೈಃ
ಯೇ ಕ್ಷೀರನೀರಪ್ರವಿಭಾಗದಕ್ಷಾ ವಿವೇಕಿನಸ್ತೇ ಕವಯೋಜಯಂತಿ||
ಶ್ರೀಕಂಠಚರಿತ ೨—೧

ಕೃತೋಪದೇಶದಂತೆ ಹಾಲನ್ನೂ ನೀರನ್ನೂ ಬೇರ್ಪಡಿಸಬಲ್ಲುವಾದ ಹೃತ್ಪದ್ಮಸ್ಥಳಾದಶಾರದೆಯ ವಾಹನವಾದ ರಾಜಹಂಸದಂತೆ, ಕಾವ್ಯದಲ್ಲಿಯೂ ಹಾಲು ನೀರಂತಿರುವ ಗುಣದೋಷಗಳನ್ನು ಸ್ವಾಭಾವಿಕವಾಗಿ ವಿಭಜನೆಮಾಡಬಲ್ಲ ಕವಿ ವಿವೇಕಿಗಳು ಮಾತ್ರವೇ ಜಯಶೀಲರಾಗುವರು.

ಅಜ್ಞಾತಪಾಂಡಿತ್ಯರಹಸ್ಯಮುದ್ರಾ ಯೇ ಕಾವ್ಯಮಾರ್ಗೇದಧತೇಽಭಿಮಾನಂ
ತೇಗಾರುಡೀಯಾನನಧೀತ್ಯ ಮಂತ್ರಾನ್ಹಾಲಾಹಲಾಸ್ವಾದನ ಮಾರಭಂತೇ ೨—೫

ಪಾಂಡಿತ್ಯಹೀನನಾದವನು (ತಾನು ಕವಿಯೆನಿಸಿಕೊಳ್ಳಬೇಕೆಂಬಾಸೆಯಿಂದ) ಕಾವ್ಯರಚನೆಯಲ್ಲಿ ಅಭಿಮಾನಗೊಂಡು ಕವಿತೆಯನ್ನು ಮಾಡಲೆತ್ನಿಸುವುದಾದರೆ ಅಂತಹ ಕವಿತೆಯು ಗಾರುಡ ಮಂತ್ರವನ್ನರಿಯದವನು ಹಾಲಾಹಲ (ವಿಷ) ವನ್ನು ಪಾನಮಾಡಲೆಳಸಿದಂತಾಗುವುದು. ಎಂದರೆ ಪಾಂಡಿತ್ಯವಿಲ್ಲದೆ ಕವಿತೆಯನ್ನು ಮಾಡುವವನು ಕಾವ್ಯವ್ಯಸನಿಯಾಗುವನು. ಗಾರುಡ ಮಂತ್ರಬಲವಿಲ್ಲದೆ ವಿಷವನ್ನು ಕುಡಿಯುವವನು ಮೃತನಾಗುವನು.

ವಿನಾ ನ ಸಾಹಿತ್ಯವಿದಾ ಪರತ್ರ ಗುಣಃ ಕಥಂ ಚಿತ್ಪ್ರಥತೇ ಕವೀನಾಂ
ಆಲಂಬತೇ ತತ್ಕ್ಷಣಮಂಭಸೀವ ವಿಸ್ತಾರಮನ್ಯತ್ರ ನ ತೈಲಬಿಂದುಃ ೨ ೧೨

ನೀರಿನಲ್ಲಿ ಬಿಟ್ಟ ತೈಲಬಿಂದುವು ನೀರಿನಲ್ಲಿ ಮಾತ್ರವೇ ಪ್ರಸರಿಸುವುದರ ಹೊರ್ತು ಇತರ ಕಡೆಗೆ ಹೇಗೆ ಪ್ರಸರಿಸಲರಿಯದೋ ಹಾಗೆ ಸಾಹಿತ್ಯಜ್ಞಾನವಿಲ್ಲದ ತಾನು ಇತರ ಸಾಹಿತಿಗಳ ಕಾವ್ಯಗುಣಗಳನ್ನು ತಿಳಿಯಲಾರದೇ ಹೋಗುವನು.

ಅರ್ಥೋಽಸ್ತಿ ಚೇನ್ನ ಪದಶುದ್ಧಿರಥಾಸ್ತಿ ಸಾಪಿ
ನೋ ರೀತಿರಸ್ತಿ ಯದಿ ಸಾ ಘಟನಾ ಕುತಸ್ತ್ಯಾ
ಸಾಪ್ಯಸ್ತಿ ಚೇನ್ನ ನವವಕ್ರಗತಿಸ್ತದೇತ
ದ್ವ್ಯರ್ಥಂ ವಿನಾ ರಸಮಹೋ ಗಹನಂ ಕವಿತ್ವಂ || ೨—೩೦

ಅರ್ಥವೇನೋ ಆಗುತ್ತದೆ. ಆದರೆ ಪದಶುದ್ಧಿಯು ಇರುವುದಿಲ್ಲ. ಪದಶುದ್ಧಿಯು ಇರುವುದಾದರೆ ರೀತಿಯಿರುವುದಿಲ್ಲ. ಒಂದುವೇಳೆ ರೀತಿಯೂ ಇರುವುದಾಗಿದ್ದರೆ ಶಬ್ದವಿನ್ಯಾಸನೈಪುಣ್ಯವು ಇರುವುದಿಲ್ಲ. ಒಂದುವೇಳೆ ಶಬ್ದವಿನ್ಯಾಸನೈಪುಣ್ಯವೂ ಇರುವುದಾಗಿ, ಮೇಲೆಹೇಳಿದ ಗುಣಗಳೆಲ್ಲವೂ ಇರುವುವಾಗಿ ಭಾವಿಸಿದರೆ ಮುಖ್ಯವಾದ ಕಲ್ಪನಾಚಾತುರ್ಯವೇ ಇರದು. ಹೇಗೇ ಆಗಲಿ! ಸರಸ ರಸಹೀನನಾದ ಕಠಿನ ಕವಿತಾಮಾರ್ಗವು ವ್ಯರ್ಥವೇಸರಿ,

ವಿಯೋಗಿನೀಪ್ರಲಾಪದ ಒಂದೆರಡು ಶ್ಲೋಕಗಳು:—

ಕಾಲಕೂಟಮಿಹ ನಿಂದತಿ ಲೋಕೇ
ಯೇನಶಂಭುರಜರಾಮರಏವ
ಅಂತಕಂವಿರಹಿಣೀಷುಸುಧಾಂಶುಂ
ಸ್ತೌತ್ಯಮುಂತುವಿಮಲೋಹಿ ವಿವೇಕಃ ||

ಅಹಹ! ಲೋಕದ ವಿವೇಕವನ್ನೇನೆಂದು ಹೇಳಲಿ! ಹಾಲಾಹಲ (ವಿಷ)ವನ್ನು ಕುಡಿದ ಶಿವನು ಅಜರಾಮರನಾಗಿರುವನೆಂಬುದನ್ನು ತಿಳಿದೂ ತಿಳಿದೂ ಶ್ಲಾಘಿಸುವುದಕ್ಕೆ ಬದಲಾಗಿ ವಿಷವನ್ನು ನಿಂದಿಸುವರು. ವಿರಹಿಣಿಗಳಿಗೆ ಅಂತಕನಂತಿರುವ ಈ ಚಂದ್ರಮನನ್ನು (ದೂಷಿಸುವುದಕ್ಕೆ ಬದಲು) ಹಿಮಕಿರಣನೆಂದೂ ನಿರ್ಮಲನೆಂದೂ ಸಾರಿಸಾರಿಹೊಗಳುವರಲ್ಲ. ಇದೆಂತಹ ವಿವೇಕ !

ಅಂಬುಧೇರುದಗಮದ್ವಿಧುಭಂಗ್ಯಾ
ಸೂನಮೌರ್ವಶಿಖಿಭಸ್ಮಸಪಿಂಡಃ
ಯತ್ಕಿಲಾಸ್ಯ ಘಟಕೇ ಸಹಿ ತೃಪ್ತಿಃ
ಖಂಡಿತಾಜನದೃಗಂಬುಸರಿದ್ಭಿಃ ||

ಖಂಡಿತಾಸ್ತ್ರೀಯರ ಕಣ್ಣುಗಳಿಂದ ಹರಿದುಬರುವ ಅಶ್ರುಧಾರಾನದಿಗಳಿಂದ ಶಾಂತವಾಗದೆ ನಿವ್ನು ಸಮುದ್ರದಲ್ಲಿ ಅಡಗಿಕೊಂಡು ಬಡಬಾನಲವೆನಿಸಿಕೊಳ್ಳುವ ಅಗ್ನಿಪಿಂಡವು ಈ ಚಂದ್ರಮಸರೂಪವನ್ನು ನಿಶ್ಚಯವಾಗಿ ತಾಳಬಂದಿರುವುದು.

---

## ಗೋವರ್ಧನಾಚಾರ್ಯ.

ಇವನು ವಂಗೀಯ ಬ್ರಾಹ್ಮಣನು. ತಂದೆಯ ಹೆಸರು ನೀಲಾಂಬರಸೋಮಯಾಜಿ. ಬಲಭದ್ರನೆಂಬವನು ಇವನಿಗೆ ಸೋದರನು. ಉದಯನೆಂಬವನು ಇವನ ಶಿಷ್ಯನು. ಇವನೂ ಜಯದೇವ, ಉಮಾಪತಿ, ಶರಣ, ಮೊದಲಾದವರು ಲಕ್ಷ್ಮಣದೇವನ ಆಸ್ಥಾನಪಂಡಿತರೆಂದು.—

ಗೋವರ್ಧನಶ್ಚ ಶರಣೋ ಜಯದೇವ ಉಮಾಪತಿಃ
ಕವಿರಾಜಶ್ಚ ರತ್ನಾನಿ ಸಮಿತೌ ಲಕ್ಷ್ಮಣಸ್ಯ ಚ ||

ಎಂದು ಸನಾತನ ಗೋಸ್ವಾಮಿಯು ಹೇಳಿರುವುದರಿಂದಲೂ, ಮತ್ತು ಶಾಸನಾದಿಗಳಿಂದಲೂ ಸ್ಪಷ್ಟಪಡುವುದು.

**ಕಾಲ**:---ವಂಗರಾಜನಾದ ಲಕ್ಷ್ಮಣಸೇನನು ಕ್ರಿ. ಶ. ಹನ್ನೆರಡನೆಯ ಶತಮಾನದವನಾದುದರಿಂದ ಇವನ ಆಸ್ಥಾನಪಂಡಿತನಾದಗೋವರ್ಧನನೂ ಅದೇಕಾಲದವನು.

**ಗ್ರಂಥ**:---ಇವನು 'ಆರ್ಯಾಸಪ್ತಶತಿ' ಎಂಬ ಗ್ರಂಥವನ್ನು ಬರೆದಿರುವನು. ಇದರಲ್ಲಿ ಹೆಸರಿಗೆ ತಕ್ಕಂತೆ ಏಳುನೂರು ಆರ್ಯಾವೃತ್ತಶ್ಲೋಕಗಳಿರುವುವು. ಇವನು ಶೃಂಗಾರರಸವನ್ನು ಪ್ರಧಾನವಾಗಿ ತೆಗೆದುಕೊಂಡು ಕೇವಲ ಪರಿಶುದ್ಧರೀತಿಯಲ್ಲಿ ವರ್ಣಿಸಿ ಹೇಳಿರುವನಾದುದರಿಂದಲೇ ಜಯದೇವನು ಇವನನ್ನು ತನ್ನ ಗೀತಗೋವಿಂದಕಾವ್ಯದಲ್ಲಿ "ಶೃಂಗಾರೋತ್ತರಸತ್ಪ್ರಮೇಯವಚನೈರಾಚಾರ್ಯ ಗೋವರ್ಧನಃ" ಎಂದು ಕೊಂಡಾಡಿರುವನು. ಇದರಲ್ಲಿ ವಿವಿಧನಾಯಿಕಾನಾಯಕಲಕ್ಷಣಗಳು ಹೇಳಲ್ಪಟ್ಟು ಪರಸ್ಪರಭಾಷಣ ರೂಪವಾಗಿರುವುವು. ಕವಿತ್ವವು ಸರಳವಾದುದಾಗಿ ಸರಸೋಪಮಾಲಂಕೃತವಾಗಿರುವುದು. ಆರ್ಯಾಸಪ್ತಶತಿಗೆ ಅನಂತ ಪಂಡಿತಕೃತ "ವ್ಯಂಗ್ಯಾರ್ಥದೀಪನ" ಎಂಬ ಟೀಕೆ ಇರುವುದು. ಮಾದರಿಯ ಎರಡು ಶ್ಲೋಕಗಳು:---

ನಾಯಿಕಾದೃಷ್ಟಿವಿಶೇಷ ಸೌಂದರ್ಯವನ್ನು ಸೂಚಿಸುವುದಾಗಿತೋರುವ ಜಿನಸಿದ್ಧಾಂತ ಪರವಾದಶ್ಲೋಕವು ಹೀಗಿರುವುದು:—

ಅತಿಪೂಜಿತತಾರೇಯಂದೃಷ್ಟಿಶ್ರುತಿಲಂಘನಕ್ಷಮಾಸುತನು
ಜಿನಸಿದ್ಧಾಂತಸ್ಥಿತಿದಿವಸ ವಾಸನಾಕೇಂನಮೋಹಯತಿ ||

ಎಲೆ! ರಮಣಿ ಶ್ರುತಿಲಂಘನ ಸಮರ್ಥವಾದ ನಿನ್ನ ದೃಷ್ಟಿಯು ಜೈನಸಿದ್ಧಾಂತದ ಹಾಗೆ ಯಾರನ್ನೂ ಮೋಹಗೊಳಿಸದು.

ತನ್ನ ಸಖಿಯ ನಾಯಕನು ಅನ್ಯನಾಯಿಕಾನುರಕ್ತನಾಗಿರುವುದನ್ನು ತಿಳಿದು ಧರ್ಮಬೋಧನದಮೂಲಕ ವಿಗ್ರಹಾರಾಧನವಿಧಿಯನ್ನು ಬೋಧಿಸುವ ಸಖೀವಚನವು ಹೀಗಿರುವುದು.

ಅನ್ಯಾಸ್ವಪಿಗೃಹಿಣೀತಿಧ್ಯಾಯನ್ನಭಿಲಷಿತಮಾಪ್ನೋತಿ
ಪಶ್ಯಗ್ರಾವಾಣಮಯೀಃ ಪ್ರತಿಮಾಇವದೇವತಾತ್ವೇನ ||

ಕಲ್ಲುವಿಗ್ರಹವನ್ನು ಮೂಢತನದಿಂದ ಇಷ್ಟಾರ್ಥವನ್ನು ಕೊಡುವ ದೇವತೆಯೆಂದು ಭಾವಿಸುವಂತೆ ಅನ್ಯಸ್ತ್ರೀಯಲ್ಲಿ ವಿವೇಕಹೀನತೆಯಿಂದ ಸ್ವಸ್ತ್ರೀಯೆಂದು ರಮಿಸಿ ಅಭೀಷ್ಟವನ್ನು ಹೊಂದುವೆನೆಂಬುದು ಎಂತಹ ಹೆಡ್ಡತನ !

ಹೀಗೆ ಈ ಕಾವ್ಯವು ಲೋಕಧರ್ಮವನ್ನು ಹೇಳುವುದಾಗಿ ಸಕಲ ಲೋಕಾದರವಾಗಿರುವುದು.

---

## ಶ ರ ಣ (ದೇವ)

ಇವನು ಅಲ್ಲಲ್ಲಿ ಬುದ್ಧಕಾವ್ಯಗಳವಿಚಾರವಾಗಿ ಹೇಳಿರುವುದರಿಂದಲೂ ಮಂಗಳಾಚರಣವು ಬುದ್ಧಪರವಾಗಿರುವುದರಿಂದಲೂ ಇವನು ಬೌದ್ಧನಾಗಿರಬೇಕೆಂದು ಊಹಿಸಲವಕಾಶವಿದೆ. ಇದು ಹೊರ್ತು ಇವನ ಮಾತಾಪಿತೃಗಳಾರೆಂಬುದಾಗಲಿ ಇವನು ಎಲ್ಲಿಯವನೆಂಬುದಾಗಲಿತಿಳಿಯದು.

**ಕಾಲ:** —ಇವನು ವಂಗರಾಜನಾದ ಲಕ್ಷ್ಮಣಸೇನನ ಆಸ್ಥಾನಪಂಡಿತರಲ್ಲಿ ಒಬ್ಬನೆಂದು "ಗೋವರ್ಧನಶ್ಚಶರಣೋ ಜಯದೇವ ಉಮಾಪತಿಃ" ಎಂದು ಹೇಳಿರುವುದರಿಂದ ಇವನು ಕ್ರಿ. ಶ. ೧೨ನೆಯ ಶತಮಾನದವನು.

**ಗ್ರಂಥ:** —ಇವನು 'ದುರ್ಘಟವೃತ್ತಿ'ಎಂಬ ವ್ಯಾಕರಣವನ್ನು ಬರೆದಿರುವನು.

ನತ್ವಾ ಶರಣದೇವೇನ ಸರ್ವಜ್ಞಂ ಜ್ಞಾನಹೇತವೆ
ಬೃಹದ್ಭಟ್ಟವಚನಾಂಭೋಜಕೇಶವೀಕಾಸಭಾಸ್ವತೇ || ೧ ||
ಶಾಕೆ ಮಹೀಪತಿವತ್ಸರಮಾನೇ ಏಕನಭೋನವಪಂಚವಿತಾನೇ
'ದುರ್ಘಟವೃತ್ತಿ' ರಕಾರಿಮುದೇವಃ ಕಂಠವಿಭೂಷಣಹಾರಲತೇವ || ೨ ||
ಮಾಕ್ಯಾಚ್ಛರಣದೇವಸ್ಯ ಭ್ರಾತೃವಗ್ರಹಪೀಡಯಾ
ಶ್ರೀಸರ್ವರಕ್ಷಿತಃ ಸ್ತೈಷಾಸಂಕ್ಷಿಪ್ಯಪ್ರತಿಸಂಸ್ಕೃತಾ || ೩ ||

ಎಂಬ ಶ್ಲೋಕಗಳಿಂದ ದುರ್ಘಟವೃತ್ತಿಯು ಶಾಲಿವಾಹನಶಕ ೧೦೯೫ ಅಥವಾ ಕ್ರಿ. ಶ. ೧೧೭೩ರಲ್ಲಿ ಶರಣದೇವನಿಂದ ರಚಿತವಾದುದೆಂದೂ, ಸರ್ವರಕ್ಷಿತನೆಂಬವನಿಂದ ಸಂಕ್ಷೇಪಿಸಿ ಸಂಶೋಧಿಸಿ ಬರೆಯಲ್ಪಟ್ಟಿತೆಂದೂ ತಿಳಿಯಬರುತ್ತದೆ. ಈ ಕಾರಣದಿಂದಲೇ ಇವನು **ಸರ್ವರಕ್ಷಿತನ** ವಿಚಾರದಲ್ಲಿ ಆಚಾರ್ಯಾಭಿಮಾನವನ್ನು ವಹಿಸಿ ಶ್ರೀಕಾರವನ್ನು ಜೋಡಿಸಿದಂತೆ ಭಾಸವಾಗುತ್ತದೆ. ಇವನ ಗ್ರಂಥದ ವಿಚಾರವು ಶಬ್ದಕೌಸ್ತುಭವೊದಲಾದ ವ್ಯಾಕರಣಗಳಲ್ಲಿ ಹೇರಳವಾಗಿ ದೊರೆಯುವುದು 'ಸದುಕ್ತಿಕರ್ಣಾಮೃತ'ದಲ್ಲಿ ಶರಣ, ಶರಣದೇವ, ಮತ್ತು ಚಿರಂತನಶರಣ ಈ ಹೆಸರುಗಳಲ್ಲಿ ಉದ್ಧೃತವಾಗಿರುವ ಶ್ಲೋಕಗಳು ಕಂಡುಬರುವುವು,

ಡಾ. ಅಪ್ರಷಿಟರವರ ಪುಸ್ತಕ ಪಟ್ಟಿಯಲ್ಲಿ (Catalogue Catalogorum) ಮಂತ್ರ ರಾಮಾಯಣವೆಂಬ ನಾಟಿಕೆಯನ್ನು ಶರಣ ಕವಿಯು ಬರೆದಿರುವುದಾಗಿಹೇಳಲ್ಪಟ್ಟಿದೆ ಮೆ|| S. C. ಚಕ್ರವರ್ತಿಯವರು ದುರ್ಘಟವೃತ್ತಿಕಾರನಾದ ಶರಣನನ್ನು ಶರಣದೇವನೆಂದು ಹೇಳಿರುವರು ಶರಣನೂ ಶರಣದೇವನೂ ಇಬ್ಬರೂ ಏಕವ್ಯಕ್ತಿಯಾಗುವದಾದರೆ ಚಿರಂತನ ಶರಣನಾರೆಂಬ ವಿಚಾರವು ಬರುವುದು. ಈಗ ನಮಗೆ ದೊರೆತಿರುವ ಅಲ್ಪಾಧಾರಗಳಿಂದ ಖಂಡಿತಮಾಡಿ ಹೇಳಲಾಗುವುದಿಲ್ಲ. ಪಾಣಿನಿಯಸೂತ್ರವೃತ್ತಿಗಳಲ್ಲಿ ಕಂಡುಬರುವ ದುರ್ಘಟಲಕ್ಷ್ಯಾದಿಗಳನ್ನು 'ದುರ್ಘಟವೃತ್ತಿ'ಯಲ್ಲಿ ವಿಸ್ತರಿಸಿ ಹೇಳಿರುವುದರಿಂದ ಇದನ್ನು ಈ ಹೆಸರಿನಿಂದಲೇ ಸಂಭೋಧಿಸಿರಬಹುದಾಗಿ ತೋರುತ್ತದೆ. ಇದರಲ್ಲಿ ವ್ಯಾಕರಣಮಾತ್ರವಲ್ಲದೆ ಇತರ ವಿಚಾರಗಳೂ ಅಲ್ಲಲ್ಲಿ ವರ್ಣಿತವಾಗಿರುವುವು. ಆದರೂ ಇದರ ವಿಚಾರಗಳು ಸರಸ ಸಂಭಾಷಣೆಗಳಿಂದ ದೂರವಾಗಿ ವಿಷಯಕಾಠಿಣ್ಯದಿಂದಕೂಡಿ 'ದುರ್ಘಟವೃತ್ತಿ' ಎಂಬದನ್ನು ಸಾರ್ಥಕಗೊಳಿಸಿಕೊಂಡಿರುವುದು. ಇದರಲ್ಲಿ ೮ ಅಧ್ಯಾಯಗಳಿದ್ದು ಪ್ರತಿಯೊಂದು ಅಧ್ಯಾಯವೂ ನಾಲ್ಕು ನಾಲ್ಕು ಭಾಗಗಳಾಗಿ ವಿಂಗಡಿಸಲ್ಪಟ್ಟು ಪ್ರಕರಣಗಳೆಂದು ಕರೆಯಲ್ಪಟ್ಟಿರುವುವು.

---

## ಉ ಮಾ ಪ ತಿ ಧ ರ

ಇವನು ಎಲ್ಲಿಯವನೆಂಬದಾಗಲಿ ಮಾತಾಪಿತೃಗಳಾರೆಂಬುದಾಗಲಿ ತಿಳಿಯದು. ಇವನು ಲಕ್ಷ್ಮಣಸೇನನ ಆಸ್ಥಾನ ಪಂಡಿತನು. ಜಯದೇವನ ಸಮಕಾಲೀನನು. ಕ್ರಿ. ಶ. ೧೨ನೆಯ ಶತಮಾನದವನು. ಇವನು 'ಪಾರಿಜಾತಹರಣ'ಎಂಬ ನಾಟಕವನ್ನು ಬರೆದಿರುವನು. ಇದಲ್ಲದೆ ಲಕ್ಷ್ಮಣಸೇನನ ಸಾಮಂತನಾಗಿರಬಹುದಾದ ಚಾಣಕ್ಯಚಂದ್ರನ ಆಶ್ರಯದಲ್ಲಿ ಚಂದ್ರಚೂಡವೆಂಬ ಗ್ರಂಥವನ್ನು ಬರೆದುದಾಗಿ ತಿಳಿಯಬರುತ್ತದೆ.$ ಈ ವಿಚಾರವು ಜಯಸೇನನ ದಿಯೋಪರ (Deopare) ಶಾಸನ § ದಿಂದಲೂ ವ್ಯಕ್ತವಾಗುತ್ತದೆ. ಉಮಾಪತಿಧರನದೆಂದು ಹೇಳುವ ಅನೇಕ ಶ್ಲೋಕಗಳು 'ಸದುಕ್ತಿಕರ್ಣಾಮೃತ'ದಲ್ಲಿ ದೊರೆಯುವುವು. ಹರಿಹರರಾಜದೇವನಾಶ್ರಯದಲ್ಲಿ ಉಮಾಪತಿ ಉಪಾಧ್ಯಾಯನೆಂಬವನು 'ಪಾರಿಜಾತಹರಣ'ವೆಂಬ ಗ್ರಂಥವನ್ನು ಬರೆದುದಾಗಿ ಹೇಳಲ್ಪಟ್ಟಿದೆ. ಪಂಡಿತರಾಜೇಂದ್ರ ಲಾಲಮಿತ್ರರವರು ಉಮಾಪತಿಧರನೂ, ಉಮಾಪತಿಉಪಾಧ್ಯಾಯನೂ ಒಂದೇವ್ಯಕ್ತಿಯೆಂದುಹೇಳಿ ಇವನು

---

* Introduction to ಭಾಷಾವೃತ್ತಿ ಪುಟ ೭

$ Pischal of. Cit P. 7. Footnote

§ Epigraphica Indica Vol T. P. 305 FN

ಲಕ್ಷ್ಮಣಸೇನನ ಆಶ್ರಯದಲ್ಲಿದ್ದುದಾಗಿ ಹೇಳಿರುವರು. ಆದರೆ ಹೇಗೆಂಬುದನ್ನು ಸಮರ್ಥಿಸಿರುವುದಿಲ್ಲ. ಗ್ರಂಥಾಂತ್ಯದಲ್ಲಿ 'ಇತಿಮಹಾಮಹೋಪಾಧ್ಯಾಯ ಕವಿಪಂಡಿತ ಮುಖ್ಯ ಶ್ರೀಮದುಮಾಪತ್ಯುಪಾಧ್ಯಾಯ ವಿರಚಿತಂ ಪಾರಿಜಾತಾಪಹರಣ ನಾಟಕಂ' ಎಂದಿದೆ. ಸನಾತನಗೋಸ್ವಾಮಿಯ ಹೇಳಿಕೆಯಾದ "ಗೋವರ್ಧನಶ್ಚಶರಣೋಜಯದೇವ ಉಮಾಪತಿಃ" ಎಂಬದರಲ್ಲಿ ಉಮಾಪತಿ ಎಂದಿರುವುದೇ ಹೊರತು ಉಮಾಪತಿಧರನೆಂದಾಗಲಿ ಉಮಾಪತಿಉಪಾಧ್ಯಾಯನೆಂದಾಗಲಿ ಹೇಳಿರುವುದಿಲ್ಲ.

ನಾರದನು ಒಂದು ಪಾರಿಜಾತದ ಹೂವನ್ನು ತಂದು ಕೃಷ್ಣನಿಗೆಕೊಡಲು ಅವನು ಅದನ್ನು ರುಕ್ಮಿಣಿಗೆಕೊಡುವನು. ಇದನ್ನು ಕಂಡು ಸತ್ಯಭಾಮೆಯು ಕೋಪಗೊಳ್ಳಲು ಕೃಷ್ಣನು ಅವಳನ್ನು ಸಮಾಧಾನಪಡಿಸಿ ಮತ್ತಷ್ಟು ಹೂವುಗಳನ್ನು ಕಳುಹಿಸಿಕೊಡಬೇಕೆಂದು ಇಂದ್ರನಿಗೆ ಹೇಳಿಕಳುಹಿಸುವನು. ಇಂದ್ರನು ತಿರಸ್ಕರಿಸುವನು. ಕೊನೆಗೆ ಕೃಷ್ಣನಿಗೂ ಇಂದ್ರನಿಗೂ ಕದನವಾಗಿ ಇಂದ್ರನು ಪರಾಜಿತನಾಗುವನು. ಹೂವು ತರಿಸಲ್ಪಡುವುದು. ಸತ್ಯಭಾಮೆಯು ಸಂತೋಷಪಡುವಳು. ಇದರಲ್ಲಿ ವಿಷಯಕ್ಕೆ ತಕ್ಕಂತೆ ಪಾತ್ರಗಳು ಬಹುಜಾಣ್ಮೆಯಿಂದ ಜೋಡಿಸಲ್ಪಟ್ಟಿರುವುವು. ಕೃಷ್ಣನಿಗೆ ಸಹಾಯಕನಾಗಿ ಅರ್ಜುನನು ಮುಖ್ಯಭಾಗವನ್ನುವಹಿಸಿರುವನು. ವರ್ಣನೆಗಳು ಚೆಲುವಾಗಿದ್ದು ಕೃಷ್ಣ ಮತ್ತು ಸತ್ಯಭಾಮೆಯರ ಪ್ರಣಯಕಲಹವು ಬಹು ಸೊಗಸಾಗಿ ಹೇಳಲ್ಪಟ್ಟಿರುವುದು.



## ಶ್ರೀ ವ ರ ಪ ಂ ಡಿ ತ

ಇವನು ಕಾಶ್ಮೀರದವನು. ಬ್ರಾಹ್ಮಣನು ಕ್ರಿ. ಶ. ೧೫ನೆಯ ಶತಮಾನದಲ್ಲಿದ್ದ ಜೋನರಾಜನ ಶಿಷ್ಯನು. ಜೋನರಾಜನು ಯಾವಾಗ ಗತಾಯುವಾದನೆಂಬುದಕ್ಕೆ ತನ್ನ ಗ್ರಂಥದಮೊದಲಿನಲ್ಲಿ:—

ಶ್ರೀಜೋನರಾಜವಿಬುಧಃ ಕುರ್ವ‌ನ್ರಾಜತರಂಗಿಣೀಂ
ಸಾಯಕಾಗ್ನಿಮಿತೇವರ್ಷೇಶಿವಸಾಯುಜ್ಯಮಾಸದತ್ ॥ ೬
ಶಿಷ್ಯೋಽಸ್ಯ ಜೋನರಾಜಸ್ಯ ಸೋಽಹಂ **ಶ್ರೀವರಪಂಡಿತಃ**
ರಾಜಾವಳೀ ಗ್ರಂಥಶೇಷಾಪೂರಣಂಕರ್ತುಮುದ್ಯತಃ ॥ ೭
ತಥಾಪಿಸಕಲಂಚಿತ್ರಸಕಾಂತೇತ್ರಿಜಗದ್ಯಥಾ
ಶ್ರೀಜೈನೋಲ್ಲಾಬದೀನಸ್ಯನ್ಯಸ್ಯಾಮಿಗುಣವರ್ಣನಂ ॥ ೧೫

ಎಂದು ಹೇಳಿಕೊಂಡಿರುವನು. ಜೈನಲಾಬದೀರಾಜನ ಮೊದಲುಗೊಂಡು 'ಪತಿಹಷಾಹ ರಾಜನವರೆಗೂ ಆಳಿದರಾಜರ ಚರಿತ್ರೆಯನ್ನು ಬರೆದು ಅದನ್ನು

ಮೂರನೆಯ ರಾಜತರಂಗಿಣೀ (Rajatharangini Part III) ಎಂದು ಕರೆದಿರುವನು. ಇದನ್ನು ಜೋನರಾಜ ಪಂಡಿತನ ಅನಂತರ ಬರೆದಿರಬೇಕಾಗಿ ಬೋಧೆಯಾಗುತ್ತದೆ. ಇದರಲ್ಲಿ ನಾಲ್ಕುತರಂಗಗಳಿರುವುವು. ಕೊನೆಯಲ್ಲಿ 'ಇತಿ ಶ್ರೀಜೈನರಾಜತರಂಗಿಣ್ಯಾಂಪಂಡಿತ ಶ್ರೀವರವಿರಚಿತಾಯಾಂಫತಿಹಷಾಹರಾಜ್ಯ ಪ್ರಾಪ್ತಿರ್ನಾಮಚತುರ್ಥಸ್ತರಂಗಃ ಸಮಾಪ್ತೋಯಂ ಶ್ರೀವರರಾಜತರಂಗಿಣೀ' ಎಂದಿದೆ.



## ಜ ಯ ದೇ ವ (೧)

ಶ್ರೀಕೃಷ್ಣಭಕ್ತಾಗ್ರೇಸರನಾದ ಈ ಜಯದೇವನು ಗಾನರೂಪಕೃತಿಯ ಸವಿಯನ್ನುಂಡು ಭಕ್ತಿಪಾರವಶ್ಯದಿಂದ ಮೈಮರೆದು ನಲಿಯುವ ಭಾರತೀಯರೆಷ್ಟೋ ಜನರಿರುವರು. ಇವನ ಕವಿತಾಧೋರಣೆ ಮತ್ತು ಪದಲಾಲಿತ್ಯವನ್ನು ವಿವೇಚನೆ ಮಾಡುವ ರಸಿಕಸಹೃದಯರ ಹೃದಯಾಂಬುಜದಲ್ಲಿ ನವರಸಗಳು ತುಂಬಿ ಹೊರಸೂಸುವುವು. ಸರಸಗೀತಪ್ರಬಂಧದ ರತ್ನಮಾಲಿಕೆಗಳನ್ನು ಸಮರ್ಪಿಸಿ ಸಂಸ್ಕೃತ ಭಾಷಾಯೋಷಾಮಣಿಯನ್ನು ಪೂಜಿಸಿರುವ ಮಹಾನುಭಾವರಲ್ಲಿ ಜಯದೇವನು ಮೊದಲನೆಯುನವನೆಂದು ಹೇಳಬೇಕಾಗುವುದು. ಇವನು ಬ್ರಾಹ್ಮಣನು. ತಂದೆ ಭೋಜದೇವ, ತಾಯಿ ರಾಮಾಂಬಾ, ಪರಾಶರನೇ ಮೊದಲಾದವರು ಇವನ ಗೆಳೆಯರೆಂಬುದು:—

ಶ್ರೀಭೋಜದೇವ ಪ್ರಭವಸ್ಯ ರಾಮಾ
  ದೇವೀಸುತ ಶ್ರೀಜಯದೇವಕಸ್ಯ
ಪರಾಶರಾದಿಪ್ರಿಯವರ್ಗಕಂಠೇ
  ಶ್ರೀಗೀತಗೋವಿಂದ ಕವಿತ್ವಮಸ್ತು॥†

ಎಂಬ ಶ್ಲೋಕದಿಂದಲೂ ಇವನ ಹೆಂಡತಿಯ ಹೆಸರು ಪದ್ಮಾವತೀ ಎಂಬುದು "ಜಯತಿಪದ್ಮಾವತೀರಮಣಜಯದೇವಕವಿಭಾರತೀಭಣಿತಮತಿಶಾತಂ"‡ ಎಂದೂ, "ಪದ್ಮಾವತೀಚರಣಚಾರಣ ಚಕ್ರವರ್ತೀ"§ ಎಂದೂ ಹೇಳಿ ಕೊಂಡಿ

'ಪ್ರಸನ್ನರಾಘವ ನಾಟಕ' ಕಾರನಾದ ಜಯದೇವನೂ 'ಶೃಂಗಾರಮಾಧವೀ' ಯ ಚಂಪೂಕಾರನಾದ ಜಯದೇವನೂ "ಚಂದ್ರಾಲೋಕ" ಕಾರನಾದ ಜಯದೇವನೂ ಇವನಿಂದ ಭಿನ್ನರು.

† ಗೀತಗೋವಿಂದ ಸ. ೧೨ ಶ್ಲೋ. ೧೧

‡ Ibid ಸ. ೧೦ ಅಷ್ಟ ೧೯ ಚರಣ ೮

§ Ibid ಸ ೧ ಶ್ಲೋ ೨

ರುವುದರಿಂದಲೂ, ಇವನ ನಿವಾಸಗ್ರಾಮವು ಜಗನ್ನಾಥ ಪ್ರಾಂತ್ಯದಲ್ಲಿರುವ 'ಬಿಂದುಬಿಲ್ವ' ಎಂಬುದು 'ಬಿಂದುಬಿಲ್ವಸಮುದ್ರಸಂಭವರೋಹಿಣೀರಮಣೇನ' x ಎಂದು ಒಕ್ಕಣಿಸಿಕೊಂಡಿರುವುದರಿಂದ ಗೊತ್ತಾಗುತ್ತದೆ. ಕೆಲವು ಗ್ರಂಥಗಳಲ್ಲಿ ಕಿಂದುಬಿಲ್ವವೆಂದೂ, ಕೆಲವೆಡೆ ಕೆಂದುಬಿಲ್ವವೆಂದೂ, ಕೆಲವೆಡೆ ತಿಂದುಬಿಲ್ವವೆಂದೂ ಹೇಳಲ್ಪಟ್ಟಿದೆ. ಆದರೆ ಶ್ರೀಮಚ್ಚಂದ್ರದತ್ತಕೃತ "ಭಕ್ತಮಾಲಾ" ಎಂಬ ಗ್ರಂಥದಲ್ಲಿ 'ಬಿಂದುಬಿಲ್ವ' ಎಂದು ಹೇಳಿದೆ. ಇವನು ವಂಗದೇಶವನ್ನಾಳಿದ ಬಲ್ಲಾಳಸೇನನ ಕುಮಾರ ಲಕ್ಷ್ಮಣಸೇನನ ಆಸ್ಥಾನ ಪಂಡಿತನಾಗಿದ್ದನೆಂಬುದು,

ಗೋವರ್ಧನಶ್ಚ ಶರಣೋ ಜಯದೇವ ಉಮಾಪತಿಃ
ಕವಿರಾಜಶ್ಚ ರತ್ನಾನಿ ಸಮಿತೌ ಲಕ್ಷ್ಮಣಸ್ಯ ಚ ॥ §

ಎಂದು ಹೇಳಲ್ಪಟ್ಟಿರುವುದರಿಂದ ಜಯದೇವನೊಬ್ಬನೇ ಅಲ್ಲದೆ ಗೋವರ್ಧನಾದಿ ಕವಿಗಳೂ ಲಕ್ಷ್ಮಣಸೇನನ ಸಭಾಪಂಡಿತರಾಗಿದ್ದರೆಂಬುದು ಸ್ಪಷ್ಟಪಡುತ್ತದೆ. ಇದಲ್ಲದೆ ಜಯದೇವನು ತನ್ನ ಸಮಕಾಲೀನರಾದ ಕವಿಗಳನ್ನು ಕೊಂಡಾಡುವಾಗ ಹೀಗೆಂದಿರುವನು.:—

ವಾಚಃ ಪಲ್ಲವಯತ್ಯುಮಾಪತಿಧರಃ ಸಂದರ್ಭಶುದ್ಧಿಂ ಗಿರಾಂ
ಜಾನೀತೇ ಜಯದೇವ ಏವ ಶರಣಃ ಶ್ಲಾಘ್ಯೋ ದುರೂಹದ್ರುತೇಃ
ಶೃಂಗಾರೋತ್ತರಸತ್ಪ್ರಮೇಯರಚನೈರಾಚಾರ್ಯಗೋವರ್ಧನ
ಸ್ಪರ್ಧೀ ಕೋಽಪಿ ನ ವಿಶ್ರುತಃ ಶ್ರುತಿಧರೋ ಧೋಯೀ ಕವಿಕ್ಷ್ಮಾಪತಿಃ ॥ $

**ಕಾಲ:**—ಲಕ್ಷ್ಮಣಸೇನನು ಬಂಗಾಳದಲ್ಲಿ ಕ್ರಿ. ಶ. ೧೨ನೆಯ ಶತಮಾನಾರಂಭದಲ್ಲಿ ಆಳಿದುದಾಗಿ ಹೇಳಲ್ಪಟ್ಟಿದೆ. ರಾಜನಾದ ಲಕ್ಷ್ಮಣಸೇನನು ಕೊಟ್ಟಿರುವ ದಾನಪತ್ರದ ಕಾಲವು ಸಂ. ೧೧೭೩ ಅಥವಾ ಕ್ರಿ. ಶ. ೧೧೧೬ ಎಂದು ಬರೆಯಲ್ಪಟ್ಟಿದೆ. ಈ ಶಾಸನವು ಗಯೆಯ ಬಳಿ ಇದೆ.† ಆದುದರಿಂದ ಜಯದೇವನು ಇವನ ಆಸ್ಥಾನಪಂಡಿತನಾಗಿದ್ದುದರಿಂದ ಲಕ್ಷ್ಮಣಸೇನನ ಕಾಲವೇ ಜಯದೇವನ ಕಾಲವಾಗಿರಬೇಕು. ಎಂದರೆ ಕ್ರಿ. ಶ. ೧೨ನೆಯ ಶತಮಾನದವನೆಂಬುದು ಸ್ಥೂಲಮಾನದಿಂದ ಸಿದ್ಧವಾಗುತ್ತದೆ. ಇದೇ ವಿಚಾರವನ್ನೇ ವಂಗಭಾಷಾಸಾಹಿತ್ಯವು‡ ಸಮ

x ಗೀತಗೋವಿಂದ ಸ. ೩ ಅಷ್ಟ ೭ ಚರಣ ೮

* ಜಗನ್ನಾಥಪುರೀಪ್ರಾಂತೇ ದೇಶೇ ಚೈವೋತ್ಕಲಾಭಿಧೇ
'ಬಿಂದುಬಿಲ್ವ' ಇತಿಖ್ಯಾತೋ ಗ್ರಾಮೋಬ್ರಾಹ್ಮಣಸಂಕುಲಃ ಭಕ್ತಮಾಲಾ ಸ. ೩೯—೪೧

§ ಲಕ್ಷ್ಮಣಸೇನನ ಸಭಾಮಂಟಪದ್ವಾರದ ಶಿಲಾಶಾಸನ

$ ಗೀತಗೋವಿಂದ ಸ. ೧ ಶ್ಲೋ. ೪

† History of Classical Sanskrit Literature P. 121

‡ Bengali Language and Literature P. 540

ರ್ಥಿಸುತ್ತದೆ. ಅದು ಹೀಗಿರುವುದು:—Jayadeva, the Sanskrit Poet of the 12th Century writing ಇದರಲ್ಲಿಯೂ ಕ್ರಿ. ಶ. ೧೨ನೆಯ ಶತಮಾನದವನೆಂದಾದುದು. ಆದರೆ ಇದೇ ವಂಗಭಾಷಾಸಾಹಿತ್ಯದ ಬೇರೊಂದೆಡೆಯಲ್ಲಿ ಲಕ್ಷ್ಮಣಸೇನನ ತಂದೆ ಬಲ್ಲಾಳಸೇನನು ಕ್ರಿ. ಶ ೧೧೧೯-೧೧೭೯ ರ ವರೆಗೆ ಆಳಿದುದಾಗಿ ಹೇಳಲ್ಪಟ್ಟಿದೆ.§ ಲಕ್ಷ್ಮಣಸೇನನು ತಂದೆಯ ಅನಂತರ ರಾಜನಾಗಿದ್ದುದಾದರೆ ಲಕ್ಷ್ಮಣಸೇನನ ರಾಜ್ಯಕಾಲವು ಕ್ರಿ. ಶ, ೧೨ನೆಯ ಶತಮಾನದ ಉತ್ತರಾರ್ಧವಾಗುವುದು. ಇವನು ಯಾವಾಗ ಎಲ್ಲಿಂದ ಎಲ್ಲಿಯವರೆಗೆ ರಾಜನಾಗಿದ್ದನೆಂಬುದಾಗಲಿ, ಯುವರಾಜನಾಗಿ ಎಷ್ಟು ವರ್ಷಗಳಿದ್ದನೆಂಬುದಾಗಲಿ ಯಾವುದೂ ಖಂಡಿತವಾಗಿ ತಿಳಿಯುವಂತಿಲ್ಲ. ಮೇಲೆ ಹೇಳಿರುವ ದಾನಶಾಸನದ ಕಾಲವು ಲಕ್ಷ್ಮಣಸೇನನು ಯುವರಾಜನಾಗಿದ್ದ ಕಾಲವನ್ನು ಸೂಚಿಸುತ್ತದೆ.

**ಗ್ರಂಥಗಳು:**—ಇವನು ಬರೆದುದಾಗಿ ಹೇಳಲ್ಪಟ್ಟು ಪ್ರಕೃತ ದೊರೆತಿರುವ.

೧. ಗೀತ ಗೋವಿಂದಕಾವ್ಯ†

೨. ಕಾರಕವಾದ

೩. ರತಿಮಂಜರಿ

೪. ತತ್ವಚಿಂತಾಮಣಿ

ಎಂಬ ನಾಲ್ಕುಗ್ರಂಥಗಳು ಇರುವುವು. ಗೀತಗೋವಿಂದ ಕಾವ್ಯವು ಗೀತ ಮತ್ತು ಶ್ಲೋಕಯುಕ್ತವಾಗಿರುವುದು. ಇದರಲ್ಲಿ ಕೃಷ್ಣ (ಗೋವಿಂದ)ನ ವಿಚಾರವಾಗಿ ಗಾನ ಮಾಡಲ್ಪಟ್ಟಿರುವುದರಿಂದ ಗೀತಗೋವಿಂದವೆಂದೂ ಈ ಪ್ರಬಂಧದಲ್ಲಿ ಹನ್ನೆರಡು ಸರ್ಗಗಳಿದ್ದು ಸಂಗೀತ ಮತ್ತು ಸಾಹಿತ್ಯವನ್ನರಿತಿರುವ ರಸಿಕರಿಗಾಗಿ ೨೪ ಪಾದಗಳುಳ್ಳ ಎಂಟೆಂಟು ಹಾಡುಗಳನ್ನು ರಚಿಸಿ ಇದನ್ನು "ಅಷ್ಟಪದಿ" ಎಂದು ಕರೆಯುವ ರೂಢಿಯೂ ಇರುವುದು. ಇದರಲ್ಲ ಶ್ರೀಕೃಷ್ಣನ ಕ್ರೀಡಾವಿಚಾರವೇ ಕಥಾವಸ್ತು. ಪ್ರಧಾನರಸವು ಶೃಂಗಾರ. ಅದರಲ್ಲಯೂ ಶುದ್ಧಶೃಂಗಾರವಾಗಿರುವುದು. ಇದರ ರಸವಿವೇಚನಾಕ್ರಮವು ಸಾಧಾರಣೇತರರಿಗೆ ಕೇವಲ ಮಾನುಷವಿಷಯಕವಾಗಿರುವಂತೆ ತೋರಿಬರುತ್ತದೆಂದೆನ್ನಬಹುದಾದರೂ ಅಮಾನುಷರೂಪನಾದ ಪರಮಾತ್ಮನ ವಿಷಯವರ್ಣಿತವಾಗಿರುವುದರಿಂದ ಈ ಗ್ರಂಥವು ಕೇವಲ ಕಾವ್ಯರಸಿಕರಿಗೇ ಅಲ್ಲದೆ ಭಾಗವತಾಗ್ರೇಸರರಿಗೆ ಕೂಡ ಪರಮಾದರಣೀಯವಾಗಿರುವುದೆಂದು ಪುನಃ ಹೇಳಬೇಕಾದುದಿಲ್ಲ. ಇದರಲ್ಲಿ ಪತ್ತನೆಯ ಸರ್ಗದವರೆಗೆ ರಾಧಾ ಮಾಧವರ ವಿಪ್ರಲಂಭ ಶೃಂಗಾರವು ವರ್ಣಿತವಾಗಿ ಹನ್ನೊಂದು ಹನ್ನೆರಡರಲ್ಲಿ ಸಂಭೋಗ ಶೃಂಗಾರವನ್ನು

§ Bengali Language and Literature P. 80.

† ಗೀತಗೋವಿಂದ ಸ ೧ ಶ್ಲೋ ೧೧

ಸಾಂಗವಾಗಿ ಹೇಳಿ ಗ್ರಂಥವು ಮುಕ್ತಾಯವಾಗಿರುವುದು. ಇದೇ ವಿಚಾರವನ್ನು ಕವಿಯು ತನ್ನ ಗ್ರಂಥದ ಮಂಗಳಾಚರಣವಾದ,

ಮೇಘೈರ್ಮೇದುರಮಂಬರಂ ವನಭುವಃ ಶ್ಯಾಮಾಸ್ತಮಾಲದ್ರುಮೈಃ
ನಕ್ತಂ ಭೀರುರಯಂ ತ್ವಮೇವ ತದಿಮಂ ರಾಧೇ ಗೃಹಂ ಪ್ರಾಪಯ ||

ಎಂಬವರೆಗೂ ವಿಪ್ರಲಂಭ ಶೃಂಗಾರವನ್ನು ಸೂಚಿಸಿ ಉತ್ತರಾರ್ಧವಾದ.—

'ಇತ್ಥಂ ನಂದನಿದೇಶತಶ್ಚಲಿತಯೋಃ ಪ್ರತ್ಯಧ್ವಕುಂಜದ್ರುಮಂ
ರಾಧಾಮಾಧವಯೋರ್ಜಯಂತಿ ಯಮುನಾ ಕೂಲೇ ರಹಃಕೇಳಯಃ ||

ಎಂಬುದರಲ್ಲಿ ಸಂಭೋಗಶೃಂಗಾರವನ್ನು ಹೇಳಿ ಮುಗಿಸಿರುವನು.

ತಾನು ಗೀತವನ್ನು ಹಾಡಿ ಅದಕ್ಕನುಗುಣವಾಗಿ ತನ್ನ ಭಾರ್ಯೆಯಾದ ಪದ್ಮಾವತಿಯಿಂದ ಅಭಿನಯಯುಕ್ತವಾದ ನಾಟ್ಯಮಾಡಿಸುವನಾಗಿ ಪುರುಷೋತ್ತಮನಾದ ಶ್ರೀಕೃಷ್ಣನ ಶೃಂಗಾರ ಕ್ರೀಡೆಯನ್ನು ವಿವರಿಸುವ ಈ ಗೀತಗೋವಿಂದವೆಂಬ ಪ್ರಬಂಧವನ್ನು ರಚಿಸುವುದಾಗಿ,

ವಾಗ್ದೇವತಾಚರಿತಚಿತ್ರಿತ ಚಿತ್ತಸದ್ಮಾ
ಪದ್ಮಾವತೀಚರಣಚಾರಣ ಚಕ್ರವರ್ತೀ
ಶ್ರೀವಾಸುದೇವರತಿಕೇಳಿ ಕಥಾಸಮೇತ
ಮೇತಂ ಕರೋತಿ ಜಯದೇವಕವಿಃ ಪ್ರಬಂಧಂ ||'

ಎಂದು ಪ್ರತಿಜ್ಞೆಯನ್ನು ಮಾಡಿರುವನು. ಇದರಲ್ಲಿ ಕವಿಯು "ಪದ್ಮಾವತೀ ಚರಣಚಾರಣ ಚಕ್ರವರ್ತೀ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವನು. ಇಲ್ಲಿ

(೧) ಪದ್ಮಾವತೀ---ಅಷ್ಟಾಕ್ಷರೀ ಮಂತ್ರಕ್ಕೆ ಅಧಿದೇವತೆಯಾದ ಲಕ್ಷ್ಮಿಯ ಚರಣಚಾರಣ---ಪಾದಪರಿಚರ್ಯೆಯಲ್ಲಿ,

(೧) "ಪ್ರಬಂಧಃಕಲ್ಪನಾಕಥಾ" ಇತ್ಯಮರಃ

(೨) "ತಾನಾದಿಸ್ವರಗೀತಾನಾಂ ಕ್ರಮಾದೂರ್ಧ್ವಮಧೋಗತಿಃ" ಎಂದರೆ ಕ್ರಮವಾಗಿ ಗಾನ, ಸ್ವರ, ಗೀತಗಳಿಂದ ಕೂಡಿ ಊರ್ಧ್ವಾಧೋಗತಿಯುಳ್ಳದಕ್ಕೆ ಪ್ರಬಂಧವೆಂದೂ (ಭರತಕಲ್ಪಲತಾಮಂಜರೀ)

(೩) ಚತುರ್ಭಿಃ ಪಂಚಭಿಃ ಷಡ್ಭಿಸ್ಸ್ವರೈ ರಾಗನಿರೂಪಣಂ || ಎಂದರೆ ನಾಲ್ಕು, ಐದು ಆರುಸ್ವರಂಗಳಿಂದ ಕೂಡಿ ರಾಗನಿರೂಪಣಮಾಡಿಕೊಂಡು ಹಾಡುವುದಕ್ಕೆ ಪ್ರಬಂಧವೆಂದೂ ಹೆಸರು. (ಭರತಶಾಸ್ತ್ರ.)

(೪) ಗೀತವೆಂದರ:— ಅಷ್ಟಭಾಷಾಪದೈರ್ಯುಕ್ತಂ ಶಬ್ದಝುಂಕಾರಸಂಯುತಂ
ಸ್ವರರಾಗೈಃಪ್ರಗಾಯಂತಿ ಗೀತಮಿತ್ಯಭಿಧೀಯ್ಯತೇ ||

ಅಷ್ಟಭಾಷಾಪದಯುಕ್ತವಾಗಿ ಶಬ್ದಝೇಂಕಾರಯುತವಾಗಿ ಸ್ವರ ಮತ್ತು ರಾಗಗಳಿಂದ ಕೂಡಿಹಾಡುವುದಕ್ಕೆ ಹೆಸರು.

ಚಕ್ರವರ್ತೀ—ಸಾರ್ವಭೌಮನೆಂಬ ಅರ್ಥವೂ (ಎಂದರೆ ಲಕ್ಷ್ಮೀಯ ಉಪಾಸಕನೆಂಬರ್ಥವೂ)

(೨) ಪದ್ಮಾವತೀ –ಪದ್ಮಾವತೀ ಎಂಬ ತನ್ನ ಭಾರ್ಯೆಯ
ಚರಣಚಾರಣ—ಪಾದವಿನ್ಯಾಸವಮಾಡಿಸೋಣದರಲ್ಲ ಎಂದರೆ ನಾಟ್ಯ ವಾಡಿಸುವುದರಲ್ಲಿ,

ಚಕ್ರವರ್ತೀ –ಸಾರ್ವಭೌಮನೆಂಬ ಧ್ವನಿಯೂ ಉಂಟಾಗುತ್ತದೆ. ಇದರಿಂದ ಇವನು ಭರತಶಾಸ್ತ್ರಕೋವಿದನೆಂಬುದೂ ಸ್ಪಷ್ಟಪಡುತ್ತದೆ.

ಇಲ್ಲಿ ಕವಿಯು ತನ್ನ ಹೆಂಡತಿಯ ಹೆಸರನ್ನು ಹೇಳಿರುವ ವಿಚಾರದಲ್ಲಿ :—

ಜ್ಯೇಷ್ಠ ಭಾರ್ಯೆಯ ಹೆಸರನ್ನೂ, ತಾಯಿತಂದೆ, ಗುರುಗಳ ಹೆಸರನ್ನೂ ಜ್ಯೇಷ್ಠ ಪತ್ನೀಪುತ್ರರ ಹೆಸರನ್ನೂ ಕರ್ಮಕಾಲಗಳಲ್ಲಿ ಹೊರ್ತು ಯಾವಾಗಲೂ ಹೇಳಕೂಡ ದೆಂದೂ, ಹಾಗೆ ಕರೆಯಬಹುದಾದ ಸನ್ನಿವೇಶವು ಕೇವಲ ರಹಸ್ಯಕ್ರೀಡಾದಿಗಳ ಸಮಯವೆಂದೂ ಹೇಳಿರುವಲ್ಲಿ ಈ ಕವಿಯು ತನ್ನ ಗ್ರಂಥಾರಂಭದಲ್ಲಿಯೇ ತನ್ನ ಇಷ್ಟ ದೈವವನ್ನು ಪ್ರಾರ್ಥಿಸುವ ನೆಪದಲ್ಲಿ ಹೆಂಡತಿಯ ಹೆಸರನ್ನು ಹೇಳಿರುವುದಲ್ಲದೆ ಅವಳನ್ನು ನಾಟ್ಯಾಭಿಸರಣದ ಮೂಲಕ ಹೇಳುವ ಪ್ರಣಯ ವರ್ಣನವು ಯುಕ್ತಿ ಯುಕ್ತವಾಗಿರದೆಂದೂ ಕೆಲವರಿಗೆ ತೋರಬಹುದು. ಆದರೆ ಇಂತಹುದಕ್ಕೆ ಸಮಾ ಧಾನವನ್ನು ಹೇಳಲು ಬಹುದೂರ ಹೋಗಬೇಕಾದುದಿಲ್ಲ. ಯಜ್ಞದಲ್ಲಿ ಯಜ ಮಾನನು ಹೆಂಡತಿಯನ್ನು ಹೆಸರಿನಿಂದಲೇ ಕರೆಯಬಹುದಾಗಿ ಹೇಳಿದೆ. ಯದುಕುಲ ತಿಲಕನಾದ ಶ್ರೀಕೃಷ್ಣನು ಸತ್ಯಭಾಮೆಯ ಕೈಯಲ್ಲಿ ನೃತ್ಯವನ್ನಾಡಿಸಿರುವನು. ದಿಗಂಬರನಾದ ಪರಶಿವನು ತಾನೂ ನಾಟ್ಯವಾಡಿ ಪಾರ್ವತಿಯಿಂದ ನಾಟ್ಯವಾಡಿಸಿ ಆನಂದದಿಂದ ಗಿರಿಜೆಯನ್ನು ತನ್ನ ಅರ್ಧಾಂಗದಲ್ಲಿ ನೆಲೆಗೊಳಿಸಿಕೊಂಡಿರುವನು. ಇದಲ್ಲದೆ ಭಾಗವತಗೋಷ್ಠೀಪೂರ್ಣತೆಯು ತಾನೊರ್ವನೇ ಎಲ್ಲಿಯೋ ಕುಳಿತು ಜಪಿಸಿಕೊಂಡಮಾತ್ರಕ್ಕೆ ದೊರೆಯದು. ತಾನು ಆಚರಿಸುವುದಾದ ಯಾವದ್ವಿಶಿಷ್ಟ ಕರ್ಮಗಳಲ್ಲಿಯೂ "ಆತ್ಮಾವಾಜಾಯತಇತಿಜಾಯಾ" ಎಂದು ಶ್ರುತಿಗಳಲ್ಲಿ ಭಾರ್ಯೆ ಯನ್ನುಕುರಿತು ನಿರ್ದೇಶಿಸಿ ಹೇಳಿರುವುದಲ್ಲದೆ ಪತ್ನೀವಿಯುಕ್ತತೆಯಿಂದ ಆಚರಿಸುವ ಸಕಲಕರ್ಮ ಫಲಗಳ ಬಾಹಿರನಾಗುವನೆಂದು ಧರ್ಮಶಾಸ್ತ್ರಾದಿ ಗ್ರಂಥಗಳು ಸಾರು ವುದರಿಂದಲೂ.—

---

೬ ಅಷ್ಟೋತ್ತರಶತಾದ್ಯುಪಚಾರೇ ಅಲಂಕಾರ ಸನಭಾಗೇ —

(೨) ಅಷ್ಟೋತ್ತರಶತಾದ್ಯುಪಚಾರಗಳಲ್ಲಿ § ನಾಟ್ಯವು ಒಂದಾಗಿರುವುದರಿಂದಲೂ, ಇಂತಹುದರ ನ್ಯೂನತೆಯಿಂದಕೂಡಿದ ಉಪಚಾರವು ಭಗವನ್ಮುಖೋಲ್ಲಾಸಹೇತುವಾಗದುದರಿಂದ ಭಗವತ್ಸನ್ನಿಧಿಯಲ್ಲಿ ನಾಟ್ಯಾದ್ಯುಪಚಾರಗಳ ಸಮರ್ಪಣೆಯು ಭಾಗವತಲಕ್ಷಣವಾದುದರಿಂದಲೂ.

(೩) ಈ ಕಾವ್ಯವನ್ನು ಶೃಂಗಾರರಸಪ್ರಧಾನವಾದುದನ್ನಾಗಿಮಾಡಿ ಆ ಶೃಂಗಾರರಸಕ್ಕೆ ಆಲಂಬನ ವಿಭಾವಾದಿಗಳುದಯಿಸುವಂತೆ ತನ್ನ ಭಾರ್ಯೆಯೊಡನೆ ಭಗವಲ್ಲೀಲಾನುಸಂಧಾನಮಾಡಿ ಹೇಳುವುದು ಸಮಂಜಸವಾದುದೆಂದೂ.

(೪) ಇದಲ್ಲದೆ ಜಯದೇವನಿಗೆ ತನ್ನ ಹೆಂಡತಿಯೆಂಬ ಪ್ರತಿಪತ್ತಿ ಮಾತ್ರವೇ ಅಲ್ಲದೆ ಭಾಗವತ ಪ್ರತಿಪತ್ತಿಯೊಡಗೂಡಿರುವ ಪತ್ನಿಯೊಡನೆ ಆಚರಿಸುವ ಪ್ರತಿಯೊಂದೂ ಧರ್ಮವಿಹಿತವಾದುದರಿಂದ ಪರಮಪುರುಷನಾದ ಶ್ರೀಕೃಷ್ಣನ ಎದುರಿನಲ್ಲಿ ತನ್ನ ಹೆಂಡತಿಯನ್ನು ನಾಟ್ಯಮಾಡಿಸಿದುದು ಚೆಲುವಾಗಿಯೇ ಇರುವುದು.

ಕೃಷ್ಣಲೀಲಾಪರವಾದ ಕಾವ್ಯಗಳೆಷ್ಟೋ ಇರುವುವಾದರೂ ಅವುಗಳೆಲ್ಲದಕ್ಕಿಂತಲೂ ತನ್ನ ಕಾವ್ಯವೇ ಶ್ರೇಷ್ಠವೆಂದು ಹೇಳುವುದರ ಮೂಲಕ ಅಧಿಕಾರಿ ಪ್ರಯೋಜನವನ್ನು ಹೇಳಿರುವನು. ಅದು ಹೀಗಿರುವುದು: —

ಯದಿ ಹರಿಸ್ಮರಣೇ ಸರಸಂ ಮನೋ
ಯದಿ ವಿಲಾಸಕಲಾಸು ಕುತೂಹಲಂ
ಮಧುರ ಕೋಮಲ ಕಾಂತ ಪದಾವಲೀಂ
ಶೃಣುತದಾ ಜಯದೇವಸರಸ್ವತೀಂ ॥ ೩ ॥

ಎಲೈ ಜನರೇ ! ನಿಜವಾಗಿಯೂ ನಿಮ್ಮ ಚಿತ್ತವು ಶ್ರೀಕೃಷ್ಣನಲ್ಲಿ ಭಕ್ತಿಯಿಂದ ಕೂಡಿರುವುದಾಗಿದ್ದರೆ, ಶೃಂಗಾರವಿಲಾಸಕಲೆಗಳನ್ನು ಅರಿತುಕೊಳ್ಳುವುದರಲ್ಲಿ

§ ಆದರ್ಶನೃತ್ತಗೀತಾದಿ ಛತ್ರಚಾಮರಕೇತನಂ
ಮಂತ್ರಪ್ರಸೂನಮಾತ್ರಾಂಚ ಮುಖವಾಸಂಚವೀಟಿಕಾಂ ॥
ಪುನರ್ಮಂತ್ರಾಸನೇ: —
ನಾನಾರೂಪಫಲೈಸ್ತೋತ್ರಂ ಪ್ರದಕ್ಷಿಣನಮಸ್ಕ್ರಿಯಾ
ನೃತ್ತಂಗೀತಂವಾದ್ಯಮಿತಿ ಸಪ್ತಭಿರ್ವಿಭುಮರ್ಚಯೇತ್ ॥
ವೈಖಾನಸಾಗಮಪ್ರಕರಣೇ

* ಮಾಧುರ್ಯದಲ್ಲಿ ಶಬ್ದಗತಮಾಧುರ್ಯವೆಂದೂ ಅರ್ಥಗತಮಾಧುರ್ಯವೆಂದೂ ಎರಡು ವಿಧಗಳು. ಶಬ್ದಗತಮಾಧುರ್ಯವೆಂದರೆ ದೀರ್ಘಸಮಾಸಗಳಿಲ್ಲದೆ ಠ. ಢ. ಥ. ಘ ಮೊದಲಾದ ಪರುಷೋಚ್ಚಾರಣ ವರ್ಣಗಳಿಲ್ಲದೆ ಸರಳವಾಗಿರುವುದು. ಅರ್ಥಗತಮಾಧುರ್ಯವೆಂದರೆ ಸಹೃದಯ

ಕೌತೂಹಲಾವಿಷ್ಟರಾಗಿದ್ದರೆ ( ಇಲ್ಲಿ ವಿಲಾಸವೆಂದರೆ ಯುವತಿಯರ ಹಾವವಿಶೇಷ ) ಹೃದಯಂಗಮ ರಚನಾನೈಪುಣ್ಯದಿಂದಲೂ, ಕಾಠಿನ್ಯವಿಲ್ಲದ ರುಚಿರಪದ ಸಮೂಹ ಗಳಿಂದ ಕೂಡಿರುವ ಈ ಜಯದೇವನ ಸೂಕ್ತಿಯನ್ನು ಕೇಳುವರಾಗಿ.

ಈ ಗ್ರಂಥದಲ್ಲಿ ಮೊದಲು.—

ಪರಿತ್ರಾಣಾಯಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿಯುಗೇಯುಗೇ ||

ಎಂದು ಹೇಳಿರುವ ಗೀತಾಚಾರ್ಯನ ಉಕ್ತಿಯಂತೆ ಅನೇಕವಾದ ಭಗವದವ ತಾರಗಳಲ್ಲಿ ಮುಖ್ಯವಾದ ದಶಾವತಾರ ಸ್ತುತಿಯನ್ನುಮಾಡಿ ಆ ದಶಾವತಾರ ವರ್ಣ ನವನ್ನು ಒಂದೇ ಶ್ಲೋಕದಲ್ಲಿ ಅಡಗಿಸಿರುವನು. ಅದು ಹೀಗಿರುವುದು:—

ವೇದಾನುದ್ಧರತೇ ಜಗನ್ನಿವಹತೇ ಭೂಗೋಳಮುದ್ಬಿಭ್ರತೇ
ದೈತ್ಯಾನ್ದಾರಯತೇ ಬಲಿಂ ಛಲಯತೇ ಕ್ಷತ್ರಕ್ಷಯಂಕುರ್ವತೇ
ಪೌಲಸ್ತ್ಯಂ ಜಯತೇ ಹಲಂಕಲಯತೇ ಕಾರುಣ್ಯಮಾತನ್ವತೇ
ಮ್ಲೇಚ್ಛಾನ್ಮೂರ್ಛಯತೇ ದಶಾಕೃತಿಕೃತೇ ಕೃಷ್ಣಾಯತುಭ್ಯಂನಮಃ ‡

(೧) ವೇದವನ್ನುದ್ಧರಿಸಿ (೨) ಭೂಮಿಯನ್ನು ಹೊತ್ತು (೩) ಭೂಗೋಳವನೆತ್ತಿ (೪) ಹಿರಣ್ಯಕಶಿಪುವನ್ನು ಸಂಹರಿಸಿ (೫) ಬಲಿಯನ್ನೊಲಿಸಿ (೬) ಕ್ಷತ್ರಕುಲನಿರ್ಮೂ ಲನ ಮಾಡಿ (೭) ರಾವಣನ ತಲೆಯನ್ನು ತರಿದು (೮) ಹಲವಂಧರಿಸಿ (೯) ದಯಾ ಮೂರ್ತಿಯಾಗಿ (೧೦) ಮ್ಲೇಚ್ಛವಿನಾಶಕನಾಗಿ ಅಣಿಗೊಂಡ ಎಲೈ ಕೃಷ್ಣನೆ! ನಿನಗೆ ನಮಸ್ಕಾರವು. ಎರಡನೆಯ ಸರ್ಗದಲ್ಲಿ ಶ್ರೀಕೃಷ್ಣಪರಮಾತ್ಮನ ಸ್ವರೂಪ ರೂಪಗುಣ ವಿಭೂತಿಗಳನ್ನೂ, ಮೂರನೆಯವರಲ್ಲಿ ವಿಲಾಸಯೋಗ್ಯವಾದ ವಸಂತಋತುವರ್ಣ

ಹೃದಯಾಹ್ಲಾದಕರವಾದ ವರ್ಣನೆಗಳಿಂದ ಕೂಡಿರುವ ವೈಚಿತ್ರ್ಯಕ್ಕೆ ಹೆಸರು. ಈ ಎರಡು ವಿಧಗಳಿಂದ ಕೂಡಿದ್ದರೆಮಾತ್ರ ಮಧುರವೆನ್ನಲ್ಪಡುವುದು

| ಕೋಮಲ—ಇದರಲ್ಲಿಯೂ ಶಬ್ದಗತವೆಂದೂ ಅರ್ಥಗತವೆಂದೂ ಎರಡು ವಿಧಗಳಿರುವುವು. ಶಬ್ದ ಗತಕೋಮಲತ್ವವೆಂದರೆ ಚಕ್ರಬಂಧ ಪದ್ಮಬಂಧಾದಿಗತ ಕಾಠಿನ್ಯದಿಂದ ದೂರವಾಗಿರು ವುದು. ಅರ್ಥಗತಕೋಮಲತ್ವವೆಂದರೆ ಕಠಿನವೃತ್ತಾಂತವಾವುದೂ ಇಲ್ಲದೆ ಕೇಳುವು ದಕ್ಕೆ ಇಂಪಾಗಿರುವುದು. ಈ ಎರಡುವಿಧ ಗುಣಗಳಿದ್ದರೆ ಕೋಮಲವೆನಿಸಿಕೊಳ್ಳುವುದು.

x ಕಾಂತ—ಇದರಲ್ಲಿಯೂ ಶಬ್ದಗತವೆಂದೂ ಅರ್ಥಗತವೆಂದೂ ಎರಡು ವಿಧಗಳಿರುವುವು. ಶಬ್ದಗತ ಕಾಂತವೆಂದರೆ ಹೃದಯಂಗಮ ಅಥವಾ ಮನಸ್ಸಿಗೆ ಪ್ರೀತಿಕರವಾದುದು. ಅರ್ಥಗತಕಾಂತ ವೆಂದರೆ ಶೃಂಗಾರಾದಿ ನವರಸಭೂಯಿಷ್ಠವಾಗಿ ರಸಿಕರಿಗೆ ಆನಂದವನ್ನುಂಟುಮಾಡುವ ದಾಗಿರುವದು. ಹೀಗೆ ಹೇಳುವುದರಿಂದ ಕಾವ್ಯಗುಣಂಗಳಾದ ಓಜಸ್ಸು, ಪ್ರಸಾದ, ಔಜ್ಜ್ವ ಲ್ಯಾದಿಗಳನ್ನು ಸೂಚಿಸಿದಂತಾಗುವುದು.

‡ ಗೀತಗೋವಿಂದ ಸ. ೧ ಶ್ಲೋ. ೧೨.

ನವನ್ನೂ ಮಾಡಿ ಉಳಿದವುಗಳಲ್ಲಿ ರಾಧಾಕೃಷ್ಣರ ಪರಸ್ಪರವಿರಹವರ್ಣನ, ಸಖಿಯರ ವಾಕ್ಯಕೌತುಕ, ವಿರಹವೇದನಾರೂಪವಾದ ಆಲಾಪ, ಪ್ರಲಾಪ, ವಿಲಾಪಗಳನ್ನು ಆಡಿ ಪಾಡಿ ತೋರಿಸಿ ಕೊನೆಗೆ ರಾಧೆಯ ಸಲ್ಲಾಪದೊಡನೆ ಕಾವ್ಯವನ್ನು ಮುಗಿಸಿರುವನು.

ಶೃಂಗಾರಲೀಲೆಯನ್ನು ಸಖಿಯು ರಾಧೆಯೊಡನೆ ಹೇಳುವನೆಪದಲ್ಲಿ ಹೀಗೆಂದು ಪ್ರಾರಂಭಿಸಿರುವನು—

ವಿಶ್ವೇಷಾಮನುರಂಜನೇನ ಜನಯನ್ನಾನಂದಮಿಂದೀವರ
ಶ್ರೇಣೀಶ್ಯಾಮಲಕೋಮಲೈರುಪನಯನ್ನಂಗೈರನಂಗೋತ್ಸವಂ
ಸ್ವಚ್ಛಂದಂ **ವ್ರಜಸುಂದರೀಭಿರಭಿತಃ ಪ್ರತ್ಯಂಗಮಾಲಿಂಗಿತಃ**
**ಶೃಂಗಾರಃ** ಸಖಿ ಮೂರ್ತಿಮಾನಿವ ಮಧೌ ಮುಗ್ಧೋಹರಿಃ ಕ್ರೀಡತಿ$

ಇದರಲ್ಲಿ, ಯಮುನೆಯ ನೀಲಿಮಾಮಯವಾದ ತರಂಗಪ್ರತಿತರಂಗಾಂದೋಳನಗಳು; ವಿಹರಿಸಲು ಯೋಗ್ಯವಾದ ತಮಾಲವೃಕ್ಷದಡಿಯ ತನುಪ್ರದೇಶಗಳು, ಮಲಯಸಮೀರಣನವೈಹಾಳಿ, ರಜನೀನಾಥನ ಲೋಕಾಮಯಶೋಭಾ, ಸೌಂದರ್ಯಸಾರವಿಶಿಷ್ಟನಾದ ಶ್ರೀಕೃಷ್ಣನ ನಲ್ನುಡಿ, ವಿರಹಿಣಿಯರ ಅಪಾಂಗವೀಕ್ಷಣಯುಕ್ತವಾದ ಸುಯ್ನುಡಿ, ಗೆಳತಿಯರ ಮೆಲ್ನುಡಿ, ಪ್ರಣಯಿಜನರ ಮನೋಭ್ರಾಮಕಗಳು, ಈರ್ಷೆಯ ತೀವ್ರವೇದನೆ, ವಿರಹಾತಿರೇಕದ ಅಸಹನೆ, ಪರಸ್ಪರಸೇರುವಿಕೆಯಿಂದುಂಟಾಗುವ, ಆನಂದಪರವಶತೆಯ ಅನುಭವ, ಇವುಗಳೆಲ್ಲದರ ಸೂತ್ರಧಾರನಾದ ಪೀತಾಂಬರನ ಭಕ್ತಪರಾಧೀನತೆಯ ವೈಖರಿ ಇವೇ ಮೊದಲಾದವು ಬಹುಜಾಣ್ಮೆಯಿಂದ ವರ್ಣಿತವಾಗಿರುವುದಲ್ಲದೆ ಕವಿಯ ಗೀತಪ್ರಭೆಯೂ, ಅಭಿನವ ಪರಿಪಾಟವವೂ ಕಾವ್ಯಪ್ರಭೆಯಲ್ಲಿ ಲೀನವಾಗಿ ನೂತನ ಪ್ರತಿಭಾವಿಶೇಷದಿಂದ ಲೋಕದ ಮೆಚ್ಚುಗೆಯನ್ನು ಹೊಂದಿರುವುದಾಗಿದೆ.

ರತಿಕೇಳಿಕಥಾತ್ಮಕವಾದ ಇಂತಹ ಗ್ರಂಥವಿಚಾರದಿಂದ ಲೋಕಕ್ಕೆ ಭಕ್ತಿಸಾಧನದಬಗೆ ಹೇಗೆಂದೂ, ಸಾಧುಸಂತನಾದ ಜಯದೇವನು ಪರಮಾತ್ಮನಲ್ಲಿ ಇಂತಹ ಸುರತವಿಶೇಷಗಳನ್ನಾರೋಪಿಸುವದು ಸಾಧುವಲ್ಲವೆಂದೂ ಹಳಹಳಿಸುವವರಿಗೆ ಸುರತಶಬ್ದವು ಕೇವಲ ನಿಗೂಢಭಾವತತ್ವಾರ್ಥ ಸೂಚಕವೆಂದೂ ಅದು ನಾನಾರೂಪಗಳಲ್ಲಿ ಯೋಗಸಂಬಂಧದ ಐಕ್ಯತೆಯೆಂದು ಕರೆಯಲ್ಪಡುವುದೆಂದೂ, ಮಾನವದೃಷ್ಟಿಗೆ ಗೋಚರಿಸುವ, ಮಾನವಬುದ್ಧಿಗೆ ಸ್ಫೂರ್ತಿಸುವ, ಮಾನವಲೀಲೆಗೆ ಒಳಪಡುವ ಕೇಳೀವರ್ಣನದಿಂದಲೀಲಾಮಾನುಷವಿಗ್ರಹನಾದ ಅಪ್ರಮೇಯನ ಲೀಲಾವರ್ಣನಗಳಲ್ಲಿ ಮಾನವಚೇತನವುಲೀನವಾಗಿ ಪರವಶತೆಯನ್ನುಹೊಂದಿ ಸಂಯೋಗದಿಂದ ಏಕೀಭಾ

$ ಗೀತಗೋವಿಂದ ಸ. ೧ ಶ್ಲೋ ೧೮

ವವನ್ನು ಹೊಂದುವುದಾದುದರಿಂದ ಇಂತಹವರ್ಣನವು ಸಾಧುವೆಂದೂ, ಅದೇಶೃಂಗಾರವೆಂದೂ, ಶೃಂಗಾರರಸಾಂತ್ಯದ ಪರಿಣಾಮವೇ ಭಕ್ತಿಯೆಂದೂ ಸಾಧುಸಂತರಮತವಿರುವುದು. ಇಂತಹ ಲೀಲಾವಿನೋದಗಳನ್ನು ಮಾನವಜಾಗ್ರತಿಗೋಸುಗ ಪ್ರಿಯವಸ್ತುವಾದ ಪರಮಾತ್ಮನಲ್ಲಿ ಕಲ್ಪಿಸಿವರ್ಣಿಸಿರುವುದರ ಹೊರತು ನಿತ್ಯಕಾಮನೂ ಶೃಂಗಾರಮೂರ್ತಿಯೂದ ಆ ಅನಾದಿಪುರುಷನಿಗೆ ಇಂತಹ ಹೇಯದೇಹಸಂಬಂಧಂಗಳಾಗಲಿ, ರಾಗಾದಿಗಳಾಗಲಿ, ಯಾವುವೂ ಇರುವುದಿಲ್ಲ. ಪರಮಾತ್ಮನರೂಪವು ಶುದ್ಧ ಸತ್ವಮಯವೆಂದರಿತ ಭಾಗವತೋತ್ತಮನಾದ ಜಯದೇವನು ಶೃಂಗಾರರಸವು ಪ್ರಧಾನವಾದುದೆಂದೂ, ಅದುಪರಿಶುದ್ಧವಾದುದೆಂದೂ, ಭಕ್ತಿಯಮೂಲವೆಂದೂ, ಪರಿಚರ್ಯೆಯು ಸಾಧನವೆಂದೂ, ಭಾಗವತಸಂಪ್ರದಾಯಭಿತ್ತಿಯ ತಳಹದಿಯೆಂದೂ, ಅಜ್ಞಾನಸೂಚಕಗಳಾದ ದೇಹಸಂಬಂಧಂಗಳೇ ಇಲ್ಲದಿರುವಾಗ ರಾಗಾದಿಗಳಿಗೆ ಅವಕಾಶವೇ ಇಲ್ಲವೆಂದೂ, ಇಂತಹ ಕ್ಷುಲ್ಲಕ ವಿಷಯೋಪಭೋಗಗಳು ಲೌಕಿಕಗಳೆಂದೂ, ನಶ್ವರವೆಂದೂ, ತಿಳಿದವನಾಗಿ ವಿಷಯಿಜನರಿಗೆ 'ಕಂಟಕೇನೈವಕಂಟಕಂ' ಎಂದರೆ ಮುಳ್ಳಿನಿಂದಲೇ ಮುಳ್ಳನ್ನು ತೆಗೆವಂತೆ ಈ ರೀತಿವರ್ಣನವನ್ನುಮಾಡಿ ಭಕ್ತಿಸಾಧನವನ್ನು ಮಾಡಿಕೊಡಲು ಯೋಚಿಸಿ ತನ್ನ ಗ್ರಂಥದಲ್ಲಿ ಮೊದಲು ದಶಾವತಾರಸ್ತುತಿಯಿಂದ ಪರಮಾತ್ಮನನ್ನು ಕೊಂಡಾಡಿರುವುದರಿಂದ ಇಂತಹ ಚರಿತವು ಪರಮಪಾವನವೆಂದೂ, ಮೋಕ್ಷಸಾಧನವೆಂದೂ, ಜನರಚಿತ್ತಾಕರ್ಷಣಮಾಡಿ ಭಕ್ತಿಯನ್ನು ಹುಟ್ಟಿಸುವ ಸಾಧನವಾಗುವುದೆಂದೇ ಈ ಬಗೆಯ ಗ್ರಂಥವನ್ನು ಬರೆದಿರುವನಾಗಿ ಹೇಳಬೇಕಾಗುವುದು. ಗೀತಗೋವಿಂದವು ಒಟ್ಟಿನಲ್ಲಿ ಜೀವಾತ್ಮಪರಮಾತ್ಮೈಕ್ಯತೆಯನ್ನು ನಿರೂಪಿಸುವಗ್ರಂಥ ರಾಧೆಯೇ ಜೀವಾತ್ಮನೆಂದೂ ಕೃಷ್ಣನೇ ಪರಮಾತ್ಮನೆಂದೂ ಹೇಳಿ ಭವಚಕ್ರವಲ್ಲಿ ಕರ್ಮಪರಿಪಾಕಕ್ಕಾಗಿ ಓಲಾಡುವ ಜೀವನು ಭವಚಕ್ರದಲ್ಲಿ ಸುತ್ತಿ ಸುತ್ತಿ ಸಾಕಾಗಿ ಪರಮಾತ್ಮನೊಡನೆ ಸೇರಲಾಶಿಸಿ ವಿಧವಿಧರೂಪದಿಂದ ಅನುವರ್ತಿಸುವ ಬಗೆಯನ್ನುಹೇಳಿ ಕೊನೆಗಾಣಿಸಿರುವನು.

ವಿವಾಹ ಕರ್ಮಾಂಗವಾದ 'ಸಪ್ತಪದಿಯೆಂಬದು' ಗರ್ಭಾದಾನದವರೆಗಿನ ಎಲ್ಲೆಯೆಂದೂ, ಗೃಹಸ್ಥನಾದ ಅನಂತರವೇ ಬರುವುದಾದ ಪುಂಸ್ತ್ರೀಯೋಗಕ್ಕೆ ಅಷ್ಟಪದಿಯೆಂದೂ ಕರೆದಿರಬಹುದಾಗಿ ಊಹಿಸಲು ಅವಕಾಶವಿದೆ. ವಾನಪ್ರಸ್ಥಾಶ್ರಮವೇ ನವಪದಿಯೆಂದು ತೋರುವುದರಿಂದ ಗ್ರಂಥಕ್ಕೆ ಕುಂದುಬರುವುದೆಂದು ಯೋಚಿಸಿ ಅಷ್ಟಪದಿಗರ್ಭಿತವಾದ ರಾಧಾಸಮಾಗಮದೊಡನೆ ಪೂರ್ಣಗೊಳಿಸಿದುದಾಗಿ ನಮಗೆ ತೋರುತ್ತದೆ.

ಮಹಾಕವಿಜಯದೇವನು ತನ್ನ ಪಾರ್ಥಿವಶರೀರವನ್ನುಬಿಟ್ಟು ಎಷ್ಟೋಶತಮಾನಗಳು ಕಳೆದುಹೋಗಿವೆ ! ಆದರೆ ಈ ಹೊತ್ತಿಗೂ ವರ್ಷಕ್ಕೆ ಒಂದಾವರ್ತಿ ವೈಷ್ಣವರ

ಮೋಳಸವು ಕೆಂದುಲಿಯಲ್ಲಿ ಸೇರುವುದು. ಜಯದೇವನ ಸಮಾಧಿಯ ಸುತ್ತಲೂ ೫೦-೬೦ ಸಹಸ್ರಸಂಖ್ಯಾತ ವೈಷ್ಣವರುಸೇರಿ ಪೂಜಿಸುವುದಲ್ಲದೆ ರಾಧಾಕೃಷ್ಣರ ಪ್ರಣಯಲೀಲೆಗಳನ್ನು ಹಾಡಿಹಾಡಿ ನಲಿಯುವರು.

ಜಯದೇವನ ಕಾಲದಲ್ಲಿ ಮಾತನಾಡುವುದು ವಂಗಭಾಷೆಯಾಗಿದ್ದರೂ ಆಗಣ ಪಂಡಿತರು ವಂಶಪಾರಂಪರ್ಯವಾಗಿ ಬಂದ ಸಂಸ್ಕೃತ ಭಾಷೆಯನ್ನು ದೂರ ಮಾಡಲೊಪ್ಪದೆ ಗ್ರಂಥಗಳನ್ನು ಸಂಸ್ಕೃತ ಭಾಷೆಯಲ್ಲಿಯೇ ಬರೆಯುವರಾದರು. ರಾಜಾಸ್ಥಾನಭಾಷೆ, ಗ್ರಂಥಗಳೂ, ಕಥಾನಕಗಳೇ ಮೊದಲಾದುವೆಲ್ಲವೂ ಸಂಸ್ಕೃತ ಭಾಷೆಯಲ್ಲಿಯೇ ಬರೆಯಲ್ಪಟ್ಟುವಾದುವು. ಡಾಂಟೆ (Dante) ಮತ್ತು ಬೊಕೋಷಿಯೋ ಕಾಲದಲ್ಲಿ ಇಟಾಲಿಯನ್ನರು ದೇಶಭಾಷೆಯನ್ನುಬಿಟ್ಟು ರಾಜಭಾಷೆಯಾದ ಲ್ಯಾಟಿನಲ್ಲಿ ಗ್ರಂಥಗಳನ್ನು ಬರೆದಂತೆ, ಆಲಫ್ರೆಡಿನ ಕಾಲದಲ್ಲಿ ಆಂಗ್ಲೋ ಸ್ಯಾಕ್ಸೋನಿಯರು ರೋಂಭಾಷೆಯಲ್ಲ ಬರೆಯಲಿಸುವಾದಂತೆ, ವಂಗೀಯರು ದೇಶಭಾಷೆಯಲ್ಲಿ ಬರೆಯುವುದನ್ನು ಬಿಟ್ಟು ಸಂಸ್ಕೃತ ಭಾಷೆಯಲ್ಲಿ ಬರೆಯಲಿಸುವಾದರು. ಹೀಗೆ ಕ್ರಿ. ಶ. ೧೨ನೆಯ ಶತಮಾನದಲ್ಲಿ ಬರೆಯಲ್ಪಟ್ಟುವಾದ ಸಂಸ್ಕೃತಗ್ರಂಥಗಳನೇಕಗಳು ನಾಶವಾಗಿ ಹೋಗಿಯೋ, ಮರೆಯಲ್ಪಟ್ಟು ಹೋಗಿಯೋ ಹೇಗೋ ಇಲ್ಲದಂತಾಗಿ ಜಯದೇವನ ಗೀತಗೋವಿಂದವು ಮಾತ್ರ ಆದರ್ಶರೂಪದಿಂದುಳಿದುಕೊಂಡು ಲೋಕವನ್ನು ಅಚ್ಚರಿಗೊಳಿಸುತ್ತಿರುವುದು. ಇದರಂತೆಯೇ ಬರೆಯಲ್ಪಟ್ಟಿರುವ ಭಾನುದತ್ತವಿರಚಿತ 'ಗೀತಗೌರೀಪತಿ' ಕಾವ್ಯವೂ, ಕೃಷ್ಣದತ್ತವಿರಚಿತ 'ಗೀತಗೋಪೀಪತಿ ಕಾವ್ಯವೂ, ಪ್ರಕೃತ ದೊರೆತಿರುವುವು. ಇವೆರಡೂ ಜಯದೇವನಿಗಿಂತ ಈಚಿನವು. ಹೇಗಾದರೂ ಇರಲಿ! ಗೀತಗೋವಿಂದವು ಮಹಾ ಗ್ರಂಥವೆಂದೂ ಆದರಲ್ಲಿನ ವಿಷಯಗಳು ಕೇವಲ ಅರ್ಥಾಂತರಗಳಾಗಿ ದುರೂಹವಾದುವುಗಳಿಂದೂ ರಾಧೆಯನ್ನು Love-lorn Maid ಎಂಬುದಕ್ಕಿಂತ Love-born Maid ಎಂದು ಕರೆವುದು ಸಯುಕ್ತಿಕವೆಂದೂ ಹೇಳಬೇಕಾಗುವುದು.

ಪರ್ಷಿಯನರು ಕರೆಯುವ 'ಸುಫಿಯಿಸಂ' ಎಂಬದನ್ನು ಭಾಗವತ ಸಂಪ್ರದಾಯಕ್ಕೆ ಕೆಲವುಮಟ್ಟಿಗೆ ಸ್ಥೂಲಮಾನದಿಂದ ಹೋಲಿಸಬಹುದಾಗಿದೆ. ಕೊಂಚ ಹೆಚ್ಚುಕಡಿಮೆ ಈ ಎರಡರ ತತ್ವಗಳೂ ಒಂದೇ ತೋರುವುದಾಗಿದೆ. ಪರ್ಷಿಯನರ ಮಹಾಕವಿಗಳಲ್ಲಿ ಪ್ರಸಿದ್ಧರಾದ ಜಲಾಲುದ್ದೀನ ಜಾಮಿ, ಜಲಾಲುದ್ದೀನ ರೂಮಿ, ಷೇಕಸಾದಿ ಮೊದಲಾದ ಕವಿತಿಲಕರನ್ನು 'ಪ್ರಕೃತಿ ನಿಗೂಢತತ್ವಜ್ಞ' (Mystic-Poets) ರೆಂದು ಕರೆಯುವಂತೆ‡ ಜಯದೇವ ಕವಿಯನ್ನು ವಂಗದೇಶದ ಪ್ರಕೃತಿ

‡ History of Persian Literature in Kannada by M. N. Srinivasa Iyengar Sanskrit Kavicharite Office B. City.

ನಿಗೂಢತತ್ವಜ್ಞ (Mystic-Poet) ನೆಂದುಕರೆದರೆ ತಪ್ಪಾಗದು. ಸುಫಿಯಿಸಮಿನ ಮುಖ್ಯ ತತ್ವವನ್ನು ಹೀಗೆಂದು ಹೇಳಬಹುದು: —

1. The Key note of Suffisim is the union, the identification of God and Man.
2. The Tavern is the place of instruction or worship.
3. The Tavern Keeper—Teacher or Priest.
4. Wine—Divine Knowledge.
5. Idol (Eyedol, Ideal)—God.
6. Beauty—Divine perfection
7. Shining Locks—Expansion of His Glory.
8. Youth—The Mistress.
9. Down to the cheek—denotes the cloud of spirits.
10. Black mole—the point of indivisible unity.

ಈ ಕಾವ್ಯಕ್ಕೆ ಹಲವರು ವ್ಯಾಖ್ಯಾನಕಾರರಿರುವರಾದರೂ ಪ್ರಕೃತ 'ರಸಿಕಪ್ರಿಯಾ', 'ರಸಮಂಜರಿ' ಎಂಬ ವ್ಯಾಖ್ಯಾನಗಳೂ, ಕನ್ನಡಲಿಪಿಯ 'ರಸಿಕರಂಜಿನೀ' ಎಂಬ ವ್ಯಾಖ್ಯಾನವೂ ದೊರೆಯುವುದು. ಇದಲ್ಲದೆ ಆಂಧ್ರದೇಶದಲ್ಲಿ ಪ್ರಸಿದ್ಧನಾದ ತಿರುಮಲರಾಯನು 'ಶ್ರುತಿರಂಜನೀ' ಎಂಬೊಂದು ವ್ಯಾಖ್ಯಾನವನ್ನು ಬರೆದಿರುವನು.

ಕ್ರಿ. ಶ. ೧೪ನೆಯ ಶತಮಾನದಲ್ಲಿ ವಂಗದೇಶದಲ್ಲಿ ಪ್ರಸಿದ್ಧಪಂಡಿತನಾಗಿದ್ದ ವಿಶ್ವನಾಥ ಕವಿರಾಜನು ತಾನು ಬರೆದಿರುವ 'ಸಾಹಿತ್ಯದರ್ಪಣ' ಎಂಬ ಲಕ್ಷಣ

ಸುರಾಹರೇ ಗರ್ಣಪ್ರೋಕ್ತಾ
ತೇ ಸು ಹಿರ್ಮಮುಚಿಂತನಂ
ಸುರಾಪಾನಮಿತಿಪ್ರೋಕ್ತಂ
ತಸ್ಮಾತ್ತಂಪರಿವರ಼್ಯೇತ್ ||

| ಪಾಶ್ಚಾತ್ಯರು ಕರೆಯುವ Idol ಎಂಬ ಪದಕ್ಕೆ ಬದಲು Eyedol or Ideal ಎಂಬ ಪ್ರತಿಸೃಷ್ಟಿಪದವು ಇರುವುದಾದರೆ ಯೋಗ್ಯವೆಂದು ನಮಗೆ ತೋರುವುದು.

ಗ್ರಂಥದಲ್ಲಿ ದಶಮಪರಿಚ್ಛೇದದಲ್ಲಿ ವೃತ್ತ್ಯನುಪ್ರಾಸಾಲಂಕಾರಕ್ಕೆ ಈ ಗೀತಗೋವಿಂದಕಾವ್ಯದಲ್ಲಿನ "ಉನ್ಮೀಲನ್ಮಧುಗಂಧ ಲುಬ್ಧಮಧುಪವ್ಯಾಧೂತ ಚೂತಾಂಕುರ ........."$ ಎಂಬ ಶ್ಲೋಕವನ್ನುದಾಹರಿಸಿಕೊಂಡಿರುವುದರಿಂದ ಆಗಣ ಪಂಡಿತರಿಗೆ ಜಯದೇವನ ಕವಿತ್ವದಲ್ಲಿ ಎಂತಹ ಆದರವಿದ್ದಿತೆಂಬುದು ಸ್ಪಷ್ಟವಾಗುತ್ತದೆ.

ಜಯದೇವಕವಿಯದೆಂದು ಹೇಳುವ 'ಗಂಗಾಸ್ತವ' ಎಂಬ ಪ್ರಬಂಧವು ದೊರೆಯುತ್ತದೆ. ಇದರಲ್ಲಿ ಏಳು ಶ್ಲೋಕಗಳಿದ್ದು ಕೊನೆಯಲ್ಲಿ "ಇತಿ ರಾಮಲಕ್ಷ್ಮಣಕೌಶಿಕಾನುಜ್ಞಯಾಸುರ ಸರಿತ್ಕೃತನಮಸ್ಕಾರಂ ಭಣಂತಮಿಹಸಾದರಂ ಧೀರಜಯದೇವಕವಿಮುತ್ತಾರಯಸಿ ಭವಜಲಧಿಪಾರಂ" ಎಂದು ಹೇಳಿರುವುದರಿಂದ ಗೀತಗೋವಿಂದಕಾರನೂ ಇವನೂ ಭಿನ್ನರೆಂಬುದು ನಿಶ್ಚಯವಾಗುತ್ತದೆ. ಗೀತಗೋವಿಂದದ ಚತುರ್ಥಾಷ್ಟಪದಿಯು ಹೀಗಿರುವುದು.

ಚಂದನಚರ್ಚಿತನೀಲಕಲೇಬರಪೀತವಸನವನಮಾಲೀ
ಕೇಳಿಚಲನ್ಮಣಿಕುಂಡಲಮಂಡಿತಗಂಡಯುಗಃಸ್ಮಿತಶಾಲೀ ||
ಹರಿರಿಹ ಮುಗ್ಧವಧೂನಿಕರೇ ವಿಲಾಸಿನಿ ವಿಲಸತಿ ಕೇಲಿಪರೇ || ಧ್ರುವಂ ||
ಪೀನಪಯೋಧರಭಾರಭರೇಣ ಹರಿಂ ಪರಿರಭ್ಯ ಸರಾಗಂ
ಗೋಪವಧೂರನುಗಾಯತಿ ಕಾಚಿದುದಂಚಿತ ಪಂಚಮರಾಗಂ ||
ಕಾಪಿವಿಲಾಸವಿಲೋಲವಿಲೋಚನಖೇಲನಜನಿತಮನೋಜಂ
ಧ್ಯಾಯತಿ ಮುಗ್ಧವಧೂ ರಧಿಕಂ ಮಧುಸೂದನವದನಸರೋಜಂ ||
ಕಾಪಿ ಕಪೋಲತಲೇ ಮಿಲಿತಾ ಲಪಿತುಂ ಕಿಮಪಿ ಶ್ರುತಿಮೂಲೇ
ಕಾಪಿ ಚುಚುಂಬ ನಿತಂಬವತೀ ದಯಿತಂ ಪುಲಕೈರನುಕೂಲೇ ||
ಕೇಳಿ ಕಲಾಕುತುಕೇನ ಚ ಕಾಚಿದಮುಂ ಯಮುನಾಜಲಕೂಲೇ
ಮಂಜುಲವಂಜುಲಕುಂಜಗತಂ ವಿಚಕರ್ಷ ಕರೇಣ ದುಕೂಲೇ ||
ಶ್ಲಿಷ್ಯತಿ ಕಾಮಪಿ ಚುಂಬತಿ ಕಾಮಪಿ ಕಾಮಪಿ ರಮಯತಿ ರಾಮಾಂ
ಪಶ್ಯತಿ ಸಸ್ಮಿತ ಚಾರುತರಾಮಪರಾಮನುಗಚ್ಛತಿ ವಾಮಾಂ ||
ಶ್ರೀ ಜಯದೇವ ಭಣಿತಮಿದ ಮದ್ಭುತಕೇಶವಕೇಳಿ ರಹಸ್ಯಂ
ಬೃಂದಾವನವಿಪಿನೇ ಲಲಿತಂ ವಿತನೋತು ಶುಭಾನಿ ಯಶಸ್ಯಂ ||

ಗೀತಿಯನ್ನು ಕುರಿತು ಹೇಳುವ ರಾಧೋಕ್ತಿಯು ಹೀಗಿರುವುದು :--

ಗಣಯತಿ ಗುಣಗ್ರಾಮಂ ಭ್ರಾಮಂ ಭ್ರಮಾದಪಿ ನೇಹತೇ
ವಹತಿ ಚ ಪರಿತೋಷಂ ದೋಷಂ ವಿಮುಂಚತಿ ದೂರತಃ
ಯುವತಿಷು ವಲತ್ತೃಷ್ಣೇ ಕೃಷ್ಣೇ ವಿಹಾರಿಣಿ ಮಾಂ ವಿನಾ
ಪುನರಪಿಮನೋವಾಮಂ ಕಾಮಂ ಕರೋತಿಕರೋಮಿಕಿಂ|| ಸೀ ಸೋ ೨-೧೩

$ ಗೀತಗೋವಿಂದ ಸ. ೧ ಶ್ಲೋಕ ೧೧.

ಎಲೆ! ಕೆಳದಿ! ಆ......ಗೋಪತರುಣಿಯರಲ್ಲಿ ಹೆಚ್ಚಾದ ಆಸೆಯನ್ನು ಇಟ್ಟುಕೊಂಡು ನನ್ನನ್ನು ತ್ಯಾಗಮಾಡಿ ಅವರಲ್ಲಿಯೇ ಅನುರಕ್ತನಾಗಿರುವನಾದರೂ ಈ ವಕ್ರ ಅಥವಾ ಚಪಲವಾದ ನನ್ನ ಮನಸ್ಸು ಆ ಪರಮಪುರುಷನಾದ ಶ್ರೀಕೃಷ್ಣನ ಸದ್ಗುಣ ಚೆಲುವಿನಲ್ಲಿಯೇ ಎರಕಗೊಂಡಿರುವುದಾದುದರಿಂದ ಕೊಂಚಹೊತ್ತು ಭ್ರಾಂತಳಾಗಿಯಾದರೂ ಅವನನ್ನು ಬಿಟ್ಟಿರಲು ಒಪ್ಪುವುದಿಲ್ಲ. ಕೋಪದಿಂದ ಅವನನ್ನು ದೂರೀಕರಿಸಲೆತ್ನಿಸಿದರೂ ಒಡಂಬಡದ ಹಾಯ್! ಈ ಚೇತನವು ಮತ್ತೂ ಮತ್ತೂ ಅವನನ್ನೇ ಆಶಿಸುತ್ತಿರುವದಲ್ಲಾ! ನಾನೇನು ತಾನೇ ಮಾಡಲಿ.

ಪುರಾಶೋಕಸ್ತೋಕಸ್ತಬಕನವಕಾಶೋಕಲತಿಕಾ
ವಿಕಾಸಃ ಕಾಸಾರೋಪವನಪವನೋಽಪಿ ವ್ಯಥಯತಿ
ಅಪಿ ಭ್ರಾಮ್ಯದ್ಭೃಂಗೀರಣಿತರಮಣೀಯಾ ನ ಮುಕುಲ
ಪ್ರಸೂತಿಶ್ಚೂತಾನಾಂ ಸಖಿ ಶಿಖರಿಣೀಯಂ ಸುಖಯತಿ ॥ ೨—೧೧

ಎಲೆ! ಕೆಳದಿ! ನೋಡಲಶಕ್ಯವಾದ ಘನಗೊಂಚಲುಗಳ ಭಾರದಿಂದ ಬಗ್ಗಿಸಲ್ಪಟ್ಟುದಾಗಿರುವ ಈ ಅಶೋಕವೃಕ್ಷಗಳ ಮೊಗ್ಗುಗಳ ಅರಳುವಿಕೆಯಾಗಲಿ, ಈ ಸರಸ್ಸಿನ ಉಪವನದ ತಂಗಾಳಿಯಾಗಲಿ, ಅಲ್ಲಲ್ಲಿ ಹಾರಾಡುತ್ತಿರುವ ಹೆಣ್ಣುದುಂಬಿಗಳ ಮೊರೆತ ಅಥವಾ ಝೇಂಕಾರದಿಂದ ಕೂಡಿದ ಮನೋಹರವಾದ ಶಿಖರವನ್ನುಳ್ಳ ಆಮಾಮರದ ಮೊಗ್ಗೆಗಳಾಗಲಿ ಶ್ರೀಕೃಷ್ಣನನ್ನಗಲಿರುವ ನನಗೆ ಯಾವುದೂ ಸಂತೋಷಕರವಾಗಿರುವುದಿಲ್ಲ.

ಶ್ರೀಕೃಷ್ಣನ ಆಗಮನವಿಳಂಬನವನ್ನು ಕುರಿತು ರಾಧೆಯು ತನ್ನೊಳುತಾನು ಆಲೋಚಿಸುವಿಕೆ.—

ತತ್ಕಿಂ ಕಾಮಪಿ ಕಾಮಿನೀಮಭಿಸೃತಃ ಕಿಂವಾ ಕಲಾಕೇಳಿಭಿ
ರ್ಬದ್ಧೋ ಬಂಧುಭಿರಂಧಕಾರಿಣಿ ವನಾಭ್ಯರ್ಣೇ ಕಿಮುದ್ಭ್ರಾಮ್ಯತಿ
ಕಾಂತಃ ಕ್ಲಾಂತಮನಾ ಮನಾಗಪಿ ಪಥಿ ಪ್ರಸ್ಥಾತುಮೇವಾಕ್ಷಮ
ಸ್ಸಂಕೇತೀಕೃತಮಂಜುವಂಜುಳಲತಾಕುಂಜೇಽಪಿ ಯನ್ನಾಗತಃ ॥

ಸಂಕೇತಸ್ಥಳವಾದ ಈ ಪಗಡೆಯಗಿಡದ ಲತಾಕುಂಜಕ್ಕೆ ಶ್ರೀಕೃಷ್ಣನು ಇನ್ನೂ ಏಕೆ ಬಂದಿರುವುದಿಲ್ಲ? ಬರುವಾಗ ದಾರಿಯಲ್ಲಿ ನನಗಿಂತಲೂ ಸೊಗಸುಗಾರ್ತಿಯಾಗಿ ಸಿಕ್ಕಿದ ಯಾರಾದರೂ ವಿಲಾಸಿನಿಯೊರ್ವಳನ್ನು ಹಿಂಬಾಲಿಸಿರುವನೇ! ಅಥವಾ ಬಂಧುವರ್ಗದವರಿಂದಾಗಲಿ ಅಥವಾ ಯಾವುದಾದರೊಂದು ವಿಲಾಸಗಳಿಂದ ಅಡ್ಡಿಪಡಿಸಲ್ಪಟ್ಟಿರುವನೇ! ಹೇಗೆ! ಅಥವಾ ಈ ಕತ್ತಲೆಯಲ್ಲಿ ಲತಾಕುಂ

ಜವು ದೊರೆಯದೆ ಈ ಅರಣ್ಯಸಮೀಪದಲ್ಲಿ ಎಲ್ಲಿಯಾದರೂ ತಿರುಗುತ್ತಿರುವನೋ! ಅಥವಾ ಕ್ಲಾಂತಮನಸ್ಕನಾದ ಶ್ರೀಕೃಷ್ಣನು ಈಗ ಅಲ್ಲಿಗೆ ಹೋಗುವವರಾರೆಂಬ ತಾತ್ಸಾರದಿಂದ ಹೊರಟಿರುವುದಿಲ್ಲವೋ ಏನೋ.

ರಾಧೆಯು ಪವನನನ್ನುದ್ದೇಶಿಸಿ, ಹೇಳುವುದು: —

ಮನೋಭವಾನಂದನ ಚಂದನಾನಿಲ
ಪ್ರಸೀದ ರೇದಕ್ಷಿಣ ಮುಂಚ ವಾಮತಾಂ
ಕ್ಷಣಂಜಗತ್ಪ್ರಾಣ ವಿಧಾಯ ಮಾಧವಂ
ಪುರೋ ಮಮಪ್ರಾಣಹರೋ ಭವಿಷ್ಯಸಿ ॥ ೭—೭

ಮನೋಭವನ (ಮನ್ಮಥನ) ನ್ನು ಸಂತೋಷಗೊಳಿಸುವ ದಕ್ಷಿಣಜಾತನಾದ ಎಲೈ! ಮಲಯಮಾರುತನೇ! ನೀನು ವಿರಹದುಃಖಿಯಾದ ನನ್ನಲ್ಲಿ ಪ್ರಸಿದನಾಗು. ವಕ್ರತ್ವವನ್ನು ಬಿಡು. ಎಲೆ! ಜಗತ್ಪ್ರಾಣಸಮೀರಣ! ಶ್ರೀಕೃಷ್ಣನ ವಿರಹತಾಪದಿಂದ ಪ್ರಾಣಾವಸಾನವನ್ನೆದುರು ನೋಡುತ್ತಿರುವ ನನ್ನ ಮುಂದೆ, ಕ್ಷಣಕಾಲ ಆ ಮಾಧವ ನನ್ನು ಕರೆದುಕೊಂಡು ಬಂದುನಿಲ್ಲಿಸಿ ಅನಂತರ ಈ ನನ್ನ ಪ್ರಾಣಗಳನ್ನು ಅಪಹರಿಸಿ ಕೊಂಡು ಹೋಗುವನಾಗುವೆ.

ಯೋಗ ಮತ್ತು ಭಕ್ತಿಯ ಪರಿಣಾಮ: —

ಕಂಸಾರಿರಪಿ ಸಂಸಾರವಾಸನಾಬದ್ಧಶೃಂಖಲಾಂ
ರಾಧಾಮಾದಾಯ ಹೃದಯೇ ತತ್ಯಾಜ ವ್ರಜಸುಂದರೀಃ ॥

ಕಂಸಾರಾತಿಯಾದ ಶ್ರೀಕೃಷ್ಣನು ಗೋಪಸುಂದರಿಯರಲ್ಲಿವಕಾಶಗೊಂಡು ಸಂಸಾರವೆಂಬ ವಾಸನೆಯಿಂದ ಕಟ್ಟಲ್ಪಟ್ಟ ಸರಪಣಿಯುಳ್ಳ ರಾಧೆಯನ್ನು ತನ್ನ ಹೃದಯದೊಳಿಟ್ಟುಕೊಂಡವನಾದನು



## ಧೋಯಿ

ಇವನನ್ನು ಧೋಯಿಕ* ಎಂದೂ ಪುಂಡರೀಕಾಕ್ಷಸೇನನಮಗ ದುಹಿಸೇನ† ಎಂದೂ ಧೂಯಿಸೇನನೆಂದೂ‡ ಕರೆಯುವರು. ಇದಲ್ಲದೆ ಹಸ್ತಲಿಖಿತ ಪ್ರತಿಗಳನೇ ಕಗಳಲ್ಲಿ 'ಧೂಯಿಕ'ಎಂದೂ ಘೋಯಿಕನೆಂದೂ§ ಹೇಳಲ್ಪಟ್ಟಿದೆ. ಇವನುಬ್ರಾಹ್ಮಣ

* 'ಧೋಯಿಕ' ಕವಿಕ್ಷ್ಮಾಪತಿಃ (ಗೀತಗೋವಿಂದ ಶ್ಲೋ)

| ಪುಂಡರೀಕಾಕ್ಷ ಸೇನಸ್ಯ ದುಹಿಸೇನಃ ಸುತೋಭವತ್. ಪವನದೂತ ಮುನ್ನುಡಿ ಪುಟ ೫)

‡ ಸುಧಾಂಶಿರತ್ನೇರಿವ ಪುಂಡರೀಕ ಸೇನಾತ್ತನೂಜೋಽಜನಿಧೂಯಿಸೇನಃ

§ Pishel Die Hofdichter Das Lakshmana Sena P. 33
ಸದುಕ್ತಿಕರ್ಣಾಮೃತ, ಪವನದೂತ ಶ್ಲೋ ೧೦೧.

ನೆಂದು ಕೆಲವರೂ, ವಂಗೀಯವೈದ್ಯಕುಲಸಂಜಾತನೆಂದು ಕೆಲವರೂ ಹೇಳುವರು. ಮಹಾಮಹೋಪಾಧ್ಯಾಯ ಪಂಡಿತ ಹರಪ್ರಸಾದಶಾಸ್ತ್ರಿಗಳು ಇವನನ್ನು ಕಾಶ್ಯಪ ಗೋತ್ರದ ಪಾಲಧಿಗಣಿಗೆ ಸೇರಿದರಾಢೀಯಬ್ರಾಹ್ಮಣನೆಂದು ಹೇಳುವರು. ಇವನು ವೈದ್ಯಕುಲಜಾತನೆನ್ನುವುದಕ್ಕೆ ಬಂಗಾಳದ ವೈದ್ಯವಂಶಾವಳಿಯಲ್ಲಿ ಕಂಡುಬರುವ ದುಹಿಸೇನ ಅಥವಾ ಧೂಯಿಸೇನ ಎಂಬುದು ಕಾರಣವಾಗಿರಬಹುದಾಗಿ ತೋರುತ್ತದೆ. ಆದರೆ ವಂಗದೇಶದ ವೈದ್ಯರು ಕವಿರಾಜರೆಂದು ಈಗ ಪ್ರಸಿದ್ಧರಾಗಿರುವಂತೆ ಆಗಲೂ ಇದ್ದಿರಬಹುದಾಗಿಭಾವಿಸಿ 'ಕವಿರಾಜ' ಶಬ್ದಕ್ಕೆ ವೈದ್ಯನೆಂಬ ಅರ್ಥವನ್ನು ಕಲ್ಪಿಸಿ ಧೋಯಿಕವಿಯನ್ನು ವೈದ್ಯವಂಶೀಯನೆಂದು ಹೇಳುವುದು ಸಾಧುವಾಗಿ ತೋರುವುದಿಲ್ಲ. ಏಕೆಂದರೆ ಇವನ ಸಮಕಾಲೀನನಾದ ಜಯದೇವನು "ಧೋಯಿ ಕವಿಕ್ಷ್ಮಾಪತಿಃ" ಅಥವಾ ಧೋಯಿಕವಿರಾಜನೆಂದೇ ಅರ್ಥಮಾಡಿರುವನು. ಇವನದಾಗಿ ಪ್ರಕೃತದೊರೆತಿರುವ'ಪವನದೂತಕಾವ್ಯ'ದಲ್ಲಿ ದೊರೆಯದ ಅನೇಕಶ್ಲೋಕಗಳು ಇತರ ಸುಭಾಷಿತಾವಳಿಗಳಲ್ಲ(anthologies) ಕಂಡುಬರುವುದರಿಂದ ಮತ್ತಾವುದಾದರೂ ಹೆಚ್ಚಿನ ಗ್ರಂಥಗಳನ್ನು ಬರೆದಿರಬಹುದೋ ಏನೋ ಎಂಬಶಂಕೆಯುಂಟಾಗುತ್ತದೆ. ಗ್ರಂಥವಾವುದೆಂಬುದು ತಿಳಿಯದೆ ಗ್ರಂಥವು ಅನುಪಲಬ್ಧವಾಗಿರುವುದರಿಂದ ಇತ್ಯರ್ಥಮಾಡಿ ಹೇಳಲಾಗದಾಗಿದೆ. ಇವನದೆಂದುಹೇಳುವ ಸುಮಾರು ಇಪ್ಪತ್ತು ಶ್ಲೋಕಗಳು ಒಂದೆಕಡೆ ಜೋಡಣೆಯಾಗಿವೆ೧

**ಕಾಲ:**—ಇವನು ಲಕ್ಷ್ಮಣಸೇನನ ಸಭಾಪಂಡಿತರಲ್ಲ ಒಬ್ಬನಾಗಿದ್ದುದರಿಂದಲೂ, ಲಕ್ಷ್ಮಣಸೇನನ ಕಾಲವು ಕ್ರಿ. ಶ. ೧೨ನೆಯ ಶತಮಾನವೆಂದು ಸ್ಪಷ್ಟವಾಗಿರುವುದರಿಂದ ಇವನೂ ಕ್ರಿ. ಶ. ೧೨ನೆಯ ಶತಮಾನದಲ್ಲಿದ್ದವನೆಂದು ಹೇಳಲೇಬೇಕಾಗಿದೆ.

ವಂಗರಾಜನಾದ ಲಕ್ಷ್ಮಣಸೇನನ ಆಸ್ಥಾನಪಂಡಿತರುಗಳಲ್ಲಿ ಪ್ರಕೃತವಿಷಯಕನಾದ ಧೋಯಿಕವಿಯೂಸೇರಿ ಆರುಜನರು ಹೇಳಲ್ಪಟ್ಟಿದ್ದೆ೩ ಆದರೆ ಸನಾತನ ಗೋಸ್ವಾಮಿಯು (೧) ಗೋವರ್ಧನ (೨) ಶರಣ (೩) ಜಯದೇವ (೪) ಉಮಾಪತಿಧರ (೫) ಶ್ರುತಿಧರ ಎಂದೂ.

> " ಗೋವರ್ಧನಶ್ಚ ಶರಣೋಜಯದೇವ ಉಮಾಪತಿಃ
> ಕವಿರಾಜಶ್ಚ ರತ್ನಾನಿ ಸಮಿತೌ ಲಕ್ಷ್ಮಣಸ್ಯಚ "

ಎಂದುಹೇಳಿರುವನು.

---

೪ ಬಭೂವವೀಚೀ ಸ ಚ ಶಕ್ತಿವಂಶೀ
ನವಿದ್ಯವಿದ್ಯಾಕುಲ ಸಂಪದಾಢ್ಯಃ॥ ಚಂದ್ರಪ್ರಭಾ, ಪುಟ ೨೧೩

೧ J. A S B. 1906 P P. 18 FF

೩ ಗೀತಗೋವಿಂದ ೧.೪

ಮೆ|| ಚಿಂತಾಹರಣ ಚಕ್ರವರ್ತಿಯವರು ಶ್ರುತಿಧರನೆಂಬವನು ಬೇರೆಕವಿಯಲ್ಲವೆಂದೂ ಅದು ಧೋಯಿಕವಿಯ ಹೆಸರಿನ ವಿಶೇಷಣವೆಂದೂ ಗೀತಗೋವಿಂದದ ವ್ಯಾಖ್ಯಾನದಲ್ಲಿ ರಸಮಂಜರೀಕಾರನು ಹಾಗೆ ಹೇಳಿರುವನೆಂದೂ, ಸದುಕ್ತಿಕರ್ಣಾಮೃತದಲ್ಲಿ:—

ಖ್ಯಾತೋ ಯಶ್ಚ ಶ್ರುತಿಧರತಯಾವಿಕ್ರಮಾದಿತ್ಯಗೋಷ್ಠೀ
ವಿದ್ಯಾಭರ್ತುಃ ಖಲು ವರರುಚೇರಾಸಸಾದಪ್ರತಿಷ್ಠಾಂ ||

ಎಂದು ಶ್ರುತಿಧರನ ಹೆಸರು ಧೋಯಿಕವಿಗೆ ವಿಶೇಷಿಸಿ ಹೇಳಲ್ಪಟ್ಟಿರುವುದೆಂದೂ ಈ ಕಾರಣಗಳಿಂದ ಶ್ರುತಿಧರನುಬೇರೊಬ್ಬ ಕವಿಯೆಂದು ಹೇಳುವುದು ಸಾಧುವಲ್ಲವೆಂದೂ ಹೇಳಿರುವರು. ॐ

ಆದರೆ ಲಕ್ಷ್ಮಣಸೇನನ ಆಶ್ರಯದಲ್ಲಿ ಶ್ರುತಿಧರನೆಂಬ ಒಬ್ಬ ಕವಿಯು ಇದ್ದುದಾಗಿಯೂ, ಶ್ರುತಿಧರನದೆನ್ನುವ ಕೆಲವು ಶ್ಲೋಕಗಳು ವಲ್ಲಭದೇವನ ಸುಭಾಷಿತಾವಳಿಯಲ್ಲಿಯೂ ಹೇಳಲ್ಪಟ್ಟಿದೆ.

ಈ ಕಾರಣಗಳಿಂದ ಶ್ರುತಿಧರನ ವಿಚಾರವು ಸಂದಿಗ್ಧವಾಗಿದೆ. ಲಕ್ಷ್ಮಣಸೇನನ ಸಭಾಪಂಡಿತರು ಮೇಲೆಹೇಳಿದ ೫ ಜನರಲ್ಲದೆ ಇನ್ನೂ ಅನೇಕ ಕವಿಗಳು ಇದ್ದರಾದರೂ ಅವರಲ್ಲಿ ಈಶಾನ, ಪಶುಪತಿ, ಹಲಾಯುಧರೆಂಬ ಮೂರುಜನ ಸೋದರರು ಮುಖ್ಯರು. ಇವರೆಲ್ಲರೂ ಶಾಸ್ತ್ರಗ್ರಂಥನಿರ್ಮಾಣಕರಾಗಿದ್ದರು †

ಕ್ರಿ. ಶ. ಹತ್ತನೆಯ ಶತಮಾನದಲ್ಲಿದ್ದ ಕವಿರಹಸ್ಯಕಾರ ಹಲಾಯುಧನೊಬ್ಬನಿರುವನು ಈ ಹಲಾಯುಧನು ಕೃಷ್ಣರಾಜನ ಕಾಲದವನೆಂದು ಹೇಳಿಕೊಂಡಿರುವುದರಿಂದ ಮೇಲೆಹೇಳಿದ ಸೋದರರಲ್ಲೊಬ್ಬನಾದ ಹಲಾಯುಧನಿಗೂ ಇವನಿಗೂ ಯಾವಸಂಬಂಧವೂ ಇರದು. ಕಾಲವೂ ಸರಿಹೋಗದು.

**ಗ್ರಂಥ**:—ಇವನು "**ಪವನದೂತ**" ಎಂಬ ಕಾವ್ಯ § ವನ್ನು ಬರೆದಿರುವನು. ಇದು ಮೇಘದೂತದಂತೆ ಕಲ್ಪಿತವಾದುದು. ಇದರಲ್ಲಿ ೧೦೪ ಶ್ಲೋಕಗಳಿರುವುವು.

ರಾಜನಾದ ಲಕ್ಷ್ಮಣಸೇನನು ದಿಗ್ವಿಜಯಾರ್ಥವಾಗಿ ದಕ್ಷಿಣದಿಕ್ಕಿಗೆ ಹೊರಟು ಮಲಯಪರ್ವತದ ಸಾನುಪ್ರದೇಶದಲ್ಲಿಳಿದುಕೊಂಡಿದ್ದನು. ಮಲಯವಾಸಿನಿಯಾದ

ॐ Introduction to Pavana Duta P 6 7.
* ವಲ್ಲಭದೇವನ ಸುಭಾಷಿತಾವಳಿ ಪುಟ.
† Introduction to Pavanaduta P. 7
§ ವಾದಿಚಂದ್ರಕೃತ ಪವನದೂತಕಾವ್ಯವು ಬೇರೆ

'ಕುವಲಯವತಿ' ಎಂಬಗಂಧರ್ವಕನ್ಯೆಯೊರ್ವಳು ಇವನನ್ನು ನೋಡಿ ಕಾಮುಸಂತಪ್ತ. ಳಾಗಿ ತನ್ನಮನದಳಲನ್ನು ಹೇಳಿಕಳುಹಿಸಲು ಮಾನವರೂ, ಗಂಧರ್ವರಾರೂ ದೊರೆ ಯದುದರಿಂದ ಆ ಮಾರ್ಗವಾಗಿ ಮಲಯಸಮೀರಣನು ಹೋಗುವುದಾಗಿಭಾವಿಸಿ ಅವನೊಡನೆ ಹೇಳಿಕಳುಹಿಸಿದುದಲ್ಲದೆ, ಲಕ್ಷ್ಮಣಸೇನನ ರಾಜಧಾನಿಯಾದ ವಿಜಯ ಪುರವರ್ಣನವನ್ನುಮಾಡಿ ಸಿಂಹಾಸನಾರೂಢನಾಗಿರುವ ಲಕ್ಷ್ಮಣಸೇನನಿಗೆ ತನ್ನ ಇಂಗಿತವನ್ನು ವಿಜ್ಞಾಪಿಸಿಕೊಂಡಳೆಂಬುದೇ ಕಥಾಸಾರ. ಮೇಘದೂತವನ್ನು ಪೂರ್ವಮೇಘ ಮತ್ತು ಉತ್ತರಮೇಘವೆಂದು ವಿಂಗಡಿಸಿಕೊಳ್ಳುವಂತೆ ಇದನ್ನೂ ಎರಡುಭಾಗವಾಗಿ ವಿಂಗಡಿಸಿ ಮಲಯಪರ್ವತದಿಂದ ವಂಗ (ಬಂಗಾಳ) ದೇಶದವ ರೆಗೆ ಪವನಗಮನದ ಪೂರ್ವಭಾಗವೆಂದೂ, ಅನಂತರ ವಿಜಯಪುರಕ್ಕೆ ಹೋಗಿ ಲಕ್ಷ್ಮಣಸೇನನೊಡನೆ ಬಿನ್ನವಿಸಿದುದನ್ನು ಉತ್ತರಭಾಗವೆಂದೂ ಕರೆಯಬಹು ದಾಗಿದೆ.

ಪವನದೂತಕಾವ್ಯದಲ್ಲಿ ರಾಜನಾದ ಲಕ್ಷ್ಮಣಸೇನನ ದಿಗ್ವಿಜಯ ವಿಚಾರವು ಹೇಳಲ್ಪಟ್ಟಿದೆ. ಇವನು ದಕ್ಷಿಣಕ್ಕೆ ದಂಡೆತ್ತಿ ಮಲಯಪರ್ವತದವರೆಗೂ ಹೋಗಿ, ದಾಕ್ಷಿಣಾತ್ಯ ರಾಜರನ್ನು ಜಯಿಸಿದುದಾಗಿ 'ದಾಕ್ಷಿಣಾತ್ಯಾನ್ ಕ್ಷಿತೀಶಾನ್' ಎಂಬುದ ರಿಂದ ಗೊತ್ತಾಗುತ್ತದೆ. ಆದರೆ ಬಂಗಾಳದಲ್ಲಾಳಿದ ಸೇನರಾಜರ ಚರಿತಾವಳಿಯಲ್ಲಿ ಲಕ್ಷ್ಮಣಸೇನನ ದಿಗ್ವಿಜಯ ವಿಚಾರವು ಎಲ್ಲಿಯೂ ಹೇಳಿರುವಂತೆ ಕಂಡುಬರುವು ದಿಲ್ಲ. ಆದರೂ ಅಲ್ಲಲ್ಲಿ ದೊರೆಯುಬಹುದಾದ ತಾಮ್ರ ಶಾಸನಗಳಿಂದ ಲಕ್ಷ್ಮಣ ಸೇನನು ಎಲ್ಲಿಯವರೆಗೆ ದಂಡೆತ್ತಿಹೋಗಿರಬಹುದೆಂಬುದನ್ನು ಊಹಿಸಬಹುದಾಗಿದೆ.

ಮಾಧೈನಗರದ ತಾಮ್ರಶಾಸನ[೧]ದಲ್ಲಿ ಲಕ್ಷ್ಮಣಸೇನನ ವಿಚಾರವಾದ "ಯಸ್ಯ ಕೌಮಾರಕೇಳಿಃ ಕಲಿಂಗಾಂಗನಾಭಿಃ" ಎಂಬುದರಿಂದ ಇವನು ಕಳಿಂಗರಾಜ್ಯವನ್ನೂ ಮುತ್ತಿದ್ದುದಾಗಿ ತೋರುತ್ತದೆ. ಅದೇ ತಾಮ್ರಶಾಸನದಲ್ಲಿ ಹೇಳಲ್ಪಟ್ಟಿರುವ ಮತ್ತೊಂದು ವಾಕ್ಯವಾದ "ಯೇನಾಸೌಕಾಶಿ ರಾಜಃ ಸಮರಭವಿಜಿತಃ" ಎಂಬುದ ರಿಂದ ಕಾಶಿಯವರೆಗೂ ದಂಡೆತ್ತಿದುದಾಗಿ ತಿಳಿಯಬರುವುದಲ್ಲದೆ ಕಾಶೀರಾಜನನ್ನು ಗೆದ್ದಂತೆಯೂ ವರ್ಣಿತವಾಗಿದೆ. ಇದಲ್ಲದೆ ಲಕ್ಷ್ಮಣಸೇನನಮಗ ವಿಶ್ವರೂಪಸೇನನು ಕೊಟ್ಟಿರುವ ತಾಮ್ರಶಾಸನದಲ್ಲಿ ಕಂಡುಬರುವ:—

[೧] I. A. S. B. N. S. Vol. V. P. 473

[೨] R. D. Banarjis Bangalara Ithihasas P. 325 & Gowda Rajamala P. 66

ವೇಲಾಯಾಂ ದಕ್ಷಿಣಾಬ್ಧೇರ್ಮುಸಲಧರಗದಾ ಪಾಣಿಸಂವಾಸವೇದ್ಯಾಂ
ಕ್ಷೇತ್ರೇ ವಿಶ್ವೇಶ್ವರಸ್ಯ ಸ್ಫುರದಸಿವರಣಾ ಶ್ಲೇಷಗಂಗೋರ್ಮಿಭಾಜಿ
ತೀರೋತ್ಸಂಗೇ ತ್ರಿವೇಣ್ಯಾಃ ಕಮಲಭವಮಖಾರಂಭನಿರ್ವ್ಯಾಜಪೂತೇ
ಯೇನೋಚ್ಚೈರ್ಯಜ್ಞಯೂಪೈಃ ಸಹ ಸಮರಜಯಸ್ತಂಭಮಾಲಾ ಧ್ಯಾನಯಿ॥

ಎಂಬ ಶ್ಲೋಕದಿಂದ ಇವನ ದಿಗ್ವಿಜಯವಿಚಾರವು ವಿಶದವಾಗಿ ತಿಳಿದಂತಾಗುವುದು. ಇದಲ್ಲದೆ ಮಾಧೈನಗರದ ತಾಮ್ರಶಾಸನದಲ್ಲಿ ಹೇಳಿರುವ "ವಿಕ್ರಮ ವಶೀಕೃತ ಕಾಮರೂಪಃ" ಎಂಬುದರಿಂದ ಕಾಮರೂಪ ಅಥವಾ ಅಸ್ಸಾಂವರೆಗೆ ದಂಡೆತ್ತಿದುದಾಗಿ ಬೋಧೆಯಾಗುತ್ತದೆ. ಕವಿಯು ಹೇಳುವ ದೇಶ, ನದೀ, ಆರಾಮಾದಿಗಳು ಈಗಣ ಭೂವಿವರಣೆಯ ಸಂಪ್ರದಾಯದಿಂದ ಬೇರೆಯಾಗಿರುವುದಾದುದರಿಂದ ದೇಶವಿಭಾಗದ ರಚನಾಕ್ರಮವು ಹೀಗೆಯೇ ಸರಿಯೆಂದು ಹೇಳಲಾಗುವುದಿಲ್ಲ. ಧೋಯೀಕವಿಯು ಹೇಳುವ ವಿಜಯಪುರವು ರಾಜನಾದ ಲಕ್ಷ್ಮಣಸೇನನ ರಾಜಧಾನಿಯಾಗಿದ್ದಿತೆಂದು ಹೇಳುವ ಚರಿತ್ರಾಧಾರಗಳಾವುವೂ ಇರುವುದಿಲ್ಲ. ಆದರೂ ಆಗಣರಾಜರುಗಳಿಗೆ ಅನೇಕ ರಾಜಧಾನಿಗಳಿದ್ದಂತೆಯೇ ಇವನಿಗೂ ಅನೇಕ ರಾಜಧಾನಿಗಳಿದ್ದು ವಿಜಯಪುರವು ಅವುಗಳಲ್ಲಿ ಒಂದಾಗಿರಬಹುದಾಗಿ ಹೇಳಬಹುದಾಗಿದೆ. ಇವನ ಪವನದೂತದ ಅಭಿಪ್ರಾಯಗಳೂ ಶಬ್ದಗಳೂ, ಹಾಗೆಹಾಗೆಯೇ ಮೇಘದೂತದಲ್ಲಿ ಕಂಡುಬರುತ್ತದೆ. ಮಾದರಿಗಾಗಿ ಎರಡುಮೂರು ಉದಾಹರಣೆಗಳನ್ನು ಕೊಡುವೆವು.

| ಮೇಘದೂತ | ಪವನದೂತ |
|---|---|
| ( ) ಸ್ಥಿತ್ವಾ ತಸ್ಮಿನ್ ವನಚರವಧೂಭುಕ್ತ<br>ಕುಂಜೇ ಮುಹೂರ್ತಂ ೧—೧೯ | ಹಿತ್ವಾ ಕಾಂಚೀಮವಿನಯವತೀಭುಕ್ತ<br>ರೋಧೋನಿಕುಂಜಾಂ ೧೫ |
| (೨) ಸಂಸರ್ಪಂತ್ಯಾಃ ಸ್ಖಲಿತಸುಭಗಂ<br>ದರ್ಶಿತಾವರ್ತನಾಭೇಃ ೧—೨೯ | ಸಂಸರ್ಪಂತೀಂ ಪ್ರಕೃತಿಕುಟಿಲಾಂ ದರ್ಶಿ<br>ತಾವರ್ತಚಕ್ರಾಂ ೩೪ |
| (೩) ನಿತ್ಯಜ್ಯೋತ್ಸ್ನಾಪ್ರತಿಹತತಮೋ<br>ವೃತ್ತಿರಮ್ಯಾಃ ಪ್ರದೋಷಾಃ ೨-೩ | ಸ್ತ್ಯಾನಜ್ಯೋತ್ಸ್ನಾಮುದಮರಿತಂ<br>ಕುರ್ವತೇ ಯತ್ರ ಯೂನಾಂ॥ |

ಪ್ರಕೃತ ಇಷ್ಟು ಸಾಕೆಂದು ತೋರುವುದು. ಹೆಚ್ಚಾಗಿ ನೋಡ ಬಯಸುವರು ಪವನದೂತಕಾವ್ಯವನ್ನು ನೋಡತಕ್ಕದು. ಧೋಯಿಕವಿಯು ಮೇಘದೂತವನ್ನೇ ಅಲ್ಲದೆ ಅಭಿಜ್ಞಾನ ಶಾಕುಂತಲವನ್ನೂ ಅನುಸರಿಸಿರುವುದಾಗಿ ತೋರುತ್ತದೆ.

| | |
|---|---|
| (೧) ಪ್ರಚ್ಛಾಗಾರಾತ್ಸ್ಖಲೀಭೂತ<br>ಸ್ತಸ್ಯಾಃ ಸ್ವಪ್ನೇ ಸಮಾಗಮಃ ೬—೨೨ | ಕೇಷಾಂಚಿತ್ಸ್ಯಾತ್ ಸ್ವಪ್ನಸದೃಶ ಮಹೋಸ್ಸಪ್ತ<br>ಸಂಕೇತದೂತೀ। ಸಿದ್ಧ್ಯಾಪ್ಯಸ್ಯಾಃ ಕ್ಷಣ<br>ಮಪಿನಯಸ್ಮೇತ್ರಸೀಮಾನಮೇತಿ ೮೪ |

ಈ ಕಾವ್ಯದಲ್ಲಿ—ಆಂಧ್ರ, ದಾಕ್ಷಿಣಾತ್ಯ, ಗೌಡ, ಪಾಂಡ್ಯ, ಸುಹ್ಮದೇಶಗಳ, ಕಳಿಂಗನಗರ, ಕಾಂಚೀ, ಉರಗಪುರ, ಯಯಾತಿನಗರ ಎಂಬ ಪತ್ತನಗಳ, ಚಂದನಾದ್ರಿ, ಮಲಯಪರ್ವತ, ಶ್ರೀಖಂಡಾದ್ರಿ, ವಿಂಧ್ಯಪರ್ವತಗಳ, ಗಂಗಾ, ಗೋದಾವರೀ, ಕಾವೇರೀ, ರೇವಾ, ನರ್ಮದಾ, ಸುಬಲಾ, ತಾಮ್ರಪರ್ಣೀ, ತಪನತನಯಾ ಅಥವಾ ಯಮುನಾ ನದಿಗಳ, ಬಲ್ಲಾಳ ಮತ್ತು ಲಕ್ಷ್ಮಣಸೇನರಾಜರ, ಭಿಲ್ಲರ, ಚೋಳರ, ಕೇರಳ ಮತ್ತು ಶಬರ ಸ್ತ್ರೀಯರ, ಪಂಚಾಪ್ಸರ, ಸರಸ್ವಿನಲಿಂಕಾದ್ವೀಪದ, ಮತ್ತು ಸೇನಾನ್ವಯದ ಹೆಸರುಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಚಾರಿತ್ರಿಕ ಸಂಬಂಧಗಳನ್ನೂ, ಹಲವು ಭೂಗೋಳ ವಿಷಯಗಳನ್ನೂ ತಿಳುಹುವುವಾಗಿವೆ. ಆಗಣ ಯಾವ್ಯಾವುದಕ್ಕೆ ಈಗಣ ಹೆಸರು ಸಲ್ಲುವುದೆಂಬದರ ವಿಚಾರವು ಆಗಣ ಭೂಗೋಳವನ್ನರಿಯದ ಈಗಣ ನಮಗೆ ತಿಳಿಯುವಂತಿಲ್ಲ.

ಇದರ ಮಾದರಿಯ ಶ್ಲೋಕಗಳು ಹೀಗಿರುವುವು:—

ಸ್ವೇಚ್ಛಾರಮ್ಯಂ ವಿಹರ ವಿಹಗಸ್ತ್ಯಾಕುಲೋತ್ತುಂಗವೃಕ್ಷೇ
ವಿಂಧ್ಯೋತ್ಸಂಗಪ್ರಣಯಿನಿ ವನೇ ಮಾನವತ್ಯೋSಪಿ ಯತ್ರ
ಸಂಜಾಯಂತೇ ರಹಸಿ ಕರಿಣಾಂ ಕ್ರೂರಮಾಕರ್ಣ್ಯ ಶಬ್ದಂ
ಭರ್ತುಃ ಕಂಠೇ ಪ್ರಹಿತಭುಜಾವಲ್ಲಯೋ ಭಿಲ್ಲಯೋಷಾಃ || ೨೪

ಸ್ವೈರಕ್ರೀಡಾರಸಿಕ ಶಬರೀಸಿಕ್ತರೋಧ್ರೇಣ ಕುಂಜಾಂ
ಗಚ್ಛೇರೇವಾಮಭಿನವಶುಕ ಶ್ಯಾಮವಂಶೋವನೇವ
ಮನ್ಯಂತೇ ಯತ್ರ ಸರಭುವಿ ಪ್ರೌಢಸೀಮಂತಿನೀನಾಂ
ಲೀಲಾಮಾನಗ್ರಹಮಪಿ ಕರೇರತ್ನರಾಯಂ ಯುವಾನಃ || ೨೫

ವಿನ್ಯಸ್ಯಂತೋ ಶಶಿನಿ ನಯನೇ ದುರ್ದಿನೈರಮ್ಬುಧಾರಾಂ
ಧಾರಾಶ್ವಾಸೈರ್ವಕುಲಕುಸುಮಾಮೋದಮಾಘಾತುಕಾಮಾ
ಪುಷ್ಪೋತ್ಸುಕ್ಷ ಭ್ರಮರವಿರುತಂ ಮೂರ್ಛಯಾರಕ್ಷಿತಾಸೀ
ವೀಕ್ಷ್ಯಾವಸ್ಥಾಂ ಕ ಇವ ಕರುಣಾ ಕಾತರಃ ಸ್ಯಾನ್ನ ತಸ್ಯಾಃ ೭೮.

ಚೇತೋವೃತ್ತಿಃ ಸ್ಫುರತಿ ಕರುಣಾ ವಿಪ್ರಯೋಗೇ ವಿರಾಗೀ
ಕೋಪಾವೇಶಃ ಕುಸುಮವಿಶಿಖೇ ಸಖ್ಯಮಾತ್ಮನ್ಯವಜ್ಞಾ
ಇತ್ಥಂ ಸ್ವಾಂತೇಸ್ಥಿತಮಿವಸಮಾಲಂಬ್ಯ ಚಿತ್ರಾವಲೀಕೇ
ತ್ವಯ್ಯೇಕಾಂತಸ್ಥಿರವಿರಚಿತಂ ಭಾವಮಾವಿಷ್ಕರೋತಿ || ೭೯.

ಮಾನವತಿಯರಾದಾಗ್ಯೂ ವನದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿರುವ ಮದಗಜಗಳ ಕೂಗನ್ನು ಕೇಳಿ ಭಯಗೊಂಡವರಾದ ಭಿಲ್ಲಸ್ತ್ರೀಯರು ತಮ್ಮ ತಮ್ಮ ಪತಿಗಳನ್ನು ಎಲ್ಲಿ ಆಶ್ಲೇಷಿಸುವರೋ ಅಂತಹ ವಿಂಧ್ಯಪರ್ವತದ ಮೂಲದಲ್ಲಿರುವ ವನದಲ್ಲಿ ಗಾಳಿಯಿಂದ ಅಲ್ಲಾಡುವುದಾದ ಅತ್ಯುನ್ನತ ವೃಕ್ಷಗಳಲ್ಲಿ ಎಲೈ ಪಕ್ಷಿಯೆ! ಸ್ವೇಚ್ಛೆಯಾಗಿ ವಿಹರಿಸು.

ಯುವಕರು, ಸ್ವೇಚ್ಛಾವಿಹಾರದಲ್ಲಿ ರಸಿಕರಾಗಿರುವ ಶಬರ ಸ್ತ್ರೀಯರಿಂದ ವ್ಯಾಪ್ತವಾಗಿರತಕ್ಕ ಪೊದೆಯನ್ನೂ, ನೂತನವಾಗಿಯೂ ಶುಕವರ್ಣದಂತೆ ಶ್ಯಾಮಲ ವಾಗಿರುವ ವಂಶ [ಬಿದಿರು] ಸಮೂಹದಿಂದ ಕೂಡಿರುವ ತೀರಪ್ರದೇಶವನ್ನುಳ್ಳ ನರ್ಮದಾನದಿಯನ್ನೂ ಮತ್ತು ತೀರಪ್ರದೇಶಗತರಾಗಿರುವ ಪ್ರೌಢರಾದ ಹೆಂಗಳೆಯರ ಕ್ರೀಡಾಕೋಪವನ್ನೂ ರತಿಗೆ [ಕೇಳಿಗೆ] ಪ್ರತಿಬಂಧಕಗಳನ್ನಾಗಿ ತಿಳಿಯುತ್ತಾರೆ.

ಎಲೈ ಪವನನೆ! ಅಶ್ರುಪೂರ್ಣವಾದ ನಯನಗಳಿಂದ ಚಂದ್ರಮನನ್ನು ನೋಡುವಳಾಗಿಯೂ, ನಿಟ್ಟುಸಿರಿನಿಂದ ವಕುಳಪುಷ್ಪಗಳ ಸುಗಂಧವನ್ನು ಆಘ್ರಾಣಿಸು ವುದರಲ್ಲಿ ಅಪೇಕ್ಷೆಯುಳ್ಳವಳಾಗಿಯೂ, ಭ್ರಮರ ಝೇಂಕಾರವನ್ನು ಆಲೈಸಿ ಕೇಳ ಲಿಚ್ಛೆಯುಳ್ಳವಳಾಗಿಯೂ ಇರುವ ಇವಳ ದುರವಸ್ಥೆಯನ್ನು ನೋಡಿ ಮೂರ್ಛೆ ಯಿಂದ ಎಚ್ಚರಗೊಳಿಸಲ್ಪಟ್ಟ ಇವಳ ವಿಚಾರದಲ್ಲಿ ಯಾವನುತಾನೆ ಕರುಣೆಯುಳ್ಳವ ನಾಗಲಾರನು?

ನಿನ್ನ ಸಂದರ್ಶನವಾದಾಗ, ಕರುಣೆಯೆಂಬ ಮನೋವೃತ್ತಿಯೂ, ವಿರಹದಲ್ಲಿ ವೈರಾಗ್ಯವೂ, ಮನಸಿಜನಲ್ಲಿ ಕೋಪವೂ, ಶರೀರದಲ್ಲಿ ತಿರಸ್ಕಾರವೂ ಚಿತ್ರದಲ್ಲಿ ಗುರ್ತಿಸಿದರೆ ಹೇಗೋ ಹಾಗೆ ತನ್ನ ಶರೀರದಲ್ಲಿರುವಂತೆ ತಿಳಿಯುವನಾಗಿ ಸ್ಥಿರವಾಗಿ ರುವ ತನ್ನ ಮನೋಭಾವವನ್ನು ನಿನ್ನಲ್ಲಿ ಏಕಾಂತದಲ್ಲಿ ವ್ಯಕ್ತಪಡಿಸುತ್ತಾಳೆಂಬದನ್ನು ತಿಳಿಯ ಹೋಗುವನಾಗು.



## ಕುಲಶೇಖರವರ್ಮ

ಈತನ ಮಾತಾಪಿತೃಗಳಾರೆಂಬುದು ತಿಳಿಯದಿದ್ದರೂ ಇವನ ಗ್ರಂಥದ ಪ್ರಸ್ತಾವನೆಯಲ್ಲಿ:—

"ಕವಿಃ ಪುನರಸ್ಯ ನಾಟಕಸ್ಯ ಮಹೋದಯಪುರ ಪರಮೇಶ್ವರಃ ಪರಮ ಹಂಸಪಾದಪದ್ಮಾರಾಧಕಃ ಕೇರಳಕುಲಚೂಡಾಮಣಿಃ ಕುಲಶೇಖರ ವರ್ಮಾ ನಾಮ ಕಶ್ಚಿದ್ ರಾಜಾ" ಎಂದೂ —

ಭರತವಾಕ್ಯದಲ್ಲಿ:—"ಶ್ರೀಧರವಿಷಯಭಕ್ತಿಪರಿಪಾಕ ಪ್ರಾರ್ಥನಪರಾತ್ಮಸ ವಿಷ್ಣುಭಕ್ತತ್ವಂ ಗಮ್ಯತೇ" ಎಂದೂ.—

ವ್ಯಾಖ್ಯಾನಕಾರನೂ ಇವನನ್ನು "ಅಥಪರಮಭಾಗವತಃ ಶ್ರೀಕುಲಶೇಖರ ಇತಿವರ್ದ ವಿಷ್ಣುಭಕ್ತೋತ್ತಮಂ ಮನ್ಯತೇ" ಎಂದೂ —|

| ತಪತೀಸಂವರಣದ ಮುದ್ರಿತ ಪುಟ ೧

ಸೂತ್ರಧಾರನ ಹೇಳಿಕೆಯಾದ "..............ರಾಜ್ಞಃ ಕೇರಲಕುಲಚೂಡಾಮಣೇರ್ಮಹೋದಯಪುರಪರಮೇಶ್ವರಸ್ಯ ಶ್ರೀಕುಲಶೇಖರವರ್ಮಣಃ" § ಎಂಬದರಿಂದ ಕುಲಶೇಖರವರ್ಮನು ಕೇರಳಕುಲಚೂಡಾಮಣಿಯೆಂದೂ, ಮಹೋದಯಪುರರಾಜನೆಂದೂ, ವಿಷ್ಣುಭಕ್ತನೆಂದೂ ಗೊತ್ತಾಗುತ್ತದೆ. ಇವನು ಆಳಿದ ಮಹೋದಯಪುರವು ಯಾವುದು? ಎಲ್ಲಿದ್ದುದೆಂಬುದರ ವಿಚಾರವಾಗಿ ಇದೇ ಕವಿಯಿಂದ|ರಚಿತವಾಗಿರುವ 'ಸುಭದ್ರಾಧನಂಜಯ' ಎಂಬನಾಟಕಕ್ಕೆವ್ಯಂಗ್ಯಾರ್ಥ ಮಾತ್ರಪ್ರತಿಪಾದನರೂಪವಾಗಿರುವ ಒಂದಾನೊಂದು ವ್ಯಾಖ್ಯಾನದ ಮುನ್ನುಡಿಯಲ್ಲಿ "ಕಾಲೇಽಥೇತಿ ವರ್ತಮಾನೇ ಕಸ್ಮಿಂಶ್ಚಿದಹ್ನಿ ಪ್ರಾತರುತ್ಥಾಯ ಪುತ್ರಾಪಹೃತಗಾರ್ಹಸ್ಥ್ಯೇನೋತ್ಥಾಯ **ಚೂರ್ಣಿಕಾ**ಸರಿದ್ವಾರಿ ಅನುಷ್ಠಿತ ಪೂರ್ವಸಂಧ್ಯೇನ ದೃಷ್ಟ**ಪರಮೇಶ್ವರ ಮಂಗಲಸ್ಥ**ಪರಮಪುರುಷೇಣ ಪ್ರಾಪ್ತಾತ್ಮಮಂದಿರಾಲಿಂದ ದೇಶಪ್ರಕ್ಷಾಲಿತಕರಚರಣೇನ ಹಸಂತಿಕೋದ್ಧೃತ್ಯ ರಾನುಶಮಿತಶೀತರುಗ್ಣೇನ ಜಪಧ್ಯಾನಪರೇಣ ಮಯಾ ಕೇರಲೇಶ್ವರವಚನಕಾರೀ ಕಶ್ಚಿದ್ ಬ್ರಹ್ಮಬಂಧುಃ ಸಮುಲಕ್ಷ್ಯತ" ಎಂದೂ "ಅಥ ಮಯಾಮುನಾ ಸಹಾರೂಢ ಏತ್ಪ್ಲಾಶಯ್ಯಾ ಸಂಪಾದಿತಸ್ವಾದುವಸ್ತು ಸೌಖ್ಯಯಾ ನಾವಾ ಚೂರ್ಣಿಕಾ ನದೀ ವಾಹ್ಯಮಾನಯಾ ಸತ್ವರಂ ಮಹೋದಯಾಖ್ಯಂ ಪುರಂ ಗಮ್ಯತೇಸ್ಮ" ಎಂದು ಹೇಳಲ್ಪಟ್ಟಿರುವುದರಿಂದ ಮಹೋದಯಪುರಕ್ಕೆ ಹೋಗಬೇಕಾದರೆ ಚೂರ್ಣಿ ನದಿಯನ್ನು ದಾಟಿ ಪರಮೇಶ್ವರಮಂಗಲದ ಮೂಲಕ ಹೋಗಬೇಕೆಂದು ಗೊತ್ತಾಗುತ್ತದೆ.

ಮಹೋದಯವೆಂಬುದು ಕೊಚ್ಚಿಸಂಸ್ಥಾನದ ಕ್ರ್ಯಾಂಡಂಗನ್ನೂರು ಬಳಿ ಇರುವ ಈಗಣ "ತಿರುವಂಚಿಕ್ಕಳಂ" ಎಂಬಗ್ರಾಮವೆಂದೂ, ಚೂರ್ಣೀನದಿಗೆ "ಪೆರಿಯಾರ್" ಎಂದೂ ಹೇಳುವರಾಗಿ ಹೇಳಲ್ಪಟ್ಟಿದೆ.

ಮುನ್ನುಡಿಯಲ್ಲಿ ವರ್ಣಿತವಾಗಿರುವ ಪರಮೇಶ್ವರಮಂಗಲವೆಂಬುದು ವ್ಯಂಗ್ಯವ್ಯಾಖ್ಯಾನಕಾರನ ಸ್ಥಳವಾಗಿದ್ದಿರಬೇಕಾಗಿತೋರುತ್ತದೆ. ಹೇಗೆಂದರೆ ನಂಬೂದ್ರಿ ಬ್ರಾಹ್ಮಣರನೇಕರ ವಾಸಸ್ಥಳವು ದೇವಮಂಗಲಂ, ನಾರಾಯಣ ಮಂಗಲಂ ಎಂದು ಕರೆಯಿಸಿಕೊಂಡಿರುವಂತೆ ಪರಮೇಶ್ವರ ಮಂಗಲವೆಂದು ಕರೆಯಿಸಿಕೊಂಡಿರಬಹುದಾಗಿ ಭಾಸವಾಗುತ್ತದೆ. ಈಗ ಈ ಸ್ಥಳವಾವುದು ? ಕುಲಶೇಖರನವಂಶೀಕರಾರಾದರೂ ಈಗದೊರೆಯುವರೇ ? ಇವೇ ಮೊದಲಾದವುಗಳಿಗೆ ಸರಿಯಾದ ಉತ್ತರವು ದೊರೆಯುವಂತಿಲ್ಲ. ಗ್ರಂಥಾಂತರಗಳಲ್ಲಿಯೂ ದೊರೆಯದಾಗಿದೆ.

ಶ್ರೀವೈಷ್ಣವ ಗ್ರಂಥಗಳಲ್ಲಿ ಕುಲಶೇಖರಾಳ್ವಾರೆಂದು ಪ್ರಸಿದ್ಧನಾದ ಕುಲಶೇಖರನೂ ಮೇಲೆಹೇಳಿದ ಕುಲಶೇಖರವರ್ಮನೂ ಇರ್ವರೂ, ಕೇರಳೀಯರೂ

§ ತಪತೀಸಂವರಣದ ಶ್ಲೋ ೪.

ತಪತೀಸಂವರಣದ ಮುನ್ನುಡಿ ಪುಟ ೩.

ರಾಜರೂ, ವಿಷ್ಣುಭಕ್ತರೂ ಆಗಿರುವುದರಿಂದ ಈ ಇರ್ವರೂ ಏಕವ್ಯಕ್ತಿಯೆಂದೂ ಮೇಲೆಹೇಳಿದ "ವಂಚಿಕ್ಕುಳಂ" ಎಂಬುದು ಕುಲಶೇಖರಾಳ್ವಾರರ ಜನ್ಮಭೂಮಿಯಾಗಿದ್ದುದಾಗಿ ಶ್ರೀವೇದಾಂತದೇಶಿಕ ಕೃತದ್ರಾವಿಡಪ್ರಬಂಧಗಳಿಂದ ತಿಳಿಯಬರುತ್ತದೆಯೆಂದೂ ಈ ವಂಚಿಕ್ಕುಳಂ ಎಂಬುವಕ್ಕೆ ದ್ರಾವಿಡಭಾಷೆಯ ಶ್ರೇಷ್ಠಾರ್ಥಸೂಚಕವಾದ "ತಿರು" ಎಂಬ ವಿಶೇಷಣದಿಂದ 'ತಿರುವಂಚಿಕ್ಕಳಂ' ಎಂದಾಗಿರುವುದೆಂದೂ ಅದೇ ಮಹೋದಯವೆಂಬುದಾಗಿಯೂ ಹೇಳುವರು.§ ಯಾವುದು ಹೇಗಾದರೂಇರಲಿ, ತಿರುವಂಚಿಕ್ಕಳಂ ಎಂಬುದು ಶ್ರೀಕುಲಶೇಖರಾಳ್ವಾರರ ಜನ್ಮಸ್ಥಳವಾದ ಮಾತ್ರದಿಂದಲೇ ಅವರನ್ನು ತಿರುವಂಚಿಕ್ಕಳಂ (ಮಹೋದಯಪುರಿ)ಗೆ ರಾಜರಾಗಿದ್ದರೆಂಬುದು ಹೇಗೆ? ಕುಲಶೇಖರವರ್ಮನು ಕುಲಶೇಖರಾಳ್ವಾರರಲ್ಲವೆಂಬುದು ಗ್ರಂಥಾಂತರಪ್ರಮಾಣಗಳಿಂದ ಸಿದ್ಧವಾಗುತ್ತದೆಯಾಗಿ ಏಕವ್ಯಕ್ತಿತ್ವವು ಅಸಂಬದ್ಧವಾಗುವುದು. ಈ ಇರ್ವರೂ ವಿಷ್ಣುಭಕ್ತರೂ, ರಾಜರೂ, ಏಕ ದೇಶಿಯರಾಗಿದ್ದ ಮಾತ್ರದಿಂದಲೇ ಇವರಿರ್ವರೂ ಒಬ್ಬನೇ ಎಂದು ಬಗೆಮಾಡಿ ಹೇಳುವುದು ಸುಸ್ಥುವಾಗಿರದು ಈ ವ್ಯತ್ಯಾಸಗಳನ್ನು ಹೇಳುವಮೊದಲು ಕುಲಶೇಖರಾಳ್ವಾರರ ವಿಚಾರವಾಗಿ ಕೊಂಚ ಹೇಳುವುದು ಅಪ್ರಸಕ್ತವಾಗದು.

ಕುಲಶೇಖರಾಳ್ವಾರರನ್ನು ಕುಲಶೇಖರ ಪೆರುಮಾಳೆಂದೂ ಕರೆಯುವ ರೂಢಿಯು ಇರುವುದು. ಇವರು¶ ಕೊಲಿ ಕೂಡಲ್ (ಮಧುರಾ) ಕೋಜಿ ಉರೈಯೂರ್ ಮತ್ತು ಕೊಂಗುರಾಜ್ಯಗಳಿಗೆ ರಾಜರಾಗಿದ್ದುದಾಗಿ ಹೇಳಲ್ಪಟ್ಟಿದೆ. ಮೇಲೆ ಹೇಳಿದ ತಮಿಳುನಾಡುಗಳಾದ ಚೇರ, ಚೋಳ, ಪಾಂಡ್ಯ ಮತ್ತು ಕೊಂಗು ಈ ನಾಲ್ಕು ರಾಜ್ಯಗಳು ಯಾವ ಕಾಲದಲ್ಲಿ ಒಬ್ಬರಾಜನ ಆಳ್ವಿಕೆಯಲ್ಲಿದ್ದಿತೆಂಬುದು ಗೊತ್ತಾಗುವಂತಿಲ್ಲ.

ಕೊಂಗುದೇಶದ ಚರಿತ್ರೆ ಮತ್ತು ಶಾಸನಗಳಂತೆ ಕ್ರಿ. ಶ. ೮೯೦ರಲ್ಲಿ ಚೋಳರು ಪುನಃ ಪ್ರಬಲರಾಗಿದ್ದುದಾಗಿಯೂ ವಿಜಯಾಲಯ ಮತ್ತು ಮೊದಲನೆಯ ಆದಿತ್ಯ (aditya I) ಈ ಇಬ್ಬರೂ ತಮ್ಮ ಕೈಬಿಟ್ಟುಹೋಗಿದ್ದ ರಾಜ್ಯಗಳನ್ನು ಪುನಃ ಸಂಪಾದಿಸಿಕೊಂಡುದಲ್ಲದೆ ತಮ್ಮ ರಾಜ್ಯಕ್ಕೆ ಕೊಂಗುರಾಜ್ಯ (ಸೇಲಂ ಮತ್ತು ಕೋಯಂಬತ್ತೂರು ಡಿಸ್ಟ್ರಿಕ್ಟುಗಳು) ವನ್ನು ಸೇರಿಸಿಕೊಂಡುದಾಗಿ ತಿಳಿಯಬರುತ್ತದೆ.

ಕುಲಶೇಖರನು ಚಿದಂಬರದಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿದುದಾಗಿ ಗ್ರಂಥಾಂತರದಿಂದ ತಿಳಿಯಬರುತ್ತದೆ. ಚಿದಂಬರದ ವಿಷ್ಣುದೇವಾಲಯವು ಸುಮಾರು ಕ್ರಿ. ಶ. ೭ನೆಯ ಶತಮಾನದ ಉತ್ತರಾರ್ಧದಲ್ಲಿ ಕಟ್ಟಿಸಿದುದಾಗಿ

§ ವಸತಿಸಂವರಣ ಪುಟ ೪.

¶ ತಿರುವಳಿ VIII—7.

ಚರಿತ್ರೆಯು ಹೇಳುತ್ತದೆ. ಈ ಕಾರಣಗಳಿಂದ ತಿರುವಳಿ ಎಂಬಲ್ಲಿರುವ ವಿಷ್ಣು ದೇವಾಲಯವು ತಿರುಮಂಗೈ ಆಳ್ವಾರರಿಂದ ಕಟ್ಟಲ್ಪಟ್ಟ ದೇವಾಲಯಗಳಲ್ಲಿ ಒಂದಾಗಿರಬೇಕೆಂದು ಬೋಧೆಯಾಗುತ್ತದೆ. ಕೇರಳೋತ್ಪತ್ತಿ ಎಂಬ ಸಾಧಾರಣತರದ ಅರ್ವಾಚೀನಗ್ರಂಥದಲ್ಲಿ ಕುಲಶೇಖರನು ಕ್ರಿ. ಶ. ೮೫೫ರಲ್ಲಿ ಮೃತನಾದ ಚೇರಮಾನ ಪೆರುಮಾಳಿನ ವಂಶೀಯನೆಂದು ಹೇಳಲ್ಪಟ್ಟಿದೆ. ಅಲ್ಲದೆ ಕುಲಶೇಖರ ಪೆರುಮಾಳ್ ಎಂಬುವನು ಆಗ ಪ್ರಬಲರಾಗಿದ್ದ ಪಾಂಡ್ಯರ ಹಾವಳಿಯನ್ನು ತಡೆಯುವುದಕ್ಕಾಗಿ ಚಿಕ್ಕ ಚಿಕ್ಕ ರಾಜ್ಯಗಳನ್ನಾಗಿ ವಿಭಾಗಮಾಡಿಕೊಂಡಾಳಿದನೆಂದೂ ೧೮ ವರ್ಷಗಳು ರಾಜ್ಯವಾಳಿ ಅನಂತರ ಸಶರೀರನಾಗಿ ಸ್ವರ್ಗಾರೋಹಣಮಾಡಿದನೆಂದೂ ಹೇಳಲ್ಪಟ್ಟಿದೆ. ಈ ಕಾರಣಗಳಿಂದ ಕುಲಶೇಖರನು ಕ್ರಿ. ಶ. ೮೫೦ ೯೦೦ರ ವರೆಗೆ ಆಳಿದುದಾಗಿ ಹೇಳಬೇಕಾಗುತ್ತದೆ. ಹೀಗೆ ಹೇಳುವುದಾದರೆ ಅಥವಾ ಈ ಕಾಲವನ್ನೇ ಒಪ್ಪುವುದಾದರೆ ಈ ಕುಲಶೇಖರನು ಹೇಳಿಕೊಂಡಿರುವ ಕೂಡಲನಾಯಕ ಅಥವಾ ಮಧುರೆಯ ಅರಸನೆಂಬುದಕ್ಕೆ ವ್ಯಾಘಾತವುಂಟಾಗುತ್ತದೆ. ಒಂದುವೇಳೆ ಇದನ್ನೂ ಸರಿಯೆಂದು ಹೇಳುವುದಾದರೆ ಈ ಕಾಲದಲ್ಲಿ ಪಾಂಡ್ಯರು ಬಹುಪ್ರಬಲರಾಗಿದ್ದುದಾಗಿ ಚಿನ್ನಮನೂರು ಶಾಸನಗಳಿಂದ ಗೊತ್ತಾಗುತ್ತದೆ. ಇವೆಲ್ಲವನ್ನೂ ಸಮಂಜಸಮಾಡಬೇಕಾದರೆ ಕುಲಶೇಖರನು ಪಾಂಡ್ಯವಂಶೀಯನೆಂದು ಹೇಳಿ ಕೇರಳದ "ಮರುಮಕ್ಕತ್ತಾಯಂ" ಪದ್ಧತಿಯನ್ನನುಸರಿಸಿ ಕೇರಳಸಿಂಹಾಸನಕ್ಕೆ ಒಡೆಯನಾಗಿದ್ದನೆಂದೂ, ಇವನನ್ನು ಚೇರಪಾಂಡ್ಯರು ಪಾಂಡ್ಯ ಕುಲಶೇಖರ ಪೆರುಮಾಳೆಂದೂ ಕರೆದಿರಬೇಕಾಗಿ ಬೋಧೆಯಾಗುತ್ತದೆ. ಇದು ವರೆಗೆ ಚಾರಿತ್ರಕ ವಿಷಯಗಳನ್ನು ಹೇಳಿದುದಾಯಿತು. ಇನ್ನುಮುಂದೆ ಕುಲಶೇಖರಾಳ್ವಾರರ ವಿಚಾರವಾಗಿ ದ್ರಾವಿಡಗ್ರಂಥಗಳು ಏನು ಹೇಳುವುದೆಂಬುದನ್ನು ನೋಡುವುದು ಉಳಿದಿರುವುದು.

ಕುಂಭೇ ಪುನರ್ವಸೂಜಾತಂ ಕೇರಳೇ ಚೋಳಪಟ್ಟಣೇ
ಕೌಸ್ತುಭಾಂಶಂ ಧರಾಧೀಶಂ ಕುಲಶೇಖರಮಾಶ್ರಯೇ||

ಎಂದು ಹೇಳಿರುವುದರಿಂದ ಕುಲಶೇಖರರು ಕೇರಳದೇಶದಲ್ಲಿರುವ ಚೋಳಪತ್ತನದಲ್ಲಿ ಕಲಿಯುಗ ೨೮ನೆಯದಾದ ಪರಾಭವವರ್ಷ ಮಾಘಮಾಸ ಶುಕ್ಲದ್ವಾದಶೀ ಶುಕ್ರವಾರದೊಡಗೂಡಿದ ಪುನರ್ವಸುನಕ್ಷತ್ರದಲ್ಲಿ ದೃಢವ್ರತರೆಂಬ ರಾಜನಿಗೆ ಪುತ್ರರಾಗಿ ಅವತರಿಸಿದುದಾಗಿ ಹೇಳಲ್ಪಟ್ಟಿದೆ. ಮತ್ತೊಂದು ಗ್ರಂಥದಲ್ಲಿ ಈಗ ನಡೆಯುತ್ತಿರುವ ಕಲಿ ೨೭ ಪರಾಭವವರ್ಷಪುನರ್ವಸುನಕ್ಷತ್ರದಲ್ಲಿ ಕೊಲ್ಲಿದೇಶದ ತಿರುವಂಚಿಕ್ಕ

* Tamil studies P 39 by M. Srinivas Iyengar, M. A., 1st Series

† ದೊಡ್ಡಯಾಚಾರ್ಯಕೃತ ಗುರುಪರಂಪರಾಪ್ರಭಾವಂ ಪುಟ. ೧೬

ಳಂ ಎಂಬ ಊರಿನಲ್ಲಿ ಚೇರವಂಶದಲ್ಲಿ$ ಕೌಸ್ತುಭಾಂಶದಿಂದ ಜನ್ಮಿಸಿದುದಾಗಿ ಹೇಳಲ್ಪಟ್ಟದೆ. ಇವನು ಕ್ಷತ್ರಿಯನಾಗಿದ್ದು ಬಹು ಪರಾಕ್ರಮಿಯಾಗಿ ಚೇರರಾಜ್ಯಕ್ಕೆ ಮಾತ್ರವೇ ದೊರೆಯಾಗಿದ್ದುದಲ್ಲದೆ ಚೋಳ ಮತ್ತು ಪಾಂಡ್ಯದೇಶಗಳಿಗೂ ಒಡೆಯನಾಗಿದ್ದುದಾಗಿ ದೇಶೀಯ ಚರಿತ್ರೆಯು ಹೇಳುತ್ತದೆ. ನಮ್ಮ ಪ್ರಾಚೀನದ್ರಾವಿಡ ಚರಿತದಲ್ಲಿ ಕೊಲಿಕಾವರ್ಲ, ಕೂಡಲ್‌ನಾಯರ್ಕ, (ಕೂಡಲ್-ಮದುರೆ) ಮತ್ತು ಕೋಟಿಕ್ಕ (ಕೋಟಿ ಉರೈಯೂರ್) ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದು ಕಂಡುಬರುತ್ತದೆ. ಹೀಗೆ ಬಹುದಿವಸಗಳು ರಾಜ್ಯವನಾಳಿ ತನ್ನ ೬೭ನೆಯ ವರ್ಷದಲ್ಲಿ ಮಾನವಲೀಲೆಯನ್ನು ಬಿಟ್ಟುದಾಗಿ ಕಂಡುಬರುತ್ತದೆ. §

ಈ ಕುಲಶೇಖರಾಳ್ವಾರರ ವಂಶೀಯರು ಈಗಣ ಅನಂತಶಯನ (ಟ್ರಾವನ್ಕೂರು) ದ ರಾಜರೆಂದೂ ಕೆಲವರ ಮತವಿರುವುದು. ಹೀಗೆ ಹೇಳುವುದಾದ ಚರಿತ್ರಾಧಾರಗಳು ನಮಗೆ ಉಪಲಬ್ಧವಿಲ್ಲವಾಗಿವೆ. ಅಲ್ಲದೆ ಟ್ರಾವನ್ಕೂರಿನ ರಾಜವಂಶಾವಳಿಯ ಕಾಲಕ್ಕೂ ಕುಲಶೇಖರಾಳ್ವಾರರ ಕಾಲಕ್ಕೂ ನೂರಾರು ವರ್ಷಗಳ ಕಾಲಭೇದವಿರುವುದರಿಂದ ಕುಲಶೇಖರಾಳ್ವಾರರೂ, ಕುಲಶೇಖರವರ್ಮನೂ ಇಬ್ಬರೂ ಬೇರೆಬೇರೆಯೆಂದೂ, ಭಿನ್ನಭಿನ್ನಕಾಲವರ್ತಿಗಳಾಗಿರುವುದರಿಂದ ಪರಸ್ಪರ ಸಂಬಂಧವಿರದೆಂದೂ, ಕುಲಶೇಖರವರ್ಮನು ಯಾರ ಮಗನೆಂಬುದು ತಿಳಿಯದೆಂದೂ, ಈ ಇರ್ವರು ರಾಜರೂ ವಿಷ್ಣುಭಕ್ತರಾಗಿದ್ದ ಮಾತ್ರಕ್ಕೆ ನಾಮಸಾಮ್ಯದಿಂದ ಏಕವ್ಯಕ್ತಿಸ್ಥಾಪನವು ಸರಿಯಾದುದಲ್ಲವೆಂದೂ ಹಾಗೆ ಹೇಳಬೇಕೆಂಬಾಸೆ ಇರುವವರಿಗೆ ಕುಲಶೇಖರವರ್ಮನು ಕುಲಶೇಖರಾಳ್ವಾರರ ವಂಶೀಯನಾಗಿರಬಹುದಾಗಿ ಹೇಳಿ ಮುಗಿಸಬೇಕಾಗುವುದು.

ಇದಲ್ಲದೆ ಮಧುರೆಯ ಸೋಮಸುಂದರೇಶ್ವರಸ್ವಾಮಿಯ ವೃತ್ತಾಂತ ಕಥಾನಕದಲ್ಲಿ ಮಧುರೆಯನ್ನಾಳಿದ ಪಾಂಡ್ಯರಾಜರ ಮೂಲಪುರುಷನನ್ನು ಸೋಮಸುಂದರೇಶ್ವರನು ಸಿದ್ಧರೂಪದಿಂದ ಬಂದು ಕುಲಶೇಖರನೆಂದು ನಾಮಕರಣವನ್ನು ಮಾಡಿದುದಾಗಿಯೂ ಪಾಂಡ್ಯರಾಜ್ಯಕ್ಕೆ ಪ್ರಾಚೀನರಾಜಧಾನಿಯಾಗಿದ್ದ ಮಣಲೂರೆಂಬುದನ್ನು ಬಿಟ್ಟು ಮಧುರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಳ್ಳಲು ಅಪ್ಪಣೆ

---

$ ತಸ್ಮಾದಭೂಚ್ಚೇರಕುಲಪ್ರದೀಪ
ಶ್ರೀಕೌಸ್ತುಭಾತ್ಮಾ ಕುಲಶೇಖರಾಖ್ಯಃ ।
ಮಹೀಪತಿರ್ಮಾಘಪುನರ್ವಸೂದ್ಯ
ದ್ದಿನೇ ಹರೇಃ ಪೂರ್ಣಕಟಾಕ್ಷಲಕ್ಷ್ಯಃ ॥ ದಿವ್ಯಸೂರಿಚರಿತೆ V. 6.

§ The holy Lives of Azhvars or the Dravida Saints by A. Govindacharya P. 116—118.

ಮಾಡಿದಂತೆಯೂ ಹೇಳಲ್ಪಟ್ಟಿದೆ.* ಇದಲ್ಲದೆ ಪಾಂಡ್ಯರಾಜರಲ್ಲಿ ಕುಲಶೇಖರನೆಂಬ ಹೆಸರಿನ ರಾಜರನೇಕರು ದೊರೆಯುವರು. ಅವರಲ್ಲಿ ಕೆಲವರ ಹೆಸರನ್ನು ಇಲ್ಲಿಕೊಟ್ಟಿದೆ.

| ಹೆಸರು | | ಆಳಿದಕಾಲ |
|---|---|---|
| ತ್ರಿಭುವಕುಲಶೇಖರದೇವ | .... | ಕ್ರಿ. ಶ. ೧೧೬೬‡ |
| ಜಟಾವರ್ಮಕುಲಶೇಖರ (೧) | .... | .... ೧೧೯೦-೧೨೧೬ |
| ,, (೨) | .... | ... ೧೨೩೭-೧೨೫೯ |
| ಮಾರವರ್ಮಕುಲಶೇಖರ (೧) | .... | ... ೧೨೬೮-೧೩೧೦ |
| ,, (೨) | .... | .... ೧೩೧೪-೧೩೪೪§ |

ಮೇಲೆ ಹೇಳಿದ ತ್ರಿಭುವನಕುಲಶೇಖರದೇವನಿಗೂ, ಕುಲಶೇಖರನೆಂಬ ಹೆಸರಿನ ಇತರರಿಗೂ, ಕುಲಶೇಖರವರ್ಮನಿಗೂ, ಕುಲಶೇಖರಾಳ್ವಾರರಿಗೂ ಯಾವ ಸಂಬಂಧವೂ ಇರದು.

**ಕಾಲ**: —'ದಶರೂಪಕ'ಕಾರನಾದ ಧನಂಜಯನು ಕ್ರಿ. ಶ. ೧೦ನೆಯ ಶತಮಾನದ ಉತ್ತರಾರ್ಧದವನು. ಕುಲಶೇಖರವರ್ಮನ ಸಮಕಾಲೀನನಾದ ವ್ಯಂಗ್ಯವ್ಯಾಖ್ಯಾಕಾರನು ತನ್ನ ಗ್ರಂಥದಲ್ಲಿ ದಶರೂಪಕಕಾರನನ್ನು ಹೇಳಿಕೊಂಡಿರುವುದರಿಂದ ಧನಂಜಯನಿಗಿಂತಲೂ ಈಚಿನವನೆಂಬುದು ಸ್ಪಷ್ಟವು. ಅಮರಕೋಶಕ್ಕೆ "ಟೀಕಾಸರ್ವಸ್ವ" ವೆಂಬ ವ್ಯಾಖ್ಯಾನವನ್ನು ಬರೆದಿರುವ ವಂದ್ಯಘಟೀಯಸರ್ವಾನಂದನು ಕುಲಶೇಖರವರ್ಮನು ಬರೆದುದಾಗಿ ಹೇಳಿರುವ 'ಆಶ್ಚರ್ಯಮಂಜರೀ' ಕಥೆಯಿಂದ 'ಕುರಂಗೈರಿವಕುಶಲವಾದಿಭಿಃ' ಎಂಬುದನ್ನು ತೆಗೆದುಕೊಂಡು ಮೊದಲನೆಯ ಕಾಂಡದಲ್ಲಿ ಕುಶಲಶಬ್ದಕ್ಕೆ ವ್ಯಾಖ್ಯಾನವನ್ನು ಮಾಡಿರುವನು. ಟೀಕಾಸರ್ವಸ್ವ ವ್ಯಾಖ್ಯಾನದಲ್ಲಿ ಗ್ರಂಥದ ಶಕ, ಕಾಲ, ಮತ್ತು ಕಲಿವರ್ಷಗಳನ್ನು ಹೀಗೆಂದು ಹೇಳಿರುವನು.

> ಇದಾನೀಂ ಚೈಕಾಶೀತಿವರ್ಷಾಧಿಕೆ ಸಹಸ್ರೇಕ (೧೦೮೧) ಪರ್ಯಂತೇನ ಶಕಾಬ್ದಕಾಲೇನ ಷಷ್ಟಿವರ್ಷಾಧಿಕೆ ದ್ವಿಚತ್ವಾರಿಂಶಚ್ಛತಾನಿ (೪೨೬೦) ಕಲಿಸಂಧ್ಯಾಯಾಘಾತಾನಿ ||x

* The Indian antiquary march 1913 P. 67

‡ Ibid august P. 239

§ Ibid June P. 166 (on some new dates of Pandya Kings.)

x ತಪತೀಸಂವರಣ ಪ್ರಸ್ತಾವನೆ-ಪುಟ ೫

ಎಂಬುದು ಕ್ರಿ. ಶ. ೧೧೫೫ಕ್ಕೆ ಸರಿಹೋಗುವುದರಿಂದಲೂ ಕ್ರಿ. ಶ. ೧೧ನೆಯ ಶತಮಾನದ ಮುಖ್ಯಕವಿಗಳಾರೂ ಕುಲಶೇಖರನನ್ನು ಹೇಳದಿರುವುದರಿಂದಲೂ ಇವನು ಕ್ರಿ. ಶ. ೧೦ನೆಯ ಶತಮಾನದ ಪೂರ್ವಾರ್ಧದಲ್ಲಿರಬಹುದೆಂದರೆ **ನ್ಯೂನತೆ** ಯಾಗದು.

ಗ್ರಂಥಗಳು:—೧. ತಪತೀಸಂವರಣ

೨. ಸುಭದ್ರಾಧನಂಜಯ

೩. ಆಶ್ಚರ್ಯಮಂಜರೀಕಥಾ

ಎಂಬುವುಗಳನ್ನು ಬರೆದಿರುವುದಾಗಿ,

ಏಕಂ ಸಂವರಣಂ ನಾಮ ಧನಂಜಯಮಿತೀತರತ್
ಧ್ವನಿಲಕ್ಷಣಯುಕ್ತಾ ಸಾ ರಚಿತಾ ನಾಟಕದ್ವಯೀ ॥ *

ಎಂಬುದರಿಂದಲೂ,

ಸೂತ್ರಧಾರ:- "ಆರ್ಯೆ ! ಮಾನ್ಯೈವಂ ಯಸ್ಯ ಪರಮಹಂಸ ಪಾದಪಂಕೇರುಹ ಪಾಂಸುಪಟಲ ಪವಿತ್ರೀಕೃತ ಮುಕುಟತಟಸ್ಯ ವಸುಧಾವಿಬುಧ ಧನಾಯಾಂಧಕಾರ ಮಿಹಿರಾಯಮಾಣ ಕರಕಮಲಸ್ಯ ಮುಖಕಮಲಾದಗಲದ್ ಆಶ್ಚರ್ಯಮಂಜರೀ ಕಥಾಮಧುದ್ರವಃ"

ಎಂಬುದರಿಂದ ಈ ಕವಿಯು ಆಶ್ಚರ್ಯಮಂಜರೀಕಥಾ ಎಂಬುದನ್ನೂ ಬರೆದಿರುವದಾಗಿ ತಿಳಿಯಬರುತ್ತದೆ. ಈ ಗ್ರಂಥವಾವುದೆಂಬುದು ತಿಳಿಯದು.

ತಪತೀಸಂವರಣ —ಇದರಲ್ಲಿ ಆರು ಅಂಕಗಳಿರುವುವು. ಕಥಾಭಾಗವನ್ನು ಮಹಾಭಾರತದಿಂದಾರಿಸಿಕೊಂಡಿರುವನು. ಹಸ್ತಿನಾಪುರಾಧೀಶ್ವರನಾದ ಸಂವರಣನು ಮೃಗಯಾವಿಹಾರಕ್ಕಾಗಿ ತಪನವನಕ್ಕೆ ಹೊರಟು ಅಲ್ಲಿ ಸ್ಫಟಿಕಮಂಟಪದಲ್ಲಿದ್ದ ಭುವನಮೋಹಿನಿಯೂ ಸೂರ್ಯನ ಕುವರಿಯೂ ಆದ ತಪತಿಯನ್ನು ನೋಡಿ ಅವಳನ್ನು ಮೋಹಿಸಿ ಸೂರ್ಯನನ್ನು ಭಜಿಸಿ ಸೂರ್ಯಾನುಗ್ರಹಕ್ಕೆ ಪಾತ್ರನಾಗಿ ಅವಳನ್ನು ವರಿಸಿದ ಕಥೆಯು ಹೇಳಲ್ಪಟ್ಟಿದೆ. ಕವಿಯು ನಾಟಕಕ್ಕೆ ತಕ್ಕಂತೆ ಅಲ್ಲಲ್ಲ ಮೂಲ ಕಥೆಯನ್ನು ಮಾರ್ಪಡಿಸಿ ಹೇಳಿರುವನು.

ಸುಭದ್ರಾಧನಂಜಯ :—ಇದರಲ್ಲಿ ೫ ಅಂಕಗಳಿರುವುವು. ಕಥೆಯನ್ನು ಮಹಾಭಾರತದಿಂದಾರಿಸಿಕೊಂಡಿರುವನು. ಅರ್ಜುನನು ಸುಭದ್ರಾಹರಣಕ್ಕಾಗಿ ದ್ವಾರಾವತಿಯನ್ನು ಹೊಕ್ಕು ಸಂನ್ಯಾಸಿ ವೇಷದಿಂದ ಕೃಷ್ಣನ ಸತ್ಕಾರಸಂಧಾನಗಳ

* ತಪತೀಸಂವರಣ Sanskrit Introduction P. 5

ಮೂಲಕ ಮನೋಹಾರಿಣಿಯಾದ ಸುಭದ್ರೆಯ ಪರಿಚರ್ಯಕ್ಕೊಳಪಟ್ಟು ಪರಸ್ಪರಾನು ರಾಗಿಗಳಾಗಿ ಕಾಲಸಿರೀಕ್ಷಣೆಯನ್ನು ಮಾಡಿಕೊಂಡಿದ್ದು ಸುಭದ್ರೆಯೊಡನೆ ದ್ವಾರಾ ವತಿಯಿಂದ ಪಾರಾದ ಕಥೆಯು ವರ್ಣಿತವಾಗಿದೆ. ಕವಿಯು ಇದನ್ನೂ ನಾಟಕ ಸಂದರ್ಭಕ್ಕೆ ತಕ್ಕಂತೆ ಮಾರ್ಪಡಿಸಿ ಬರೆದಿರುವನು. 'ಶಿವರಾಮನೆಂಬುವನು' ತ್ಪಪತೀಸಂವರಣಕ್ಕೆ 'ವಿವರಣ' ಎಂಬ ವ್ಯಾಖ್ಯಾನವನ್ನೂ ಸುಭದ್ರಾಧನಂಜಯಕ್ಕೆ 'ವಿಚಾರತಿಲಕ' ಎಂಬ ವ್ಯಾಖ್ಯಾನವನ್ನೂ ಬರೆದಿರುವನು.

ಮಾದರಿಯ ಶ್ಲೋಕಗಳು. –

ಧನಂಜಯನು ಹೇಳುವ ಸುಭದ್ರೆಯ ಸೌಂದರ್ಯವರ್ಣನವು ಹೀಗಿರುವುದು: —

ಸೌಂದರ್ಯಂ ಸುಕುಮಾರತಾ ಮಧುರತಾ ಕಾಂತಿರ್ಮನೋಹಾರಿತಾ
ಶ್ರೀಮತ್ತಾ ಮಹಿಮೇತಿ ಸರ್ಗವಿಭವಾನ್ ಸರ್ವೇಷನಾರೀಗುಣಾನ್
ಏತಸ್ಯಾಮುಪಯುಜ್ಯ ದುರ್ವಿಧತಯಾ ದೀನಃ ಪರಾಮಾತ್ಮಭೂಃ
ಸ್ರಷ್ಟುಂ ವಾಂಛತಿ ಚೇತ್ ಕರೋತು ಪುನರಸ್ಯತ್ರೈವ ಭಿಕ್ಷಾಟನಂ ||
ಸುಭದ್ರಾ ಧನಂಜಯ ೧—೧೫

ವಿಶ್ವದ ಇತರ ಪದಾರ್ಥಗಳನ್ನು ಸುಂದರವಾಗಿ ಸೃಷ್ಟಿಸುವುದರಲ್ಲಿ ತನ್ನ ಅಪಾರ ಬುದ್ಧಿಕೌಶಲವೆಲ್ಲವನ್ನೂ ವೆಚ್ಚಮಾಡಿ ದೀನನಾಗಿ ಹೋಗಿರುವ ಬ್ರಹ್ಮನು ಸ್ವರ್ಗವಿಭವ ರುಚಿರರೂಪಿನ ಸುರಸುಂದರಿಯರ ಗುಣಗಳಾದ ಸೌಂದರ್ಯ, ಸೌಕುಮಾರ್ಯ, ಮಾಧುರ್ಯ, ಕಾಂತಿ, ಶ್ರೀಮತ್ವ, ಮಹಿಮಾ ಇವೇ ಮೊದಲಾದವುಗಳನ್ನು ಇವಳಲ್ಲಿ (ಸುಭದ್ರೆಯಲ್ಲಿ) ಉಪಯೋಗಿಸಿ ಇವಳನ್ನು ಸರ್ವಪೋಷಿಸಿಯು ನ್ನಾಗಿ ಅಥವಾ ಉತ್ಕೃಷ್ಟಗಳನ್ನಾಗಿ ಸೃಷ್ಟಿಸಲು ಅಪೇಕ್ಷಿಸಿದುದಾದರೆ ಪುನ- ಇಲ್ಲಿಯೇ ಇವಳಲ್ಲಿಯೇ ಬಂದು ಭಿಕ್ಷಾಟನವನ್ನು ಮಾಡಲಿ (ಎಂದರೆ ದಮಯಂತಿಯು ವಿಶ್ವಸೌಂದರ್ಯಸಾರದಖನಿಯೆಂದು ಭಾವವು.)

ಬಲರಾಮನನ್ನು ನೋಡಿದ ಸಭಾಸಾಲಿನ ಹೇಳಿಕೆ:---

ಅಂಘ್ರಿಕ್ಷೇಪೈರಜಸ್ರಂ ಧರಣಿಧರಭೃತಾಂ ಕಂಪಯನ್ ಭೂತಧಾತ್ರೀಂ
ನಿರ್ಯನ್ನೇತ್ರಾನಲಾರ್ಚಿಃ ಕಪಿಶಿತಭುವನಃ ಕಾಮಪಾಲಃ ಕ್ರೋಧೇನ
ಆಧಾವತ್ಯೇಷ ಭೀಮಭ್ರುಕುಟಿವಿಷಮಿತಸ್ನಿಗ್ಧವಕ್ತ್ರಃ ಸಮಸ್ತಂ
ಕ್ರುದ್ಧಃ ಸಂಹರ್ತುಕಾಮಃ ಸ್ವಯಮಿವ ಭಗವಾನ್ ಧೂರ್ಜಟಿರ್ಧೂತಶೀರ್ಷಃ|| ೪-೫

ಕೋಪದಿಂದ ನೆಲದಮೇಲೆ ಕಾಲುಗಳನ್ನಿಡುವುದರಿಂದ ಭೂಧರಗಳನುಳ್ಳ ಭೂಮಿಯನ್ನು ನಡುಗಿಸುವನಾಗಿ, ಕಣ್ಣುಗಳಿಂದ ಹೊರಡುತ್ತಿರುವ ಅಗ್ನಿಜ್ವಾಲೆಯಿಂದ ಭುವನವಂ ಕರಾಳವಾಯವನ್ನಾಗಿ ಎಂದರೆ (ಕಪ್ಪಾಗಿ ಮಾಡುವನಾಗಿ)

ಭಯಂಕರವಾದ ಹುಬ್ಬುಗಳಿಂದ ವಕ್ರವಾಗಿಮಾಡಲ್ಪಟ್ಟ ಮುಖದಿಂದ ಸಮಸ್ತವನ್ನೂ ನಿಮಿಷಾರ್ಧದಲ್ಲಿ ನಾಶಮಾಡಲಿಚ್ಛಿಸುವ ಕೋಪಾವೇಶಯುಕ್ತನಾದ ಪರಶಿವನೋ ಪಾದಿಯಲ್ಲಿರುವ ಬಲರಾಮನು ಇಗೋ! ತನ್ನ ಆಯುಧವನ್ನು ಕಂಪಿಸುವನಾಗಿ ಇತ್ತಕಡೆ ಓಡಿಬರುತ್ತಿರುವನು.

ಸುಭದ್ರಾಹರಣವನ್ನು ಮಾಡಿಕೊಂಡು ಹೋದ ಅರ್ಜುನನ್ನು ನೋಡಿ ಕೃತವರ್ಮನ ಹೇಳಿಕೆ:—

ಪಾತಾರೌ ಬಲಭದ್ರಕಂಸಮಥನೌ ಸೇಯಂ ಪುರೀ ದ್ವಾರಕಾ
ಪ್ರೋತ್ಸಿಕ್ತಾಃ ಪೃಥುಬಾಹುನಿರ್ಜಿತಜಗಚ್ಚಕ್ರಾ ವಯಂ ವೃಷ್ಣಯಃ
ತಾಂ ಭದ್ರಾಮಪಹೃತ್ಯ ಪಾಂಡುತನಯಃ ಕಷ್ಟಂ ಮೃಗಃ ಪ್ರಸ್ಥಿತೋ
ಭಿತ್ತ್ವಾ ದಿಗ್ಗಜಕುಂಭಮಂಡಲತಟೀಮಾಚ್ಛಿದ್ಯ ಮುಕ್ತಾವಳೀಂ ॥ ೪—೯

ಅಹಹ! ಏನಿದು ಸರ್ವನಾಶ!

ವಿಶ್ವಸಂರಕ್ಷಕರು ರಾಮಕೃಷ್ಣರು. ನಗರಿಯು ದ್ವಾರಕೀ ಸಕಲಲೋಕ ಗಳನ್ನು ಜಯಿಸಿ ಭುಜಗರ್ವದಿಂದ ಮತ್ತರಾದ ವೃಷ್ಣಿವಂಶಜರಾದ ನಾವೆಲ್ಲರೂ ಇದ್ದಾಗ್ಯೂ ಲಕ್ಷ್ಯಕ್ಕೆತಾರದೆ, ಆನೆಯ ಕುಂಭಸ್ಥಳವನ್ನು ಭೇದಿಸಿ ಅಲ್ಲಿರುವ ಮುಕ್ತಾ ಹಾರವನ್ನು ಬಲವಂತವಾಗಿ ಸೆಳೆದುಕೊಂಡು ಹೋಗುವ ಮೃಗೇಂದ್ರನಂತೆ ಪಾಂಡು ತನಯನಾದ ಆ ಅರ್ಜುನನು ಸುಭದ್ರೆಯನ್ನು ಅಪಹರಿಸಿಕೊಂಡು ಹೋದನಲ್ಲ!

ಅಹಹ! ಕಷ್ಟ! ಕಷ್ಟ!

ಯಮಃ ಶರಣಮಸ್ತು ಚೇತ್ತವ ನೃಶಂಸ! ದಿವ್ಯಾಶುಗೈಃ
ಪುರತ್ರಯಮಿವ ಕ್ಷಣಾತ್ಪುರರಿಪುಃ ಸ್ಫುರತ್ಪಾವಕೈಃ
ಪ್ರರುಷ್ಟಭುಜಗೇಶ್ವರಪ್ರತಿಮಚಾಪಟಂಕಾರಿಭಿ
ಸ್ತ್ವಯಾ ಸಹ ನ ಕಿಂ ಯಮಂ ಯಮಪುರಂಚ ಮಥ್ನಾಮ್ಯಹಂ ೫—೭.

ಎಲೈ! ನೃಶಂಸನೆ! ನಿನಗೆ ಯಮನು ರಕ್ಷಕನಾಗಿರುವನೆಂದು ತಿಳಿದುಕೊಂಡಿ ರುವೆಯೋ! ಹಾಗೆ? ಕೇಳು ಹಿಂದೆ ಪರಶಿವನು ದೇದೀಪ್ಯಮಾನವಾದ ಅಗ್ನಿಯೊಡ ಗೂಡಿದ ಬಾಣಂಗಳಿಂದ ಕ್ಷಣಾರ್ಧದಲ್ಲಿ ತ್ರಿಪುರಾಸುರನನ್ನೂ ಪುರತ್ರಯಂಗಳನ್ನೂ ನಾಶಮಾಡಿದನೋ ಹಾಗೆ ಕರಾಳ ಸರ್ಪರಾಜನಂತಿರುವ ಈ ಬಾಣಂಗಳಿಂದ ನಿನ್ನೊಡನೆ ಯಮನನ್ನೂ ಅಲ್ಲ ಯಮಪುರವನ್ನೂ ಸಹ ನಾಶಮಾಡಿಬಿಡುತ್ತೇನೆ. ತಿಳಿಯಿತೋ!

ಪ್ರಿಯಾವಿನಯ ವಿಯೋಗೇ ಪುತ್ರಿಕಾಂ ಪೇದವೃತ್ತೇ
ವಿಗಣಯಿತುಮಿಯತ್ತಾಂ ಕಃ ಪುಮಾನುತ್ಸಹೇತ

ಪ್ರಸವಗುಣವಿಯುಕ್ತಾಂ ಮನ್ಮಾನಸ ದೇವೀ
ಮಪಿ ಮಮ ಹೃದಿ ತಾಪೋ ಜೃಂಭತೇ ದುರ್ನಿವಾರ ||
ತಪತೀಸಂವರಣ ೧—೧೪.

ಅತ್ಯಂತ ಪ್ರೀತಿಪಾತ್ರರಾದ ಮಕ್ಕಳ ವಿರಹಕಾಲದಲ್ಲಿ ಉಂಟಾಗುವ ದುಃಖವನ್ನು ಇಷ್ಟೆಂದು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಅಂತಹುದರಲ್ಲ ಪತ್ನಿಯು ಸೌಜನ್ಯಾದಿಗುಣಂಗಳಿಂದ ಕೂಡಿದವಳಾಗಿದ್ದರೂ, ಪ್ರಸವಗುಣಗಳಿಂದ ಬಿಡಲ್ಪಟ್ಟವಳಾದರೆ ಎಂದರೆ ವಂಧ್ಯೆಯಾದರೆ ಅದಕ್ಕಿಂತಲೂ ಮಿಗಿಲಾದ ದುಃಖವು ಉಂಟಾಗುತ್ತದೆ.

ಇದರಲ್ಲಿ ವಾಮನಾವತಾರ ವರ್ಣನವು ಹೀಗಿರುವುದು:- -

ದೃತ ಷಾಢಂ ಶಶ್ವಚ್ಚ ಚ ಶಬಲಕೃಷ್ಣಾಜಿನವರಂ
ಶಿಖಾಬದ್ಧಗ್ರಂಥಿ ಕ್ರತುವರನುತಿವ್ಯಾಪೃತಮುಖಂ
ದಧಾನ್ರಂ ಹ್ಮಂ ಸೂತ್ರಂ ಕಟತಟಲುಠನ್ಮೌಂಜರಶನಾ
ಪ್ರಣೀಯೋ ವಂದೇಽಹಂ ವನಜನಯನಂ ವಾಮನವಪು || ೨ ೬

ದಂಡವನ್ನು ಧರಿಸಿದವನಾಗಿಯೂ ವಿಚಿತ್ರಬಣ್ಣದಿಂದ ಕೂಡಿರುವ ಕೃಷ್ಣಾಜಿನವನ್ನು ಧರಿಸಿದವನಾಗಿಯೂ ಗಂಟುಹಾಕಿದ ಕೇಶಪಾಶವುಳ್ಳವನಾಗಿಯೂ ಬಲಿಯಜ್ಞದ ಸಾಮಗಾನ ಸಮಯದಲ್ಲಿ ತಿರುಗಿಸಲ್ಪಟ್ಟ ಮುಖವುಳ್ಳವನಾಗಿಯೂ ಯಜ್ಞೋಪವೀತಧಾರಿಯಾಗಿಯೂ ಇರುವ ವಾಮನ ಮೂರ್ತಿಯನ್ನು ನಮಸ್ಕರಿಸುತ್ತೇನೆ.

ಯಂ ಪ್ರಾಯೇಣ ಪ್ರಥಯಿತುಮಲಂ ದಾರ ಮಂತಃಪುರಾಣಾಂ
ಯಂ ಕುರ್ವಂತಿ ವ್ಯಸನಸುಹೃದೋ ರಾಜಪುತ್ರಾಪರಾಧಾಃ
ರಾಜ್ಞೋ ಯಸ್ಯ ಸ್ವಯಮುಪನಯಾತ್ ಸಂಪ್ರವೃತ್ತ ಕಲಂಯಂ
ಸರ್ವೋದೋಷಃ ಸಚಿವಮನಸಾಂ ಘೂರ್ಣಮ್ಲೋ ವಿಪಾಕಃ

ಅಂತಃಪುರಸ್ತ್ರೀಯರ ಸ್ವಕಾರ್ಯಪರತೆಯು ಯಾವ ದೋಷವನ್ನು ಹೊಗಳುವುದೋ, ರಾಜಪುತ್ರರ ಸ್ವೇಚ್ಛಾವ್ಯಾಪಾರಗಳು ವ್ಯಸನ ಪೋಷಕಗಳಾಗುವುವೋ ಪ್ರಜಾರಕ್ಷಕನಾದ ರಾಜನ ದುರ್ನಯದಿಂದ ಅಥವಾ ಅಪನಯದಿಂದ ಯಾವ ದೋಷವು ಉಂಟಾಗುವುದೋ ಇವೆಲ್ಲವೂ ಮಂತ್ರಿಯಾದವನ ಅಬೋಧ ಪರಿಪಾಕವೆನ್ನಬೇಕಾಗುವುದು. ಎಂದರೆ ಈ ತಪ್ಪುಗಳೆಲ್ಲವೂ ಮಂತ್ರಿಯಮೇಲೆ ಆರೋಪಿತಗಳಾಗುವುವಾದುದರಿಂದ ಮಂತ್ರಿಯಾದವನು ಇಂತಹುವಕ್ಕೆ ಅವಕಾಶಕೊಡದೆ ಜಾಗರೂಕನಾಗಿರಬೇಕೆಂದು ಭಾವವು.

ಲಾಸ್ಯಾರಂಭಪ್ರವಿತತಶಿಖಾನರ್ತಯಂತಂ ಕಲಾಪಾ
ಕೇಕಾಪೂರಪ್ರಚಿತಕುಹರಾಂ ಕಂಧರಾಂ ದ್ರಾಘಯಂತಂ
ತ್ವಂ ಪ್ರೇಕ್ಷಸ್ವ ಪ್ರಣಯವಿವಶಃ ಪ್ರೇಮವಂತಂ ಮಯೂರಂ
ಮಾ ಘೋರ್ಮೇಘ ಕ್ಷಣಮಪಿ ರವೇರ್ಮಂಡಲಸ್ಯೋಪರೋಧೀಃ || ೫—೧೧

ಎಲೈ ಮೇಘವೆ! ಕ್ಷಣಕಾಲವಾದರೂ ರವಿಮಂಡಲವನ್ನು ಮರೆಮಾಡದಿರು. ಏಕೆಂದರೆ ತಮ್ಮ ಗರಿಗಳ (ಪಿಂಛ)ನ್ನು ಕೆದರಿಕೊಂಡು ಅಥವಾ ಪಸರಿಸಿಕೊಂಡು ನರ್ತನವನ್ನು ಮಾಡುವುಗಳಾಗಿ, ಕೇಕಾರವ ಕಾಲದಲ್ಲಿ ಹ್ರಸ್ವವಾಗಿರುವ ತಮ್ಮ ಕುತ್ತಿಗೆಗಳನ್ನು ದೀರ್ಘವಾಗಿನೀಟಿಕೊಂಡು ಧ್ವನಿಮಾಡುವವುಗಳಾಗಿರುವ ಮಯೂರಗಳನ್ನು ಪ್ರಣಯಪರವಶನಾಗಿ ನೋಡುತ್ತಿರು. ನಿನಗೆ ಅಭೀಷ್ಟದರ್ಶನೀಯ ವಸ್ತುವು ಎದುರಿನಲ್ಲಿರುವಾಗ ಇತರರನ್ನೇಕೆ ತಡೆಯಲು ಪ್ರಯತ್ನಿಸುವೆ! ಇದು ಸರ್ವಥಾ ಸರಿಯಲ್ಲ. ಆದುದರಿಂದ ರವಿಮಂಡಲೋಪರೋಧಿಯಾಗದಿರು.



## ಶ್ರೀಹರ್ಷ

ಇವನ ತಂದೆಯು ಹೀರನೆಂದೂ, ತಾಯಿಯ ಹೆಸರು ಮಾಮಲ್ಲದೇವಿಯೆಂದೂ ಇವನ ಗ್ರಂಥದ ಪ್ರತಿಸರ್ಗಾಂತ್ಯದಲ್ಲಿ ಹೇಳಿಕೊಂಡಿರುವ:—

ಶ್ರೀಹರ್ಷಂ ಕವಿರಾಜರಾಜಿಮುಕುಟಾಲಂಕಾರ**ಹೀರ**ಸ್ಸುತಂ
ಶ್ರೀಹೀರಸ್ಸುಷುವೇ ಜಿತೇಂದ್ರಿಯಚಯಂ ಮಾಮಲ್ಲದೇವೀಚ ಯಂ
ತಚ್ಚಿಂತಾಮಣಿಮಂತ್ರಚಿಂತನಫಲೇ ಶೃಂಗಾರಭಂಗ್ಯಾ ಮಹಾ
ಕಾವ್ಯೇ ಚಾರುಣಿ ನೈಷಧೀಯಚರಿತೇ .. .. ............ ...||

ಎಂಬ ಶ್ಲೋಕದಿಂದ ತಿಳಿಯಬರುತ್ತದೆ

**ಕಾಲ:**—ಇವನು ಕನೋಜನಲ್ಲಿದ್ದ ಜಯಚಂದನ ಆಸ್ಥಾನಪಂಡಿತನು. ಜಯಚಂದ್ರ ಅಥವಾ ಜಯಂತಚಂದ್ರನು ಕ್ರಿ. ಶ. ೧೧೮೭ರಲ್ಲಿ ರಾಜ್ಯಭಾರಮಾಡುತ್ತಿದ್ದುದಾಗಿ ಈ ಕೆಳಗಿನ ದಾನಪತ್ರದಿಂದ ತಿಳಿಯಬರುತ್ತದೆ.

“... ................ .. ಮಹಾರಾಜಾಧಿರಾಜ ಪರಮೇಶ್ವರ ನಿಜಭುಜೋಪಾರ್ಜಿತಕಾನ್ಯಕುಬ್ಜಾಧಿಪತ್ಯ ಶ್ರೀಚಂದ್ರದೇವ ಪಾದಾನುಧ್ಯಾತ ಪರಮಭಟ್ಟಾರಕ ..... . ...ಶ್ರೀಮದನಪಾಲ ದೇವಪಾದಾನುಧ್ಯಾತ......... ಶ್ರೀಗೋವಿಂದಚಂದ್ರದೇವಪಾದಾನುಧ್ಯಾತ...... ಶ್ರೀಮಜ್ಜಯಚಂದ್ರೋ ವಿಜಯೀ.........ಯಥೋಪರಿಲಿಖಿತಗ್ರಾಮಸ್ಸಗಿರಿಹನವಿಧಾನಃ ತ್ರಿಚತ್ವಾರಿಂಶದಧಿಕದ್ವಾದಶಶತಸಂವತ್ಸರೇ ಆಷಾಢೇಮಾಸಿ ಶುಕ್ಲಪಕ್ಷೇ ಸಪ್ತ

ವ್ಯಾಂತಿಥೌ ರವಿದಿನೇ (ಸಂ. ೧೨೪೩ ಕ್ರಿ. ಶ. ೧೧೮೭) ಅದ್ಯೇಹ ಶ್ರೀಮದ್ವಾರಾಣಸ್ಯಾಂಗಂಗಾಯಾಂ ಸ್ನಾತ್ವಾ ಓಷಧಿಪತಿ ಶಕಲಶೇಖರಂ ಸಮಭ್ಯರ್ಚ್ಯ............ಭಾರದ್ವಾಜಗೋತ್ರಾಯ ಡೋಡರಾಉತ ಶ್ರೀ ಅಣಂಗಾಯ ಚಂದ್ರಾರ್ಕಂ ಯಾವಚ್ಛಾಸನೀಕೃತ್ಯಪ್ರದತ್ತ ಇತಿ ಮತ್ವಾ ..........ಸಮಸ್ತದಾಯದಾಜ್ಞಾವಿಧೇಯಿಭೂಯದಾಸ್ಯಥ ಇತಿ........

ಯಾಸೀದದತ್ತಾಸಿಪುರಾನರೇಂದ್ರೈರ್ದಾನಾನಿ ಧರ್ಮಾರ್ಥಯಶಸ್ಕರಾಣಿ
ನಿರ್ಮಾಲ್ಯವಾಂತಪ್ರತಿಮಾನಿತಾನಿಕೋನಾಮಸಾಧುಃ ಪುನರಾದದೀತ ||

ಎಂದಿರುವುದು.

ಜಯಚಂದ್ರನ ದಾನಪತ್ರದ ಕಾಲವು ಸಂ. ೧೨೪೫ ಅಥವಾ ಕ್ರಿ ಶ. ೧೧೮೯ ರಲ್ಲಿ ಎಂದಿರುವುದು. ಕನ್ಯಕುಬ್ಜಾಧೀಶ್ವರರಲ್ಲಿ ಬಹು ಸಮರ್ಥನಾದ ಈ ಜಯಚಂದ್ರನು ಕ್ರಿ. ಶ. ೧೧೯೪ರಲ್ಲಿ ಯವನರನ್ನು ತನ್ನ ರಾಜ್ಯದಿಂದ ಓಡಿಸಿದುದಾಗಿ ಹಿಂದೂ ಚರಿತ್ರೆಯು ಹೇಳುತ್ತದೆ. ಇದರಿಂದ ರಾಜನಾದ ಜಯಚಂದ್ರನು ಕ್ರಿ. ಶ. ೧೧೬೮-೧೧೯೪ರವರೆಗೆ ರಾಜ್ಯಭಾರಮಾಡಿದುದಾಗಿ ಗೊತ್ತುಮಾಡಬಹುದಾಗಿದೆ. ಈ ಕಾರಣಗಳಿಂದ ಶ್ರೀಹರ್ಷನು ಕ್ರಿ. ಶ. ೧೨ನೆಯ ಶತಮಾನದವನೆಂಬುದು ಸ್ಪಷ್ಟವಾಗಿದೆ.

**ಗ್ರಂಥಗಳು:**— (೧) ನೈಷಧೀಯಚರಿತ (೨) ಖಂಡನಖಾದ್ಯ (೩) ಅರ್ಣವವರ್ಣನ (೪) ಗೌಡೋರ್ವೀಕುಲಪ್ರಶಸ್ತಿ ಮತ್ತು ಚಂಡೀಪ್ರಶಸ್ತಿ (೫) ಶಿವಭಕ್ತಿಸಿದ್ಧಿ (೬) ಸಾಹಸಾಂಕಚರಿತಚಂಪೂ.

**ನೈಷಧೀಯಚರಿತ:**—ಇದು ಮಹಾಕಾವ್ಯ. ಇದರಲ್ಲಿ ೨೨ ಸರ್ಗಗಳಿರುವುವು. ಕೊನೆಯಲ್ಲಿ ಗ್ರಂಥಸಮಾಪ್ತವೆಂದು ಹೇಳದೆ ಇರುವುದರಿಂದ ಇನ್ನೂ ಇರಬಹುದೆಂಬ ಸಂಶಯವಾಗುತ್ತದೆ. ೬೦ ಸರ್ಗಗಳಿಂದ ೧೨೦ ಸರ್ಗಗಳಿರಬೇಕೆಂದು ಕೆಲವರ ತರ್ಕವಿರುವುದು. ಆದರೆ ಇದು ಶುಷ್ಕತರ್ಕವೆಂದುತೋರುತ್ತದೆ. "ನೈಷಧಂವಿದ್ವದೌಷಧಂ" ಎಂಬಂತೆ ಕಾವ್ಯವು ಕಠಿನವಾಗಿರುವುದು. ಇದರಲ್ಲಿ ನಿಷಧರಾಜನಾದ ನಳನಿಗೂ ವಿದರ್ಭನಗರದ ರಾಜಕನ್ಯೆಯಾದ ದಮಯಂತಿಗೂನಡೆದ ವಿವಾಹ ವಿಚಾರ, ಹಂಸನನ್ನು ದೂತನನ್ನಾಗಿ ಕಳುಹಿಸಿಕೊಡುವಿಕೆ ಪ್ರತಿಸಂದೇಶ, ತಾನಾಗಿನಳನನ್ನುವರಿಸುವಿಕೆ, ದಮಯಂತಿಯವಿರಹ ರಾಜಕುವರರ ವರ್ಣನ, ದಮಯಂತೀವರ್ಣನ, ದಮಯಂತೀ ಸ್ವಯಂವರ, ನಳನರಾಜ್ಯಪದ್ಧತಿ, ನಳನಕರ್ಮಶತ್ವ. ಇವೇ ಮೊದಲಾದವು ಬಹುಚತುರತೆಯಿಂದ ವರ್ಣಿತವಾಗಿದೆ. ಮಹಾಕಾವ್ಯಾನುಗುಣವಾದ ನದೀಕಾಸಾರೋಪವನಾದಿ ವರ್ಣನಗಳೂ, ಗಿರಿ

The Indian Antiquary 15·11 ಪ್ರಾಚೀನಲೇಖಮಾಲಾ ೨೩

ವರ್ಣನ, ಪ್ರಾಸಾದಾದಿವರ್ಣನಗಳೂ, ಚೆಲುವಾಗಿವೆ. ಈ ಕವಿಯ ವಿಚಾರ ವಾಗಿ ಜನಜನಿತಕಥೆಯೊಂದಿರುವುದು. ಇವನ ತಂದೆಯಾದ ಹೀರನು ಮತ್ತೊಬ್ಬ ಕವಿಯಿಂದ ವಾದದಲ್ಲಿ ಪರಾಜಿತನಾಗಿ ತಿರಸ್ಕರಿಸಲ್ಪಟ್ಟು ರಾಜಾಶ್ರಯತ್ಯಕ್ತನಾಗಿ ಕೆಲವುಕಾಲಾನಂತರ ಮುಗ್ಗುಶಯ್ಯಾಗತನಾಗಿ ಉಳಿವು ಇಲ್ಲದುದನ್ನು ಕಂಡು ತನ್ನ ಮಗನಾದ ಹರ್ಷನನ್ನು ಸಮೀಪಕ್ಕೆ ಕರೆದು ಮಗನೆ! ನೀನು ಹೇಗಾದರೂ ವಿದ್ಯೆಯನಾರ್ಜಿಸಿ ನನ್ನನ್ನು ಪರಾಜಿತನನ್ನಾಗಿಮಾಡಿದ ಆ ಕವಿಯನ್ನು ವಾದದಲ್ಲಿ ಗೆದ್ದುದಾದರೆ ನೀನು ಪಿತೃಋಣದಿಂದ ಮುಕ್ತನಾಗುವೆ ಎಂದು ಹೇಳಿ ಪ್ರೀತಿಪೂರ್ವಿಯನ್ನು ಹೊಂದಿದನು. ಹರ್ಷನು ಕುಟುಂಬ ಭಾರವನ್ನು ತನ್ನ ಬಂಧುಗಳಲ್ಲೊಪ್ಪಿಸಿ ಪಿತೃವಿನ ಆಜ್ಞಾಪಾಲನಕ್ಕಾಗಿ ವಿದ್ಯಾರ್ಜನೆಯನ್ನುಮಾಡಲು ಹೊರಟು ದೇಶದೇಶಗಳನ್ನು ಸುತ್ತುತ್ತಾ ಗಂಗಾತೀರವಾಸಿಯಾದ ಯೋಗೀಶ್ವರನಬಳಿಸಾರ್ದು ಶಿಶ್ರೂಷೆಯಿಂದವನನ್ನು ಮೆಚ್ಚಿಸಿ ಅಪ್ರತಿಹತವಾದ ಕವಿತಾಧೋರಣೆಯನ್ನೂ ಚಿಂತಾಮಣಿ ಎಂಬ ಮಂತ್ರಸಿದ್ಧಿಯನ್ನೂ ಹೊಂದಿ ಪುನಃ ರಾಜಸಭೆಗೆಬಂದು ತನ್ನ ತಂದೆಯನ್ನು ಪರಾಜಿತನನ್ನಾಗಿಮಾಡಿದ ಕವಿಯನ್ನುವಾದದಲ್ಲಿಸೋಲಿಸಿ ಪ್ರಶಸ್ತಿಯನ್ನು ಹೊಂದಿ ಮಹಾರಾಜನಿಂದ ಬಹುಮಾನಿತನಾಗಿ ರಾಜನ ಕೋರಿಕೆಯಂತೆ ಇಂತಹ ಲೋಕೋತ್ತರವಾದ ಕಾವ್ಯವನ್ನು ಬರೆದನು. ಕಾಶ್ಮೀರದ ಸರಸ್ವತೀ ಪೀಠದವರು ಇವನಿಗೆ 'ನರಭಾರತಿ'ಎಂಬ ಮೆಚ್ಚುಗೆಯನಿತ್ತರು. 'ಕಲಾಭಾರತಿ'ಯೆಂದು ಹೆಸರುಗೊಂಡಿದ್ದ ರಾಜ್ಞಿಯು ಅಸೂಯೆಯಿಂದ ಇವನನ್ನು ಅಪಮಾನಪಡಿಸಬೇಕೆಂದಿರುವಲ್ಲಿ ಇವನು 'ಸಂಸಾರವಿರಕ್ತನಾಗಿ ಆಶ್ರಮ ಸ್ವೀಕಾರಮಾಡಿ ಶೇಷಾಯುಸ್ಸನ್ನು ಕಳೆಯುವುದಕ್ಕಾಗಿ ಗಂಗಾತಟವನಾಶ್ರಯಿಸಿದನು. ಈ ಕಾವ್ಯದಿಂದ ಶೃಂಗಾರ ರಸಕ್ಕೆರಡು ಶ್ಲೋಕಗಳನ್ನು ಬರೆಯುವೆವು.

ಅಧರಂ ಕಿಲ ಬಿಂಬನಾಮಕಂ ಫಲಮಸ್ಮಾದಿತಿ ಭವ್ಯಮನ್ವಯಂ
ಲಭತೇಽಧರಬಿಂಬಮಿತ್ಯದಃ ಪದಮಸ್ಯಾ ರದನಚ್ಛದಂವದತ್ || ೨–೨೪
ಶಿರೀಷಕೋಶಾದಪಿ ಕೋಮಲಾಯಾ
ವೇಧಾ ವಿಧಾಯಾಂಗಮಶೇಷಮಸ್ಯಾಃ
ಪ್ರಾಪ್ತಪ್ರಕರ್ಷಸ್ಸುಕುಮಾರಸರ್ಗೇ
ಸಮಾಪಯದ್ಭಾಜಿ ಮೃದುತ್ವಮುದ್ರಾಂ || ೭–೪೭

ಈ ಕಾವ್ಯವು ಶೃಂಗಾರರಸ ಪ್ರಧಾನವಾಗಿರುವುದು. ೧೭ನೆಯ ಸರ್ಗದಲ್ಲಿ ನೈಯ್ಯಾಯಕ, ಮೀಮಾಂಸಕ, ಪೌರಾಣಿಕಸ್ಮೃತಿ ಪ್ರಾಮಾಣಿಕಾದಿ ಸರ್ವಮತ ಖಂಡನವನ್ನು ಹೇಳಿ ಸರ್ವವೇದಶಾಸ್ತ್ರಮತವಿದ್ಯಾಪ್ರಾಮಾಣ್ಯವು ಹೇಳಲ್ಪಟ್ಟಿದೆ. ೧೧ನೆಯ ಸರ್ಗವನ್ನೋದುವುದರಿಂದ ಇವನ ತರ್ಕವಿದ್ಯಾಪ್ರಾವೀಣ್ಯವು ಕಂಡು ಬರುವುದು.

ಇದರ ಕೆಲವು ಶ್ಲೋಕಗಳು:—

ಶ್ವಃ ಶ್ವಃ ಪ್ರಾಣಪ್ರಯಾಣೇಽಪಿ ನ ಸ್ಮರಂತಿ ಸ್ಮರದ್ವಿಷಃ
ಮಗ್ನಾಃ ಕುಟುಂಬಪಂಕಾಲೀ ಕಾಲಿಕಾ ಯದುಪಾಸಿನಃ || ೧೭—೩೦

ಮೋಹಕ್ಕೆ ಅಧೀನರಾಗಿರತಕ್ಕವರು [ಎಂದರೆ ಸದುಪದೇಶದೂರರೂ, ಸುಜ್ಞಾನರಹಿತರೂ, ಶಿಶುಪ್ರಾಯದಂತಿರುವವರು] ಪುತ್ರಕಳತ್ರಾದಿ ರೂಪವಾದ ಈ ಸಂಸಾರಪಂಕದಲ್ಲ ಸಿಕ್ಕಿಕೊಂಡು ಕೋಟಲೆಯನ್ನನುಭವಿಸುತ್ತಿದ್ದರೂ ಹಾಗೆ ಅನುಭವಿಸಿಕೊಂಡಾದರೂ, ಮೃತ್ಯುಶಯ್ಯೆಯಲ್ಲಿದ್ದರೂ ದಾರಾಪುತ್ರಾದಿಗಳ ಕ್ಷೇಮ ಚಿಂತನದಲ್ಲಿರುವುದು ಹೊರತು ಸಂಸಾರತಾರಕನಾದ ಈಶ್ವರನನ್ನು ಮಾತ್ರ ಖಂಡಿತವಾಗಿಯೂ ಧ್ಯಾನಿಸರು.

ಅಗ್ನಿಹೋತ್ರಂ ತ್ರಯೀತಂತ್ರಂ ತ್ರಿದಂಡಂ ಭಸ್ಮಪುಂಡ್ರಕಂ
ಪ್ರಜ್ಞಾಪೌರುಷನಿಃಸ್ವಾನಾಂ ಜೀವೋ ಜಲ್ಪತಿ ಜೀವಿಕಾ || ೧೭—೩೯

ಸಾಯಂಪ್ರಾತರ್ಹೋಮರೂಪವಾದ ಅಗ್ನಿಹೋತ್ರ ವೇದಗಳೂ ಮತ್ತು ಮೀಮಾಂಸಾ ಶಾಸ್ತ್ರವೂ ಅಥವಾ ವೇದತ್ರಯಕ್ಕೆ ಸಂಬಂಧಿಸುವುದಾದ ವೇದವಿಹಿತ ಕರ್ಮಗಳೇ ಮೊದಲಾದವುಗಳನ್ನು ಜ್ಞಾನಬಲದಿಂದಲೂ, ಸ್ವಸಾಮರ್ಥ್ಯದಿಂದಲೂ ಅರಿತುಕೊಳ್ಳದವರು ಹೂಡಿರುವುದಾದ ಪಾಶುಪತವ್ರತ, ಭಸ್ಮ, ತ್ರಿಪುಂಡ್ರಧಾರಣ ಇವೇ ಮೊದಲಾದವು ಚೌರ್ಯದಿಂದಲೂ, ವಂಚನೆಯಿಂದಲೂ, ಬಲಾತ್ಕಾರ ದಿಂದಲೂ ಲೋಕವನ್ನು ವಂಚಿಸಿ ಅವರಿಂದ ಧನಾರ್ಜನೆಯನ್ನು ಮಾಡುವುದಕ್ಕೆ ಹೊರತು ಬೇರೆ ಅಲ್ಲ.

ಅಕ್ರೋಧಂ ಶಿಕ್ಷಯಂತ್ಯನ್ಯಾನ್ ಕ್ರೋಧನಾ ಯೇ ತಪೋಧನಾಃ
ನಿರ್ಧನಾಸ್ತೇ ಧನಾಯೈವ ಧಾತುವಾದೋಪದೇಶಿನಃ || ೧೭—೪೦

ನಿಷ್ಕಾರಣವಾಗಿ ಕೋಪಮಾಡಿಕೊಂಡು ತಮ್ಮ ತಪಸ್ಸರ್ವಸ್ವವನ್ನು ಕಳೆದು ಕೊಳ್ಳುವ ಋಷಿಶ್ರೇಷ್ಠರು [ದುರ್ವಾಸ ಪ್ರಭೃತಿಗಳು] ಕೋಪಮಾಡಿಕೊಳ್ಳಬಾರ ದಾಗಿ ಇತರರಿಗೆ ಉಪದೇಶಮಾಡುವಂತೆ ಧನಹೀನರು ಧನಾರ್ಜನೆಯ ಸಲುವಾಗಿ ಇತರರಿಗೆ ಚಿನ್ನ ಬೆಳ್ಳಿ ಮುಂತಾದುವುಗಳನ್ನು ಮಾಡುವ ವಿಧಾನವನ್ನು ಕಲಿಸಿ ಧನಿಕರನ್ನಾಗಿ ಮಾಡುವುದಾಗಿ ಹೇಳಿ ಅವರನ್ನು ವಂಚಿಸಿ ಧನಾರ್ಜನೆಯನ್ನು ಮಾಡುವರಲ್ಲವೆ !

ವೇದೈಸ್ತದ್ದ್ವೇಷಿಭಿಸ್ತದ್ವಿಸ್ತರಂ ಮತಶಕ್ತೈಃ ಕೃತಂ
ಪರಂ ಕಸ್ತೇ ಪರಂ ಮಾಚಾ ಲೋಕಂ ಲೋಕಾಯತ ತ್ಯಜೇತ್ || ೧೭-೯೨

ಎಲವೋ! ಲೋಕಾಯತನೆ! [ಎಂದರೆ ನಾಸ್ತಿಕನೆ] ಋಗ್ವೇದಾದಿ ಚತುರ್ವೇದಗಳಿಂದ ಸ್ಥಿರೀಕೃತವಾದುದಾಗಿ ಸ್ಮೃತಿಪುರಾಣಾದಿಗಳಿಂದ, ಮೀಮಾಂಸಾದಿ ಶಾಸ್ತ್ರಂಗಳಿಂದ, ಚರ್ಚೆವಿಚರ್ಚೆಗಳಿಂದ ಸಿದ್ಧಾಂತಗೊಳಿಸಲ್ಪಟ್ಟುದಾಗಿ ಸ್ವರ್ಗಾದಿ ಲಕ್ಷಣಗಳನ್ನೂ, ಸದೀಶ್ವರತತ್ವವನ್ನರಿತ ಜನರು ನಿನ್ನ ನಿರ್ಯುಕ್ತಿಕನಾದ ವಚನಗಳಿಗೆ ಬೇಗಗೊಂಡು ಎಲ್ಲವನ್ನೂ ಬಿಟ್ಟುಬಿಡುವರೆ! ಎಂದಿಗೂ ಇಲ್ಲ.

ನೈಷಧಕಾವ್ಯಕ್ಕೆ ಚಂದು ಎಂಬವನು "ನೈಷಧದೀಪಿಕಾ" ಎಂಬ ವ್ಯಾಖ್ಯಾನವನ್ನು ಬರೆದಿರುವನು.

(೨) '**ಖಂಡನಖಾದ್ಯ**' ಎಂಬುದು ಆಸ್ಥಾನಕವಿಯಾದ ಉದಯನನ ಕಾವ್ಯಖಂಡನರೂಪವಾಗಿರುವುದು. **ಗೌಡೋರ್ವೀಕುಲಪ್ರಶಸ್ತಿ** ಮತ್ತು **ಚಂಡೀಪ್ರಶಸ್ತಿ** ಇವೆರಡನ್ನೂ ತನ್ನ ಆಶ್ರಯದಾತರಾದ ರಾಜರವರ್ಣನಗಳಿಂದ ಕೂಡಿರುವುದು. **ಅರ್ಣವವರ್ಣನವು** ಹೆಸರಿಗೆತಕ್ಕಂತೆ ಸಮುದ್ರವರ್ಣನವಿರುವುದು. **ಶಿವಭಕ್ತಿಸಿದ್ಧಿ** ಯೆಂಬುದು ಶಿವಪೂಜಾ ಮತಗ್ರಂಥ. ನಾಪಸಾಂಕಚರಿತವೆಂಬುದು ಇದೇ ಹೆಸರಿನ ಗೌಡರಾಜನ ಜೀವನಚರಿತವುಳ್ಳ ಚಂಪೂಗ್ರಂಥವಾಗಿರುವುದು.



## ವತ್ಸರಾಜ.[1]

ಇವನು ಕಲಿಂಜರದರಾಜನಾದ ಪರಮರ್ಡಿದೇವನ ಬಳಿ ಅಮಾತ್ಯನಾಗಿದ್ದನು. ಈ ವಿಚಾರವು ಇವನು ಬರೆದಿರುವ ವ್ಯಾಯೋಗಾರಂಭದಲ್ಲಿ,

**ಸ್ಥಾಪಕನು:**—ಭಾವ! ಶ್ರೀಪರಮರ್ದಿಕಪಾದಪದ್ಮೋಪಜೀವಿನಃ ಕಾಲಿಂಜರಾಧಿಪತಿ ತ್ರೈಲೋಕ್ಯದೇವ **ಕವಿವತ್ಸರಾಜವಿರಚಿತ** ಎಂದು ಹೇಳಿಕೊಂಡಿರುವುದರಿಂದ ವ್ಯಕ್ತಪಡುತ್ತದೆ.

**ಕಾಲ:**—ಪರಮರ್ಡಿದೇವನು ಕಲಿಂಜರವನ್ನು ಕ್ರಿ. ಶ. ೧೧೬೩ ರಿಂದ ೧೨೦೩ ರ ವರೆಗೆ ಆಳಿದನು. ಇವನ ಅನಂತರ ಇವನ ಮಗ ತ್ರೈಲೋಕ್ಯವರ್ಮದೇವನು ಕಲಿಂಜರದ ಗಾದಿಯನ್ನೇರಿದನು. ವತ್ಸರಾಜನು ಪರಮರ್ಡಿದೇವನ ಬಳಿ ಅಮಾತ್ಯನಾಗಿದ್ದುದರಿಂದ ಇವನು ೧೨ನೆಯ ಶತಮಾನದ ಉತ್ತರಾರ್ಧದಲ್ಲಿದ್ದವನೆಂದು ಸ್ಪಷ್ಟವಾಗುತ್ತದೆ.

---

[1] ವಿ. ಸಂ ೧೧೫೪ ಅಥವಾ ೧೧೯೭ರಲ್ಲಿ ಕೀರ್ತಿವರ್ಮದೇವನ ಸಚಿವನೂ, ಮಹೀಧರನ ಮಗನೂ ಆದ ವತ್ಸರಾಜನೂ, ವಿ ಸಂ ೧೨೩೭ ಅದರೆ ಕ್ರಿ. ಶ ೧೧೯೦ರಲ್ಲಿ ಆಳಿದ ಪರಮರಡಿಯ ಸಚಿವನೂ ಸಲ್ಲಕ್ಷಣನ ಅಜ್ಜನೂ ಆದ ವತ್ಸರಾಜನೂ ಇವನಿಂದ ಭಿನ್ನರು. ೧೧೯೦ರಲ್ಲಿ ಆಳಿದ ಪರಮರಡಿಯು ಯಾರೆಂಬುದು ತಿಳಿಯದು.

**ಗ್ರಂಥಗಳು**: –(೧) ಕಿರಾತಾರ್ಜುನೀಯ—ವ್ಯಾಯೋಗ
(೨) ಕರ್ಪೂರಚರಿತ—ಭಾಣ
(೩) ರುಕ್ಮಿಣೀಪರಿಣಯ— ಈಹಾಮೃಗ
(೪) ತ್ರಿಪುರದಾಹ—ಡಿಮ
(೫) ಹಾಸ್ಯಚೂಡಾಮಣಿ—ಪ್ರಹಸನ
(೬) ಸಮುದ್ರಮಥನ –ಸಮವಕಾರ

ಇವುಗಳಲ್ಲಿ ಮೊದಲನೆಯದು ಒಂದಂಕವುಳ್ಳದ್ದಾಗಿ ಕಿರಾತಾರ್ಜುನೀಯ ಕಾವ್ಯಕಥೆಯನ್ನು ಸ್ಪಷ್ಟಗೊಳಿಸುವುದಾಗಿರುವುದು. ಅರ್ಜುನನ ತಪಸ್ಸು, ಕಿರಾತ ನೇಷಧಾರಿಯಾದ ಶಿವನಿಗೂ ಅರ್ಜುನನಿಗೂ ನಡೆದ ಯುದ್ಧ, ಮಹಾಸ್ತ್ರಪ್ರಾಪ್ತಿ ಇವು ವರ್ಣಿತವಾಗಿರುವುವು.

ಎರಡನೆಯದು ಸಿಥಸಿಥವಾದ ಶೃಂಗಾರ, ಸರಸ, ಹಾಸ್ಯಗಳಿಂದ ಕೂಡಿ ಒಬ್ಬ ವೇಶ್ಯಾಂಗನೆಗೂ ದ್ಯೂತಕಾರನಿಗೂ ನಡೆದ ಪ್ರಣಯಕೇಳಿಯ ರೂಪವಾಗಿರುವುದು.

ಮೂರನೆಯದು ರುಕ್ಮಿಣೀಹರಣ, ಶಿಶುಪಾಲನ ಪರಾಭವ ವರ್ಣನೆ ಯುಳ್ಳದಾಗಿ ೪ ಅಂಕಗಳಿಂದ ಕೂಡಿರುವುದು.

ನಾಲ್ಕನೆಯದು ಶಿವನು ತ್ರಿಪುರಾಸುರನನ್ನು ಸಂಹರಿಸಿ ತ್ರಿಪುರವನ್ನು ದಹಿಸಿದ ಕಥೆಯು ೪ ಅಂಕಗಳಲ್ಲಿ ಹಂಚಲ್ಪಟ್ಟಿರುವುದು.

ಐದನೆಯದು ಭೂಮಿಯಲ್ಲಿ ಅಡಕವಾಗಿರುವ ನಿಧಿನಿಕ್ಷೇಪಗಳನ್ನು ಕಂಡು ಹಿಡಿಯುವಿಕೆ. ಕಳುವಾಗಿಹೋದ ವಸ್ತುಗಳನ್ನು ತರಿಸಿಕೊಡುವಿಕೆ ಇವೇ ಮೊದಲಾದ ಕೇವಲ ವಿದ್ಯೆಗಳನ್ನು ಒಲ್ಲುದಾಗಿ ನಟಿಸುತ್ತಿರುವ ಭಾಗವತ ಸಂಪ್ರದಾಯದ ಆಚಾರ್ಯನೊಬ್ಬನ ಅವಹೇಳನವು ಸುರಸವಾಗಿ ಒಂದಂಕದಲ್ಲಿ ವರ್ಣಿತವಾಗಿರುವುದು.

ಆರನೇಯದರಲ್ಲಿ ಪುರಾಣಪ್ರಸಿದ್ಧವಾದ ಸಮುದ್ರಮಥನ ವಿಚಾರ ಕಥೆಯು ಹೇಳಿರುವುದು. ಸಂಸ್ಕೃತಭಾಷೆಯಲ್ಲಿ ವ್ಯಾಯೋಗ, ಭಾಣ, ಪ್ರಹಸನಗಳು ಅಪರೂಪವಲ್ಲ. ಆದರೆ ಡಿಮ, ಈಹಾಮೃಗ, ಸಮವಕಾರವೆಂಬ ರೂಪಕಭೇದಗಳ ಹೆಸರನ್ನು ಅನೇಕರು ಕೇಳಿ ತೃಪ್ತರಾಗಿರುವರಲ್ಲದೆ ಸಲಕ್ಷಣವಾಗಿ ತಿಳಿದಿರರು. ಗ್ರಂಥಕಾರನು ಪುರಾಣಕಥೆಗಳಿಂದಲೂ, ನಿಜವಾಗಿಯೂ ನಡೆದುದಾದ ವಿಷಯಗಳಿಂದಲೂ ಕಥಾವಸ್ತುವನ್ನಾರಿಸಿಕೊಂಡು ಲಕ್ಷಣವಿಶಾರದನಂತೆ, ಕವಿಸಮಯಕ್ಕೆ ತಕ್ಕಂತೆ ಮಾರ್ಪಡಿಸಿಕೊಂಡು ಇವುಗಳನ್ನು ಬರೆದಿರುವನು. ವತ್ಸರಾಜನ ಒಂದೇ ಒಂದು ಶ್ಲೋಕವು ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿ ಮಾತ್ರ ಕಂಡುಬರುವುದು.

ಇವನ ಶೈಲಿಯು ಸುಲಭವಾಗಿಯೂ ಗಂಭೀರವಾಗಿಯೂ ಪ್ರೌಢವಾಗಿಯೂ ಇರುವುದು. ಕಿರಾತಾರ್ಜುನೀಯ ವ್ಯಾಯೋಗವು ಮಾತ್ರ ತ್ರೈಲೋಕ್ಯವರ್ಮದೇವನ ಕಾಲದಲ್ಲಿ ಅಭಿನಯಿಸಲ್ಪಟ್ಟುದಾಗಿಯೂ ಉಳಿದವು ಇವನ ತಂದೆ ಪರಮರ್ಡಿ ದೇವನ ಆಳ್ವಿಕೆಯಲ್ಲಿ ಅಭಿನಯಿಸಲ್ಪಟ್ಟುದಾಗಿಯೂ ಹೇಳಿದೆ.



## ರಾ ಮ ಚ ೦ ದ್ರ ಸೂ ರಿ

ಇವನು ಜೈನಮತಾನುಯಾಯಿ. ಇವನ ತಾಯಿತಂದೆಗಳಾರೆಂಬುದಾಗಲಿ ಜನ್ಮಸ್ಥಳವಾವುದೆಂಬುದಾಗಲಿ ತಿಳಿಯಹೇಳುವ ಸಾಧನಗಳೊಂದೂ ದೊರೆಯವು.

“ದತ್ತಾಃ ಶ್ರೀಮದಾಚಾರ್ಯ ಹೇಮಚಂದ್ರಸ್ಯ ಶಿಷ್ಯೇಣ ರಾಮಚಂದ್ರೇಣ ವಿರಚಿತಂ” ಎಂದು ಹೇಳಿಕೊಂಡಿರುವುದರಿಂದ ಆಚಾರ್ಯ ಹೇಮಚಂದ್ರನ ಶಿಷ್ಯನೆಂದು ಮಾತ್ರ ಹೇಳಬಹುದಾಗಿದೆ.†

**ಕಾಲ:**—ಆಚಾರ್ಯ ಹೇಮಚಂದ್ರನಕಾಲವು ಕ್ರಿ. ಶ. ಹನ್ನೆರಡನೆಯ ಶತಮಾನವೆಂದು ನಿರ್ಧರಿಸಲ್ಪಟ್ಟಿರುವುದರಿಂದ ಇವನ ಶಿಷ್ಯನಾದ ರಾಮಚಂದ್ರ ಸೂರಿಯು ಕ್ರಿ. ಶ. ೧೨ನೆಯ ಶತಮಾನದವನೆಂಬುದು ಸ್ಪಷ್ಟವು.

ಗುರ್ಜರ ದೇಶದರಾಜನಾಗಿದ್ದ ಶ್ರೀ ಸಿದ್ಧರಾಜ ಜಯಸಿಂಹನು ಈ ಕವಿಗೆ “ಕವಿಕಠಾರಮಲ್ಲ” ಎಂಬ ಬಿರುದನ್ನು ಸರ್ವರ ಸಮಕ್ಷಮ ಕೊಟ್ಟುದಾಗಿ “ರಾಮಚಂದ್ರಸ್ಯ ಬಾಲ್ಯೇಽಪಿ ಶ್ರೀಘ್ರಃ ಕವಿತ್ವಶಕ್ತಿಂ ಪರೀಕ್ಷ್ಯಪ್ರಸನ್ನೇನ ಗುರ್ಜರೇಶ್ವರಚೌಲುಕ್ಯ ಶ್ರೀಸಿದ್ಧರಾಜಜಯಸಿಂಹದೇವೇನಾಸೌ ‘ಕವಿಕಠಾರಮಲ್ಲ’ ಬಿರುದಂ ಸರ್ವಸಮಕ್ಷಮುಪದೀ ಕೃತ್ಯಮಿತ್ರವಸೀಯತೇ” ಎಂಬುದರಿಂದ ಗೊತ್ತಾಗುತ್ತದೆ.§

**ಗ್ರಂಥಗಳು:**—(೧) ನಲವಿಲಾಸ ನಾಟಕ, (೨) ಸತ್ಯಹರಿಶ್ಚಂದ್ರ ನಾಟಕ, (೩) ಕೌಮುದೀಮಿತ್ರಾನಂದ ಪ್ರಕರಣ, (೪) ರೋಹಿಣೀಮೃಗಾಂಕ ಪ್ರಕರಣ, (೫) ನಿರ್ಭಯಭೀಮವ್ಯಾಯೋಗ, (೬) ಕುಮಾರವಿಹಾರಶತಕ ಇಷ್ಟು ಪ್ರಕಟ್ಟ ಅಚ್ಚಾಗಿರುವುವು.

ಅಚ್ಚಾಗದೆ ಇರುವ, ಈತನದೆಂದು ಹೇಳುವ ಗ್ರಂಥಗಳು:—

(೧) ಮಲ್ಲಿಕಾಮಕರಂದ ಪ್ರಕರಣಂ, (೨) ಯಾದವಾಭ್ಯುದಯಂ, (೩) ರಾಘವಾಭ್ಯುದಯಂ, (೪) ರಘುವಿಲಾಸಂ, (೫) ವನಮಾಲನಾಟಿಕಾ, (೬) ಸುಧಾ

† ನಲವಿಲಾಸಸ್ಯ ಆಮುಖೇ ಪುಟ ೧.

§ Introduction P 27.

ಕಲಶ, (೭) ದ್ರವ್ಯಾಲಂಕಾರ, (೮) ನಾಟ್ಯದರ್ಪಣ, (೯) ಯದುವಿಲಾಸ ಉಳಿದವುಗಳು ಸ್ತೋತ್ರಗಂಥಗಳು ಒಟ್ಟು ೩೯ ಗ್ರಂಥಗಳು$ ಇವುಗಳಲ್ಲಿ ನಮಗೆ ಪ್ರಕೃತ ಉಪಲಬ್ಧ ಗ್ರಂಥಗಳೆರಡುಮಾತ್ರ.

(೧) ನಲವಿಲಾಸನಾಟಕಂ, (೨) ಸತ್ಯಹರಿಶ್ಚಂದ್ರನಾಟಕಂ.

ನಲವಿಲಾಸೇ ವರ್ಣಿತಾನಿ ಸಂಧ್ಯಾ ಚಂದ್ರೋದಯಾವರ್ಣನಾನಾಯಕ ನಾಯಿಕಾದೀನಾಂ ವಕ್ರೋಕ್ತಿಗೂಢಭಣಿತಿ ವೈದಗ್ಧವಿಲಸಿತಾನಿಪ್ರಸಂಗೋಚಿತಾನಿ ವ್ಯವಹಾರೋಪಯೋಗೀನಿ ಶಿಕ್ಷಾಸೂತ್ರಾಣೀವಾರ್ಥಗಾಂಭೀರ್ಯಭೃತಾನಿ ಸುಭಾಷಿತಾನಿ ಪದ್ಯಾನಿ ಚ ಗದ್ಯಾನಿ ವಿಚಾರಕವಾಠಕಾನಾಮತೀವಪ್ರಮೋದಪ್ರದಾನಿ ವಿಜ್ಞಾನಕಲಾಕೌಶಲಪ್ರವರ್ಧಕಾನಿ ಚ ಪ್ರಭವೇಯುಃ ನಾಟ್ಯಾದಿವಿಷಯಕಾನಿಕಾನಿಚಿತ್ತುತತ ಉದ್ಧೃತ್ಯ ವರ್ಣಿಕಾಮಾತ್ರಮತ್ರಾಪಿಪ್ರದರ್ಶ್ಯಂತೇ ||

ಎಂದು ಹೇಳಿರುವುದು ಅಕ್ಷರಶಃ ನಿಜವಾ। ನಳವಿಲಾಸದಲ್ಲಿಯೂ, ನಾಟ್ಯಾದಿ ಕೆಲವು ವಿಷಯಗಳ ಹೊರ್ತು ಉಳಿದವು ಸತ್ಯಹರಿಶ್ಚಂದ್ರನಾಟಕದಲ್ಲಿಯೂ ಕಂಡು ಬರುವುವು. ಮಾನವನಸತ್ಯಸಂಧತೆ, ಹೆಂಗಳೆಯರ ಪಾತಿವ್ರತ್ಯವನ್ನು ಲೋಕಕ್ಕೆ ತಿಳಿಯ ಹೇಳಬೇಕೆಂದು ಈ ಎರಡು ನಾಟಕಗಳಿಗೂ ತಕ್ಕುವಾದ ಕಥಾವಸ್ತುವನ್ನು ಮಹಾಭಾರತದಿಂದಾರಿಸಿಕೊಂಡು ತಾನು ಹೇಳಬೇಕೆನ್ನುವ ವಿಷಯಸಮರ್ಥನಕ್ಕೆ ತಕ್ಕುವಾದ ಹೆಚ್ಚು ಪಾತ್ರಗಳನ್ನು ಕಲ್ಪಿಸಿ ಕವಿಸಮಯವು ಕೆಡದಂತೆ ಮೂಲ ಕಥಾವಸ್ತುವಿಗೆ ಲೋಪಬರದಂತೆ ಕಥೆಯನ್ನು ಮಾರ್ಪಡಿಸಿ ಪ್ರಸಂಗೋಚಿತವ್ಯವಹಾರೋಪಯೋಗಿಯಾದ ಸೂಕ್ತಿಮಾಲಿಗಳಿಂದ ಕೋದಿರುವನು. ನಲವಿಲಾಸನಾಟಕದಲ್ಲಿ ೭ಅಂಕಗಳೂ ಸತ್ಯಹರಿಶ್ಚಂದ್ರದಲ್ಲಿ ೬ ಅಂಕಗಳೂ ಇರುವುವು. ಇದು ಈಚಿಗೆ ಬರೆದಿರುವನಾಟಕವಾಗಿರುವುದಾದರೂ ಈಚಿನ ಗ್ರಂಥಗಳಲ್ಲ ಬಹುಮಟ್ಟಿಗೆ ಕಂಡು ಬರುವ ಕಟುಮತ್ತು ಕೃತ್ರಿಮ ಶೈಲಿಯು ಇವುಗಳಲ್ಲಿ ಕಂಡು ಬರುವುದಿಲ್ಲ. ಇವನು ಗ್ರಂಥ ಚೌರ್ಯಾನುರಕ್ತರಾದ ಕವಿಗಳನ್ನು ಬಹುವಾಗಿದೂಷಿಸಿ: -

ಸ್ಪೃಹಾಂ ಲೋಕಃ ಕಾವ್ಯೇ ವಹತಿ ಜರತ್ಸೌ ಕುಂಠಿತತಮ್<br>ವಚೋಭಿರ್ವಾಚ್ಯೇನ ಪ್ರಕೃತಿಕುಟಿಲೇನ ಸ್ಫುಟತೀ<br>ವಯಂ ವೀಥೀಂ ಗಾಢುಂ ಕಥಮಪಿ ನ ಶಕ್ತಾಃ ಪುನರಿಮಾ<br>ಮಿಯಂ ಚಿಂತಾ ಚೇತಸ್ತರಲಯತಿ ನಿತ್ಯಂ ಕಿಮಪಿನಃ || ೧-೮

ಎಂದು ಒಕ್ಕಣಿಸಿರುವನು.

$ Introduction Nalavila·a Nataka P. 33.

ಪುತ್ರ ಕುಮಾರಲಕ್ಷ್ಮಣ! ಏಕಾಕಿನೀಮಶರಣಾಮಾಸನ್ನಪ್ರಸವವೇದನಾಮರಣ್ಯೇ ಹತಾಶಾಂ ಶ್ವಾಪದಾ ಅಭಿಲಷಂತಿ ಹಾ! ಇದಾನೀಂ ಮಂದಭಾಗ್ಯಾ ಭಾಗೀರಥ್ಯಾ ಮಾತ್ಮಾನಂ ನಿಕ್ಷಿಪಾಮಿ" || ಎಂದು ಉತ್ತರ ರಾಮಚರಿತದಲ್ಲಿ ಹೇಳಿರುವಂತೆ ನಲವಿಲಾಸನಾಟಕದಲ್ಲಿ.

ಮಾತಃ ! ಪ್ರಸೀದ ವಸುಧೇ ! ವಿಹಿತೋಽಂಜಲಿಸ್ತೇ
ಪಾತಾಲಮೂಲಪಥಿಕಂ ವಿವರಂ ಪ್ರಯಚ್ಛ
ಆಶೀರ್ಲತಾರತಘನೇಷು ಫಣೀಂದ್ರವಕ್ತ್ರ
ಕೋಲಾಶ್ರಮೇಷು ನನು ಯೇನ ಭವಾಮಿ ಗುಪ್ತಾ ೬-೧೫

ಎಂದು ಹೇಳಿಕೊಂಡಿರುವುದು ಕಂಡುಬರುತ್ತದೆ.

(೪) ವಕ್ತ್ರಂ ಚಂದ್ರವಿಲಾಸ ಮುಜ್ಜ್ವಲಪರೀಹಾಸಕ್ಷಮೇ ಲೋಚನೇ
ವರ್ಣಃ ಸ್ವರ್ಣಮಪಾಕರಿಷ್ಣುರಲಿನೀ ಜಿಷ್ಣುಃ ಕಚಾನಾಂಚಯಃ
ವಕ್ಷೋಜಾಬಿಭಕುಂಭವಿಭ್ರಮಹರೌ ಗುರ್ವೀ ನಿತಂಬಸ್ಥಲೀ
ವಾಚಾಂ ಹಾರಿಚ ಮಾರ್ದವಂ ಯುವತಿಷು ಸ್ವಾಭಾವಿಕಂ ಮಂಡನಂ

(ಸತ್ಯಹರಿಶ್ಚಂದ್ರ ೪–೯)

ಎಂಬ ಶ್ಲೋಕವು ಭರ್ತೃಹರಿಯ ಶೃಂಗಾರಶತಕದಲ್ಲಿ ಹೇಳಿರುವುದು ಕಂಡು ಬರುತ್ತದೆ ಪ್ರಕೃತ ಇಷ್ಟುಸಾಕು.

ನಲವಿಲಾಸ ನಾಟಕವನ್ನಾಗಲಿ ಅಥವಾ ಸತ್ಯಹರಿಶ್ಚಂದ್ರ ನಾಟಕವನ್ನಾಗಲಿ ವಿಮರ್ಶಾಪೂರ್ವಕ ಓದುವರಿಗೆ ಬೆರಗುತೋರಿಸಿ ಹೇಳಿಕೊಳ್ಳುವಂತಹ ಚತುರತೆಯು ಯಾವುದೂ ಕಂಡುಬರುವುದಿಲ್ಲವಾದರೂ ಓದುಗರಿಗೆ ಆಸಕ್ತಿಹುಟ್ಟಿಸುವಂತೆ ಬರೆದಿರುವನು. ಮಹಾಭಾರತದಲ್ಲಿ ಹಂಸವು ನಳನಸೌಂದರ್ಯವನ್ನು ಕುರಿತು ಪ್ರಶಂಸಿಸುವುದರ ಮೂಲಕ ದಮಯಂತಿಯನ್ನು ನಳನಲ್ಲಿ ಅನುರಕ್ತಳನ್ನಾಗಿಮಾಡಿದುದಾಗಿ ಹೇಳಿದೆ ಆದರೆ ನಲವಿಲಾಸನಾಟಕದಲ್ಲಿ ಕಲಹಂಸ ಮತ್ತು ಮಕರಿಕಾ ಎಂಬೆರಡು ಪಾತ್ರಗಳನ್ನು ಯೋಜಿಸಿ ಕಲಹಂಸನು ನಳನ ಮಿತ್ರನೆಂದೂ, ಮಕರಿಕೆಯು ರಾಣೀವಾಸ ದಚೇಟಿಯೆಂದೂ ಹೇಳಿ ಇವರಿಬ್ಬರಚಾತುರ್ಯದ ಮೂಲಕ ವಿವಾಹ ಸಂಘಟನ ಯಾದಂತೆ ಹೇಳಿರುವನು ನಳದಮಯಂತಿಯರ ಪರಸ್ಪರ ಪ್ರಣಯುಪರೀಕ್ಷದಲ್ಲಿ ದೇವತೆಗಳೂ ಲೋಕಪಾಲಾದಿಗಳೂ ತೊಂದರೆಗೊಳಿಸಲು ಎತ್ನಿಸಿದುದಾಗಿ ಮಹಾಭಾರತದಲ್ಲಹೇಳಿದೆ. ನಾಟಕದಲ್ಲಿ ಮಾನವಪಾತ್ರವನ್ನು ಯೋಜಿಸಿದೆ. ಕಲಿಪುರುಷನು ನಳನಿಗೆ ತೊಂದರೆಕೊಟ್ಟುದಾಗಿ ಮಹಾಭಾರತದಲ್ಲಿದೆ. ನಾಟಕದಲ್ಲಿ ಹಾಗಿರದೆ ದಮಯಂತಿಯ ಸೌಂದರ್ಯಮುಗ್ಧನಾದ ಚಿತ್ರಸೇನನೆಂಬವನು ನಳನ ವಿಚಾರದಲ್ಲಿ ಅಸೂಯೆಗೊಂಡು ಕೋಟಲೆಗೊಳಿಸಿದುದಾಗಿ ಬರೆದಿದೆ. ಇವೇ ಮೊದಲಾದ

ಕೆಲವುಭಾಗಗಳಲ್ಲಿ ಈ ನಾಟಕವು ಹಿಂದಣ ಗ್ರಂಥಕಾರರ ಮಾರ್ಗಾನುಸರಣವನ್ನು ಬಿಟ್ಟು ನೂತನಮಾರ್ಗವನ್ನು ಅವಲಂಬಿಸಿರುವುದೆಂದು ಮಾತ್ರಹೇಳಬಹುದು.

"ವೈದರ್ಭೀ ರೀತಿಮುಹುರ್ ಲಭೇಯ ಸೌಭಾಗ್ಯಸುರಭಿತಾವಯವಾಂ ||

ಎಂದು ಮಂಗಳಾಚರಣದಲ್ಲಿ ಹೇಳಿರುವಂತೆ ಕವಿಯು, ನಾಟಕವನ್ನು ಸುರ ಚಿರವಾದ ವೈದರ್ಭೀರೀತಿಯಲ್ಲಿ ಮೋಹಿಸುವಂತೆ ಬರೆದಿದ್ದಾನೆ ಹಚ್ಚೇಕೆ! ಕವಿ ವರ್ಣನೆಯ ಪ್ರತಿಭಾಶಕ್ತಿಯು "ಕುಮಾರಪಾಲಪ್ರತಿಬೋಧ" ಕಾರನಾದ ಮಹಾ ಕವಿ ಸೋಮಪ್ರಭಾಚಾರ್ಯನೂ ಮನಸೋತು ಅನುಸರಿಸುವಂತೆ, ಅಷ್ಟುಸೊಗಸಾಗಿ ದಮಯಂತೀ ಸ್ವಯಂವರ ವರ್ಣನೆಯನ್ನು ಮಾಡಿರುವನು. ಇವನ ವರ್ಣನೆಗಳಲ್ಲಿ ದಮಯಂತೀ ಸ್ವಯಂವರ ವರ್ಣನೆಯು ಅತೀವ ಮನೋಜ್ಞವಾಗಿದೆ. ನಲವಿಲಾಸ ನಾಟಕದ ೫ ಮತ್ತು ೬ನೆಯ ಅಂಕಗಳು ಕರುಣರಸಯುಕ್ತವಾಗಿ ಪಾಷಾಣ ಸದೃಶಹೃದಯವನ್ನು ಕರಗಿಸುವುದಾಗಿ ಭವಭೂತಿಯ ಉತ್ತರರಾಮ ಚರಿತೆಯನ್ನು ಹಾಗೆ ಹಾಗೆ ಜ್ಞಾಪಕಕೆ ತರುವುದಾಗಿದೆ

ಕಲಹಂಸನು ನಳನೊಡನೆ ಹೇಳುವ ದಮಯಂತಿಯ ಸೌಂದರ್ಯ ವರ್ಣನೆ—

ಕಾವ್ಯಂ ಚೇತ್ ಸರಸಂ ಕಿಮರ್ಥಮಮೃತಂ ವಕ್ತ್ರಂ ಕುರಂಗೀದೃಶಾಂ
ಚೇತ್ ಕಂದರ್ಪವಿಪಾಂಡುಗಂಡಫಲಕಂ ರಾಕಾಶಶಾಂಕೇನ ಕಿಂ
ಸ್ವಾತಂತ್ರ್ಯಂ ಯದಿ ಜೀವಿತಾವಧಿ ಮುಧಾ ಸ್ವರ್ಭರ್ತುರ್ವೈಭವಂ
ವೈದರ್ಭೀ ಯದಿ ಐಕ್ಷ್ಯತೇವಭರಾ ಪ್ರೇಕ್ಷ್ಯಾ ಸರತ್ನಾಪಿ ಕಿಂ
ನಲವಿಲಾಸ ೨—೨

ವಿಶ್ವಸ್ಯ ಶ್ರವಣೇಂದ್ರಿಯಂ ಸಫಲತಾಂ ನೇತುಂ ಪುರಾ ಭಾರತೀ
ವಾಚಾಂ ರೂಪಮುಪಾಸ್ಯ ನಿರ್ಮಿತವತೀ ವಾಸಂ ವಿದರ್ಭಕ್ಷಿತೌ
ಏದ್ಧೇಸ್ವರ್ಗೇವ ನರೇಂದ್ರಭೀಮತನಯಾವೇಷಂ ವಿಧೃತ್ಯಾಧುನಾ
ಸಾಫಲಂ ನಯನೇಂದ್ರಿಯಂ ಗಮಯಿತುಂ ದೇವೀ ಸ್ಮರಸ್ಯ ಪ್ರಿಯಾ|| ೨-೪

ದಮಯಂತಿಯ ಸ್ವರೂಪ ವರ್ಣನೆ: –

ಚಲಕಮಲವಿಲಾಸಾಭ್ಯಾಸಿನೀ ನೇತ್ರಪತ್ರೇ
ದಶನವಸನಭೂಮಿರ್ಬಂಧುಜೀವಂ ಧುನೋತಿ
ಸ್ಮರಭರಪರಿರೋಹತ್ಪಾಂಡಿಮಾಗೂಢರೂಢ
ದ್ಯುತಿವಿಜಿತಮೃಗಾಂಕಾ ಮೋದತೇ ಗಂಡಭಿತ್ತಿಃ || ೨—೫

ಕಾರ್ಕಶ್ಯಭಾಜಃ ಸ್ತನತಟೀ ನ ಗಿರಾಂ ವಿಲಾಸಃ
ಕೇಶಾಃ ಪರಾಂಕುಟಿಲತಾಂ ದಧತೇ ನ ಚೇತಃ
ತಸ್ಯಾಃ ಕುರಂಗಕದೃಶೋ ನೃಪಚಕ್ರಶಕ್ರ '
ಜಾಡ್ಯಂ ಗತೌ ನ ತು ಮತೌ ವಿಧೃತಾವಕಾಶಂ || ೨—೬

ಮಧ್ಯಾಹ್ನ ವರ್ಣನೆ:—

ಅಖಿಲಾನಾಂ ಬಿಸಿನೀನಾಂ ಕಮಲವಮುಖಾನ್ಯೇಕಹೇಲಯಾ ದ್ರಷ್ಟುಂ
ಗಗನಾಚಲಗರ್ಭಮಸಾವಧಿರೋಹತಿ ಕಮಲಿನೀನಾಥಃ || ೨—೨೪

ಸ್ವಯಂವರ ವಿಚಾರವಾಗಿ ರಾಜನ ಹೇಳಿಕೆ:—

ಆಮಂತ್ರಿತಾ ವಯಮತಃ ಪ್ರಮದಃ ಪರೇಽಪಿ
ಸಂತ್ಯಾಗತಾಃ ಕ್ಷಿತಿಭುಜೋಽಥ ವಿಷಾದತಾಪಃ
ಅಂಗಂ ವಿಧಾನಮಿವ ಸಂಧಿಷು ರೂಪಕಾಣಾಂ
ತುಲ್ಯಂ ಸ್ವಯಂವರವಿಧಿಃ ಸುಖದುಃಖಹೇತುಃ || ೩—೪

ಗೀತಶಾಸ್ತ್ರಾನಭಿಜ್ಞರ ವಿಚಾರವಾಗಿ ಕಲಹಂಸನ ಹೇಳಿಕೆ:—

ನ ಗೀತಶಾಸ್ತ್ರಮರ್ಮಜ್ಞಾ ನ ತತ್ತ್ವಜ್ಞಾಶ್ಚ ಯೇ ಕಿಲ
ಅಪೌರಷಪಶುದೇಶ್ಯೇಭ್ಯಸ್ತೇಭ್ಯಃ ಪುಂಭ್ಯೋ ನಮೋ ನಮಃ || ೩—೧೦
ಆಸ್ತಾಂ ಮರ್ಮಪರಿಜ್ಞಾನಂ ಯೇಷಾಂ ಗೀತಸ್ಪೃಹಾಽಪಿ ನ
ಕುರಂಗೇಭ್ಯೋಽಪಿ ಹೀನೇಷು ಮರ್ತ್ಯತ್ವಂ ತೇಷು ವೈಶಸಂ || ೩-೧೧
ಅಜಲ್ಪ್ಯ ಜಲ್ಪಾಮಃ ಕಿಮಪಿ ಕಿಲ ಪಾಷಾಣಸುಹೃದಾಂ
ಸದಾ ತೇಷಾಂ ಭೂಯಾಜ್ಜಗತಿ ಪುರುಷಾಣಾಮಜನನಿಃ
ಅಸಾರಂ ಸಂಸಾರಂ ವಿದಧತಿ ನ ಸಾರಂ ಪ್ರತಿಮುಹುಃ
ಪಿಬಂತೋ ಯೇ ಸೂಕ್ತೀರಥ ಚ ಕಲಗೀತೀರ್ಮಧುಮುಚಃ || ೩—೯

ಸ್ತ್ರೀವಿಚಾರದಲ್ಲಿ ಕಪಿಂಜಲನಹೇಳಿಕೆ:—

ಅವಿದಿತಮರ್ಮಾ ಕರ್ಮಸು ನ ಶರ್ಮ ತಜ್ಜನ್ಮ ಚುಂಬತಿ ಪ್ರಾಯಃ
ಅಕಲಿತಹೃದಯಸ್ತ್ರೀಣಾಂ ಸ್ಮರೋಪನಿಷದೋ ಬಹಿಃ ಪ್ಲವತೇ || ೩—೧೭

ನಳನು, ಮಲಗಿರುವ ದಮಯಂತಿಯ ಮುಖವನ್ನು ನೋಡಿ ನೋಡಿ, ಭವತು, ಚರಮಂ, ದೇವೀವದನೆಂದು ವಿಲೋಕನಂ ಕೃತ್ವಾ ವ್ರಜಾಮಿ.

(ವಿಲೋಕ್ಯ ಸಾಸ್ರಂ)

ಸ್ಪೃಶತಿ ನ ಮಣಿ ಜ್ಯೋತ್ಸ್ನಾಚ್ಛನ್ನಂ ನಿಶಾಂತಜುಷಃ ಪುರಾ
ಸುಚಿರಮನಿಲೋಽಪ್ಯಂಗಂ ಯಸ್ಯಾ ನಲಾದಿವ ಶಂಕಿತಃ
ವಿಗತಶರಣಾಕ್ಷುತ್ಕ್ಷಾಮಾಂಗೀ ಪಟಚ್ಚರಧಾರಿಣೀ
ವನಭುವಿ ಹಹಾ! ಸೇಯಂ ಶೇತೇವಿದರ್ಭಪತಿಪ್ರಸೂಃ || ೫-೧೮

ಭವತುವನದೇವತಾಃ ಶರಣಂ ಕೃತ್ವಾವ್ರಜಾಮಿ, (ಪ್ರತಿನಿವೃತ್ಯದಿಶೋಽವಲೋಕ್ಯ)

ಕಚ್ಚಿತ್ಕಾನನದೇವತಾಃ! ಶೃಣುತಮೋ ಯಸ್ಯಾ ವಪುಃ ಕಲ್ಪಯ್ನ
ಜಾತಃ ಶಿಲ್ಪಿಗಣಾಗ್ರಣೀಃ ಕಮಲಭೂಃ ಸೇಯಂ ವಿದರ್ಭಾತ್ಮಜಾ

ಅಸ್ಯಾಃ ಕರ್ಕಶಕರ್ಮಣಾ ಪ್ರಿಯತಮಾಭಾಸೇನ ನಿಷ್ಕಾರಣಂ
ತ್ಯಕ್ತಾಯಾಃ ಶರಣಂ ಸ್ಥಮಾ ಸ್ಮಸಲವನ್ನಿಸ್ತ್ರಿಂಶತಾಂ ಗಚ್ಛತ || ೫-೧೯

(ಪುನರಂಜಲಿಂ ಬಧ್ವಾ)

ನಿದ್ರಾಚ್ಛೇದೇಕ್ಷ ದಯಿತ ! ಗತೋಽಸೀತಿತಾರಂ ವದಂತೀ
ವಿನ್ಯಸ್ಯಂತೀ ದಿಶಿ ದಿಶಿ ದೃಶಂ ಬಾಷ್ಪಕಲ್ಲೋಲಲೋಲಾಂ
ದೇವ್ಯಃ ! ಸರ್ವಾವನವಸತಯೋ ಮಾತರಃ ಪ್ರಾರ್ಥಯೇ ವ
ಸ್ತತ್ಕರ್ತವ್ಯಂ ಕಲಯತಿ ಯಥಾ ಕುಂಡಿನಾಧ್ವಾನಮೇಷಾ || ೫-೨೦

(ದಮಯಂತೀಮನುಸ್ಮೃತ್ಯ ಸಾನುತಾಪಂ)

ರಾಜ್ಯಂ ಹಾರಿತವಾನಹಂ ನಹಿ ನಹಿವ್ಯಾಧತ್ತ ಸರ್ವಂ ವಿಧಿ
ರ್ದೇವೀಂ ಹಾಽತ್ಯ ಜಮುಸ್ಮಿ ತತ್ರವಿಪಿನೇ ಯದ್ವಾಪ್ಸ್ಯಯೋ ಬಂಧನಂ
ತಾಂ ಪಶ್ಯೇಯಮಹಂ ವನೇಽಥ ಗಹನೇ ತಸ್ಯಾಃ ಕುತಃ ಪ್ರಾಣಿತಂ
ಹೀಮ್ಮೇನೋ ನದಯಾ ದುರೋದರಕೃತಃ ಕಾವಾತ್ರಪಾ ಕಾ ಕೃಪಾ?||೬-೧

(ಸ್ಮೃತ್ವಾಸಚಿಂತಂ)

ಸ್ಫುರತಿತಿಮಿರೇ ಘೋರಪ್ರಾತೇ ಧ್ವನತ್ಯತಿಭೈರವಂ
ಕಕುಭಿ ಕಕುಭಿ ವ್ಯಾಳಃಸೀಕೇ ವಿಸರ್ಪತಿ ಸದ್ವನೌ
ಚರಮಮಚಲಂ ಯಾತೇ ಪತ್ಯೌ ರುಚಾಂ ಚಕಿತೇಕ್ಷಣಾ
ಶರಣಮಧಿಕಂ ಭೀರುರ್ದೇವಿ ಕರಿಷ್ಯತಿ ಕಿಂವನೇ ? || ೬-೪

(ಸದುಃಖಮಾತ್ಮಗತಂ)

ಶ್ರುತೇ ! ಬಾಧಿರ್ಯಂ ತ್ವಂ ಕಲಯ ಬಿಭೃತಾಂ ಕಿಂಚನಯನೇ
ಯುವಾಮಂಧೀಭಾವಂ ದ್ರುತಮನಗದಂಕಾರವಿಷಯಂ
ಶೃಣೋಮ್ಯಸ್ಯಾಸ್ತಾರಂ ನರುದಿತಮಹಂ ಯೇನತದಿದಂ

ನಳನು ಮಲಗಿದ್ದ ಸತಿಯನ್ನು ಬಿಟ್ಟು ಹೊರಟುಹೋಹ ಈ ಪ್ರಸಂಗವು ಎಷ್ಟು ತಾಪದಾಯಕವೆಂಬುದನ್ನು ನೋಡಿ.:—

(ಅಂಶುಕಂದ್ವಿಧಾಕೃತ್ಯ ಶಸ್ತ್ರೈರುತ್ಥಾಯ)

ಭ್ರಾತಶ್ಚೂತ ! ವಯಸ್ಯಕೇಸರ ! ಸಖೇಪುನ್ನಾಗ ! ಯಾಮೋವಯಂ
ಮಾಸ್ಮಾಸ್ಮಾಕಮನಾರ್ಯ ಕಾರ್ಯಪರತಾಂ ಜಾನೀತ ಯೂಯಂ ಹೃದಿ
ದೂತೇಚ್ಛಾಕ್ಷಚ ಕೂಬರಸ್ಯ ನಿಷಧಾಭರ್ತುಃ ಕ್ಷಚಾಕ್ಷ್ಯರ್ಜಯೋ
ನ ವಾ ಪಶ್ಯಾವ್ಯೇತಾಂ ವಿರಹಹರಿಣೀಂ ಹಾರಿಲಲಿತಾಂ || ೬—೧೧

ನಳನನ್ನು ಕುರಿತು ದಮಯಂತಿಯ ವಿಲಾಪ :—

ಎದುರಿನಲ್ಲಿ ಕಂಡುಬಂದ ಚಕ್ರವಾಕಗೃಹಿಣಿಯನ್ನು ನೋಡಿ:—

ಸಖಿ ಚಕ್ರವಾಕದಯಿತೇ! ದಯಿತಂ ಕಿಂ ಮಮ ನ ಕಥಯಸಿ ಸಹಸಾ?
ಪ್ರಿಯವಿರಹಿತಾನಾಂ ದುಃಖಂ ಪ್ರತ್ಯಕ್ಷಂ ತವಾನುನಿತ್ಯಂ || ೬-೬.

(ವಿಲೋಕ್ಯ ಸಂಸ್ಕೃತ ಮಾಶ್ರಿತ್ಯ ಚ.)

ಮಾತಃ ಕುಂಜರಪತ್ನಿ! ತಾತಹರಿಣ! ಭ್ರಾತಃ ಶಿಖಂಡಿನ್! ಕೃಪಾಂ
ಕೃತ್ವಾಬ್ರೂತ ಮನಾಕ್ಪ್ರಸೀದತಕೃತೋ ಯುಷ್ಮಾಕಮೇಷೋಽಂಜಲಿಃ
ದೃಷ್ಟಃ ಕ್ವಾಪಿ ಗವೇಷಯನ್ನಿಹವನೇ ಭೀಮಾತ್ಮಜಾಂ ನೈಷಧೋ
ಭೂಪಾಲಃ ಸರಸಂ ಸೃಜಂತವಿರತೈರ್ಬಾಷ್ಪೋರ್ಮಿಭಿಃ ಪಂಕಿಲಾಂ ||೬-೮

(ನಳನನ್ನುದ್ದೇಶಿಸಿ) ಮನದೆರೆಯ!

ಆತ್ಮಾ ಸಮರ್ಪಿತಃ ಪ್ರಥಮದರ್ಶನೇ ವನಮಿದಂ ಚ ಸಹ ಚಲಿತಾ
ಸ್ವಪ್ನೇಽಪಿ ಪತಿಮನ್ಯಂ ನ ಕಾಂಕ್ಷ್ಯಾಮಿ ತಥಾಪಿ ಪರಿತ್ಯಕ್ತಾ || ೬-೯
ಏಕಾಕಿನ್ಯಹಂ ಭೀರುಕಾಚ ನಿರ್ಮಾನುಷಂ ಚವನಮಿದಂ
ತದೇಹಿ ಸಹಿ ಪ್ರಿಯತಮ! ಅಲಂ ಪರಿಹಾಸಕ್ರೀಡಯಾ || ೬-೧೦

ನಳನು ದೊರೆಯನೆಂದು ಹತಾಶಳಾಗಿ ಅಗ್ನಿಪ್ರವೇಶ ಮಾಡಬೇಕೆಂದಿರುವ ದಮಯಂತಿಯನ್ನು ನೋಡಿ ವೇಷಾಂತರದಲ್ಲಿದ್ದ ನಳನು ಸಂಭ್ರಮದಿಂದ (ಸಸಂಭ್ರಮಂ ಬಾಹೌ ಗೃಹೀತ್ವಾ) ಅಯೇ! ಸುಂದರಿ!

ಯೇನಾಕಸ್ಮಾತ್ ಕಠಿನಮನಸಾ ಭೀಷಣಾಯಾಂ ಕರಾಲ
ವ್ಯಾಲಾನುಂತ್ತಂ ವನಭುವಿ ಹತೇನಾತಿಥೇಯೀಕೃತಾಸಿ|
ನಿರ್ಲಜ್ಜಾತ್ಮಾ ವಿಕಲಕರುಣೋಽವಿಶ್ವವಿಶ್ವಸ್ತಘಾತೀ
ಪತ್ಯಾಭಾಸಃ ಸರಲಹೃದಯೇ! ದೇವಿ! ಸೋಽಯಂ ನಲೋಽಸ್ಮಿ || ೭—೮

ಮಾದರಿಗಾಗಿ ಒಂದೆರಡು ಸೂಕ್ತಿಗಳು:—

ನ ಪ್ರೇಮ ನೌಷಧಂ ನಾಜ್ಞಾ ನ ಸೇವಾ ನ ಗುಣೋ ನ ಧೀಃ
ನ ಕುಲಂ ನ ಬಲಂ ನ ಶ್ರೀ ದುರ್ಜನಸ್ಯ ಪ್ರಶಾಂತಯೇ || ೭—೧೦
ಛಿನ್ನೇಷು ರಾವಣೇ ತುಷ್ಟಃ ಶಂಭುರ್ದಶಸು ಮೂರ್ಧಸು
ಶತೇಽಪಿ ಶಿರಸಾಂ ಛಿನ್ನೇ ದುರ್ಜನಸ್ತು ನ ತುಷ್ಯತಿ || ೭—೧೧
ಅನುಭೂತಂ ನ ಯದ್ ಯೇನ ರೂಪಂ ನಾಪ್ನೋತಿ ತಸ್ಯ ಸಃ
ನ ಸ್ವತಂತ್ರೋ ವ್ಯಥಾಂ ವೇತ್ತಿ ಪರತಂತ್ರಸ್ಯ ದೇಹಿನಃ ೬—೨.

ಸತ್ಯಹರಿಶ್ಚಂದ್ರನಾಟಕದ ಕೆಲವು ಶ್ಲೋಕಗಳು.—

ಪ್ರಭಾತವರ್ಣನೆ:—

ವಿಶ್ವಂಭರಾಭರವಿಯೋಗವತೋ- ಮನ್ಯೈವ
ಸತ್ತ್ವಂ ವಿಲೋಕಯಿತುಮುತ್ಸುಕಪಾದಚಾರಃ
ತಿಗ್ಮಂಶುವಂಶವಿನಿವೇಶನಿದಾನಮೇಷ
ಪೂಷಾಧಿರೋಹತಿ ಶಿಖಾಮುದಯಾಚಲಸ್ಯ || ೩—೧. ಸ. ಹ. ನಾ.

ವನವಾಸಿಗಳ ಮತ್ತು ರಾಜರ ನಿಯಮವರ್ಣನೆ:—

ಕೃಶಾನುಸೇವಾ ಫಲಕಂದವರ್ತನಂ
ಜಟಾಧರತ್ವಂ ವನವಾಸಿನಾಂವ್ರತಂ
ಮಹೀಪತೀನಾಮಿದಮೇವ ತು ವ್ರತಂ ಸ. ಹ. ನಾ
ಯದಾತ್ಮಸತ್ಯಾತ್ಫಲಯೋಽಪಿ ನ ಚ್ಯುತಿಃ ॥ ೨—೪.

ಸೂಕ್ತಿಗಳು.—

ಅಪಕೃತ್ಯಾಪಕಾರ್ಯೇಷು ಯೇ ಭವ್ಯಂತ್ಯರ್ಥಿನಃ- ಪುನಃ
ತೇಷು ಮನ್ಯೇ ಮನುಷ್ಯತ್ವಂ ವಿಧಿವಾರ್ಧ್ಯಿತ ವಿಕ್ರಿಯಾ ॥ ೩—೧೫.

ಸ್ವಮೇಕಃ ಪರರಕ್ಷಾರ್ಥಂ ವಿನಿಹಂತಿವಿಪತ್ತಿಷು
ಸ್ವರಕ್ಷಾರ್ಥಂ ಪರಂ ತ್ವನ್ಯಶ್ಚಿತ್ರಂ ಚಿತ್ರಾ ಮನಃ ಸ್ಥಿತಿಃ ॥ ೫—೧೧.

ಅಹೋ! ದಾನಮಹೋ ಧೈರ್ಯಮಹೋ ವೀರ್ಯಮಖಂಡಿತಂ
ಉದಾರಧೀರವೀರಾಣಾಂ ಹರಿಶ್ಚಂದ್ರೋನಿದರ್ಶನಂ ॥ ೬—೧೧.

ಇವು ಓದುವರಿಗೆ ಸುಲಭವಾಗಿ ಅರ್ಥವಾಗುವುದರಿಂದ ಅರ್ಥವನ್ನು ಬೇರೆಯಾಗಿ ಬರೆಯುವ ಪ್ರಯೋಜನ ತೋರಲಿಲ್ಲ.



## ಸೋಮೇಶ್ವರದೇವ

ಇವನು ಗುಜರಾತಿನವನು. ಇವನು ಬರೆದಿರುವ ಕಾವ್ಯದ ಪ್ರತಿಸರ್ಗಾಂತ್ಯದಲ್ಲಿ ಹೇಳಿಕೊಂಡಿರುವ:—

" ಇತಿಶ್ರೀಗುರ್ಜರೇಶ್ವರ ಪುರೋಹಿತ ಸೋಮೇಶ್ವರದೇವವಿರಚಿತೇ "...... ಎಂಬುದರಿಂದ ಇವನು ರಾಜಪುರೋಹಿತನಾಗಿದ್ದನಾಗಿ ವ್ಯಕ್ತವಾಗುತ್ತದೆ. †

**ಕಾಲ:**—ಇವನು ಭೀಮದೇವ ಮತ್ತು ವೀಸಲದೇವ ಇವರ ಆಶ್ರಯದಲ್ಲಿ ಎಂದರೆ ಭೀಮದೇವನ ರಾಜ್ಯಸಮಯವು ಕ್ರಿ. ಶ. ೧೧೭೯ ಮೊದಲು ವೀಸಲದೇವ ರಾಜ್ಯಸಮಯವಾದ ಕ್ರಿ. ಶ. ೧೨೬೨ ಪರ್ಯಂತವೆಂದೂ ಅದೇ ಸೋಮೇಶ್ವರನ ಕಾಲವೆಂದೂ ಸ್ಪಷ್ಟಪಡುತ್ತದೆ. §

**ಗ್ರಂಥಗಳು:**—ಇವನು ' ಕೀರ್ತಿಕೌಮುದೀ ' ಎಂಬ ಗ್ರಂಥವನ್ನೂ ಸುರಥೋತ್ಸವವೆಂಬ ೧೫ ಸರ್ಗಗಳ ಮಹಾಕಾವ್ಯವನ್ನೂ ಬರೆದಿರುವನು. ಇವುಗಳಲ್ಲದೆ

† ಸುರಥೋತ್ಸವ ಕಾವ್ಯವನ್ನು ನೋಡು.
§ ಸುರಥೋತ್ಸವಕಾವ್ಯದ ಮುನ್ನುಡಿ ಪುಟ ೧೬

ರಾಮುಶತಕವೆಂಬ ಮತ್ತೊಂದು ಗ್ರಂಥವನ್ನು ಬರೆದಿರುವುದಾಗಿ ಹೇಳಿದೆ. ಗ್ರಂಥವು ಉಪಲಬ್ಧವಿಲ್ಲ. ಕೀರ್ತಿಕೌಮುದಿಯಲ್ಲಿ ಚಾಳುಕ್ಯರಾಜರ ವರ್ಣನವೂ, ಸುರಥೋತ್ಸವ ಕಾವ್ಯದಲ್ಲಿ ಚೈತ್ರವಂಶೀಯನಾದ ಸುರಥನ ಚರಿತವೂ ಬರೆಯಲ್ಪಟ್ಟಿರುವುವು. ಇದರಲ್ಲಿ ಹಿಮಾಲಯದ ವರ್ಣನೆಯು ಕಡುಚೆಲುವಾದುದು. ಶುಂಭ ಮತ್ತು ಧೂಮ್ರಲೋಚನರ ವಧೆಯು ಬಹುಜಾಣ್ಮೆಯಿಂದ ವರ್ಣಿಸಲ್ಪಟ್ಟಿರುವುದು. ಶೈಲಿಯು ಬಿಲ್ಹಣನನ್ನು ಹೋಲುವುದು. § ಕೆಲವು ಶ್ಲೋಕಗಳನ್ನು ಬರೆಯುವೆವು.

ಹಿಮಾಲಯದ ವರ್ಣನೆ:—

ಶ್ಲೇಷೇಽಸ್ಮಿನ್ ಫಲಪುಷ್ಪ ಪಲ್ಲವಸಮುಲ್ಲಾಸಃ ಸದಾ ಶಾಖಿನಾಂ
ಪದ್ಮಿನ್ಯಃ ಪ್ರತಿಪಲ್ವಲಂ ಚ ದಧತೇ ಹಾಸಂ ಹಿಮರ್ತಾವಪಿ
ಶೈತ್ಯಂ ಶಾಶ್ವತಮಂಭಸಾಂ ಭವತಿ ಚ ಸ್ವರ್ಗಾಂಗನಾನಾಂ ಗುಹಾ
ಗೇಹದ್ವಾರವಿಹಾರಿವಾರಿದಘಟಾಗರ್ಜಾಭಿರುಜ್ಜಾಗರಃ || ೪-೬೭

ಕ್ವಚಿದಿಹ ವಿಹರಂತರ್ವೀಕ್ಷ್ಯಮಾಣಸ್ಯ ರಾಮಾಃ
ಪ್ರಸರತಿ ರತಿರಂಶಮೋರ್ವೀಕ್ಷ್ಯಮಾಕಾಂಕ್ಷತೋಽಪಿ
ಕ್ವಚನ ಮುನಿಭಿರಧ್ಯಾಸ್ಯಂ ಪಶ್ಯತಸ್ತೀರ್ಥವೀಥೀಂ
ಭವತಿ ಭವವಿರಕ್ತಾ ಧೀರಧೀರಾತ್ಮನೋಽಪಿ || ೪-೬೮

ಹಿಮಂತರ್ತುವರ್ಣನ:—

ಗರ್ಭಾಗಾರೇ ಶಯನಮನಲಃ ಸಂನಿಧೌ ಸನ್ನಧೂಮಃ
ಶ್ಯಾಮಾಶ್ಲೇಷಃ ಸ್ಮರಪರವಶೋ ರಕ್ತವಸ್ತ್ರಾವೃತಿಶ್ಚ
ಕರ್ಪೂರ ಶ್ರೀವರ್ದನಕಮಲೇ ಕುಂಕುಮ್ವೈರಂಗರಾಗೋ
ಭಾಗ್ಯೈರೇತದ್ಭವತಿ ಭವಿನಾಂ ಹಂತ ಹೇಮಂತಕಾಲೇ || ೫-೫೦

ಖುಕ್ಕುರುಜ್ಜಗಾಮ ಜಡಿಮ್ನೈಕಭಾಜನಂ
ಕ್ಷಮಮೇತದತ್ರ ಕಮಲೋನ್ನತಿರ್ನ ಯತ್
ಹೃದಯಾನಿ ಯಸ್ತನುಭೃತಾಂ ಪ್ರಕಂಪಯ
ನ್ನುಮನಃಪದೇಷು ನಿದಧಾತಿ ಬಾಲಕಾನ್ || ೫-೫೧ ||



§ History of the classical Sanskrit Literature P. 48.

# ೧೩ನೆಯ ಶತಮಾನ

## ಶ್ರೀ ಧ ರ ದಾ ಸ

ಇವನು ಕ್ರಿ. ಶ. ೧೨೦೫ರಲ್ಲಿ "ಸದುಕ್ತಿಕರ್ಣಾಮೃತ" ಎಂಬ ಗ್ರಂಥವನ್ನು ಬರೆದಿರುವನು. ಇದರಲ್ಲಿ ೪೪೬ ಕವಿಗಳ ಶ್ಲೋಕಗಳು ಬರೆಯಲ್ಪಟ್ಟು ಹೆಚ್ಚಾಗಿ ವಂಗಕವಿಗಳ ಹೆಸರುಗಳೇ ಹೇಳಲ್ಪಟ್ಟಿವೆ. ಗ್ರಂಥಪರಿಶೀಲನದಿಂದ ಗ್ರಂಥಕಾರನ ತಂದೆಯು ರಾಜನಾದಲಕ್ಷ್ಮಣಸೇನನಲ್ಲಿದ್ದುದಾಗಿ ಬೋಧೆಯಾಗುತ್ತದೆ. '

## ಮ ಹೇ ಶ್ವ ರ

ಇವನು ಕ್ರಿ. ಶ. ೧೨೧೧ರಲ್ಲಿ 'ವಿಶ್ವಪ್ರಕಾಶ'ವೆಂಬ ಕೋಶವನ್ನು ರಚಿಸಿದುದಾಗಿ "ಇತಿ ಸಕಲವೈದ್ಯರಾಜ ಚಕ್ರಮುಕ್ತಾಶೇಖರಸ್ಯ ಗದ್ಯಪದ್ಯವಿದ್ಯಾನಿಧೇಃ ಮಹೇಶ್ವರಸ್ಯಕೃತೌ ವಿಶ್ವಪ್ರಕಾಶಾಭಿದಾನೇ..........." ಎಂಬುದರಿಂದ ಖಂಡಿತವಾಗುತ್ತದೆ. ಇದಕ್ಕೆ "ಶಬ್ದಭೇದಪ್ರಕಾಶ" ಎಂದೂ ಹೆಸರು. ಇದರಲ್ಲಿ ಮೂರುಪರಿಚ್ಛೇದಗಳಿರುವುವು.$

## ಅ ರಿ ಸಿಂ ಹ

ಇವನು ಶ್ವೇತಾಂಬರ ಜೈನಪಂಗಡಕ್ಕೆ ಸೇರಿದವನು. ಲಾವಣ್ಯಸಿಂಹ ಅಥವಾ ಲವಣಸಿಂಹನ ಮಗನು. ಅಮರ ಚಂದ್ರನಮಿತ್ರನು. ಇವನು ವಿಸಂ. ೧೨೭೬-೧೨೯೭ ಅಥವಾ ಕ್ರಿ. ಶ. ೧೨೧೯-೧೨೪೦ರಲ್ಲಿದ್ದವನು.§ ಇವನು ತನಗೆ ಆಶ್ರಯದಾತನಾದ ವಸ್ತುಪಾಲನ ಹೆಸರಿನಲ್ಲಿ "ಸುಕೃತಸಂಕೀರ್ತನ" ಎಂಬ ಗ್ರಂಥವನ್ನು ಬರೆದಿರುವನು. ಇದು ಅಲಂಕಾರ ಗ್ರಂಥ. ಇದಕ್ಕೆ "ಕಾವ್ಯಕಲ್ಪಲತಾ"ಎಂಬಾ ಪರನಾಮವೂ ಇರುವುದು. ಇವನು ತನ ಗ್ರಂಥಕ್ಕೆ 'ಕಾವ್ಯಕಲ್ಪಲತಾಶಿಕ್ಷಾವೃತ್ತಿ' ಎಂಬ ವ್ಯಾಖ್ಯಾನವನ್ನೂ ಬರೆದಿರುವನು.‡

' History of Classical Sanskrit Literature P. 122

$ Descriptive Catalogue of Sanskrit Manuscripts Tanjaore P. 3886.

§ Dictionary of Jain Biography P. 95

‡ S. K. De's Sanskrit Poetics P. 210

## ಜಿ ನ ದ ತ್ತ ಸೂ ರಿ

ಇವನು ಕ್ರಿ.ಶ. ೧೩ನೆಯ ಶತಮಾನದ ಪೂರ್ವಾರ್ಧದವನು. ಅಮರಚಂದ್ರನ ಆಚಾರ್ಯನು. 'ವಿವೇಕವಿಲಾಸ'ವೆಂಬ ಗ್ರಂಥವನ್ನು ಬರೆದಿರುವನು.

---

## ಪ್ರ ಹ್ಲಾ ದ ನ ದೇ ವ

ಇವನು ಪರಮಾರವಂಶದವನು. ಇವನಿಗೆ ಪರಮಾರ ಪ್ರಹ್ಲಾದನ ದೇವನೆಂದೂ ಹೆಸರಿದ್ದಿತು. ಇವನು ಯಶೋಧವಳನ ಮಗನು. ಚಂದ್ರಾವತಿಯರಾಜ* ನಾಗಿದ್ದ ಧಾರಾವರ್ಷನ ತಮ್ಮನು. ಧಾರಾವರ್ಷನು ಮಹಾ ಪರಾಕ್ರಮಶಾಲಿಯಾಗಿದ್ದುದರಿಂದ ವಸ್ತುಪಾಲನಂತಹ ಪ್ರಮುಖರು ಅನೇಕಸಲ ಇವನ ಸಹಾಯವನ್ನು ಕೋರುತ್ತಿದ್ದರು. ಇವನು ಬಹುಕಾಲದವರೆಗೆ ರಾಜ್ಯವನಾಳುತ್ತಿದ್ದುದರಿಂದ ಇವನ ತಮ್ಮನಾದ ಪ್ರಹ್ಲಾದನದೇವನಿಗೆ ರಾಜಪದವು ದೊರೆಯಲಿಲ್ಲವಾಗಿ ತೋರುತ್ತದೆ.†

**ಕಾಲ:**—ವಿ. ಸಂ ೧೨೨೦ ಅಥವಾ ಕ್ರಿ. ಶ. ೧೧೬೩ರ ವೇಳೆಗೆ ಪ್ರಹ್ಲಾದನದೇವನಿಗೆ ಯುವರಾಜ ಪದವಿಯು ದೊರೆತಿದ್ದಿತಾಗಿ ಶಾಸನಗಳಿಂದತಿಳಿಯಬರುತ್ತದೆ. ಇವನು ಸಂ ೧೨೬೫ ಅಥವಾ ಕ್ರಿ. ಶ. ೧೨೦೮ರ ವರೆಗೆ ಜೀವಿಸಿದ್ದನು. ತನ್ನ ಅಣ್ಣನಂತೆ ಇವನೂ ಮಹಾಪರಾಕ್ರಮಿಯಾಗಿದ್ದುದಲ್ಲದೆ ಮಹಾಕವಿಯೂ ಆಗಿದ್ದನು.

ಶಾರ್ಙ್ಗಧರ'ಪದ್ಧತಿ'ಯಲ್ಲಿಯೂ ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿಯೂ ಇವನ ಹೆಸರಿನ ಕೆಲವು ಶ್ಲೋಕಗಳು ದೊರೆಯುವುವು. ಇವನು ತನ್ನ ಅಣ್ಣನಮಗ ಸೋಮಸಿಂಹದೇವನಿಗೆ ಸಕಲಶಾಸ್ತ್ರವಿದ್ಯಾಭ್ಯಾಸವನ್ನು ಮಾಡಿಸಿದುದಾಗಿ 'ಆಬೂ ಪ್ರಶಸ್ತಿಯಿಂದತಿಳಿಯಬರುತ್ತದೆ.§ ಇವನು ತನ್ನ ಹೆಸರಿನಲ್ಲಿ ಪ್ರಹ್ಲಾದನಪುರವೆಂಬುದನ್ನು ಸ್ಥಾಪಿಸಿದುದಾಗಿಯೂ ಈಗ ಇದನ್ನುಪಾಲನಪುರವೆಂದು ಕರೆಯುವು

* ಚಂದ್ರಾವತಿಯು ಮಾರವಾರದೇಶಕ್ಕೆ ಸೇರಿದಸಂಸ್ಥಾನವಾಗಿದ್ದುದಾದರೂ ಗುಜರಾತಿನ ರಾಜರಿಗೆ ಮಂಡಲೀಶ್ವರರಾಗಿದ್ದುಕೊಂಡು ಸಂದರ್ಭಬಿದ್ದಾಗ ಸೈನ್ಯವನ್ನು ನಡೆಯಿಸಿ ಕೊಡುತ್ತಿದ್ದರು.

† ಪಾರ್ಥಪರಾಕ್ರಮದ ಮುನ್ನುಡಿ. ಪುಟ· ೨.

§ ಧಾರಾವರ್ಷಸುತೋಯಂ ಜಯತಿ ಶ್ರೀಸೋಮಸಿಂಹದೇವೋ ಯಃ
ಪಿತೃತಃ ಶೌರ್ಯಂ ವಿದ್ಯಾಂ ಪಿತೃವ್ಯಕೋ ಜ್ಞಾನಮುಭಯತೋ ಜಗೃಹೇ ॥ ೩೯

ದಾಗಿಯೂ ಹೇಳಿದೆ. ಇದು 'ಆಬೂ' ಪರ್ವತಕ್ಕೆ * ದಕ್ಷಿಣದಲ್ಲಿ ೫೪ ಮೈಲಿಗಳ ದೂರದಲ್ಲಿದ್ದು ಪಾಲನಪುರಸಂಸ್ಥಾನದ ರಾಜಧಾನಿಯಾಗಿರುವುದು. ಪ್ರಕೃತ ಇದನ್ನು ಮುಸಲ್ಮಾನರಾಜನೊಬ್ಬನು ಬರೋಡದ ಮಹಾರಾಜರಿಗೆ ೩೮,೦೦೦ರೂ ಪಾಯಿಗಳ ಪೊಗದಿಯನ್ನು ಕೊಟ್ಟುಕೊಂಡು ಆಳುತ್ತಿರುವನು. ಇದರಲ್ಲಿ ಪ್ರಹ್ಲಾದ ದೇವನು ಕಟ್ಟಿಸಿದ ಪಾಲ್ಹವಿಹಾರವೆಂಬ ಜೈನದೇವಾಲಯವಿರುವುದು. x

**ಗ್ರಂಥ:**—ಇವನು ಪಾರ್ಥಪರಾಕ್ರಮವೆಂಬ ರೂಪಕವನ್ನು ಬರೆದಿರುವನು. ಇದು ರೂಪಕ ಭೇದವಾದ ವ್ಯಾಯೋಗ ಜಾತಿಗೆ ಸೇರಿದುದು.

ಕಾಂಚನಾಚಾರ್ಯನ ಧನಂಜಯವಿಜಯ. ರಾಮಚಂದ್ರನ ನಿರ್ಭಯಭೀಮ ವ್ಯೋಕ್ಷಾದಿತ್ಯನ ಭೀಮಪರಾಕ್ರಮ. ವತ್ಸರಾಜನ ಕಿರಾತಾರ್ಜುನೀಯ. ಧರ್ಮ ಪಂಡಿತನ ನರಕಾಸುರವಿಜಯ. ಸದಾಶಿವನ ಪ್ರಚಂಡಭೈರವ. ಪ್ರಚಂಡಗರುಡ ವಿಶ್ವನಾಥನ ಸೌಗಂಧಿಕಾಹರಣ. ಗೋವಿಂದನ ವಿನತಾನಂದನ. ಇವೇಮೊದಲಾದವು ಈ ಜಾತಿಯವುಗಳು.

ಕವಿಯು ಕಥಾಭಾಗವನ್ನು, ಮಹಾ ಭಾರತ ವಿರಾಟಪರ್ವದಿಂದ ತೆಗೆದುಕೊಂಡಿರುವನು. ಕೌರವರು ವಿರಾಟನ ಗೋವುಗಳನ್ನು ಅಪಹರಿಸಿಕೊಂಡು ಹೋದರೆಂಬುದನ್ನು ತಿಳಿದು ಅರ್ಜುನನು ಉತ್ತರ ಕುಮಾರನೊಡನೆ ಹೊರಟು ಯುದ್ಧದಲ್ಲಿ ದುರ್ಯೋಧನನನ್ನು ಸೋಲಿಸಿ ಜಯಶೀಲನಾಗಿ ಗೋವುಗಳೊಡನೆ ಹಿಂತಿರುಗಿದ್ದನೆಂಬುದು ಕಥಾವಸ್ತು. ಇದರಲ್ಲಿ ವೀರರಸವು ಪ್ರಧಾನವಾಗಿರುವದು. ಇದರಲ್ಲಿ ಉತ್ತರನ ಪರಾಕ್ರಮದ ಒಣಜಬರೂ, ಅರ್ಜುನನ ಪರಾಕ್ರಮದ ಸೊಬಗೂ ಹೃದಯಂಗಮವಾಗಿ ವರ್ಣಿಸಲ್ಪಟ್ಟಿರುವುದು. ಮಾದರಿಯ ಕೆಲವು ಶ್ಲೋಕಗಳನ್ನು ಬರೆಯುವೆವು. ಪ್ರಹ್ಲಾದನ ದೇವನ ಕವಿತ್ವದಲ್ಲಿ ಸಮತಾ, ಸಮಾಧಿ, ಪ್ರಸಾದ, ಗುಣಗಳು ಪೂರ್ಣವಾಗಿವೆಯೆಂದು ಹೇಳಿದೆ.§

ಉತ್ತರ ಕುಮಾರನ ಪ್ರತಾಪವರ್ಣನ:—

ರಾಮೇಣ ಸ್ವಧೃತಿ ಧೃತಾ ಕೃತಂ ಯದಗ್ರೇ
ಮಾಹೇಯಿ ಹರಣಚಣಸ್ಯ ಹೈಹಯಸ್ಯ

* ಇದಕ್ಕೆ ನಂದಿವರ್ಧನವೆಂಬಾಪರನಾಮವೆಂದೂ, ಹಿಮಾದ್ರಿಜನೆಂದೂ, ಹೇಳಿದೆ.
ನಂದೀವರ್ಧನ ಇತ್ಯಾಸೀತ್ ಪ್ರಾಕ್ ಶೈಲೋಽಯಂ ಹಿಮಾದ್ರಿಜಃ
ಕಾಲೇನಾಽರ್ಬುದನಾಗಾಧಿಷ್ಠಾನಾತ್ತ್ವರ್ಬುದ ಇತ್ಯಭೂತ್ ॥
ತೀರ್ಥಕಲ್ಪ, ಅರ್ಬುದಕಲ್ಪ

x ಪಾರ್ಥಪರಾಕ್ರಮದ ಮುನ್ನುಡಿ ಪುಟ ೫.

§ ಸಂದರ್ಭಃ-ಸುಕವೇಃ-ಸಮಾಧಿಸಮತಾಗರ್ಭಃ-ಕುಮಾರಸ್ಯ.ಚ। ಪಾರ್ಥಪರಾಕ್ರಮ (೪)
ಪ್ರಹ್ಲಾದನಸ್ಯ ಕವಿತಾ ವಸತಿಃ-ಪ್ರಸತ್ತೇಃ ( ಪಾರ್ಥಪರಾಕ್ರಮ ) (೫)

ತತೋಽದ್ಯ ಪ್ರಸಭಮಪಂಕ್ತ್ಯತಸ್ಯ ಸೋಽಹಂ
ಕೌರವ್ಯಾಧಮ ' ಸಮರೇ ಕರೋಮಿ ರೋಷಾತ್ ॥ ೧೬ ॥

ಸೋದರಿಯಾದ ಉತ್ತರೆಯನ್ನು ಕುರಿತು:—

ಕಮಪಿ ಸಮರಸೀಮನ್ಯೇಷ ಭಂಕ್ತ್ವಾಸ್ಮಿ ಭೀಷ್ಮಂ
ಭುವನವಿದಿತ ಶಕ್ತಿರ್ಯತ್ರ ಶಾಂತಃ-ಕೃತಾಂತಃ
ಧನುರನುದಿತದರ್ಪಪ್ರಾತಿಭಂ ಕುಂಭಕೇತು
ರ್ಭಜತು ಚ ಭುಜಯೋರ್ಮೇ ಗೌರವಂ ಗಾಹಮಾನಃ ॥೧೭॥

ಅರ್ಜುನನು ಉತ್ತರನಿಗೆ ಭೀಷ್ಮನನ್ನು ತೋರಿಸಿಹೇಳಿದುದು:—

ಯಂ-ಕ್ಷತ್ರಾಣಾಂ ಕ್ಷತಜಸರಿತಿ ಸ್ನಾತಿ ಜಾತೇ ಸ್ಮ ಪಿತ್ರೋಃ
ಶಾಮಾಶೌಚೇ ತಮಪಿ ಸಮಿತಿ ವ್ಯಸ್ತವಾನ್ ಜಾಮದಗ್ನ್ಯಂ
ಕಾಲೇ ನೋಚ್ಚೈಃ-ಕನಕತನುನಾ ಕೇತನಾಗ್ರಸ್ಥಿತೇನ
ಸ್ವಾಮಾಗಾರಂ ಸ್ಫುರತಿಪುರತಃ-ಶಂತನೋಃ-ಪುತ್ರ ಏಷಃ—೨೭ ॥

ಅಪಿಚ

ಶಶಧರಶಿರೋಮಾಲ್ಯಂ ಕುಲ್ಯಾ ಸ್ವಯಂ ಯಮಜೀಜನತ್
ತ್ರಿಭುವನ ಜಯಸ್ಮೇರೋ ಯಸ್ಯ ಸ್ಮರೋಽಪಿ-ಪರಾಙ್ಮುಖಃ
ನಿಯುತಮಯುತಂ ವೀರಾಣಾಂ ಯಸ್ತೃಣೀಕುರುತೇ ರಣೇ
ಕುರುಕುಲಗುರುಃ-ಸೋಽಯಂ ಭೀಷ್ಮಃ-ಸಮೃಧ್ಯತಿ ಸೂಕ್ಷ್ಮಣಾ ॥೨೮॥

ಯುದ್ಧ ಕುತೂಹಲಿಯಾದ ಅರ್ಜುನನು, ಪ್ರಣಾಮಪೂರ್ವಕ ಧನ್ಸುಸನ್ನು ತೆಗೆದುಕೊಂಡು: —

ಜಯತ್ಯಜಗವಂ ಧನುರ್ಜಯತಿ ಧೂರ್ಜಟೇರ್ಧನ್ವಿನಾ
ಧನುರ್ಧರಪುರಂಧರೋ ಜಯತಿ ಶಾಂರ್ಙ್ಗಧನ್ವಾ ಹರಿಃ.
ಧನುಷ್ಟ ಖುಪುರೋಽಪಿತಂ ಜಯತಿ ಸಾ ಚ ಧಾನುಷ್ಕತಾ
ಸುರಾರಿಸಮರಾಜಿರ ಪ್ರಣಯಿನಸ್ತ್ರಿಲೋಕೀಪತೇಃ ॥ ೩೬ ॥

ಎಂದು ಹೇಳಿರುವುದನ್ನು ವಿವೇಚಿಸಿ ನೋಡಿದರೆ ಎಂತಹನಾದರೂ ವೀರರಸ ದಿಂದ ಪ್ರಮತ್ತನಾಗದಿರನು



## ಮ ದ ನ

ಇವನು ಗಂಗಾಧರನ ವಂಶೀಯನು. ಅರ್ಜುನವರ್ಮನ ರಾಜಗುರು. ಗೌಡದೇಶದವನು. ಇವನಿಗೆ ಉಪಾಧ್ಯಾಯನೆಂದೂ, ಬಾಲಸರಸ್ವತಿಯೆಂಗೂ ನಾಮಾಂತರವಿದ್ದಿತು. ಅರ್ಜುನವರ್ಮನು ಸುಭಟನ ಮಗನೆಂದು ಒಂದುಕಡೆ ಹೇಳಿದೆ.

**ಕಾಲ:**—ಅರ್ಜುನವರ್ಮನು ವಿ. ಸಂ. ೧೧೬೭-೧೨೭೨ರ ವರೆಗೆ ಎಂದರೆ ಕ್ರಿ. ಶ, ೧೨೧೦-೧೨೧೫ರ ವರೆಗೆ ಆಳಿದುದಾಗಿದೆ. ಕ್ರಿ. ಶ. ೧೨೧೧-೧೨೧೩ ಮತ್ತು ೧೨೧೫ರಲ್ಲಿ. ಅರ್ಜುನವರ್ಮನು ಕೊಟ್ಟ ಮೂರು ತಾಮ್ರಶಾಸನಗಳಿರುವುವು. ಮದನನು ಸುಮಾರು ಕ್ರಿ. ಶ. ೧೨೧೩ರ ಸುಮಾರಿನಲ್ಲಿ ಗ್ರಂಥರಚನೆ ಮಾಡಿರ ಬೇಕಾಗಿ ಭಾಸವಾಗುತ್ತದೆ. ಇದೇ ಕಾಲವನ್ನೇ ಡಾ|| ಹಲ್ಟ್ಜರವರು ಸಾಧಿಸಿರುವರು.*

**ಗ್ರಂಥ:**—ಇವನು 'ಪಾರಿಜಾತಮಂಜರಿ' ಎಂಬ ನಾಟಿಕೆಯನ್ನು ಬರೆದಿರುವನು. ಇದಕ್ಕೆ ವಿಜಯಶ್ರೀ ಎಂದೂ ಹೆಸರಿರುವುದು. ಇದರಲ್ಲಿ ಅರ್ಜುನವರ್ಮನಿಗೂ, ಗುರ್ಜರರಾಜನಾದ ಚಾಲುಕ್ಯವಂಶದ ಜಯಸಿಂಹನಿಗೂ ನಡೆದ ಯುದ್ಧವಿಚಾರವೂ, ಜಯಸಿಂಹನ ಪರಾಜಯವೂ ವರ್ಣಿತವಾಗಿರುವುದಲ್ಲದೆ ಅರ್ಜುನವರ್ಮನು ಪಾರಿಜಾತಮಂಜರಿ ಅಥವಾ ವಿಜಯಶ್ರೀಯನ್ನು ಮೋಹಿಸಿ ರಾಜ್ಞಿಯಾದ ಸರ್ವಕಲೆಯ ಇಷ್ಟದಂತೆ ವಿಜಯಶ್ರೀಯನ್ನು ಮದುವೆಯಾದುದು ಹೇಳಿದೆ. ಪ್ರಕೃತ ಅಚ್ಚಾಗಿ ದೊರೆತಿರುವುದು ಎರಡು ಅಂಕಗಳು ಮಾತ್ರ. ರಾಜನೂ ಮತ್ತು ಕುಸುಮಾಕರ ಈ ಇಬ್ಬರು ಮಾತ್ರ ಸಂಸ್ಕೃತದಲ್ಲಿಯೂ ಉಳಿದವರು ಪ್ರಾಕೃತದಲ್ಲಿಯೂ ಮಾತನಾಡುವರು. ಗದ್ಯಭಾಗವು ಶೂರಸೇನ ಶೈಲಿಯಲ್ಲಿಯೂ, ಪದ್ಯಭಾಗವು ಮಹಾರಾಷ್ಟ್ರ ಶೈಲಿಯಲ್ಲಿಯೂ ಹೇಳಲ್ಪಟ್ಟಿರುವುದು. ಅರ್ಜುನವರ್ಮನ ಪಟ್ಟದರಾಣಿಯಾದ ಸರ್ವಕಲೆಯು ಕುಂತಲರಾಜನ ಮಗಳೆಂಬುದು:—

ಸಮುಚ್ಚಯೇನ ಯಾ ಸೃಷ್ಟಾ ಕಲಾನಾಂ ಪರಮೇಷ್ಠಿನಾ
ಕುಂತಲೇಂದ್ರಸುತಾ ಸೇಯಂ ರಾಜ್ಞಾಃ **ಸರ್ವಕಲಾ** ಪ್ರಿಯಾ || ೧-೧೧

ಎಂದು ಸೂತ್ರಧಾರನ ಹೇಳಿಕೆಯಿಂದ ಸ್ಪಷ್ಟಪಡುವುದು. ಇದರ ಶೈಲಿಯು ರತ್ನಾವಳಿಯನ್ನು ಹೋಲುವುದು. ಮಾದರಿಯ ಶ್ಲೋಕಗಳು—

ವಿರಹೇ ನೂನಮೇಕಸ್ಯ ದುಃಖೇನ ಲಭತೇ ಸುಖಂ
ಸುಖೇನ ಚೇತರೋ ದುಃಖಂ ಪ್ರೇಮ್ಣೋ ಹಿ ಕುಟಿಲಾ ಗತಿಃ || ೨-೩೮

ರಾಜನ ಹೇಳಿಕೆ—

ಧನ್ಯೋಽಯಂ ಸಹಕಾರಸುಂದರಯುವಾ ಚೈತ್ರಾನಿಲಾಂದೋಲನೈ
ರುದ್ಯುಕ್ತಃ ಪರಿರಿಪ್ಸತೇ ಪ್ರಿಯತಮಾಂ ವಾಮಾಂಗ ವಿಶ್ರಂಭಿಣೀಂ
ಏಷಾಪ್ಯರ್ಧಸುವಾಸಿನೀ ನವಲತಾ ನಮ್ರಾಭವಂತೀ ಭೃಶಂ
ನಿರ್ಬಂಧೇನ ಪರಾಙ್ಮುಖೀ ನ ಸಹತೇ ವ್ಯೈಯಾತ್ಯ ನಾತ್ಯರ್ಥಮಪಿ || ೨-೪೫



* Introduction to Parijathamanjari by Dr E. Hultzschr P. 5

# ವ ಸ್ತು ಪಾ ಲ

ಇವನು ಬಾಲಚಂದ್ರನ ಶಿಷ್ಯನು. ಗುಜರಾತಿಗೆ ಸೇರಿದ ಧೋಲ್ಕವರಾಜನಾದ ವೀರಧವಳನ ಮುಖ್ಯಾಮಾತ್ಯನಾಗಿದ್ದು ಸ್ವಸಾಮರ್ಥ್ಯದಿಂದ ತನ್ನ ಒಡೆಯನಿಗೆ ಅಪಾರವಾದ ರಾಜ್ಯವನ್ನೂ ಕೀರ್ತಿಯನ್ನೂ ಗಳಿಸಿಕೊಟ್ಟಿದ್ದನು. ವಸ್ತುಪಾಲನೆಂಬುದಕ್ಕೆ ಬದಲು ತನ್ನನ್ನು ವಸಂತಪಾಲನೆಂದು ಮಹಾಕವಿಗಳಾದ ಹರಿಹರ ಮತ್ತು ಸೋಮೇಶ್ವರನೇ ಮೊದಲಾದವರು ಕರೆಯುತ್ತಿದ್ದುದಾಗಿ ತನ್ನ ಕಾವ್ಯದಲ್ಲಿ ಹೇಳಿಕೊಂಡಿರುವುದಲ್ಲದೆ* ಪ್ರತಿಸರ್ಗಾಂತ್ಯದಲ್ಲಿ,

"ಇತಿ ಶ್ರೀಗೂರ್ಜರೇಶ್ವರ ಮಹಾಮಾತ್ಯ ಶ್ರೀವಸಂತಪಾಲವಿರಚಿತೇ........ ......ಮಹಾಕಾವ್ಯೇ........ಎಂದು ಹೇಳಿಕೊಂಡಿರುವುದರಿಂದ ಸ್ಪಷ್ಟಪಡುತ್ತದೆ. ಇವನಿಗೆ ಕವಿಕುಂಜರ, ಕವಿಚಕ್ರವರ್ತಿ† ಎಂಬ ಬಿರುದುಗಳೂ ಇದ್ದವು. ಇವನು ಬಹುದಾತಾರನೂ ಮಹಾಕವಿ, ಕಾವ್ಯಪ್ರಿಯನೂ ಆಗಿದ್ದುದರಿಂದ ಇವನನ್ನು ಸರಸ್ವತೀಕಂಠಾಭರಣನೆಂದೂ, ಲಘುಭೋಜರಾಜನೆಂದೂ ಕರೆಯಿಸಿಕೊಳ್ಳುತ್ತಿದ್ದುದಾಗಿ "ಅಥ ಸಂವತ್ ೧೨೭೭ ವರ್ಷೇ ಸರಸ್ವತೀಕಂಠಾಭರಣ ಲಘುಭೋಜರಾಜ ಮಹಾಕವಿ ಮಹಾಮಾತ್ಯ ಶ್ರೀವಸ್ತುಪಾಲೇನ ಮಹಾಯಾತ್ರಾ ಪ್ರಾರೇಭೇ" ಎಂದು ಮೇರುತುಂಗಾಚಾರ್ಯನು ಒಕ್ಕಣಿಸಿರುವನು.‡ ಇವನು ಸರಸ್ವತಿಯ ಧರ್ಮಪುತ್ರನೆಂದು ಶಾಸನಗಳಿಂದ ತಿಳಿಯಬರುವುದಲ್ಲದೆ§ ಗ್ರಂಥಕಾರನೂ ತನ್ನ ಕಾವ್ಯದಲ್ಲಿ ಹೇಳಿಕೊಂಡಿರುವನು.$

ವಸ್ತುಪಾಲನು ಆಬೂ ಮತ್ತು ಗಿರನಾರ್ ಬೆಟ್ಟಗಳ ಮೇಲೆ ಅನೇಕ ದೇವಾಲಯಗಳನ್ನು ಕಟ್ಟಿಸಿದುದಲ್ಲದೆ ಜನೋಪಕಾರವಾದ ಅನೇಕ ಕೆಲಸಗಳನ್ನು ಮಾಡಿ

* ಕೀರ್ತ್ಯಾ ಸೌರಭಸಾರಸುಂದ್ರಸುಮನಃ ಸಂದೋಹಸಂದೋಹಕೃತ್
ಕಾಂತ್ಯಾ ಪಾತಿ ವಸಂತಮನ್ವಹಮಸೂಪಿತ್ಯರ್ಪಿತಾರ್ಥಕ್ರಮಂ
ಖ್ಯಾತಂ ಪ್ರಾಪ ವಸಂತಪಾಲ ಇತಿ ಯೋ ನಾಮಾದ್ವಿತೀಯಂ ಮುದಾ
ವಿದ್ವದ್ಭಿಃ ಪರಿಕಲ್ಪಿತಂ ಹರಿಹರ ಶ್ರೀಸೋಮಶರ್ಮಾದಿಭಿಃ

(ನರನಾರಾಯಣಾನಂದ ೧೬—೩೮)

† Introduction to ನರನಾರಾಯಣಾನಂದ P. 9

‡ ಪ್ರಬಂಧಚಿಂತಾಮಣಿ ಪುಟ ೨೫೪

§ ಧರ್ಮಸೂನು ಸರಸ್ವತ್ಯಾಃ ಶಾರದಾಪ್ರತಿಪನ್ನಾಪತ್ಯೇನ

(Girnar Insciptions)

$ ನರನಾರಾಯಣಾನಂದೋ ನಾಮ ಕಂದೋಮುದಾಭಿದಂ
ತೇನ ತೇನ ಮಹಾಕಾವ್ಯಂ ವಾಗ್ದೇವೀಧರ್ಮಸೂನುನಾ ||

ನರನಾರಾಯಣಾನಂದ ೧೬—೪೦

ಸಿದನು. ಇವನಿಗೆ ಯಾವ ಮತದಲ್ಲಿಯೂ ಪಕ್ಷಪಾತವಿರಲಿಲ್ಲ. ಮುಸಲ್ಮಾನರನ್ನು ಮ್ಲೇಚ್ಛರೆಂದು ದೂಷಿಸುತ್ತಿದ್ದ ಆ ಕಾಲದಲ್ಲಿಯೂ, ಇವನು ಅವರನ್ನು ವಿಶ್ವಾಸದಿಂದ ಕಂಡು ಅವರಿಗಾಗಿ ಮಸೀದಿಗಳನ್ನು ಕಟ್ಟಿಸಿಕೊಟ್ಟನು. ಇವನು ಸರ್ವಮತಸಮನಾಗಿದ್ದು ಮಾಡಿರುವ ಜನೋಪಕಾರ ವಿಚಾರಗಳು ಅನೇಕ ಪ್ರಸಕ್ತಿಗಳಲ್ಲಿಯೂ, ಚತುರ್ವಿಂಶತಿಪ್ರಬಂಧಗಳಲ್ಲಿಯೂ, ಪ್ರಬಂಧಚಿಂತಾಮಣಿಯಲ್ಲಿಯೂ, ಶಾಸನಗಳನೇಕಗಳಲ್ಲಿಯೂ, ಸೋಮೇಶ್ವರನ ಕೀರ್ತಿಕೌಮುದಿಯಲ್ಲಿಯೂ, ಅರಿಸಿಂಹನ ಸುಕೃತಸಂಕೀರ್ತನದಲ್ಲಿಯೂ ವಸ್ತುಪಾಲನ ಮಗ ಜೈತ್ರಸಿಂಹನ ಪ್ರಾರ್ಥನೆಯಂತೆ ಬರೆದುದಾದ ವಸಂತವಿಲಾಸಮಹಾಕಾವ್ಯದಲ್ಲಿಯೂ ,ಇವನ ದಾನ ಸಾಹಸ ಪರಾಕ್ರಮಾದಿಗಳು ವರ್ಣಿತವಾಗಿರುವುದಲ್ಲದೆ, ಜಿನಹರ್ಷನು ಬರೆದಿರುವ ವಸ್ತುಪಾಲಚರಿತದಲ್ಲಿ ಇವನು ಮಾಡಿರುವ ಪ್ರತಿಯೊಂದು ಕಾರ್ಯವೂ ಅಗ್ಗಳಿಕೆಯಿಂದ ಹೇಳಲ್ಪಟ್ಟಿದೆ. ಜಿನಪ್ರಭಸೂರಿಯು ಬರೆದಿರುವ ತೀರ್ಥಕಲ್ಪದಲ್ಲಿನ ವಸ್ತುಪಾಲಚರಿತದಲ್ಲಿ:—

ಲಕ್ಷ್ಮೈಕಂ ಸಪಾದಂ ಜಿನಬಿಂಬಾನಾಂ ಕಾರಿತಂ | ಅಷ್ಟಾದಶ ಕೋಟಯಃ ಷಣ್ಣವತಿರ್ಲಕ್ಷಾಃ ಶ್ರೀಶತ್ರುಂಜಯತೀರ್ಥೇ ದ್ರವಿಣಂ ವ್ಯಯಿತಂ | ದ್ವಾದಶಕೋಟಯೋಽಶೀತಿಲಕ್ಷಾಃ ಶ್ರೀಉಜ್ಜಯಂತೇ | ದ್ವಾದಶಕೋಟ್ಯಸ್ತ್ರಿಪಂಚಾಶಲ್ಲಕ್ಷಾ ಅರ್ಬುದಶಿಖರೇ ಲೂಣಿಗವಸತ್ಯಾಂ | ನವಶತಾನಿ ಚತುರಶೀತಿಶ್ಚ ಪೌಷಧಶಾಲಾಃ ಕಾರಿತಾಃ | ಪಂಚಶತಾನಿ ದಂತಮಯಸಿಂಹಾಸನಾನಾಂ ಪಂಚಶತಾನಿ ಪಂಚೋತ್ತರಾಣಿ ಸಮವಸರಣಾನಾಂ ಜಾದರಮಯಾನಾಂ | ಬ್ರಹ್ಮಶಾಲಾಃ ಸಪ್ತಶತಾನಿ, ಸಪ್ತಶತಾನಿ ಸತ್ರಾಕಾರಾಣಾಂ, ಸಪ್ತಶತೀ ತಪಸ್ವಿಕಾಪಾಲಿಕಮಠಾನಾಂ | ಸರ್ವೇಷಾಂ ಭೋಜನನಿರ್ವಾಪಾದಿದಾನಂಕೃತಂ ತ್ರಿಂಶಚ್ಛತಾನಿ ದ್ವ್ಯಾದ್ವ್ಯತ್ತರಾಣಿ ಮಾಹೇಶ್ವರಾಯತನಾನಾಂ, ತ್ರಯೋದಶಶತಾನಿ ಚತುರುತ್ತರಾಣಿ ಶಿಖರಬದ್ಧಜೈನಪ್ರಾಸಾದಾನಾಂ, ತ್ರಯೋವಿಂಶತಿಃ ಶತಾನಿ ಜೀರ್ಣಚೈತ್ಯೋದ್ಧಾರಾಣಾಂ | ಅಷ್ಟಾದಶಕೋಟಿಸುವರ್ಣವ್ಯಯೇನ ಸರಸ್ವತೀಭಾಂಡಾಗಾರಾಣಾಂ ಸ್ಥಾನತ್ರಯೇ ಭರಣಂ ಕೃತಂ ಪಂಚಶತೀಬ್ರಾಹ್ಮಣಾನಾಂ ವೇದಪಾಠಂ ಕರೋತಿ ಸ್ಮ ವರ್ಷಮಧ್ಯೇ ಸಂಘಪೂಜಾತ್ರಿತಯಂ, ಪಂಚದಶಶತೀ ಶ್ರಮಣಾನಾಂ ಗೃಹೇ ನಿತ್ಯಂ ವಿಹರತಿ ಸ್ಮ | ತಟಕಕಾರ್ಪಾಟಿಕಾನಾಂ ಸಹಸ್ರಂ ಸಾಧಿಕಂ ಪ್ರತ್ಯಹಮಭುಂಕ್ತ | ತ್ರಯೋದಶತೀರ್ಥಯಾತ್ರಾಃ ಸಂಘಪತೀಭೂಯಕೃತಾಃ | ತತ್ರ ಪ್ರಥಮಯಾತ್ರಾಯಾಂ ಚತ್ವಾರಿ ಸಹಸ್ರಾಣಿ ಪಂಚಶತಾನಿ ಶಕಟಾನಾಂ ಸಶಯ್ಯಾಪಾಲಕಾನಾಂ,

ಸಪ್ತಶತೀ ಸುಖಾಸನಾನಾಂ, ಅಷ್ಟಾದಶಶತೀ ವಾಹಿನೀನಾಂ, ಏಕಾನ್ನ ವಿಶಂತಿಃ ಶತಾನಿ ಶ್ರೀಕರೀಣಾಂ, ಏಕವಿಂಶತಿಃ ಶತಾನಿ ಶ್ವೇತಾಂಬರಾಣಾಂ ಏಕಾದಶಶೀತಿದಿಗಂಬರಣಾಂ, ಚತ್ವಾರಿ ಶತಾನಿಸಾರ್ದ್ಧಾನಿ ಜೈನ ಗಾಯನಾನಾಂ ತ್ರಯಸ್ತ್ರಿಂಶಚ್ಛತೀ ಬಂದಿಜನಾನಾಂ | ಚತುರಶೀತಿಸ್ತ ಡಾಗಾಃ ಸುಬದ್ಧಾಃ | ಚತುಃ ಶತೀ ಚತುಃಷಷ್ಟ್ಯಧಿಕಾ ವಾಪೀನಾಂ, ಪಾಷಾಣಮಯಾನಿ ದ್ವಾತ್ರಿಂಶದ್ದುರ್ಗಾಣಿ, ದಂತಮಯಜೈನರಥಾನಾಂ ಚತುರ್ವಿಂಶತಿಃ, ವಿಂಶಂಶತಂಶಾಕಘಟಿತಾನಾಂ | ಸರಸ್ವತೀಕಂಠಾಭರ ಣಾದೀನಿ ಚತುರ್ವಿಂಶತಿರ್ಬಿರುದಾನಿ ಶ್ರೀವಸ್ತುಪಾಲಸ್ಯ | ಚತುಃಷಷ್ಠಿ ರ್ಮಸೀತಯಃ ಕಾರಿತಾಃ | ದಕ್ಷಿಣಸ್ಯಾಂ ಶ್ರೀಪರ್ವತಂ ಯಾವತ್ ಪಶ್ಚಿ ಮಾಯಾಂ ಪ್ರಭಾಸಂ ಯಾವತ್ ಉತ್ತರಸ್ಯಾಂ ಕೇದಾರಂ ಯಾವತ್, ಪೂರ್ವಸ್ಯಾಂ ವಾರಾಣಸೀಂ ಯಾವತ್ ತಯೋಃ ಕೀರ್ತನಾನಿ | ಸರ್ವಾ ಗ್ರೇಣ ತ್ರೀಣಿ ಕೋಟಿಶತಾನಿ ಚತುರ್ದಶಲಕ್ಷ ಅಷ್ಟಾದಶಸಹಸ್ರಾಣಿ ಅಷ್ಟಶತಾನಿ ಲೋಷ್ಠಿಕತ್ರಿತ ಯೋನಾನಿ ದ್ರವ್ಯವ್ಯಯಃ | ತ್ರಿಷಷ್ಠಿ ವಾರಾ ಸಂಖ್ಯಾಮೇ ಜೈತ್ರಪತ್ರಂ ಗೃಹೀತಂ || ಎಂದು ಹೇಳಿರುವುದು ಕಂಡುಬರುತ್ತದೆ.

ವಸ್ತುಪಾಲನು ಸ್ವತಃ ಕವಿಯಾಗಿದ್ದು ಇತರರ ಗ್ರಂಥಗಳಲ್ಲಿನ ಗುಣದೋಷ ಗಳನ್ನು ವಿಮರ್ಶಿಸಿ ಹೇಳುವ ಜಾಣ್ಮೆಯನ್ನುಂಟಾಗಿದ್ದನು. ಇವನು ಸೋಮೇ ಶ್ವರ, ಹರಿಹರ, ಅರಿಸಿಂಹನೇ ಮೊದಲಾದ ಮಹಾ ಕವಿಗಳಿಗೆ ಆಶ್ರಯವನ್ನು ಕೊಟ್ಟಿದ್ದುದಲ್ಲದೆ ದಾಮೋದರ, ನಾನಾಕ, ಜಯದೇವ, ಮದನ, ಪೀಕಲ, ಕೃಷ್ಣ ಸಿಂಹ ಮತ್ತು ಶಂಕರಸ್ವಾಮಿ ಇವರಿಗೆ ಪೋಷಕನಾಗಿದ್ದನು. ಸೋಮೇಶ್ವರನು ತಾನು ಬರೆದುದಾದಕೀರ್ತಿಕೌಮುದಿಯಲ್ಲಿ ತನಗೆ ಆಶ್ರಯ ಕೊಟ್ಟವನನ್ನು ಬಹುವಾಗಿ ಕೊಂಡಾಡಿರುವನು. ಹರಿಹರನು ಬರೆದ ಗ್ರಂಥವಾವುದೆಂಬುದು ನಮಗೆ ತಿಳಿಯದು. ಅರಿಸಿಂಹನು 'ಸುಕೃತಸಂಕೀರ್ತನ'ದಲ್ಲಿ ವಸ್ತುಪಾಲನನ್ನು ಕೊಂಡಾಡಿ ಬಹುಮಾನವನ್ನು ಹೊಂದಿದನು. ಶಂಕರಸ್ವಾಮಿಯ ವಿಚಾರವಾಗಿ ಕೊಂಚವೂ ತಿಳಿಯದಾಗಿದೆ. ಈತನು ಆಗ ಇದ್ದ ದ್ವಾರಕೆಯ ಶಂಕರಾಚಾರ್ಯ ರಾಗಿರಬೇಕೆಂದೂ ಊಹಿಸಲಾಗುತ್ತದೆ. ಆದರೆ ಹೀಗೆಂದು ಹೇಳುವ ಪ್ರಮಾಣ ಗ್ರಂಥಗಳು ದೊರೆಯವು. ಇವನು ಕೇವಲ ಗುಣೈಕಪಕ್ಷಪಾತಿಯಾಗಿದ್ದುದರಿಂದ ಮಹಾಕವಿಯಾದ ಹರಿಹರನ ವಿಚಾರದಲ್ಲಿ ಸೋಮೇಶ್ವರನು ಅಸೂಯೆಯಿಂದ ವರ್ತಿಸುತ್ತಿದ್ದನಾದರೂ, ಧೋಲ್ಕದ ರಾಜಾಸ್ಥಾನದಲ್ಲಿ ಹರಿಹರನಿಗೆ ಹೆಚ್ಚಾದ ಗೌರ ವವು ದೊರೆತಿದ್ದಿತು.

**ಕಾಲ:**—ಸಂವತ್ ೧೨೭೭ ಅಥವಾ ಕ್ರಿ. ಶ ೧೨೨೦ವಸ್ತುಪಾಲನ ಗ್ರಂಥ ನಿರ್ಮಾಣಕಾಲವೆಂದು ಮೇರುತುಂಗನು ಹೇಳುವನು.

ಜಿನಹರ್ಷನುಬರೆದಿರುವ ವಸ್ತುಪಾಲಚರಿತದ ಕೊನೆಯ ಅಧ್ಯಾಯದಲ್ಲಿ ಸಂವತ್ ೧೨೮೭-೮೮ರಲ್ಲಿ ಆಬೂ ಮತ್ತು ಗಿರ್ನಾರ್‌ಪರ್ವತಗಳಮೇಲೆ ದೇವಾಲಯಗಳನ್ನು ಕಟ್ಟಿಸಿರಲಿಲ್ಲವೆಂದು ಹೇಳುವುದರಿಂದ ಈ ಕಾವ್ಯನಿರ್ಮಾಣವು ಸಂ. ೧೨೭೭-೮೭ರ ಮಧ್ಯಕಾಲದಲ್ಲಾಗಿರಬೇಕೆಂದು ತೋರುತ್ತದೆ. ಹೇಗೂ ವಸ್ತುಪಾಲನು. ಕ್ರಿ. ಶ. ೧೩ನೆಯ ಶತಮಾನದ ಪೂರ್ವಾರ್ಧದವನೆಂಬುದು ಸ್ಪಷ್ಟವಾಗುತ್ತದೆ.

**ಗ್ರಂಥ:**—ಇವನು '**ನರನಾರಾಯಣಾನಂದ**' ಎಂಬ ಮಹಾಕಾವ್ಯವನ್ನು ಬರೆದಿರುವನು. ಇವನು ಬರೆದಿರುವ ಇತರ ಗ್ರಂಥಗಳಾವುವೆಂಬುದುತಿಳಿಯದು. ಕಥಾಭಾಗವನ್ನು ಮಹಾಭಾರತದಿಂದ ಆರಿಸಿಕೊಂಡಿರುವನು. ಇದರಲ್ಲಿ ೧೬ ಸರ್ಗಗಳಿರುವುವು. ಕೃಷ್ಣಾರ್ಜುನರಿಬ್ಬರೂ ಸ್ನೇಹಗೊಂಡು ಗಿರ್ನಾರ್ ಪರ್ವತದಲ್ಲಿ ವಿಹರಿಸುತ್ತ ಪುಷ್ಪಾಪಚಯಕ್ಕಾಗಿಬಂದಿದ್ದ ಸುಭದ್ರೆಯ ರೂಪುರೇಖಾವಿಲಾಸಗಳನ್ನು ದೂತಿಯಮುಖದಿಂದ ಕೇಳಿ ತಾನೂ ನೋಡಿ ಮೋಹಪರವಶನಾಗಿ ಸುಭದ್ರಾಹರಣವನ್ನು ಮಾಡಿ ವಿವಾಹಗೊಂಡು ಸುಖದಿಂದಿದ್ದರೆಂಬುದೇ ಕಥಾವಸ್ತು. ಕಥಾಭಾಗವು ಅತ್ಯಲ್ಪ. ಇವನವರ್ಣನೆ ಮತ್ತು ಶೈಲಿಯನ್ನು ನೋಡಿದರೆ ಮಾಘಪಂಡಿತನ ಶಿಶುಪಾಲವಧೆಯನ್ನು ಎದುರಿಗೆ ಇಟ್ಟುಕೊಂಡುಬರೆದಿರಬೇಕಾಗಿತೋರುತ್ತದೆ. ಮಹಾಕವಿಜಲ್ಹಣನು ಇದರ ಮೊದಲನೆಯಸರ್ಗದ ಏಳನೆಯ ಶ್ಲೋಕವನ್ನು* ತನ್ನ ಸೂಕ್ತಿಮುಕ್ತಾವಳಿಯಲ್ಲಿಯೂ ಹದಿನಾಲ್ಕನೆಯಸರ್ಗದ ಹದಿನಾರನೆಯ ಶ್ಲೋಕವನ್ನು§ ಅಮರನು x ತನ್ನ ಕವಿಕಲ್ಪಲತೆಯಲ್ಲಿಯೂ ಹೇಳಿಕೊಂಡಿರುವನು. ಇವನ ಕಾವ್ಯದ ಕೆಲವು ಶ್ಲೋಕಗಳನ್ನು ಮಾದರಿಗಾಗಿ ಬರೆಯುವೆವು.

ಮಧುಪಾನಗೋಷ್ಠಿವಿಚಾರವಾಗಿಹೀಗೆ ಇರುವುದು:—

> ಕ್ಷಣಮತಿಕುಪಿತಾಃ ಕ್ಷಣಂ ಪ್ರಸನ್ನಾ
> ಹಸಿತಾಶ್ಚ ಕ್ಷಣಮಾಕುಲಾಃ ಕ್ಷಣಂ ಚ
> ನವನವರಸಭಂಗಿಭಿರ್ಮೃಗಾಕ್ಷ್ಯೋ
> ಹೃದಯಂ ನೂನಮನೀನೃತನ್ಪ್ರಿಯಾಣಾಂ ॥ ೬—೧೬

---

* ಅನಾರತಂ ದಾನರತೈರತೀವ ಯಸ್ಯಾಂ ವಿಕೀರ್ಣೇಷು ವಿವೇಕಿವರ್ಗೈಃ
ಜನಾ ನಜಾನಂತಿ ನಿಜೇಷು ಸಂಖ್ಯಾಂ ಧನೇಷು ತಾರಾಗಣವೇದಿನೋಽಪಿ ॥

§ ಶೂರಃ ಸ್ಥಿರತರಃ ಸ್ಫಾರಶರಭಾರಃ ಪುರಃ ಪುರಃ
ಆರ ವೈರಭರಸ್ಮೇರವೀರಮಾರಹರಃ ಪರಃ ॥

x ಬಾಲಭಾರತಕರ್ತೃ

ಅವಿರತಮಧುಪಾನಧೌತರಾಗಸ್ಫುಟದಂತಾಂಕಧರೋಽಧರಸ್ತರುಣ್ಯಾಃ
ಅಪರವ್ಯಗದೃಶ್ಚಿಪ್ರಕೋಪನಾಯಾಮಿವ ಸಂಕೋಪಯಿತುಂ ಪವೇಶತೇನ|| ೧೭

ಸಮಧುರಗುಣಾಯಾ ಹ್ರಿಯಂಹರಂತ್ಯಾ
ಪ್ರತಿಕಾಂತಂ ಸುರಯೈವ ಕಾಪಿ ಮುಗ್ಧಾ
ಚಟುವಚನಮಘಾಟಮಂದಮಂದಂ
ಸ್ವಯಮಂತರ್ಗತಯಾವಯಸ್ಯಯೇವ || ೧೮

ಮದಪರವಶಚೇತಸಾಂ ವಧೂನಾಂ
ದ್ರುತಮುಕ್ತೋಝ್ಝಿತಮಂದ್ರಮಧ್ಯತಾರೈಃ || ೯
ಪ್ರತಿಪದಮನವಸ್ಥಿತಪ್ರಯೋಗೈ
ರಪಿಗೀತೈರ್ದಧಿರೇ ಮುದಂ ಯುವಾನಃ || ೯

ಚಿರವಿರಚಿತಚುಂಬನಪ್ರಪಂಚಾ
ದಧರಾಚ್ಚಾರುದೃಶಾಮುದಸ್ಯ ರಾಗಂ
ಅಭಿಮುಖಪತಿತೇಷು ತನ್ಯತೇ ಸ್ಮ
ಪ್ರತಿಕಾಂತಾನಯನೇಷು ರಾಗಭಾಜಃ ||

ಸೂರ್ಯೋದಯವರ್ಣನವು ಹೀಗಿರುವುದು—

ಪ್ರಾಸಾದವೇದಿಷು ನಿರಂತರಮಂತರಿಕ್ಷ
ಕುಕ್ಷಿಂ ಭರಿಃ ಸ್ಫುರಿತವಾಪಮೃದಂಗನಾದಃ
ತೇಮಪ್ರಣುನ್ನಮಿವ ಶೀತಮರೀಚಿ ಬಿಂಬ
ಮಾಲಂಬತ ಸ್ಖಲಿತಡಂಬರಮಂಬರಾಂತೇ || ೨ ೨

ಸಾರಸ್ವತಸ್ಮೃತಿಶುಚೌ ಕವಿಪುಂಗವಾನಾಂ
ಚಿತ್ತೇ ಸ್ಫುಟಸ್ಫಟಿಕದರ್ಪಣದರ್ಪಚೌರೇ
ವಾಗ್ದೇವತಾ ಸ್ವಯಮಿಯಂ ಪ್ರತಿಬಿಂಬಿತೇವ
ಶುದ್ಧಾಮತಿಃ ಪ್ರಭವತಿ ಸ್ಮ ಕವಿತ್ವತತ್ತ್ವೇ || ೨—೬

ಚಂದ್ರೋದಯವರ್ಣನ:—

ಏಕಾಕಿನ್ಯಪಿ ಕಾಮಭೂಪತಿಮಹಾಸಾಹಾಯ್ಯತೋಮಾನಿನಾ
ಮಾದ್ಯಂಗ್ಮಾನಧನಗ್ರಹವ್ಯತಿಕರವ್ಯಗ್ರೇ ಸುಧಾದೀಧಿತೌ
ದಾಯಾದೀವ ಜವಾದಢೌಕತ ತದಾಹುಂಕಾರಹುಂಕಾರಿಣೀ
ಸೌರಭ್ಯಾಭಿಸರನ್ಮಧುವತ್ರವಧೂನಾದೇನ ಕಾದಂಬರೀ ೫— ೪೯

ವಿವಾಹವರ್ಣನಂ:—

ಹರಹುತವಹದಗ್ಧಂ ಜೀವಯತ್ಯೇವ ಕಾಮಂ
ಪರಿಣಯನಮಖಾಗ್ನೌ ದೀಪಿತೇ ದಂಪತೀ ತೌ
ವಿವಿಧವಿಧಿವಿಧಾಯೀ ವರ್ತಯಾಮಾಸ ಧೀಮಾನ್
ಗುರುರಥ ಪೃಥುವಿದ್ಯಾಮಂಡಲೋ ಮಂಡಲಾನಿ ೧೬— ೩೫

ಶಿಥಿಲಕರಸರೋಜಾ ಲಜ್ಜಮಾನಾ ವಿಕೀರ್ಯ
ಜ್ವಲಿತಹುತವಹಾಂತರ್ಲಾಜಮುಷ್ಟಿಂ ಸುಭದ್ರಾ
ಅಕುರುತಗುರುವಾಚಾ ಕಿಂಚಿದಾಚಾರದೂವು
ಗ್ರಹಣಮಥ ಮುಖಾಬ್ಜೋತ್ಸಂಗಭೃಂಗಾಯಮಾನಂ || ೬—೪೬

---

## ಅ ಭ ಯ ದೇ ವ

ಇವನನ್ನು ಆಚಾರ್ಯ ಅಭಯದೇವನೆಂದು ಕರೆಯುವುದುಂಟು. ಇವನು ರುದ್ರಪಾಲೀಯ ಗಚ್ಛದವನು. ಶ್ವೇತಾಂಬರ ಜೈನಪಂಗಡದವನು. ವಿಜಯಚಂದ್ರ (ಜಯಚಂದ್ರ) ಸೂರಿಯಶಿಷ್ಯನು. ದೇವಚಂದ್ರಸೂರಿಯ ಆಚಾರ್ಯನು. ಇವನಿಗೆ ಕಾಶೀರಾಜನಿಂದ ವಾದಿಸಿಂಹ* ನೆಂಬ ಬಿರುದುಕೊಡಲ್ಪಟ್ಟಿದ್ದಿತು. ಇವನ ಆಚಾರ್ಯವಂಶಾವಳಿಯು ಹೀಗಿರುವುದು.

ಅಭಯದೇವ (ನವಾಂಗವೃತ್ತಿಕೃತ್)
(ಬೃಹತ್ಖರತರ ಪಟ್ಟಾವಳಿ. ಸಂ ೪೨.)




ಇವನು ವಿ. ಸಂ. ೧೨೭೮ (ಅಥವಾ ಕ್ರಿ ಶ ೧೨೨೧ ರಲ್ಲಿ **ವಿಜಯಂತವಿಜಯ** (ಜಯಂತ ವಿಜಯ) ಎಂಬ ಮಹಾ ಕಾವ್ಯವನ್ನುಬರೆದುದಾಗಿ:—

---

*Dictionary of jain Biography P. 9

ವಿಶ್ವತ್ರಯಪ್ರಥಿತಕೀರ್ತಿಲತಸ್ಯತಸ್ಯ-
ಶಿಷ್ಯಃ-ಪ್ರಶಸ್ಯಮಹಿಮಾ**ಭಯದೇವಸೂರಿಃ**
ಕಾವ್ಯಂ **ಜಯಂತವಿಜಯಂ** ರಚಯಾಂಚಕಾರ
ಸಾರಸ್ವತಪ್ರಸ್ಮರಪ್ರತಿಭಾವಿಲಾಸಃ ||

ದಿಕ ರಿಕುಲಗಿರಿದಿನಕರ (೧೨೭೮) ಪರಿಮಿತವಿಕ್ರಮನರೇಶ್ವರಸಮಾಯಾಂ
ದ್ವಾವಿಂಶತಿಪ್ರವಿತಾನಂ ಶಾಸ್ತ್ರಮಿದಂ ನಿರ್ಮಿತಂ ಜಯತು ||

ಎಂಬ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ. †

ಜಯಂತ ವಿಜಯದಲ್ಲಿ ೧೯ ಸರ್ಗಗಳಿರುವವು. ಈ ಕಾವ್ಯದ ಶೈಲಿಯನ್ನು ಹೇಳುವುದಕ್ಕೆ ಕೆಲವು ಶ್ಲೋಕಗಳನ್ನು ಮಾದರಿಗಾಗಿಬರೆಯುವೆವು.

ಅಂಧಕಾರ ವರ್ಣನೆ:—

ಕಲಿತಮಿವ ತಮಾಲೈಃ-ಕುಂತಲೀಕುಂತಲಾಲೀ
ರುಚಿಭಿರಿವ ತತಾಭಿಸ್ತುಂಬಿತಂ ವಿಶ್ವವಿಶ್ವಂ
ಸ್ಥಗಿತಮಿವ ಸಮಂತಾದಂಜನೈ ರಾಜಪಟ್ಟೈ
ರ್ಘಟಿತಮಿವ ಚಕಾಸೇ ವ್ಯಾಪ್ತಮಿದ್ಧೈಸ್ತಮೋಭಿಃ-೮-೫೧

ಅಭಿನವಮೃಗನಾಭೀಪಂಕಕ್ಲಿಪ್ತಾಂಗರಾಗಾ
ಭ್ರಮರರುಚಿದುಕೂಲೈರ್ನೀಪಮುದ್ರಾಂ ದಧಾನಾಃ
ಮರಕತಕೃತಭೂಷಾಃ ಪಕ್ಷ್ಮಲಾಕ್ಷ್ಯಃ ಸಲೀಲಂ
ರಮಣಮಭಿಸರಂತಿ ಸ್ವೈರಮಿದ್ಧೇಽಂಧಕಾರೇ || ೮-೮೨

ಅಪುತ್ರೋದ್ಗಾರ ವರ್ಣನೆ:—

ನ ದೇವಪೂರ್ವೋದಿತದುಃಖಮದ್ಯ ಕಾಲವೋಽಪಿ ಲಬ್ಧಾವಸರಸ್ತನೌ ಮಮ
ತವ ಪ್ರಸಾದೇನ ದಿನೇಶ್ವರೋದಯೋ ನಭಸ್ತಲೇ ವಾ ಕ್ವ ತಮಿಸ್ರಸಂಭವಃ ೨-೧೬

ಸುಖೈರಶೇಷ್ಯೈಃ ಸುಖಿನೀಷು ಮುಖ್ಯತಾ ಮಮೇಶ ಶಚ್ಯಾ ಅಪಿ ಚಿತ್ತಹಾರಿಣೀ
ಪ್ರಸಾದತಸ್ತೇ ಕಿಮಪೂರ್ಣಮಸ್ತಿ ಮೇ ಸುತಂ ವಿನಾ ತ್ವೇತದರುಂತುದಂ ಹೃದಃ ೨-೧೭

ಕ್ಷಿತೀಃ ನಿರಾಕರ್ತುಮಿದಂ ಮ ಲಾಂಛನಂ ತ್ವಮೇವ ಮೇ ದುಃಸಹಸಾಹಸಪ್ರಿಯ
ನಿವೇಶಮುಕ್ತಾಂ ಕುರುತೇ ಹಿ ಪದ್ಮಿನೀಂ ನ ಪದ್ಮಬಂಧೋರಪರಃ ಕದಾಚನ ೨-೧೮

ವಸುಂಧರೋದ್ಧರಧುರಂಧರೇಣ ಮಾಂ ವಿಧೇಹ್ಯುಪಾಯೇನ ಸುತೇನ ಭೂಷಿತಾಂ
ಸ್ವದೋಹದೇನೇವ ಲತಾಂ ಫಲಾಂಚಿತಾಮಿದಂ ಹಿ ಸಾರಂ ಕಿಲ ಸರ್ವಸಂಪದಾಂ ೨-೧೯

ವಿನಾ ವಿನೀತೇನ ಸುತೇನ ಗೇಹಿನಾಂ ಕುಲಂ ಗೃಹಂ ಶೂನ್ಯಮನೂನದುಃಖದಂ
ಕ್ರಮೇಣ ನಶ್ಯಂತಿ ಚ ಸರ್ವಸಂಪದಃ ಸ್ಥಿರಂ ನಿರಾಲಂಬಮಹೋ ನ ಕಿಂಚನ ೨-೨೧

† ಜಯಂತವಿಜಯಕಾವ್ಯದಮುನ್ನುಡಿಮತ್ತು ಗ್ರಂಥಕರ್ತೃಪ್ರಶಸ್ತಿ

ಅನನ್ಯಸಾಧಾರಣವೈಭವೋದ್ಭವೈಃ ಸುಖೈಃ ಸದಾ ದುರ್ಲಲಿತೋಽಪಿ ಮಾನವಃ
ಅಪುತ್ರಜನ್ಮಪ್ರಭವಾಭಿಬಾಧಿತೋ ನ ಕೋಟರಾಗ್ನಿರ್ವಿಟಪೀವ ನಂದತಿ ೨ ೨೨

ವರಂ ದರಿದ್ರೋಽಪಿ ಸನಂದನೋ ಜನಸ್ತದೀಕ್ಷಣಾನಂದತರಂಗಿಲೋಚನಃ
ನ ಶಕ್ರತುಲ್ಯೋಽಪಿ ಸಮೃದ್ಧಿಭಿಃ ಪರಃ ಪರಾಙ್ಮುಖತ್ವೇನ ವಿಧೇರನಾತ್ಮಜಃ ೨ ೨೩

ಜನೋಽಪ್ಯಪುತ್ರಸ್ಯ ಗತಿರ್ನ ವಿದ್ಯತೇ ಕ್ಷಯಂ ಪ್ರಯಾತಿ ಕ್ರಮಶಶ್ಚ ಕೀರ್ತನಂ
ಇತಿ ಪ್ರವಾದಃ ಖಲು ದುಃಸಹಃ ಸತಾಮಪುತ್ರಿಣಾಂ ಭೂಪವಿಲೋಪ್ಯ ಸಂಪದಾಂ ೨-೨೪

ದೋಲಾವರ್ಣನ —

ಚರಣಕಮಲಮೇಕಂ ಪಾದವಲ್ಲೇ ಸಹೇಲಂ
ಮೃದುಭುಜಯುಗಲಂ ಚ ಸ್ಕಂಧದೇಶೇ ನಿವೇಶ್ಯ
ಸರಸಸುರತಕೇಳಿವ್ಯಕ್ತಮಾರ್ಗೇಣ ಕಾಚಿ
ತ್ಪ್ರಿಯಮಿವ ತರುಮುಚ್ಚೈರಾರುರೋಹಾಯತಾಕ್ಷೀ ೮-೧೬

ಅಲಿಕುಲರಮಣೀಯೈರ್ಮಾಂಸಲೈಃ ಪುಷ್ಪಜಾತೈಃ
ಸರಭಸಮುಪರೂಢಃ ಕೇಸರಃ ಸುಂದರೀಭಿಃ
ತ್ರಿಭುವನಸುಭಗಾಭಿಃ ಪುಷ್ಪಚಾಪಸ್ಯ ಪುಣ್ಯೈಃ
ಫಲಿತ ಇಹ ನವೀನಃ ಕಲ್ಪಶಾಖೀವರೇಜಃ ॥ ೮-೧೭

ಪುಷ್ಪಾವಚಯ ವರ್ಣನಃ —

ಕುಚಕಲಶನಿತಂಬಸ್ತಂಬಭಾರೇಣ ನಮ್ರಾ
ಸ್ಖಲಿತಗತಿಪದಾಬ್ಜಾ ಬಾಲವೃಕ್ಷಪ್ರತ್ವರಂತೀ
ಧೃತಮಥ ಭುಜಾಗ್ರೇ ಕಾಪಿ ಕಾಂತೇನ ದಧ್ನೇ
ಪರಿ ತು ಸುಭಗಕಾಂತ ಚಕ್ರವಾಲಸ್ಯ ಬಾಲಾ ೮-೨೩

ತರುಣತರ ರೂಪಾವಮಾತ್ತಪುಷ್ಪಾಸ್ತರುಣ್ಯಃ
ಕರನಖಶಿಖರಾಣಾಂ ಶೋಣಕಾಂತಿಚ್ಛಟಾಭಿಃ
ವಿದಧುರಿವ ಕೃತಜ್ಞಾಸ್ತತ್ಪ್ರವಾಲದ್ರುಮತ್ವಂ
ಫಲತಿ ಸಹೃದಯೇಷು ಕ್ಷಿಪ್ರಮೇವೋಪಕಾರಃ ॥ ೮ ೨೪

ಜಲಕೇಳೀವರ್ಣನ —

ಮಧುಭಿರಿವ ವಿವೃದ್ಧೈಃ ಪುಲ್ಲಲಾವಣ್ಯಪೂರ್ಣೈ
ರಲಿಭಿರಿವ ವಿಲೋಲೈರ್ಲೋಚನೈರಾಪ್ತಶೋಭೈಃ
ಪಯಸಿ ವಿದಧುರಾಸ್ಯೈಃ ಕಂರದಷ್ಪೇ ತದಾನೀ
ಮಸರಕಮಲಖಂಡಾಡಂಬರಂ ತಾಸ್ತರುಣ್ಯಃ ॥ ೮-೩೬

ಅಥ ಕರಜಲಯಂತ್ರೈರ್ವಾರಿಪೂರಂ ಕಿರದ್ಭಿಃ
ಸ್ಫುರತಿ ವಿಯತಿ ವರ್ಷಾಡಂಬರೇಽನ್ಯೋನ್ಯಮುಚ್ಚೈಃ
ಜಲಲಲಿತಿಷು ತಾಸಾಂ ಪ್ರೀತಿವಲ್ಲೀವಿಲಾಸಂ
ಕಲಯತಿ ಸ ಚ ಶೋಷಂ ಮಾನಮುದ್ರಾಜವಾಸಂ ೮-೩೮



## ಯ ಶಃ ಪಾ ಲ

ಇವನ ತಂದೆಯ ಹೆಸರು ಧನದೇವ. ತಾಯಿಯ ಹೆಸರು ರುಕ್ಮಿಣಿ. ಇವನು ಮೋಢಬನಿಯಾ ಜಾತಿಯವನು. ಧನದೇವನು ಮಂತ್ರಿಯೆಂದು ಕರೆಯಿಸಿಕೊಳ್ಳು ತ್ತಿದ್ದನು. ಕವಿಯು, ಚಕ್ರವರ್ತಿ ಅಜಯದೇವನ* ಚರಣಕಮಲದ ರಾಜಹಂಸ ನೆಂದು ಹೇಳಿಕೊಂಡಿರುವುದು ಈ ನಾಟಕದ ಸೂತ್ರಧಾರನ ಹೇಳಿಕೆಯಿಂದ ಸ್ಪಷ್ಟಪಡುತ್ತದೆ. ಅದು ಹೀಗಿರುವುದು: —

ಸೂತ್ರಧಾರಃ (ಸ್ಮೃತಿಮಭಿನೀಯ). —

ಆರ್ಯೇ! ಅಸ್ತ್ಯೇವ ಶ್ರೀಮೋಢವಂಶಾವತಂಸೇನ ಶ್ರೀಅಜಯದೇವಚಕ್ರ ವರ್ತಿ ಚರಣರಾಜೀವರಾಜಹಂಸೇನ ಮಂತ್ರಿಧನದೇವತನುಜನ್ಮನಾ ರುಕ್ಮಿಣೀಕುಕ್ಷಿಲಾಲಿತೇನ ಸರ್ವತೋಮುಖನಿಸ್ತುಷಶೇಮುಷೀವಿಲಾಸ ವಾಸಭವನೇನ ನಿರ್ವ್ಯಾಜರಾಜನೀತಿನಿತಂಬಿನೀ ವದನವಿಭ್ರಮಮಣಿ ದರ್ಪಣೇನ ವ್ಯಾಪಾರಿಕಮಲಾಕುಚಕಲಶಮುಕ್ತಾಫಲಹಾರಯಷ್ಟಿನಾ ನಾರಸಾರಸ್ವತೋದಾರಸಾರಣೀಸೇಕಸುಕುಮಾರ ಸ್ಮೇರಕಾವ್ಯಕಂದಲ ಪ್ರರೋಹೇಣ ಪರಮಾರ್ಹತೇನ ಯಶಃಪಾಲಕವಿನಾ ವಿನಿರ್ಮಿತಂ...||

**ಕಾಲ:**—ಕುಮಾರಪಾಲನ ಅನಂತರ ಅಜಯದೇವನು ಸಿಂಹಾಸನಕ್ಕೆ ಬಂದನು. ಇವನು ಕ್ರಿ. ಶ. ೧೨೨೯ ರಿಂದ ೧೨೩೨ ವರೆಗೆ ರಾಜ್ಯವಾಳಿದನು. ಯಶಃಪಾಲನು ಅಜಯದೇವನನ್ನು ಹೊಗಳಿರುವುದರಿಂದ ಕವಿಯನ್ನು ಅಜಯ ದೇವನ ಸಮಕಾಲೀನನೆನಬೇಕಾಗುವುದು. ಎಂದರೆ ಕ್ರಿ. ಶ. ೧೩ನೆಯ ಶತಮಾನದ ಪೂರ್ವಾರ್ಧದವನೆಂಬದು ಸಿದ್ಧವಾಗುತ್ತದೆ.

**ಗ್ರಂಥ:**—ಇವನು "ಮೋಹರಾಜಪರಾಜಯ" ಎಂಬ ೫ ಅಂಕಗಳುಳ್ಳ ನಾಟಕವನ್ನು ಬರೆದಿರುವನು. ಗುಜರಾತಿನ ಚಾಲುಕ್ಯರಾಜನಾದ ಕುಮಾರ ಪಾಲನನ್ನು ಜೈನಮತಾವಲಂಬಿಯಾಗಿ ಮಾಡಿದುದೂ, ಪ್ರಾಣಿಹಿಂಸಾನಿಷೇಧವೂ, ಮಹಾತ್ಮನಾದ ಹೇಮಚಂದ್ರನ ಮತದಂತೆ ಸಂತಾನಹೀನರ ಆಸ್ತಿಯನ್ನು ರಾಜ ನಾದವನು ಬೊಕ್ಕಸಕ್ಕೆ ಸೇರಿಸಿಕೊಳ್ಳಕೂಡದೆಂಬುದೂ ಇದರ ಮುಖ್ಯಸಂಗತಿಗಳು. ಇವುಗಳನ್ನು ಕವಿಯು ಕೃಷ್ಣಮಿಶ್ರನ ಪ್ರಬೋಧಚಂದ್ರೋದಯದ § ಹಾಗೆ

* ಇವನಿಗೆ ಅಜಯಪಾಲನೆಂದೂ ಹೆಸರು.

§ ಅನಂತನಾರಾಯಣಸೂರಿಯ ಮಾಯಾವಿಜಯ, ವಾದಿಚಂದ್ರನ ಸೂರ್ಯೋದಯ, ಪದ್ಮಸುಂದರನ ಜ್ಞಾನಚಂದ್ರೋದಯ, ಕವಿಕರ್ಣಪೂರನ ಚೈತನ್ಯಚಂದ್ರೋದಯ ಇವು ಈ ಜಾತಿಯ ಗ್ರಂಥಗಳೆನ್ನಬಹುದು.

ಅನ್ಯಾಪದೇಶವಾಗಿ, ಹೇಳಿ ರಾಜ, ವಿದೂಷಕ ಮತ್ತು ಹೇಮಚಂದ್ರ ಈ ಮೂರು ಹೆಸರುಗಳನ್ನು ಬಿಟ್ಟು ಉಳಿದ ಪಾತ್ರಗಳಿಗೆ ಮನುಷ್ಯರನ್ನು ಹೇಳುವುದಕ್ಕೆ ಬದಲು ಗುಣಗಳನ್ನು ಪಾತ್ರವಾಗಿ ತೆಗೆದುಕೊಂಡಿರುವನು. ಈ ನಾಟಕವು ಮೊದಲು ತಾರಾಪದರದಲ್ಲಿ ಕುಮಾರಪಾಲ ನಿರ್ಮಿತ ಕುಮಾರವಿಹಾರದಲ್ಲಿನ ಮಹಾವೀರ ಪ್ರತಿಮೆಯ ಎದುರಿನಲ್ಲಿ ಅಭಿನಯಿಸಲ್ಪಟ್ಟಿದಾಗಿ ತಿಳಿಯಬರುತ್ತದೆ. ಈಗಣ ಪಾಲನಪುರಕ್ಕೆ ಸೇರಿದ 'ತರಾಡ' ಎಂಬುದೇ ಆಗಣ ತಾರಾಪುರವಾಗಿರಬೇಕೆಂದು ಬೋಧೆಯಾಗುತ್ತದೆ. ಅಲ್ಲದೆ ಯಶಃಪಾಲನು ಈ ಸ್ಥಳದ ಮುಖ್ಯಾಧಿಕಾರಿಯಾಗಿರಬೇಕೆಂದೂ ಹೇಳಲಾಗುತ್ತದೆ. ಇವನು ೩೨ ಭವ್ಯವಿಹಾರಗಳನ್ನೂ, ತ್ರಿಭುವನವಿಹಾರವೆಂಬ ಚೈತ್ಯಾಲಯವನ್ನೂ ಕಟ್ಟಿಸಿದನು. ಆಗಣ ಕಾಲದಲ್ಲಿ ಹೇಮಚಂದ್ರಾಚಾರ್ಯನ ಸಿದ್ಧವ್ಯಾಕರಣವೂ, ವಿಂಶತಿವೀತರಾಗಸ್ತುತಿಯೂ, ಯೋಗಶಾಸ್ತ್ರಾಭ್ಯಾಸವೂ ಬಳಿಕೆಯಲ್ಲಿದವು. ಆಗಣಕಾಲದ ಗುರ್ಜರದೇಶದ ರಾಜಕೀಯ ಸಾಮಾಜಿಕ ಪರಿಸ್ಥಿತಿಯು ಹೀಗೆ ಇದ್ದಿತು.—

ಗುಜರಾತಿನ ಬನಿಯರು (ವೈಶ್ಯರು) ಲಕ್ಷ್ಮೀಕಟಾಕ್ಷಪಾತ್ರರಾಗಿ ಕೋಟ್ಯಧೀಶ್ವರರಾಗಿರುತ್ತಿದ್ದರು. ಇವರಲ್ಲಿ ಆನೆಗಳೂ ಕುದುರೆಗಳೂ ಇರುತ್ತಿದ್ದವು. ಭಿಕ್ಷುಕರ ಸಲುವಾಗಿ ಅನ್ನಸತ್ರಗಳಿದ್ದವು. ಮನೆಯ ಪಾವಟಿಗೆಗಳೂ, ದೇವಾಲಯದ ಗೋಡೆಗಳೂ, ಅಮೃತಶಿಲೆಗಳಿಂದ ಜೋಡಣೆಯಾಗಿರುತ್ತಿದ್ದವು. ಮನೆಯ ಮತ್ತು ದೇವಾಲಯದಗೋಡೆಗಳು ಜೈನಕಥಾಚಿತ್ರಗಳಿಂದ ಅಲಂಕರಿಸಲ್ಪಡುತ್ತಿದ್ದವು. ಹಣವಂತರು ತಮಗೆ ಸಾಕಾದಷ್ಟು ಮಾತ್ರ ದ್ರವ್ಯವನ್ನಿರಿಸಿಕೊಂಡು ಗಳಿಸಿದ ಹೆಚ್ಚು ದ್ರವ್ಯವೆಲ್ಲವನ್ನೂ ಮತಸಂಬಂಧವಾದ ಕಾರ್ಯಗಳಿಗೆ ಉಪಯೋಗಿಸಬೇಕೆಂಬ ನಿಯಮವಿದ್ದಿತು. ಹಡಗುಗಳ ಮೂಲಕ ದೇಶವಿದೇಶಗಳನ್ನು ಸುತ್ತಿ ವ್ಯಾಪಾರದಿಂದ ಅತುಳೈಶ್ವರ್ಯವನ್ನು ಸಂಪಾದಿಸುತ್ತಿದ್ದರು. ಮಕ್ಕಳಿಲ್ಲದೆ ಸತ್ತವರ ಆಸ್ತಿಯನ್ನು ರಾಜಭಂಡಾರಕ್ಕೆ ಪಂಚಾಯತರ ಮೂಲಕ ವಶಪಡಿಸಿಕೊಟ್ಟ ಹೊರ್ತು ಮೃತನ ಕಳೇಬರವನ್ನು ಹೊರಕ್ಕೆ ಸಾಗಿಸಲು ಮಾಲೀಕರಿಗೆ ಸ್ವಾತಂತ್ರ್ಯವಿರಲಿಲ್ಲ. ವ್ಯಭಿಚಾರವು ಪಾಪಕೃತ್ಯವೆಂದೂ, ಹೇಯವೆಂದೂ, ಗಣಿಸಲ್ಪಟ್ಟಿರಲಿಲ್ಲ. ಎಲ್ಲೆಲ್ಲಿ ನೋಡಿದರೂ ಜೂಜಾಟವು ಹೆಚ್ಚಾಗಿದ್ದಿತು. ಪುರಪ್ರಮುಖರೂ ಇತರರೂ ಇದರಲ್ಲಿ ಭಾಗಿಗಳಾಗಿರುತ್ತಿದ್ದರು. ಹಬ್ಬದ ವಿಶೇಷದಿನಗಳಲ್ಲಿ ಸಂತೋಷದಿಂದ ಹೆಂಗಸರು ಗಂಡುಸರೆನ್ನದೆ ಸಾಮಾನ್ಯರಾದಿಯಾಗಿ ಎಲ್ಲರೂ ಜೂಜಾಡುತ್ತಿದ್ದರು. ಆಗಣ ಕಾಲದಲ್ಲಿ ಬಳಕೆಯಲ್ಲಿದ್ದ ದ್ಯೂತಗಳು ಐದು:—

೧. ಅಂಧಯುದ್ಯೂತ.

೨. ನಾಲಯುದ್ಯೂತ

೩. ಅಕ್ಷದ್ಯೂತ
೪. ಚತುರಂಗ
೫. ವರಾಟವುುಷ್ಟಿ. ಇವುಗಳು!

ರಾಜರಾದವರು ಅಂಥಯ ದ್ಯೂತವನ್ನೂ, ಸಾಹುಕಾರರು ನಾಲಯದ್ಯೂತ ವನ್ನೂ ಆಡುತ್ತಿದ್ದರು. ಹೆಂಗಸರು ಗಂಡಸರಾದಿಯಾಗಿ ಕವಡೆಯ ಆಟವನ್ನೂ ಪಗಡೆಯ ಆಟವನ್ನೂ ಆಡುತ್ತಿದ್ದರು. ದ್ಯೂತದ ಜೊತೆಗೆ ಮದ್ಯಪಾನ, ಮಾಂಸ ಭಕ್ಷಣವೂ ಇದ್ದಿತು. ಮೋಹರಾಜಪರಾಜಯದಲ್ಲಿ ದ್ಯೂತಕಾರರ ವರ್ಣನವಿರು ವುದು. ವಿಶೇಷೋತ್ಸವ ದಿವಸಗಳಲ್ಲಿ ಧೂಳಾಗದಂತೆ ಪುರಜನರು ಬೀದಿಗಳಿಗೆ ನೀರನ್ನು ಚೆಲ್ಲಿ ಅಂಗಡಿಗಳನ್ನೂ ಮನೆಗಳನ್ನೂ ಮುತ್ತಿನ ಸರಗಳಿಂದ ಅಲಂಕರಿಸು ತ್ತಿದ್ದರು. ಮದ್ಯಪಾನವೂ ಮಾಂಸಭಕ್ಷಣವೂ ಯೋಗ್ಯವೆಂದೂ, ಪಾಪವಲ್ಲವೆಂದೂ ಆಮುಷ್ಮಿಕ ಸಾಧನವೆಂದೂ ಗಳಹುವ ಕೌಲರೂ, ಕಾಪಾಲಿಕರೂ ರಹಮಾಣರೂ ಮತ್ತು ಘಟಚಟಕರೂ ಹೇರಳರಾಗಿದ್ದರು. ವನರಾಜನೂ, ಚಾಪೋತ್ಕಟರಾಜ ರೆಲ್ಲರೂ ಕೇವಲ ಮದ್ಯಪಾಯಿಗಳಾಗಿದ್ದರು. ಕುಮಾರಪಾಲನು ತನ್ನ ಚಿಕ್ಕತನದಲ್ಲಿ ಮಾಂಸಭಕ್ಷಕನಾಗಿದ್ದುದಾಗಿ ತಿಳಿಯುಬರುತ್ತದೆ.§ ಕುಮಾರಪಾಲನು ಜೈನನಾದ ನಂತರ ಹಿಂದೆ ಮಾಡಿದ ಪಾಪಕೃತ್ಯಗಳಿಗಾಗಿ ಮನನೊಂದು ವಿಹಾರಗಳನ್ನು ಕಟ್ಟಿಸಿ ಕೊಟ್ಟುದಾಗಿ ಹೇಳಿದೆ.$ ಮೇವಾಡದ ರಾಜಕುಮಾರ, ಸೋರಠರಾಜನ ಸೋದರ, ಚಂದ್ರಾವತಿಯರಾಜ, ನಾಡಲರಾಜನ ಅಳಿಯ, ಗೋದ್ರಹರಾಜನ ಅಣ್ಣನ ಮಗ, ಧಾರಾನಗರ ರಾಜನ ತಂಗಿಯಮಗ, ಶಾಕಂಭರೀ ರಾಜನ ಸೋದರಮಾವ ಕೊಂಕಣರಾಜನ ಬಲ ತಮ್ಮ. ಕಚ್ಛದರಾಜನ ಭಾವೈದುನ, ಮಾರ್ವಾರ ರಾಜನ

---

! ಏತದಂಥಿಕಾನುಮ ರೂಪಂ ಮೃಗಾಕ್ಷಿ! ಚತ್ವರೇ ಪಶ್ಯ
ಯತ್ಸೇವ್ಯತೇ ನಿತ್ಯಂ ಕೃತಕೋಪೀನೈರ್ನೃಪತಿಭಿಃ ||
ಅಪರಂ ಮೃಗಾಕ್ಷಿ! ಪಶ್ಯ ಮಮ ರೂಪಮತ್ರ ನಾಟಕಂ ನಾಮ |
ಉಪನೀತಕಪಕೋಟಭಿಃ ಸೇವಿತಂ ವಣಿಕ್ಪುತ್ರೈಃ ||
ತೃತೀಯಂ ಪಶ್ಯ ನಿತಂಬಿನಿ ಇದಾನೀಂ! ಚತುರಂಗಕಮಿತಿ ಮೇ ರೂಪಂ
ಯತ್ರಾರಿಕರ್ಣಕಟುಕಾಃ ಖಟ್ ಖಟಾ ಅಮೃತಸದೃಶಾಃ ||
ಜಕ್ಷೀ! ಇದಂಪಶ್ಯ ಚತುರ್ಥಮಕ್ಷಾಭಿಧಾನಕಂ ರೂಪಂ
ಕುರುತನಯಾ ಭೂಮಿಪತಯೋ ಯಸ್ಯ ಪ್ರಸಾದೇನ ಸಂಜಾತಾಃ ||
ಪಂಚಮಕಂ ಮಮ ರೂಪಂ ವರಾಟನಾಮೇದಂ ನಿಭಾಲ್ಯ
ಸೇವಯಾ ಯಸ್ಯ ಡಿಂಭಾ ಗಮಮಪಿ ಕಾಲಂ ನ ಜಾನಂತಿ ||

§ Introduction to Moharajaparajaya. P. 13

$ Ibid. P.9

ಅಕ್ಕನಮಗ. ಚಾಳುಕ್ಯರಾಜನ ಚಿಕ್ಕಪ್ಪ. ಇವರು ದ್ಯೂತದಲ್ಲಿ ಮುಖ್ಯರಾದ ರಾಜ ಮನೆತನದವರು.

"(೧) ಏಷಮೇದಪಾಟನ್ನೃಪತಿಕುಮಾರಃ, (೨) ಏಷಸೌರಾಷ್ಟ್ರಾಧಿಪ ಸಹೋದರಃ, (೩) ಏಷಚಂದ್ರಾವತೀ ಪತಿಃ, (೪) ಏಷನಡ್ಡುಲನರೇಂದ್ರನಪ್ತೃಕಃ, (೫) ಏಷಗೋದ್ರಹರಾಜಭ್ರಾತೃನಂದನಃ, (೬) ಏಷಧಾರಾಧಿರಾಜಭಾಗಿನೇಯಃ, (೭) ಏಷಶಾಕಂಭರೀಭೂಪಾಲಮಾತುಲಕಃ, (೮) ಏಷಕೊಂಕಣಾಧಿಪವಿಮಾತೃಜಃ, (೯) ಏಷಕಚ್ಛಭೂಮಿಭುಂಗಶ್ಯಾಲಕಃ, (೧೦) ಏಷಮರುಮಂಡಲಾಖಂಡಲ ದುಹಿತೃನಂದನಃ, (೧೧) ಏಷಪುನಶ್ಚಾಲುಕ್ಯನೃಪಜನಕ ಭ್ರಾತೃಕಃ ||

ಇವರಿಗೆ ಜೂಜಾಟವೇ ಅತ್ಯಂತ ಪರಾಪರವಸ್ತು. ಕುಟುಂಬದಲ್ಲಿ ತಾಯಿತಂದೆಗಳಾಗಲಿ, ದಯಿತೆಯಾಗಲಿ, ಮಗನಾಗಲಿ, ಯಾರೇ ಮೃತರಾಗಿ ಹೋದರೂ ಶೋಕ ವಿಚಾರಕ್ಕೆ ಮನಗೊಡದೆ ಜೂಜಾಡುವುದು ವಾಡಿಕೆ. ಶೂದ್ರಕನು ಜೂಜಿನಿಂದಲೇ ರಾಜ್ಯವನ್ನು ಗೆದ್ದುಕೊಂಡುದಾಗಿ ಹೇಳಿದೆ. ಆದರೆ ಈ ಶೂದ್ರಕನಾರೆಂಬುದು ತಿಳಿಯದು. ಇದೇ ವಿಚಾರವನ್ನು ನಾಟಕಕಾರನು ದ್ಯೂತಕುಮಾರನಿಂದ ಹೇಳಿಸಿರುವನು.

ದ್ಯೂತಕುಮಾರನು ಪತ್ನಿಯಾದ ಅಸತ್ಯಕಂದಲಿಯನ್ನು ಕುರಿತು ಅಯೇ! ಮೋಹಕುಲನಭಸ್ಥಲಚಂದ್ರಕಲೇ! ಕಿಮೇತೇಷಾಮೌತಂವರ್ಣ್ಯತೇ ತಥಾಹಿ:—

ಯದಿ ಮ್ರಿಯತೇ ಗೃಹೇ ಜನನೀ ಜನಕೋ ವಾ ಪ್ರಣಯಿನೀ ವಾ ಪುತ್ರೋ ವಾ
ತಥಾಪೀಮೇ ಮಮ ಸೇವಾಂ ನ ಮುಂಚಂತಿ ಕುರ್ವಂತಿ ಚ ನ ಶೋಕಂ ||

ಅಪರಂಚ ಚಂದ್ರಮುಖಿ! ನಿರುಪಮೈರ್ಏಷಾಂ ಸ್ವಾಮಿಭಕ್ತಿಃ ಯತಃ:—

ಮಮ ಸೇವಾವಿಷಯುಪರಾಜ್ಯಃ ದೇವೇದೇವರಾಜೋಽಪಿ
ಜಾಯತೇಽಹೋ! ಏಷಾಂ ನಿಸ್ಶಂಕಂ ರಂಕಸಂಕಲ್ಪ ||

ಅಸತ್ಯಕಂದಲೀ:—ಆರ್ಯಪುತ್ರ! ತವ ಮಿತ್ರವರ್ಗಂ ಜ್ಞಾತುಮಿಚ್ಛಾಮಿ.

ದ್ಯೂತಕುಮಾರ:—ಸುನಯನೇ! ಏಕಸ್ತಾವತ್ತಾತ ಮೋಹದಾಸ್ಯಾ ಹಿಂಸಾಯಾಸ್ತನಯೋ ಜಾಂಗಲಿಕೋನಾಮ | ಅಪರಶ್ಚ ತಾತ ಮೋಹದಾಂಡಪಾಶಿಕ ಪ್ರಮಾದದಾರಕೋ ಮದ್ಯಶೇಖರಕೋನಾಮ ||

ಅಷ್ಟ (ಅಸ್ಥಿ) ದಲರಚಿತಹಾರೋ ವಿಲಿಪ್ತೋ ರುಧಿರಕಂಕುಮರಸೇನ
ಶೋಭತೇ ಸವಿಶೇಷಮಿವ ಜಾಂಗಲಕೋ ಲಬ್ಧಮಾಹಾತ್ಮ್ಯಃ ||

ಅಹೋ! ಮಮ ಮಹರ್ಘ್ಯತಾಲೋಕೇ|| ಯತಃ:—

ಮಮ ಕೃತೇ ನೃಪತನಯಾ ದಿವಾನಿಶಂ ಗೃಹೀತಚಂಡಕೋದಂಡಾಃ
ದೂರೋಜ್ಝಿತರಾಜ್ಯಶ್ರೀಭೋಗಾಃ ಖಿದ್ಯಂತ್ಯರಣ್ಯೇಷು ||

ಅಪಿಚ,

ಹನ್ಯಂತೇ ಮತ್ತಕರಿಣೋ ಯತ್ಕಿಲ ಸುಭಟೈಃ ಸಮರಸಮ್ಮರ್ದೇ
ತನ್ಮಮ ಸೇವಾಸಂಭವಪ್ರಭಾವಲವಮಾತ್ರಮತ್ರ ಜಗತಿ ||
ಭೋ ಭೋ ದೇವಾಃ ! ಮಮ ಪ್ರತಿಷಿದ್ಧಿಮಿಚ್ಛಂತೋ ನ ಕಿಂ ಕ್ಷೀಣಾಃ ?
ಯೋಽಹಂ ನಿಜಭಕ್ತಾನಾಂ ತೋಲಯಿತ್ವಾತ್ಮಾನಂ ದದಾಮಿ ||

ಅದ್ಯ ಮದ್ಯಶೇಖರದ್ವಿತೀಯೋಹಂ ಪ್ರಿಯವಯಸ್ಯದ್ಯೂತೇನ ಸಹ ಕಿಮಪಿ ಮಂತ್ರರಹಸ್ಯಂ ಕರ್ತುಕಾಮೋಸ್ಮಿ ಅಥಕಥಂ ಚಿರಯತಿ ಮದ್ಯಶೇಖರಃ ?

ಯಃ ಕರೋತಿ ಮಮ ಸೇವಾಂ ಮನುಜಃ ನ ನಾಮ ಸರ್ವಲೋಕೇ
ಕರೋತಿ ನ ರಾಧಿಪಲೀಲಾಂ ಹೀನಮಾತ್ಮನೋ ಗಣಯತಿ ಭೂಪಾಲಂ ||

ಇವರಲ್ಲಿನ ದ್ಯೂತಕುಮಾರೋಕ್ತಿಯು ಹೀಗಿರುವುದು:—

ದೇವ ! ಮಮನಾಸ್ತಿ ದೋಷೋಽಣುರಪ್ಯಥ ಭವೇತ್ಕಥಮಪಿ ಯದಿ ನಾಮ ?
ಕಿಂ ಪಾಂಡುಸುತೈರಹಮೇಕಮನೋಭಿಃ ಪ್ರತಿಚರಿತಃ ? ||
ಯಃ ಕಿಲಾಸೀನ್ನರೇಂದ್ರೋಽರಿವನದಾವಾನಲೋ ನಾಮ |
ತೇನಾಪಿ ಮಮ ಪದಸೇವಾ ಕೃತಾ ಸದಾ ಕಿಂಚತರೈಃ ?
ಮಮಪ್ರಸಾದೇನೈವ ಶೂದ್ರಕದೇವೇನ ವೀರಪ್ರವರೇಣ
ನಿರ್ಜಿತರಿಪುಚಕ್ರೇಣೈಕಚ್ಛತ್ರಂ ಕೃತಂ ರಾಜ್ಯಂ ||

ಮದ್ಯಶೇಖರೋಕ್ತಿ:—

ಕೃಷ್ಣೇನ ಸಮಂ ಯಾದವಜನೇನ ನನು ಸೇವಿತೋಽಸ್ಮ್ಯವಿತೃಷ್ಣಾಂ
ರೈವತಗಿರಿಶಿಖರೇಷು ಕಾ ಗಣನಾ ಇತರಲೋಕಾನಾಂ ? ||
ಸ್ವರ್ಗಯಿಸೀಮುಖಾದಮಿವ ಮಾಂ ಪ್ರತೀಚ್ಛಂತಿ ಕಾಮಿನೋಲೋಕಾಃ
ಮಮ ಸೇವಾಸಕ್ತಾನಾಂ ನ ರೋಗಶೋಕಪ್ರಮುಖಮೇತಿ |
ಮಮ ಭಕ್ತಿಪರಾಣಾಮೇವ ತ್ರಿಪುರಾದಯೋ ದೇವತಾಸ್ತು ತುಷ್ಯಂತಿ
ಮಮ ಸೇವಯಾ ದೇವೋ ಮೃತೋಽಪಿ ಮದನಃ ಪುನರ್ಜೀವತಿ ||
ಇಹ ಧವಳಗೃಹೇಷು ಚಿರಂ ಚಾಪೋತ್ಕಟರಾಜಲಾಲಿತ ಉಷಿತಃ ||
ಏವಂ ಚ ಸ್ಥಿತೇ ಸ್ವಾಮಿನ್ ಯಜ್ಞಾನಾಸಿ ತತ್ಕ್ರಿಯತಾಂ |

ರಾಜನ ಹೇಳಿಕೆ:—

ಅವಿನಶ್ವರಂ ಶರೀರಂ ಯೇಷಾಂ ಭುವನೇ ಯಶೋಮಯಂ ಸ್ಫುರತಿ |
ತೇ ಜೀವಂತಿ ಮೃತಾ ಅಪಿ ಪುಣ್ಯಾತ್ಮನೋ ನ ಶೋಚ್ಯಾಶ್ಚ || ೩-೪೬

ವೈತಾಲಿಕನು ರಾಜನಿಗೆ ಪ್ರದೋಷಸಮಯವನ್ನು ಸೂಚಿಸುವುದು:—

ಚಕ್ಷುರ್ಘಸ್ಮರಮೋಹಡಂಬರತಮಸ್ತೋಮದ್ರುಮೋಚ್ಛಿತ್ತಯೇ
ಯತ್ರೋತ್ತೇಜಿತರುಕ್ಕುಠಾರಸಿಕರೇ ಜಾತಾ ಗ್ರಹಾ ನಿಷ್ಪ್ರಭಾಃ
ಲಕ್ಷ್ಮೀಂ ಪ್ರಾಪ ಪುನಸ್ತಮಾ ಕುಮುದಿನೀ ಸ್ಮೇರಾನನಾ ಚಾಭವ
ದ್ರಾಜಾ ಸ್ವೈಷ ಕಲಾನಿಧಿಃ ಪ್ರತಿಕಲಂ ಕುರ್ಯಾನ್ಮುದಂ ದೇಹಿನಾಂ|| ೨-೫೩



## ಅ ಮ ರ ಚ ಂ ದ್ರ

ಇವನು ವಾಯಟ (ದ) ಗಚ್ಛದ ಜಿನದತ್ತಸೂರಿಯ ಶಿಷ್ಯನು. ಇವನನ್ನು ಅಮರಕವಿಯೆಂದೂ ಅಮರಪಂಡಿತನೆಂದೂ ಕರೆಯುವುದುಂಟು

ಇವನು ಬಾಲಭಾರತದಲ್ಲಿ:—

ದಧಿಮಥನವಿಲೋಲಲ್ಲೋಲದೃಗ್ವೇಣಿದಂಭಾ
ದಯಮುದಯಮನಂಗೋ ವಿಶ್ವವಿಶ್ವೈಕಜೇತಾ
ಭವಪರಿಭವಕೋಪತ್ಯಕ್ತಬಾಣಃ ಕೃಪಾಣ
ಶ್ರಮಮಿವ ದಿವಸಾದೌ ವ್ಯಕ್ತಶಕ್ತಿರ್ವ್ಯನಕ್ತಿ (ಆದಿಪರ್ವ ಸ ೧೧-೬

ಎಂದು ವರ್ಣಿಸಿರುವುದರಿಂದ ಇವನನ್ನು ಕವಿಮಂಡಲಿಯು "ವೇಣೀಕೃಪಾಣೋಽಮರಃ" ಎಂಬ ಬಿರುದನ್ನು ಕೊಟ್ಟುದಾಗಿ "ಇತ್ಯತ್ರವೇಣ್ಯಾಃ ಕೃಪಾಣತ್ವೇನ ವರ್ಣನಾತ್ ವೇಣೀಕೃಪಾಣೋಽಮರಃ ಇತಿ ಬಿರುದಂ ಕವಿವೃಂದಾಲ್ಲಬ್ಧಂ" ಎಂದು ಹೇಳಿರುವುದರಿಂದ ಸ್ಪಷ್ಟಪಡುತ್ತದೆ. ಇದಲ್ಲದೆ ಹಮ್ಮೀರ ಮಹಾಕಾವ್ಯದಲ್ಲಿ ಇವನನ್ನು ವರ್ಣಿಸುವಾಗ

"ವಾಣೀನಾಮಧಿದೇವತಾ ಸ್ವಯಮನೌಖ್ಯಾತಾ **ಕುಮಾರೀ** ತತಃ
ಪ್ರಾಯೋಬ್ರಹ್ಮವತಾಂ ಸ್ಫುರಂತಿ ಸರಸಾ ವಾಚಾಂ ವಿಲಾಸಾಧ್ರುವಂ
ಕುಕ್ಷೋಕಃ ಸುಕೃತೀ ಜಿತೇಂದ್ರಿಯಚಯೋ **ಹರ್ಷಃ** ಸ **ವಾತ್ಸ್ಯಾಯನೋ**
ಬ್ರಹ್ಮಜ್ಞಪ್ರವರೋ ಮಹಾವ್ರತಧರೋ ವೇಣೀಕೃಪಾಣೋಽ**ಮರಃ**" ಇತಿ

ಹೀಗೆಂದು ಹೇಳಿದೆ. ಇವನ ಮಾತಾಪಿತೃಗಳಾರೆಂಬುದು ತಿಳಿಯದು *

**ಕಾಲ:**—ಇವನು ವಿ. ಸಂ. ೧೨೭೬-೧೨೯೭ ಅಥವಾ ಕ್ರಿ. ಶ. ೧೨೧೯-೧೨೪೦ರಲ್ಲಿದ್ದ ಅರಿಸಿಂಹನ ಸಮಕಾಲೀನನು ಆದುದರಿಂದ ಇವನು ಕ್ರಿ. ಶ. ೧೩ ನೆಯ ಶತಮಾನದ ಪೂರ್ವಾರ್ಧದವನೆಂಬುದು ನಿರ್ವಿವಾದವು §

* ಬಾಲಭಾರತದ ಭೂಮಿಕೆ, ಪುಟ. ೧

§ Dictionary of Jain Biography. P. 50.

**ಗ್ರಂಥಗಳು:**—೧) ಕಾವ್ಯಕಲ್ಪಲತಾ ನಾಮಕವಿಶಿಕ್ಷಾ.

‡ { ೨) ಛಂದೋರತ್ನಾವಳೀ ಮುಕ್ತಾವಳೀಚ.
೩) ಕಲಾಕಲಾಪಾಖ್ಯಂಚ ಶಾಸ್ತ್ರಂ.
೪) ಬಾಲಭಾರತಂ. }

† { ೫) ಪದ್ಮಾನಂದಕಾವ್ಯ (ಇದು ವಿ. ಸಂ. ೧೨೯೭ ಅಥವಾ ಕ್ರಿ. ಶ. ೧೨೪೦ರಲ್ಲಿ ಬರೆಯಲ್ಪಟ್ಟಿತು.)
೬) ಸ್ಯಾದಿಶಬ್ದಸಮುಚ್ಚಯ $
೭) ಕಾವ್ಯಕಲ್ಪಲತಾವೃತ್ತಿ. (ಇದರಲ್ಲಿ ೩೩೫) ಶ್ಲೋಕಗಳಿರುವುವು. ಅರಿಸಿಂಹನ ಸಹಾಯದಿಂದ ಬರೆಯಲ್ಪಟ್ಟಿತು. }

ಮೇಲೆ ಹೇಳಿದ ಗ್ರಂಥಗಳಲ್ಲದೆ ಅಮರಚಂದ್ರನು ಈ ಕೆಳಗಣ ಗ್ರಂಥಗಳನ್ನು ಬರೆದಿರುವುದಾಗಿ ಜೈನ ರಾಜಶೇಖರಸೂರಿಯು ಬರೆದಿರುವ ಪ್ರಬಂಧಕೋಶವೆಂಬ ಗ್ರಂಥದಲ್ಲಿ ಒಕ್ಕಣಿಸಿರುವನು. *

೮) ಸೂಕ್ತಾವಳಿ.
೯) ಕಾವ್ಯಕಲ್ಪಲತಾಪರಿಮಳ §
೧೦) ಅಲಂಕಾರಪ್ರಬೋಧ.

ಇವನ ಕವಿತೆಯ ಮಾದರಿಯನ್ನು ತೋರುವುದಕ್ಕಾಗಿ ಮೇಲಣ ಶ್ಲೋಕವೇ ಸಾಕು.

---

## ಜ ಯ ಸಿ ಂ ಹ ಸೂ ರಿ x

ಇವನು ಬರೋಚಿನಲ್ಲಿದ್ದ ಮುನಿಸುವ್ರತದೇವಸ್ಥಾನದ ಮುಖ್ಯಾಚಾರ್ಯನು. ವೀರಸೂರಿಯಶಿಷ್ಯನು. ತೇಜಪಾಲನು ಯಾತ್ರಾರ್ಥಿಯಾಗಿ ಈ ದೇವಾಲಯಕ್ಕೆ

‡ ಭಾಲಭಾರತದ ಭೂಮಿಕೆ ಪುಟ. ೧

† Dictionary of Jain Biography. P. 50.

$ ಸ್ಯಾದ್ವಾದವೆಂಬ ಜೈನರ ಸಪ್ತಭಂಗಿವಿವರಣಗ್ರಂಥವು ಇದಲ್ಲ.

* ಪ್ರಬಂಧಕೋಶ. ಪು ೧೨೩

§ ಇದುಪ್ರಾಯಃ ಕಾವ್ಯಕಲ್ಪಲತಾವೃತ್ತಿಯ ಉತ್ತರಭಾಗವಾಗಿರಬಹುದು.

x ಕುಮಾರಪಾಲಚರಿತ್ರೆ ಮತ್ತು ನ್ಯಾಯತಾತ್ಪರ್ಯದೀಪಿಕಾಕಾರ ಮಹೇಂದ್ರನಶಿಷ್ಯ ಕೃಷ್ಣರ್ಷಿಗಚ್ಛದಜಯಸಿಂಹಸೂರಿಯು ಇವನಲ್ಲ.

ಹೋಗಿದ್ದಾಗ ಜಯಸಿಂಹಸೂರಿಯು ಕೆಲವು ಶ್ಲೋಕಗಳಿಂದ ತೇಜಪಾಲನನ್ನು ಹೊಗಳಿ ಅಂಬಡದಲ್ಲಿರುವ ಶಕುನಿಕಾವಿಹಾರಕ್ಕಾಗಿ ಬಂಗಾರದ ಇಪ್ಪತ್ತೈದು ದೇವ ಕುಲಿಕೆಗಳನ್ನು ಮಾಡಿಸಿಕೊಡಬೇಕೆಂದು ಪ್ರಾರ್ಥಿಸಿಕೊಳ್ಳಲು ತೇಜಪಾಲನು ಅಣ್ಣ ನಾದ ವಸ್ತುಪಾಲ(ನರನಾರಾಯಣಾನಂದಗ್ರಂಥಕಾರ)ನೊಳು ಆಲೋಚಿಸಿ ಮಾಡಿ ಸಿಕೊಟ್ಟನು. ಜಯಸಿಂಹಸೂರಿಯು ಈ ಸೋದರರ ಧಾರಾಳಬುದ್ಧಿಗೆ ಅಭಿನಂದಿಸಿ ಅವರ ಹೆಸರಿನಲ್ಲಿ ಒಂದು ಸುಂದರವಾದ ಪ್ರಶಸ್ತಿಯನ್ನು ಬರೆದನು. ಈ ಶಿಲಾಲೇಖನ ಪ್ರಶಸ್ತಿಯು ಶಕುನಿಕಾವಿಹಾರದ ಭಿತ್ತಿಯನ್ನು ಅಲಂಕರಿಸಿದ್ದು ಕಾಲಕ್ರಮದಲ್ಲಿ ಈ ವಿಹಾರವು ನಾಮಾವಶೇಷವಾಗಿಹೋಗಿ ಪ್ರಕೃತಮುಸಲರ ಮಸೀತಿಯೊಂದು ಅಲ್ಲಿರುವುದು.

**ಕಾಲ:**—ಇವನು ವಸ್ತುಪಾಲ ಮತ್ತು ತೇಜಪಾಲರ ಸಮಕಾಲೀನನೆಂದು ಹೇಳಲ್ಪಟ್ಟಿರುವುದರಿಂದಲೂ, ಇವನ ಗ್ರಂಥಾಂತ್ಯದಲ್ಲಿ "ಸಂವತ್ ೧೨೮೬ವರ್ಷ ಆಷಾಢವದಿ ೯ (ನವಮಿ) ಶನೌ ಹಮ್ಮೀರಮದರ್ದನಂ ನಾಮನಾಟಕಂ ಎಂದು ಹೇಳಿರುವುದರಿಂದಲೂ ಜಯಸಿಂಹಸೂರಿಯು ಕ್ರಿ. ಶ. ೧೩ನೆಯ ಶತಮಾನದವನೆಂಬುದುಸ್ಪಷ್ಟವು.

**ಗ್ರಂಥ**—ಇವನು "ಹಮ್ಮೀರಮದಮರ್ದನ"¦ ಎಂಬ ೫ ಅಂಕಗಳುಳ್ಳನಾಟಕವನ್ನು ಬರೆದಿರುವನು. ವೀರಧವಳನು ಮಂತ್ರಿಗಳಾದ ವಸ್ತುಪಾಲ ಮತ್ತು ತೇಜಪಾಲರಬಲದಿಂದ ಗುಜರಾತಿನಮೇಲೆ ಪದೇಪದೇದಾಳಿ ಎತ್ತುತ್ತಿದ್ದ ತುರುಷ್ಕ ಮುಖ್ಯನಾದ ಹಮ್ಮೀರನನ್ನು ಸೋಲಿಸಿ ಓಡಿಸಿದನೆಂಬುದೇ ಕಥೆಯ ಮುಖ್ಯತತ್ವವಾ ದುದರಿಂದ ತನ್ನ ನಾಟಕಕ್ಕೆ ಜಯಂತಸಿಂಹನ‡ ಇಷ್ಟದಂತೆ ಹಮ್ಮೀರಮದಮರ್ದನವೆಂದೇ ಹೆಸರಿಟ್ಟಿರುವನು. ಈ ನಾಟಕವು ಕ್ಯಾಂಬೆಯಲ್ಲಿರುವ ಭೀಮೇಶ್ವರನ ಉತ್ಸವಸಮಯದಲ್ಲಿ ಅಭಿನಯಿಸಿದುದಾಗಿ ಸೂತ್ರಧಾರನಹೇಳಿಕೆಯಿಂದ ಗೊತ್ತಾಗುತ್ತದೆ ಜಯಂತಸಿಂಹನು ಕ್ರಿ. ಶ. ೧೨೭೯ರಲ್ಲಿ ಕ್ಯಾಂಬೆಯಸರ್ವಾಧಿಕಾರಿಯಾಗಿದ್ದನು.

ಮಾದರಿಗಾಗಿ ಒಂದೆರಡು ಶ್ಲೋಕಗಳನ್ನು ಬರೆದು ತೋರುವೆವು.

ಪ್ರತಾಪಾಗ್ನಿಜ್ವಾಲಾಸ್ಥಂ ಮುಹುರರಿಮಹೀವಲ್ಲಭಮಹೀ
ರುಹಾಂ ವೃಂದಂ ಪ್ರಾದುರ್ಭವತಿ ಶತಶಾಖಂ ಸಮಯತಃ ।
ಇದಂ ಮೂಲಾದುನ್ಮೂಲಿತಮತಿಶಯೋತ್ತುಂಗಮಪುನಃ
ಪ್ರರೋಹಾವಿರ್ಭಾವಂ ವಿದಧತಿ ಪುನರ್ಬುದ್ಧಿಸರಿತಾ ॥ ೧—೨೯

¦ ನಯಚಂದ್ರಸೂರಿಯುಬರೆದ ಹಮ್ಮೀರಮಹಾಕಾವ್ಯವು ಇದಲ್ಲ. ಹಮ್ಮೀರಮಹಾಕಾವ್ಯದಲ್ಲಿ ಮೇವಾಡದ ಚೌಹಣರಾಜನಾದ ಹಮ್ಮೀರನ ಚರಿತೆಯು ಹೇಳಲ್ಪಟ್ಟಿರುವುದು.

‡ ಇವನು ವಸ್ತುಪಾಲನಮಗ. ಇವನನ್ನು ಜೈತ್ರಸಿಂಹನೆಂದೂ ಕರೆಯುವುದುಂಟು.

ಪೌರುಷದವದಹನಃ ಕ್ವಚಿದಪಿ ವನಂ ದಹತಿ ನನು ನ ಚ ಕ್ವಚನ
ಅಭಿನೋಽಸ್ಯ ನನ್ಯಮುಪಮಾಮತಿಪಿಮುಪಾಃ ಪುಪರ್ದಹತಿ || ೧—೩೦

ತ್ರಸ್ತೇಷು ತೇಷು ಸುಭಟೇಷು ವಿಭೌ ಚ ಭಗ್ನೇ
ಮಗ್ನಾಸು ಕೀರ್ತಿಷು ನಿರೀಕ್ಷ್ಯ ಜನಂ ಭಯಾರ್ತಂ
ಯೋ ಮಿತ್ರಬಾಂಧವವರ್ಗಜನವಾರಿತೋಽಪಿ
ವಲ್ಗತ್ಯರೀನ್ಪ್ರತಿ ರಸೇನ ಸ ಏವ ವೀರಃ || ಪುಟ ೩—೧೪

ಕಂಚುಕಿಯ ಹೇಳಿಕೆ. –

ಸೋಽಹಂ ಯುಷ್ಮಿಗತಿಸ್ತ್ರಿವಿಕ್ರಮ ಇತಿ ಖ್ಯಾತಃ ಶೃಣೋತಿ ಶ್ರುತಿ
ಸ್ತಾರಂ ವಕ್ತರಿ ಭಾಷುಕೇಽರ್ಪಿತಮುಖಃ ನಾಮೇವ ದಾತುಂ ಶಿಶೋಃ
ಅಂಗುಷ್ಠಾಂಗುಲಿಭಿನ್ನಪಕ್ಷ್ಮಪುಟಕೇ ಕಿಂಚಿದ್ದೃಶೌ ಪಶ್ಯತಃ
ಸರ್ವಂ ಜೀರ್ಣಮಿದಂ ಸ್ಪೃಹೈವ ತರುಣೀ ನಾದ್ಯಾಪಿ ಮಾಂ ಮುಂಚತಿ||೫-೧

ಅಪಿಚ:—

ಸರ್ವಾಂಗಂ ಪಲಿತಚ್ಛಲೇನ ಜರಯಾ ಮುಕ್ತಾಃ ಕಟಾಕ್ಷಚ್ಛಟಾಃ
ಸ್ವಾತ್ಮಾ ಕಂಪಯತೇ ಶಿರಶ್ಚ ವಿಷಯಾ ಭೋಗಾನ್ನಿಷೇಧನ್ನಿವ
ಆಲೋಕಾಯ ಮುಹುರ್ಜಲಂ ವಿತರತೋ ಬಾಷ್ಪಚ್ಛಲಾಚ್ಚಕ್ಷುಷೀ
ದೇಹೋಽದ್ಯಾಪಿ ತಥಾಪಿ ಸಂಕುಚತಿ ನೋ ಮೃತ್ಯೋರ್ಭಯೇನಾಧಿಕಂ|| ೫-೨



## ಬಾ ಲ ಚಂ ದ್ರ ಸೂ ರಿ

'ಬಾಲಚಂದ್ರಸೂರಿ' ಎಂಬದು ತುರೀಯಾಶ್ರಮಸ್ವೀಕಾರದ ಅನಂತರ ಕೊಟ್ಟ ಹೆಸರು. ಇವನ ಮೊದಲಿನ ಹೆಸರು ಮುಂಜಾಲ. ಇವನು ಬ್ರಾಹ್ಮಣನು. ದೇವ ಮತ್ತು ವಿದ್ಯುತ್ ಎಂಬುವರೇ ಈತನ ತಂದೆತಾಯಿಗಳು. ಮೋಢೇರಕವೆಂಬದು ಈತನ ಜನ್ಮಭೂಮಿ. ಇವನು ಚಂದ್ರಗಚ್ಛದ ಹರಿಭದ್ರಸೂರಿಯ ಶಿಷ್ಯನು.*

**ಕಾಲ:**—ವಸ್ತುಪಾಲನಮಗ ಜೈತ್ರಸಿಂಹನ ಮನೋವಿನೋದಕ್ಕಾಗಿ ವಸಂತವಿಲಾಸಕಾವ್ಯವು ಬರೆಯಲ್ಪಟ್ಟಿದಾಗಿ¹ ಹೇಳಿರುವುದರಿಂದಲೂ, ವಸ್ತುಪಾಲನು ಸಂ. ೧೨೯೬ ಅಥವಾ ಕ್ರಿ. ಶ. ೧೨೪೦ರಲ್ಲಿ ಮೃತಪಟ್ಟಿರುವುದರಿಂದಲೂ ವಸ್ತು

ವಸಂತವಿಲಾಸಕಾವ್ಯ ೧ನೆಯ ಸರ್ಗ

¹ ಶ್ರೀವಸ್ತುಪಾಲಾಂಗಭುವೋ ನಪ್ತೋಕ್ತಿಪ್ರಿಯಸ್ಯ ವಿದ್ವಜ್ಜನಮಜ್ಜನಸ್ಯ
ಶ್ರೀಜೈತ್ರಸಿಂಹಸ್ಯ ಮನೋವಿನೋದಕೃತೇ ಮಹಾಕಾವ್ಯ ಮುದೀರ್ಯತೇಽಹ ||
ವಸಂತವಿಲಾಸ ಸರ್ಗ ೧—೨೫

ಪಾಲನ ಅನಂತರವೇ ಈ ಗ್ರಂಥವು ಬರೆಯಲ್ಪಟ್ಟಿರುವುದರಿಂದ ಇವನು ಕ್ರಿ. ಶ. ೧೩ನೆಯ ಶತಮಾನದ ಉತ್ತರಾರ್ಧದವನೆಂಬದು ಸಿದ್ಧವಾಗುವುದು.

**ಗ್ರಂಥಗಳು:**—(೧) ವಸಂತವಿಲಾಸಮಹಾಕಾವ್ಯ (೨) ಕರುಣಾವಜ್ರಾಯುಧನಾಟಕ ‡

**ವಸಂತವಿಲಾಸಮಹಾಕಾವ್ಯ:**—ಇದರಲ್ಲಿ ೧೪ ಸರ್ಗಗಳಿರುವುವು. ೬-೭-೮ ನೆಯ ಸರ್ಗಗಳಲ್ಲಿ ಋತುವರ್ಣನೆ, ಕ್ರೀಡಾವರ್ಣನೆ, ಸೂರ್ಯ ಚಂದ್ರರ ವರ್ಣನೆ, ಮೊದಲಾದುವು ಹೊರ್ತು ಉಳಿದ ಸರ್ಗಗಳಲ್ಲವೂ ವಸ್ತುಪಾಲನ ವಿಚಾರವೇ ಹೇಳಲ್ಪಟ್ಟಿರುವದು. ಹೀಗಿರುವಲ್ಲಿ ಕಾವ್ಯಕ್ಕೆ ವಸ್ತುಪಾಲವಿಲಾಸವೆಂದು ಕರೆಯುವುದಕ್ಕೆ ಬದಲು ವಸಂತವಿಲಾಸವೆಂದೇಕೆ ಕರೆದಿರುವನೆಂಬುದು ಸೋಜಿಗವಾಗಿದೆ. ಕವಿಯು ಈ ವಿಚಾರವಾಗಿ ಹೇಳಿರುವಂತೆ ಕಾವ್ಯದಲ್ಲಿ ಕಂಡುಬಾರದೆ ಇರುವುದರಿಂದ ವಸ್ತುಪಾಲನಿಗೆ ವಸಂತನೆಂಬಾಪರನಾಮವಿದ್ದಿರಬೇಕಾಗಿ ಊಹಿಸಲಾಗುತ್ತದೆ. ಕಾವ್ಯದ ಕಥಾವಸ್ತುವು ಹೀಗೆ ಹೇಳಿರುವುದು. ಛಪ್ಪನ್ನ (೫೬) ದೇಶಗಳಲ್ಲಿ ವಿಖ್ಯಾತವಾದ ಗುರ್ಜರದೇಶಕ್ಕೆ ತಿಲಕಪ್ರಾಯವಾಗಿ ಅರಿದುರ್ಗಮವಾದ ಕೋಟಿಕೊತ್ತಲಗಳಿಂದಲೂ, ದಾಟಲಸಾಧ್ಯವಾದ ಕಂದಕಗಳಿಂದಲೂ, ಮನೋಹರವಾದ ಹರ್ಮ್ಯಾಗ್ರಗಳಿಂದಲೂ ಸುಂದರವಾದ ಕಟ್ಟಡಗಳಿಂದಲೂ ಘಮಘಮಿಸುತ್ತಿರುವ ಪುಷ್ಪವಾಟಿಕೆಗಳುಳ್ಳ ಆರಾಮುಗಳಿಂದಲೂ, ಸುವರ್ಣಕಲಶಗಳಿಂದೊಪ್ಪುವ ದೇವಾಲಯಗಳಿಂದಲೂ, ದುರ್ಲಭರಾಜನಿರ್ಮಿತವಾದ ಸರಸ್ಸಿನಿಂದಲೂ, ಕಂಗೊಳಿಸುತ್ತಿರುವ ಅನ್ಹಿಲಪುರಪತ್ತನವನ್ನು ರಾಜಧಾನಿಯನ್ನಾಗಿಮಾಡಿಕೊಂಡು ಗುರ್ಜರರಾಜ ಮೂಲರಾಜನ ಮೊದಲು ಎರಡನೆಯ ಭೀಮರಾಜನವರೆಗಿನ ವಂಶಕ್ರಮಾನುಗತ ಸಿಂಹಾಸನವನ್ನು ಹತ್ತಿ ಅಮಿತಭುಜಬಲಪರಾಕ್ರಮಿಯಾದ ವೀರಧವಳನೆಂಬ ರಾಜನು ಸಕಲಸಾಮಂತಪರಿವೃತನಾಗಿ ರಾಜ್ಯವಾಳುತ್ತಿರಲು ಒಂದಾನೊಂದು ರಾತ್ರಿ ಸ್ವಪ್ನದಲ್ಲಿ ನಗರ ರಕ್ಷಕಳಾದ ರಾಜ್ಯೇಶ್ವರಿಯು ಪ್ರಸನ್ನಳಾಗಿ ಎಲೆ ರಾಣ ! ನಿನ್ನ ರಾಜ್ಯದ ಏಳಿಗೆಗೆ ಸಾಧನಭೂತರಾಗುವರಾಗಿ ನಿನ್ನೂರಿಗೆ ಕಾರಣಾಂತರದಿಂದ ಬಂದಿರುವ ವಸ್ತುಪಾಲ ತೇಜಪಾಲರೆಂಬ ಸೋದರರನ್ನು ಅಮಾತ್ಯ ಪದವಿಯಲ್ಲಿಟ್ಟುಕೊಂಡು ಸಂತಸದಿಂದ ಬಾಳೆಂದು ಹೇಳಿದಂತಾಗಲು ಅದರಂತೆ ಮಹಾಮೇಧಾವಿಗಳಾಗಿಯೂ ರಾಜತಂತ್ರಪಟುಗಳಾಗಿಯೂ ಅತ್ಯಂತ ತೇಜಸ್ವಿಗಳಾಗಿರುವ ವಸ್ತು

‡ ಈ ನಾಟಕವು ೫ ಅಂಕಗಳಿಂದಕೂಡಿ ವಸ್ತುಪಾಲನು ಶತ್ರುಂಜಯ ಪರ್ವತಕ್ಕೆ ಯಾತ್ರಾರ್ಥಿಯಾಗಿ ಹೋಗಿದ್ದಾಗ ಆದಿನಾಥನ ಎದುರಿನಲ್ಲಿ ವಸ್ತುಪಾಲನ ಅಪ್ಪಣೆಯ ಪ್ರಕಾರ ಈ ನಾಟಕವು ಅಭಿನಯಿಸಿದುದಾಗಿ ಹೇಳಿದೆ. ಆದುದರಿಂದ ಬಾಲಚಂದ್ರಸೂರಿಯು ವಸ್ತುಪಾಲನ ಕಾಲದಲ್ಲಿಯೇ ಗ್ರಂಥನಿರ್ಮಾಣ ಚತುರನಾಗಿದ್ದಿರಬೇಕಾಗಿ ಸ್ಪಷ್ಟಪಡುತ್ತದೆ. ಈ ನಾಟಕವಾವುದೆಂಬುದು ತಿಳಿಯದು.

ಪಾಲ ತೇಜಪಾಲರನ್ನು ಕರೆಕಳುಹಿ ಅಮಾತ್ಯಪದವಿಯನಿತ್ತು ವಸ್ತುಪಾಲನನ್ನು ಕ್ಯಾಂಬೆಗೆ ಸರ್ವಾಧಿಕಾರಿಯನ್ನಾಗಿ ನಿಯಮಿಸಿ ಬೀಳ್ಕೊಟ್ಟನು. ಅನಂತರ ವಸ್ತು ಪಾಲನು ಸಸೈನ್ಯನಾಗಿ ಹೊರಟು ತೊಂದರೆಯನ್ನು ಕೊಡುತ್ತಿದ್ದ ಭೃಗುಕಚ್ಛದ ಶಂಖನೆಂಬವನನ್ನು ಪರಾಜಿತನನ್ನಾಗಿಮಾಡಿ ಸುಖಸಂಕಥಾವಿನೋದದಿಂದಿರುತ್ತಿ ರಲು ಒಂದಾನೊಂದು ರಾತ್ರೆ ಸ್ವಪ್ನದಲ್ಲಿ ಧರ್ಮದೇವತೆಯು ಬಂದು ಅಮಾತ್ಯ ಶೇಖರ! ಕೃತಯುಗದಲ್ಲಿ ಚತುಷ್ಪಾದರೂಪಿಯಾಗಿದ್ದ ನಾನು ಈ ಕುಟಿಲಕಲಿ ಯಲ್ಲಿ ಏಕಪಾದಮಾತ್ರವಾಗಿರುವೆನು. ಪ್ರಬಲಪರಾಕ್ರಮಶಾಲಿಗಳಾಗಿದ್ದು ಈಗ ಸ್ಮೃತಿಶೇಷರಾಗಿರುವ ಮೂಲರಾಜ ಮತ್ತು ಸಿದ್ಧರಾಜರು ಅತುಳ ವೈಭವದಿಂದ ರಾಜ್ಯವಾಳಿದರಾದರೂ ಧರ್ಮಕಾರ್ಯೋತ್ಸುಕರಾಗಿ ಸೋಮೇಶ್ವರ ಯಾತ್ರೆಯನ್ನು ಮಾಡಿ ಶತ್ರುಂಜಯಕ್ಕೆ ಹನ್ನೆರಡು ಗ್ರಾಮಗಳನ್ನುಉಂಬಳಿಕೊಟ್ಟಿರುವುದೂ ಮೆಯ ನಲಾದೇವಿಯು ಬಾಹುಲೋದದಲ್ಲಿ ತೆಗೆದುಕೊಳ್ಳುತ್ತಿದ್ದ ಸೋಮೇಶ್ವರ ಯಾತ್ರಿಕರ ತಲಗಂದಾಯವನ್ನು ಮನ್ನಣೆಮಾಡಿಸಿದುದೂ, ಕಾಲಕ್ರಮದಲ್ಲಿ ಶಿಥಿಲವಾಗಿ ಹೋಗಿದ್ದ ದೇವಾಲಯಗಳನ್ನು ಜೀರ್ಣೋದ್ಧಾರಮಾಡಿ ಕುಮಾರಪಾಲನು ಅನೇಕ ನೂತನ ದೇವಾಲಯಗಳನ್ನುಸೋಮೇಶ್ವರ ಮತ್ತು ಕೇದಾರಗಳಲ್ಲಿ ಪ್ರತಿಷ್ಠಿಸಿದುದು ನೀನರಿತು ಹಾಗೆಯೇ ಆಚರಿಸಿ ಬಾಳುವನಾಗೆಂದು ಹೇಳಲು ಮರುದಿವಸ ಪ್ರಾತಃಕಾಲವೇ ಈ ಸನಾಚಾರಗಳನ್ನು ತನ್ನ ಆಚಾರ್ಯನಲ್ಲಿ ಬಿನ್ನವಿಸಿ ವೀರ ಧವಳನ ಅಪ್ಪಣೆಯನ್ನು ಹೊಂದಿ ರಾಜ್ಯಸೂತ್ರವನ್ನು ತಮ್ಮನಾದ ತೇಜಪಾಲನಿಗೆ ಒಪ್ಪಿಸಿ ಯಾತ್ರಾರ್ಥಿಯಾಗಿ ಹೊರಟನು. ಇವನ ಜತೆಯಲ್ಲಿ ನಾಲ್ಕು ಜನ ಸಾಮಂತ ರಾಜರು ಹೊರಟುದಲ್ಲದೆ ಲಾತ, ಗೌಡ, ಮರು, ಕಚ್ಛ, ದಾಹಲ ಅವಂತಿ, ವಂಗದ ಸಂಘಪತಿಗಳೂ ಹೊರಟು ದಾರಿಯಲ್ಲಿ ದೊರೆತ ಜೀರ್ಣ ವಾಗಿರುವ ದೇವಾಲಯಗಳನ್ನು ಪುನಃ ಕಟ್ಟಿಸಿ ವಲಭೀ (ಈಗಣವಳಾ) ಪುರದ ಹತ್ತಿರ ಬಿಡಾರ ಮಾಡಿದರು. ವಿಜಯಸೇನಸೂರಿಯು ವಸ್ತುಪಾಲನಿಗೆ ಶತ್ರುಂಜಯ ಪರ್ವತಮಾರ್ಗವನ್ನು ತೋರಿಕೊಡಲು ವಲಭೀಪುರದಿಂದ ಪಾದಲಿಪ್ತ ಪುರ (ಈಗಣಪಾಲಿಟಾನ) ಕ್ಕೆ ಬಂದು ಪಾರ್ಶ್ವನಾಥನ ದರ್ಶನಲಾಭವನ್ನು ಹೊಂದಿ ಶತ್ರುಂಜಯಪರ್ವತವನ್ನೇರಿ ಕಪರ್ದಿಯಕ್ಷನನ್ನು ಸೇವಿಸಿ ಅಲ್ಲಿಂದ ಹೊರಟು ಆದಿನಾಥನನ್ನು ಅಷ್ಟವಿಧಾರ್ಚನೆಗಳಿಂದ ಪೂಜಿಸಿ ಸಾನಂದದಿಂದ ನರ್ತಿಸಿ ಅಲ್ಲಿಂದ ಪ್ರಭಾಸಪತ್ತನದ ಕಡೆ ಹೊರಟು ಕ್ರಿಯಮೇಳಾ ತೀರ್ಥದಲ್ಲಿ ಸ್ನಾತನಾಗಿ ಸೋಮೇ ಶ್ವರನನ್ನು ಪೂಜಿಸಿ ತುಲಾಭಾರದಿಂದ ಬ್ರಾಹ್ಮಣರನ್ನು ತುಷ್ಟಿಗೊಳಿಸಿ ಮುಂದೆ ಹೊರಟು ಗಿರ್ನಾರ್ ಪರ್ವತದ ತಪ್ಪಲಿನಲ್ಲಿ ತೇಜಪಾಲನಿಂದ ಕಟ್ಟಿಸಲ್ಪಟ್ಟುದಾದ ತೇಜಪಾಲಪುರವನ್ನೂ ಕುಮಾರಸರಸ್ಸನ್ನೂ ನೋಡಿ ಹರ್ಷಿತನಾಗಿ ಆದಿನಾಥನನ್ನು ಅರ್ಚಿಸಿ ಪರ್ವತದ ಸಾನುಪ್ರದೇಶದಲ್ಲಿರುವ ನೇಮಿನಾಥನನ್ನಾರಾಧಿಸಿ ಅಲ್ಲಿರುವ

ಅಂಬಿಕಾ ಆಲೋಕನ ಮತ್ತು ಸಾಂಬಗಳೆಂಬ ಶಿಖರಗಳನ್ನು ನೋಡಿಕೊಂಡು ಹಿಂತಿರುಗಿ ಧೋಲಕಕ್ಕೆ ಬಂದು ಅಲ್ಲಿ ತನ್ನನ್ನು ಎದುರುಗೊಳ್ಳಲು ಸಸೈನ್ಯನಾಗಿ ಬಂದಿದ್ದ ವೀರಧವಳನನ್ನು ಸಂಧಿಸಿ ಸಕಲರೂ ಸುಖದಿಂದ ಊರನ್ನು ಸೇರಿ ವಿನೋದದಿಂದಿರುತಿರ್ದು ವಿ. ಸಂ ೧೨೭೬ ಅಥವಾ ಕ್ರಿ. ಶ. ೧೨೪೦ನೆಯ ಮಾಘ ಶುದ್ಧ ಪಂಚಮಿ ಸೋಮವಾರ ಪ್ರಾತಃಕಾಲ ಮಾನವಲೀಲೆಯನ್ನು ಮುಗಿಸಿದನು. ಕಾವ್ಯದಲ್ಲಿ ಕಥಾಭಾಗಕ್ಕಿಂತಲೂ ವರ್ಣನಾಭಾಗಗಳು ವಿಪುಳವಾಗಿವೆ. ಇಂತಹ ವರ್ಣನೆಯ ಮಾದರಿಗೆ ಈ ಕಾವ್ಯದ ೧೪ನೆಯ ಸರ್ಗವು ಸಾಕೆಂದು ತೋರುವುದು. ಅದರ ತಾತ್ಪರ್ಯವಿದು.—

ಒಂದಾನೊಂದು ದಿವಸ ಧರ್ಮನ ಅನುಚರನಾದ ಮುಪ್ಪು (Old age) ವಸ್ತುಪಾಲನ ಬಳಿಗೆ ಬಂದು ವಸ್ತುಪಾಲ! ನಿನ್ನ ಸುಗುಣ ಖ್ಯಾತಿ ದಾನಶೀಲತೆ ಪರಾಕ್ರಮಾತಿಶಯಾದಿಗಳು ಸ್ವರ್ಗಲೋಕದಲ್ಲಿಯೂ ಕೊಂಡಾಡಲ್ಪಡುತ್ತಿರುವ ದನ್ನುಕೇಳಿ ಧರ್ಮನಪುಗಳಾದ ಸದ್ಗತಿಯು [Feicity] ನಿನ್ನಲ್ಲಿಯೇ ನೆಟ್ಟ ಮನ ಸ್ಕಳಾಗಿ ಅನುರಾಗಗೊಂಡಿರುವುದನ್ನರಿತು ಅವಳ ತಾಯಿತಂದೆಗಳು ನಿನಿಗೇ ಕೊಟ್ಟು ವಿವಾಹಮಾಡಬೇಕೆಂದಿರುವರೆಂಬುದನ್ನು ಕೇಳಿ ವಸ್ತುಪಾಲನು ವಿರಹಜ್ವರ ಪೀಡಿತನಾಗಿ ಕ್ಷಣಕಾಲವೂ ಸುಮ್ಮನಿರಲರಿಯದೆ ಅವಳ ಪಾಣಿಗ್ರಹಣಕ್ಕೆ ಸಿದ್ಧನಾದುದನ್ನು ತಿಳಿದು ಆಯುರ್ಬಂಧನು [Limit of life] ಅಥವಾ ಧರ್ಮನು ಸಂತೋಷದಿಂದ ಲಗ್ನವನ್ನು ನಿಷ್ಕರ್ಷಿಸಿ ಸುಮುಹೂರ್ತದಲ್ಲಿ ವಸ್ತು ಪಾಲನನ್ನು ಕರೆತರಲು ಸದ್ಬೋಧ [Good knowledge] ನೆಂಬ ಚಾರ ನನ್ನಟ್ಟಲು, ಅವನು ವಸ್ತುಪಾಲನ ಬಳಿಗೆ ಬಂದು ಮಂತ್ರೀಶ್ವರ! ನಿನ್ನೊಡನೆ ಸದ್ಗತಿಯ ವಿವಾಹವು ಸಂ. ೧೨೭೬ನೆಯ ಮಾಘಶುದ್ಧ ಪಂಚಮಿ ಸೋಮವಾರ ಪ್ರಾತಃಕಾಲ ನಡೆಸಲ್ಪಡುವುದಾಗಿ ಗೊತ್ತಾಗಿರುವುದರಿಂದ ಹೊರಡಬೇಕೆನ್ನಲು ವಸ್ತುಪಾಲನು ಹೆಂಡತಿಯಾದ ಲಲಿತಾದೇವಿಯನ್ನೂ ಮಗನಾದ ಜೈತ್ರಸಿಂಹನನ್ನೂ ತಮ್ಮನಾದ ತೇಜಪಾಲನನ್ನೂ ಸಮ್ಮುಖಕ್ಕೆ ಕರೆಯಿಸಿಕೊಂಡು ಅವರಿಗೆ ಹೇಳ ಬೇಕಾದುದೆಲ್ಲವನ್ನೂ ಹೇಳಿ ವೀರಧವಳರಾಜನ ಅಪ್ಪಣೆಯನ್ನು ಹೊಂದಿ ಸದ್ಬೋಧ ನೊಡನೆ ಶತ್ರುಂಜಯಪರ್ವತವನ್ನು ಸುಮುಹೂರ್ತಕ್ಕೆ ಸರಿಯಾಗಿ ಸೇರಿ ಆದಿ ನಾಥನ ಎದುರಿನಲ್ಲಿ ಸದ್ಗತಿಯೊಡನೆ ಪರಿಣಯಗೊಂಡನು.—



# ವ ರ ದಾ ಚಾ ರ್ಯ

ಇವನು ಶ್ರೀವೈಷ್ಣವಬ್ರಾಹ್ಮಣನು. ಘಟಿಕಾಶತಸುದರ್ಶನನ ಮಗನು. ವಾತ್ಸ್ಯಾಯನಗೋತ್ರದವನು. ಕಾಂಚೀಪುರದವನೆಂಬುದು:—

ಕಾಂಚೀಪುರೇಕವಿರಭೂದ್ವರದಾರ್ಯನಾಮಾ
ಸೂನುಸ್ಸುದರ್ಶನಗುರೋರ್ಘಟಿಕಾಶತಸ್ಯ
ವೇದಾಂತತರ್ಕವಿವಿಧಾರ್ಥವಿಚಾರದಕ್ಷೋ
ವಾತ್ಸ್ಯೋವಸಂತತಿಲಕಂಸಬಭಾಣಭಾಣಂ ||

ಎಂಬ ಶ್ಲೋಕದಿಂದ ವ್ಯಕ್ತಪಡುತ್ತದೆ. ಇವನಿಗೆ ಅಮ್ಮಾಳಾಚಾರ್ಯನೆಂಬಾ ಪರನಾಮವಿದ್ದಿತು. ಇವನು ಕ್ರಿ. ಶ. ೧೩ನೆಯ ಶತಮಾನದ ಉತ್ತರಾರ್ಧದಲ್ಲಿದ್ದವನು. ಮಹಾಕವಿವೇಂಕಟನಾಥನ ಸೋದರಮಾವನಾದ ಅಪ್ಪುಳ್ಳಾರ್ರುವರ ಆಚಾರ್ಯನು. ಇವನು **ವಸಂತತಿಲಕ**ವೆಂಬ ಗ್ರಂಥವನ್ನು ಬರೆದಿರುವನು. ಇದು ನಾಟಕ ಪ್ರಕರಣದಲ್ಲಿ "ಭಾಣ" ಜಾತಿಗೆಸೇರಿದುದು. ಮಾದರಿಗೆ ಕೆಲವು ಶ್ಲೋಕಗಳನ್ನು ಬರೆಯುವೆವು.

ವೇಶ್ಯಾಜನರ ಕಪಟಾನುರಾಗ ಕೌಶಲದ ವಿಚಾರವಾಗಿ:—

ಆಲಾಪೈರ್ಮಧುರೈಶ್ಚ ಕಾಂಶ್ಚಿದಪರಾನಾಲೋಕನೈಸ್ಸಸ್ಮಿತೈ
ರನ್ಯಾನ್ಸಲ್ಪನವಿಭ್ರಮಾಧರಪರಾನಂಗೈರನಂಗೋಜ್ಜ್ವಲೈಃ
ಆಚಾರೈಶ್ಚಪರೈಃ ಪರಾನಭಿನಯೈರನ್ಯಾನ್ಸ್ತವೈಃ ಕೇಂವನ್ಯಾ
ರಿತ್ಥಂ ಕಾಂಶ್ಚನರಂಜಯಂತಿ ಸುದೃಶೋಮನ್ಯೇಮನ ಸ್ತ್ವನ್ಯಥಾ || ೨೬

ಹಾಡುವ ವೀಣಾವತೀವರ್ಣನೆ:—

ವೇಣೀವೇಲ್ಲಿತಬಾಲಕೇತಕದಳಶ್ರೇಣೀ ಮನೋಹಾರಿಣೀ
ವೀಣಾಪರ್ವಸು ಮೀಲಿತಾರ್ಧನಯನಂ ವ್ಯಾಪಾರಯಂತೀನಖಾನ್
ಮುಕ್ತಾವೇಷ್ಟಿತಕರ್ಣಪತ್ರವಲಯಾ ಮುಗ್ಧಸ್ಮಿತಾಲಂಕೃತಾ
ಸಂಗೀತಂವಿತನೋತಿತತ್ಪರಿಸರೋತಾಳಾನುಕಾರಸ್ತನೀ || ೪೩

ಯುವಕರಿಗೆ ವೇಶ್ಯಾಸಮಾಗಮದ ವಿಚಾರವಾಗಿ:—

ಯೂನಾಮನಂಗಂ ಜಯತಾಂ ವಿಶಾಲಾ
ಶಾಲಾ ಚ ಲೀಲಾಗ್ರಹಚಂದ್ರಶಾಲಾ
ಗಾತ್ರಾಣಿಪಾತ್ರಾಣಿ ವಿಲಾಸಿನೀನಾಂ
ಮಧ್ಯಂಚ ವೇದೀ ಮಿತಾನಿ ಮಂತ್ರಾಃ || ೪೪

ಸಂಧ್ಯಾವರ್ಣನೆ:—

ತವನೃತ್ತಮಹೋತ್ಸವಂವಿವಕ್ಷು
ರ್ವರುಣಾಂತಃ ಪುರವಾಮಲೋಚನಾನಾಂ

ಮಗಿದರ್ಪಣಮಂಡಲಾನುಕಾರೀ
ಭಜತೇಪಶ್ಚಿಮಶೈಲಮಂಶುಮಾಲೀ ॥ ೧೪೩

ಸಂಧ್ಯಾವರ್ಣನಗದ್ಯವು ಹೀಗಿರುವುದು:—ಪರಿಣತೋ ದಿವಸಶ್ಚ ಪಶ್ಯ:—
" ಸೋಯಮವಿಳಂಬ ಮಂಬಿಕಾರಮಣ ಪಟುತರನಟನಹಸ್ತವಿಸ್ಪಷ್ಟಕನಕ ಡಮರುಕ ವಿಡಂಬೀಗಗಲತಲವಿಹರದ ಮರಪುರವಾರಯುವತಿಕರಕಮಲಗಳಿತಮಣಿಕಂತುಕಕಾಂತಿಃ ಮಂದಾಕಿನೀನಿಕಟತಟಲಸದುಟಜಗತವಿಬುಧಗುರುವಿತೀರ್ಣಸಾಯಂತನಸಮಯನಿಯಮಾಂಜಲಿಸಲಿಲಸಹಪತಿತತಪನೀಯಾರವಿಂದಸಂದೇಹವಾಹಿ ನಿರವಧಿಕತರಂಗಿತನಿಖಿಲಮಂಗಳಾಭಂಗುರತ್ವದೀಯರಂಗೋತ್ಸವ ದರ್ಶನಕುತೂಹಲಾಗಮನವೇಗ ವಿಭ್ರಷ್ಟವಿದ್ಯಾಧರವರವರ್ಣಿನೀವರ್ಣನೀಯಸುವರ್ಣಣರ್ಕಪತ್ರಾನುಕಾರೀ ಪರಿಸರಚರವರುಣ ಪುರವರತನುಚಟು ಲಚರಣಮಣಿಕಟಕವಿಸೃಮರಕಿರಣಕದಂಬಚುಂಬಿತಇವಸಸಮುನ್ನಾಪತಿ ತಾಪರಿಮಿತರಣಿನೀಚರ ಸುಭಟ ನಿಶಿತಶರವಿದಳಿತ ನಿಜತನುಗಳಿತರುಧಿ ರನಿಕುರಂಬಕರಂಬಿತ ಇನ ಅರುಣಕಠೋರಕಶಾಭಿಘಾತಪರಿಕುಪಿತ ಜವನನಿಜತುರಗಖುರಧುವಾಳನ ಸರಭಸಕನಕ ಘನರಥಚರಣ ಘಣಘಣಾರವನಿಶಮನ ಸುಖ ನಿಷ್ಕಂಪ ಶಂಬರ ಕುಲಮವ ತರತಿ ಚರಮಗಿರಿವರನಿತಂಬ ಮಂಬರ ತಲಾ ದಂಶುಮಾಲೀ ॥

ವಸಂತ ವೀಧೀ ವರ್ಣನವುಹೀಗಿರುವುದು:—

ಸಂತತಚಲಿತ ಚಂದನಪವನ ವೇಪಮಾನ ಮದನಧ್ವಜಪಟಪಲ್ಲವ ಸಮುಲ್ಲಸಿತ ವಿಟಂಕವಾಟಿ ಕಾವಿಶಂಕಟಮಣಿ ಗಣಖಚಿತವೇದಿಕಾ ವಿಹರಮಾಣವಿವಿಧ ವಿಟನಿಚಯ ವಿಚಾರ್ಯಮಾಣ ಸಾಂಗಾಸಂಗತಂತ್ರ ವಿಸ್ತಾರಾ ಬಾಲಜನ ಪರಿಚೀಯಮಾನ ಪರಿವಾರಿನೇ ಮೃದಂಗಡಮರು ಮುರಜಝರ್ಝರೀಮುಖರ ಸುಧಾಧೌತವಿದಗ್ಧಮಂದಿರ ಶಿಖರ ನಿಕುರುಂಬನಿರ್ಜಿತ ನೀಹಾರಹಾರ ಹಿಮಗಿರಿ ದಿಗಂಬರ ಸಿತರೋ ಚಿದಂಬರಸರಿದಂಬು ಶರದಂಬುದಕಂಬುಕುಮುದಕುಂದಾವ ದಾತಾವಸಂತವೀಧೀ ॥

---

## ಹಸ್ತಿಮಲ್ಲ

ಇವನು ವತ್ಸಗೋತ್ರದವನು. ದಾಕ್ಷಿಣಾತ್ಯ ಮಹಾವಿದ್ವಾಂಸನಾದ ಗೋವಿಂದಭಟ್ಟನೆಂಬ ಬ್ರಾಹ್ಮಣನ ಮಗನು. ಕಾಲಕ್ರಮದಲ್ಲಿ ಸಮಂತಭದ್ರನ ದೇವಾಗಮ ಸೂತ್ರಾಧ್ಯಯನವನ್ನು ಮಾಡಿ ಜೈನನಾದನು.

"………ಹಸ್ತಿಮಲ್ಲಿಕಾನಾಮ ಪ್ರಥಿತಮಾಸೀತ್ | ಅಯಂ ಚ ಗೋವಿಂದ ಭಟ್ಟಾಖ್ಯವಿದುಷಃ ಸೂನುರ್ದಾಕ್ಷಿಣಾತ್ಯ ಆಸೀತ್ | ಗೋವಿಂದಭಟ್ಟೋ ವತ್ಸಗೋತ್ರೀಯೋ ಬ್ರಾಹ್ಮಣಃ ಪೂರ್ವಮಜೈನ ಆಸೀತ್ | ಪಶ್ಚಾದ್ಭಗವತ್ಸಮಂತಭದ್ರವಿರಚಿತದೇವಾಗಮಸೂತ್ರಾಧ್ಯಯನೇನ ಜೈನೋ ಜಾತಃ ………." ಎಂಬದರಿಂದ ಗೊತ್ತಾಗುತ್ತದೆ.

ಗೋವಿಂದಭಟ್ಟನು ಸ್ವರ್ಣಯಕ್ಷಿ ಎಂಬ ದೇವಿಯನ್ನು ಆರಾಧಿಸುತ್ತಿದ್ದಂತೆಯೂ. ದೇವೀ ಪ್ರಸಾದದಿಂದ (೧) ಶ್ರೀಕುಮಾರ (೨) ಸತ್ಯವಾಕ್ಯ (೩) ದೇವವಲ್ಲಭ (೪) ಉದಯಭೂಷಣ (೫) **ಹಸ್ತಿಮಲ್ಲ** (೬) ವರ್ಧಮಾನ* ರೆಂಬ ಆರು ಜನ ಗಂಡು ಮಕ್ಕಳಾಗಿ ಎಲ್ಲರೂ ಮಹಾವಿದ್ವಾಂಸರೂ ಕವಿಗಳೂ ಆಗಿದ್ದುದಾಗಿ ತಿಳಿಯಬರುತ್ತದೆ. ಇವರಲ್ಲಿ ಸತ್ಯವಾಕ್ಯನು 'ಶ್ರೀಮತೀಕಲ್ಯಾಣ' ವನ್ನು ಬರೆದಿರುವುದಾಗಿ ಮೈಥಿಲೀಕಲ್ಯಾಣದ ಪ್ರಸ್ತಾವನೆಯಲ್ಲಿ ಹಸ್ತಿಮಲ್ಲನು ಹೇಳಿಕೊಂಡಿರುವನು.

ಕುಮಾರಕವಿ ನಿರ್ಮಿತ 'ಆತ್ಮಬೋಧ' ಎಂಬ ಸಣ್ಣ ಗ್ರಂಥವು ಈಡರ್ರಾಪುರದ ಸರಸ್ವತೀ ಭಂಡಾರದಲ್ಲಿರುವುದು. ಅದು ಹಸ್ತಿಮಲ್ಲನ ಅಣ್ಣನಾದ ಶ್ರೀಕುಮಾರನು ಬರೆದುದೋ ಅಥವಾ ಬೇರೆಯೋ ತಿಳಿಯದಾಗಿದೆ.

ಶ್ರೀಮಾನ್ ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಯಲ್ಲಿ ಹಸ್ತಿಮಲ್ಲದ್ವಯವನ್ನು ಸಾಧಿಸಿರುವರು.

(೧) ಆದಿಪುರಾಣವನ್ನು ಬರೆದಿರುವ ಹಸ್ತಿಮಲ್ಲ. ಇವನ ಕಾಲವನ್ನು ಕ್ರಿ. ಶ. ೧೨೧೨ ಎಂದಿರುವರು.

(೨) ದೇವಚಂದ್ರನು ರಾಜಾವಳೀ ಕಥೆಯಲ್ಲಿ (೧೮೩೮) ಒಬ್ಬ ಹಸ್ತಿಮಲ್ಲಾಚಾರ್ಯನ ಹೆಸರನ್ನು ಹೇಳಿ ಆತನು ಗುಣಭದ್ರನ ಶಿಷ್ಯನಾದ ವೇದಾಗಮಸ್ತೋತ್ರ ವ್ಯಾಖ್ಯಾನಕರ್ತೃವಾದ ಗೋವಿಂದಭಟ್ಟನ ಮಗನೆಂದೂ, ಮದದ ಆನೆಯನ್ನು ಅಡಗಿಸಿದುದರಿಂದ ಅವನಿಗೆ ಹಸ್ತಿಮಲ್ಲನೆಂಬ ಹೆಸರು ಬಂದಿತೆಂದೂ, ಆತನಿಗೆ ಪಾರ್ಶ್ವಪಂಡಿತ ಮೊದಲಾದ ಮಕ್ಕಳು ಇದ್ದರೆಂದೂ, ಆತನು ಉಭಯಭಾಷಾ ಕವಿಚಕ್ರವರ್ತಿಯೆನಿಸಿದ್ದನೆಂದೂ, ಆತನ ಶಿಷ್ಯನು ಲೋಕಪಾಲಾರ್ಯನೆಂದೂ, ಹೇಳಿದ್ದಾನೆ ಎಂದೂ. ಇವನು ಮೇಲೆ ಹೇಳಿದ ಆದಿಪುರಾಣ ಕರ್ತೃವಾಗಿರಲಾರನೆಂದೂ ಒಕ್ಕಣಿಸಿರುವರು.†

ಇಲ್ಲಿ ಹೇಳುವ ಹಸ್ತಿಮಲ್ಲನು ಉಭಯಭಾಷಾಕವಿಚಕ್ರವರ್ತಿ ಎಂದು ನಮಗೆ ದೊರೆತಿರುವ ಗ್ರಂಥಗಳಲ್ಲಿ ಹೇಳಿಕೊಂಡಿರುವನು. ಹಾಗಾದರೆ ಈ ಹಸ್ತಿ

* 'ಗಣರತ್ನಮಹೋದಧಿ' ಕಾರನು ಇವನಲ್ಲ.

† (ಕರ್ಣಾಟಕ ಕವಿಚರಿತೆ ತಿದ್ದಿದ ಪ್ರತಿ ಪುಟ. ೩೯೯.)

ಮಲ್ಲನೂ ರಾಜಾವಳೀ ಕಥೆಯ ಹಸ್ತಿಮಲ್ಲನೂ ಒಂದೇ ವ್ಯಕ್ತಿಯೇ ಹೇಗೆ? ಒಂದೇ ವ್ಯಕ್ತಿಯೆನ್ನುವುದಾದರೆ ಹಸ್ತಿಮಲ್ಲವಿರಚಿತ ಕರ್ಣಾಟಕ ಗ್ರಂಥಗಳಾವುವು? ಹಸ್ತಿಮಲ್ಲವಿರಚಿತವಾದ ಮೈಥಿಲೀಕಲ್ಯಾಣ ಮತ್ತು ವಿಕ್ರಾಂತಕೌರವ ಎಂಬ ಸಂಸ್ಕೃತ ನಾಟಕಗಳಲ್ಲಿ ಹಸ್ತಿಮಲ್ಲವಿರಚಿತ ಕರ್ಣಾಟಕ ಗ್ರಂಥಗಳಿಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲ. ಕರ್ಣಾಟಕ ಕವಿಚರಿತೆಕಾರರೂ ಹೇಳಿರುವದಿಲ್ಲ. ಉಭಯಭಾಷಾ ಕವಿಚಕ್ರವರ್ತಿ ಎಂಬುದರಿಂದ ಕನ್ನಡ ಮತ್ತು ಸಂಸ್ಕೃತಭಾಷೆಗಳೆನ್ನುವುದಾದರೆ ಸಂಸ್ಕೃತ ಪ್ರಾಕೃತಗಳೆಂದೇಕೆ ಹೇಳಕೂಡದು?

ಹಸ್ತಿಮಲ್ಲನು ಪಾಂಡ್ಯದೇಶದರಾಜನ ಕೃಪಾಪಾತ್ರನಾಗಿ ಆರಾಜಧಾನಿಯಲ್ಲಿದ್ದುದಾಗಿ:—

ಶ್ರೀಮತ್ಪಾಂಡ್ಯಮಹೀಶ್ವರೇ ನಿಜಭುಜಾದಂಡಾವಲಂಬೀಕೃತೇ
ಕರ್ಣಾಟಾವನಿಮಂಡಲಂ ಪದನತಾನೇಕಾವನೀಶೇಽವತಿ ।
ತತ್ಪ್ರೀತ್ಯಾನುಸರನ್ ಸ್ವಬಂಧುನಿವಹೈರ್ವಿದ್ವದ್ಭಿರಾಪ್ತೈಸ್ಸಮಂ
ಜೈನಾಗಾರಸಮೇತಸಂತರನಮೇ (?) **ಶ್ರೀಹಸ್ತಿಮಲ್ಲೋಽವಸತ್** ॥

ಎಂಬ ಶ್ಲೋಕದಿಂದ ತಿಳಿಯಬರುತ್ತದೆ.

ಪಾಂಡ್ಯದೇಶವು ಯಾವುದೆಂಬುದರ ವಿಚಾರದಲ್ಲಿ:—

“ ದ್ರವಿಡದೇಶಸನ್ನಿಹಿತಸ್ಯ ಮಧುರಾ (ದಕ್ಷಿಣಮಧುರಾ) ಯಾಃ ಸಮೀಪಸ್ಥಪ್ರದೇಶಾನಾಂ ಪಾಂಡ್ಯದೇಶ ಇತಿ ನಾಮ ಆಸೀತ್ ” ಎಂದೂ, ಅದನ್ನು ಯಾರು ಆಳುತ್ತಿದ್ದರೆಂಬುದರ ವಿಚಾರದಲ್ಲಿ —

“ ಕವಿಸ್ಥಿತಿಸಮಯೇ ತತ್ರತ್ಯಃ ಪಾಂಡ್ಯಮಹೇಶ್ವರೋ ನೃಪೋಬಭೂವ । ಅಯಂಸುಂದರಪಾಂಡ್ಯ [ಪ್ರಥಮ] ಸ್ಯೋತ್ತರಾಧಿಕಾರೀಸ್ಯಾತ್, ತಸ್ಯ ರಾಜ್ಯಕಾಲಃ ೧೩೦೭ ವಿ. ಸಂವತ್ಸರಪ್ರಾರಂಭೋಭವತಿ । ಅಯಂ ಕವೇಃ ಮಹದಾದರಶ್ಚಕಾರ ”

ಎಂದು ಹೇಳಿರುವುದರಿಂದ ದ್ರಾವಿಡದೇಶದ ಸಮೀಪವರ್ತಿ ಮಧುರೆಯಬಳಿ ಇರುವ ಪ್ರದೇಶಕ್ಕೆ ಪಾಂಡ್ಯದೇಶವೆಂದೂ, ಅದನ್ನು ಮೊದಲನೆಯ ಸುಂದರಪಾಂಡ್ಯನ ಉತ್ತರಾಧಿಕಾರಿಯು ಆಳುತ್ತಿದ್ದನೆಂದೂ ಇವನು ರಾಜ್ಯವನ್ನಾಳಿದುದು ವಿ. ಸಂ. ೧೩೦೭ ಅಥವಾ ಕ್ರಿ. ಶ. ೧೨೫೦ ಎಂದೂ ತಿಳಿಯಬರುತ್ತದೆ.

**ಕಾಲ** :—ಕ್ರಿ. ಶ. ೧೨೧೬-೧೨೩೮ರ ವರೆಗೆ ಮಾರವರ್ಮ ಸುಂದರಪಾಂಡ್ಯ [ಪ್ರಥಮ] ನು ಆಳಿದುದಾಗಿದೆ. ಇವನ ಉತ್ತರಾಧಿಕಾರಿ ಜಟಾವರ್ಮ ಕುಲಶೇಖರ. [ಎರಡನೆಯವ] ಇವನು ಕ್ರಿ. ಶ. ೧೨೩೭-೧೨೬೦ರ ವರೆಗೆ ಆಳಿದನು.*

* Ancient Dekhan P. 175

ಇವನ ಕಾಲದಲ್ಲಿಯೇ ಹಸ್ತಿಮಲ್ಲನು ಇದ್ದುದಾಗಿ ಹೇಳಿರುವುದರಿಂದ ಕ್ರಿ. ಶ. ೧೩ನೆಯ ಶತಮಾನದ ಪೂರ್ವಾರ್ಧದಲ್ಲಿದ್ದವನೆಂದು ಹೇಳುವುದು ತಪ್ಪಾಗದು.

**ಗ್ರಂಥಗಳು:—ಮೈಥಿಲೀಕಲ್ಯಾಣ** ವಿಕ್ರಾಂತಕೌರವ ಈ ಎರಡು ಗ್ರಂಥಗಳು ಮಾತ್ರ ಪ್ರಕೃತದೊರೆತಿರುವುವು. ಇವನದೆಂದು ಹೇಳುವ ಸುಭದ್ರಾಹರಣ ಮತ್ತು ಜನಾಪವನಂಜಯವೆಂಬ ಗ್ರಂಥಗಳು ಉಪಲಬ್ಧವಿಲ್ಲ.

ಮೈಥಿಲೀ ಕಲ್ಯಾಣ:—ಇದು ಐದು ಅಂಕಗಳ ನಾಟಕ. ಇದರಲ್ಲಿ ಶ್ರೀರಾಮನಿಗೂ ಸೀತೆಗೂ ಆದ ವಿವಾಹಸಂದರ್ಭದ ಕಥೆಯನ್ನು ತೆಗೆದುಕೊಂಡು ತನ್ನದಾದ ಕಲ್ಪನೆಗಳಿಂದ ನಾಟಕವನ್ನು ರೂಪಿಸಿರುವನು. ಸೀತೆಯ ರೂಪಲಾವಣ್ಯಾದಿಗಳನ್ನು ಕೇಳಿದ ಮಾತ್ರದಿಂದಲೇ ಉತ್ಕಂಠಿತನಾದ ರಾಮನು ಅಯೋಧ್ಯೆಯಿಂದ ವಿದೂಷಕನೊಡನೆ ಮಿಥಿಲೆಗೆ ಬಂದು ಅಕಸ್ಮಾತ್ತಾಗಿ ದೋಲಾಗೃಹದಲ್ಲಿ ಸೀತೆಯನ್ನು ನೋಡಿ ಅತ್ಯಂತವಿರಹ ಪೀಡಿತನಾಗುವನು. ಆಗ ಸೀತಾ ರಾಮರು ಸಂಧಿಸಿದ್ದರು. ಆಕೆಯ (ಸೀತೆಯ) ಸಖಿಯರು ಬಂದುದರಿಂದ ಇವರ ಪ್ರಣಯ ಸಂಚಿಗೆ ಅವಕಾಶದೊರೆಯದೆ ಇರಲು, ವಿರಹಸಂತಪ್ತನಾದ ರಾಮನನ್ನು ವಿನೋದಗೊಳಿಸುವಸಲುವಾಗಿ ವಿದೂಷಕನು ಮಾಧವ ವನಕ್ಕೆ ಕರೆದುಕೊಂಡು ಹೋಗುವನು. ಅಲ್ಲಿ ಇಬ್ಬರೂ ಮಾತನಾಡುತ್ತಿರುವಷ್ಟರಲ್ಲಿ ಸೀತೆಯು ವಿರಹತಾಪಶಮನಾರ್ಥವಾಗಿ ಅಲ್ಲಿಗೆ ಬಂದು ರಾಮವಿದೂಷಕರ ಸಲ್ಲಾಪವನಾಲೈಸುತ್ತ ರಾಮನು ಹೇಳಿದ ಕೆಲವುಮಾತುಗಳನ್ನು ಅನ್ಯಥಾಭಾವಿಸಿಕೊಂಡು ಮೂರ್ಛಿತಳಾಗಲು ರಾಮನು ಹೋಗಿ ಅವಳನ್ನು ಸಮಾಧಾನಗೊಳಿಸುವನು. ಅನಂತರ ಸೀತಾ ಸ್ವಯಂವರಕ್ಕಾಗಿ ಮಿಥಿಲಾಧಿಪನು ಧನುಸ್ಸನ್ನು ಪಣವಾಗಿಟ್ಟಿದುದನ್ನರಿತು ರಾಮನು ಲಕ್ಷ್ಮಣನೊಡನೆ ಬಂದು ಧನುರ್ಭಂಗವನ್ನು ಮಾಡಿ ಸೀತೆಯನ್ನು ಪರಿಗ್ರಹಿಸಿಸುವನು. ಇದೇ ಈ ರೂಪಕದ ಕಥಾಸಂವಿಧಾನ.

**ವಿಕ್ರಾಂತ ಕೌರವ:**—ಇದಕ್ಕೆ 'ಸುಲೋಚನಾ' ಎಂಬ ಮತ್ತೊಂದು ಹೆಸರು.

ಇದರಲ್ಲಿ ಆರು ಅಂಕಗಳಿರುವುವು. ಕೇವಲಕಾಲ್ಪನಿಕ ಕಥೆಯೆಂದು ತೋರುತ್ತದೆ. ಹಸ್ತಿನಾಪುರದ ರಾಜಕುವರನಾದ ಜಯನೆಂಬುವನು (ಮೇಘೇಶ್ವರ) ಕಾಶಿಗೆ ಯಾತ್ರಾರ್ಥಿಯಾಗಿ ಹೋಗಿದ್ದು ಕಾಶೀರಾಜನ ಕುವರಿಯಾದ ಸುಲೋಚನಾ ಎಂಬವಳನ್ನು ನೋಡಿ ತನ್ಮಯಚಿತ್ತನಾಗಿ ವಿರಹಪೀಡಿತನಾಗಿರಲು ಸಧ್ಯದಲ್ಲೇ ಸಂಭವಿಸಿದ ಅವಳ ಸ್ವಯಂವರೋತ್ಸವದಲ್ಲಿ ಅವಳು ಇವನನ್ನು ವರಿಸುವಳು. ಇದೇ ಈ ನಾಟಕದ ಕಥೆ. ಈ ಎರಡು ನಾಟಕ ಕಥೆಗಳ ಪರಿಶೀಲನದಿಂದ

ಕವಿಯು ನಾಟಕ ರಚನೆಯಲ್ಲಿ ಚತುರನಲ್ಲವೆಂದೇ ಹೇಳಬೇಕಾಗುವುದು. ಮೈಥಿಲೀ ಕಲ್ಯಾಣದಲ್ಲಿ ರಾಮನು ಮಿಥಿಲೆಗೆ ಬಂದುದರಕಾರಣವನ್ನು ಹೇಳಿರುವುದಿಲ್ಲ. ರಾಮನನ್ನಾವಾಗಲೂ ಎಡೆಬಿಡದಿರುವ ಸೋದರ ಲಕ್ಷ್ಮಣನ ಹೆಸರೇ ಇಲ್ಲ. ನಾಟಕದಕೊನೆಯಲ್ಲಿ ಲಕ್ಷ್ಮಣನು ಬಂದಿರುವನು. ಇದಂತಿರಲಿ! ರಾಮನು ಮಿಥಿಲೆಗೆ ಬಂದು ಅಷ್ಟು ದಿವಸಗಳೂ ಅಲ್ಲಿಯೇ ಇದ್ದುದರಕಾರಣವೂ ನಿರೂಪಿತವಾಗಿಲ್ಲ. ಸೀತಾದರ್ಶನಲಾಲಸತೆಯು ಕಾರಣವೆನ್ನುವುದಾದರೆ ರಾಮನನ್ನು ಕೇವಲ ಅಧಃಕೃತರೀತಿಯಲ್ಲಿ ವರ್ಣಿಸಿದಂತಾಗುವುದು. ಮಾಧವವನಕ್ಕೆ ವಿಹಾರಕ್ಕಾಗಿ ಬಂದ ಸೀತೆಯು ಬೆಳಗಾಗುವವರೆಗೂ ಅಲ್ಲಿಯೇ ಇದ್ದಳೆಂಬುದು ಸಾಧುವಲ್ಲದುದೂ ಅಸಮಂಜಸವೂ ಆಗಿರುವುದು. ಶ್ರೀರಾಮನ ವಿವಾಹಕ್ಕೆ ರಾಮನ ತಾಯಿತಂದೆಗಳಿಗಾಗಲಿ ಇತರರಿಗಾಗಲಿ ಆಹ್ವಾನವು ಕಳುಹಿಸಲ್ಪಟ್ಟಿರುವುದಿಲ್ಲ. ಅವರಾರೂ ಬಂದಿರುವುದೂ ಇಲ್ಲ. ಲಕ್ಷ್ಮಣನು ಮಾತ್ರ ಆಸಮಯಕ್ಕೆ ಎಲ್ಲಿಂದಲೋ ಬಂದಿರುವನು. ವಿಕ್ರಾಂತ ಕೌರವ ನಾಟಕದಲ್ಲಿ ಕಲ್ಪನಾಚತುರತೆಯು ದೂರವಾಗಿ ನಾಟಕಕಲೆಯಲ್ಲಿ ಕವಿಯು ಎಂತಹ ಅಕುಶಲನೆಂಬದು ಈ ನಾಟಕದಲ್ಲಿ ಎದ್ದು ಕಾಣುತ್ತಿರುವುದು. ಇದರಲ್ಲಿ ಚಮತ್ಕಾರದ ಗಂಧವೇ ಇಲ್ಲದೆ ಕೇವಲ ಅಪ್ರಕೃತಗಳಾದ ವರ್ಣನೆಗಳಿಂದ ಇರುವ ಅಂದವೂ ಕಂದಿಹೋಗಿದೆ. ಕಥಾಸಂವಿಧಾನವು ಯಾವ ವಿಧದಲ್ಲಿಯೂ ಆಕರ್ಷಕವಾಗಿರುವುದಿಲ್ಲ. ವರ್ಣನಾಭಾಗಗಳು ಎರಡರಲ್ಲಿಯೂ ಸಾಮಾನ್ಯವಾಗಿರುವುವು. ಒಟ್ಟಿನಲ್ಲಿ ಕವಿಯನ್ನು ರೂಪಕ ಸವಿಯನ್ನರಿತ, ಸುರಿತ ನಾಟಕಕಾರನೆಂದು ಹೇಳುವುದು ಕಷ್ಟಸಾಧ್ಯವಾಗಿರುವುದು. ಮಾದರಿಗಾಗಿ ಒಂದೆರಡು ಶ್ಲೋಕಗಳನ್ನು ಕೊಡುವೆವು.

ಕಥಮಪಿ ಪರಿರಬ್ಧಾ ಯಾತ್ರಸಾ ಪಶ್ಯತೋ ಮೇ
ಮಯಿ ಪುನರಧರೋಷ್ಠಂ ಪಾತುಕಾಮೇ ಪ್ರಸಹ್ಯ
ಸಕರುಣಮುಪಲಾಲಂ ಸಿರ್ದಯಂ ಚಾಪಿ ವೀಯಂ
ಪೃಥಯತಿ ಮುಖಮಂತರ್ಬಾಷ್ಪಜಿಹ್ಮಾಕುಲಾಕ್ಷಂ || ಮೈಥಿಲೀಕಲ್ಯಾಣ ೪-೪೧

ಕಕ್ಷ್ಯಾಂತಕಕ್ಷ್ಯಂ ವಿವಿಕ್ತಂ ಶಶಿಕಿರಣಮುಪನೀತಂ ತಾಪ್ಲುತಂ ವಿಪ್ಲುತಾಕ್ಷಂ
ಕಿಂ ದೃಷ್ಟ್ವಾ ಹಂತ ಹಂಸಾ ಕಲುಷಯತಿ ಮುಧಾ ಮಾನಸಂ ರಾಜಹಂಸಃ
ಯಸ್ಯ ಕ್ರೋಧಾಂಗಗಾ ಪದರದನ ದ್ವಂದ್ವ ಕಂದ ... ಾಲ
ಸ್ನಾಲಿ ಸಮುತ್ಪ್ರಮುತ್ತ ... ಕಲ ... ದ ... ರಾ ದಂ ... ಸಂಕಿತ್ತ ೫ ೪೧

ಚಂದ್ರಾತಪವರ್ಣನ ಪ್ರ ... ಂಗಿರುವುದು—

ಅಯಮುದಾಲಮುಗ ಲ ಶಿರುಚ್ಚದ
ಚ್ಚವಿರವಾಕುರುತೇ ಪರಿಕ್ಷೋ ನಭಃ
ಶಶಿಕರಪ್ರಕರೈಃ ಪ್ರಸರತ್ ಜಗತ್
ಗವಲಕಂರಕಲಾಲಮಿದಂ ನಭ | ವಿಕ್ರಾಂತಕೌರವಂ ೫ -೪೭

ಮಂದರೋಕ್ತಿ;—

ಇದಾನೀಮಪ್ಯಸ್ತಿ ತ್ವಯಿ ಭರತಸೂನೌ ಮಮ ಘೃಣಾ
ಕೃಪಾಮಾಪ್ತ್ಯೈದ್ಪ್ರತ್ಯೇಷು ದ್ರವಿಣಮಿಹ ನಃ ಪ್ರೈತೃಕಮಿದಂ
ವ್ರಜ ಸ್ವೈರಂ ಯುದ್ಧಾತ್ ಸ್ವಗೃಹಮಥವಾ ಪ್ರೇತಭವನಂ
ಗತಿಸ್ತಾತ್ತೀರ್ಯಾಕೀ ನ ಪುನರಿಹ ಕಾವ್ಯಸ್ತಿ ಭವತಃ ೪—೯೧.

ಎಲೈ! ನೀನು ಭಾರತಭೂಮಿಯವನಾಗಿರುವೆಯೆಂದು ನಿನ್ನ ಮೇಲೆ ನನಗೆ ಅಭಿಮಾನವಿರುವುದರಿಂದಲೇ ನಿನಗೆ ಹಿತವನ್ನು ಹೇಳುವೆನು ಕೇಳು. ನಿಮ್ಮಂಥವ ರಲ್ಲಿ ಕೃಪೆಯನ್ನು ತೋರಿಸುವುದು ನಮ್ಮಕುಲಕ್ರಮಾಗತ ಆಚರಣೆಯಾಗಿರುವುದು ಈಗ ಯುದ್ಧವನ್ನು ಬಿಟ್ಟು ಸುಮ್ಮನೆ ಹೊರಡು. ಇಲ್ಲವಾದರೆ ನಿನಗೆ ಯಮಲೋಕವೇ ಗತಿ ಈ ಎರಡನ್ನೂ ಬಿಟ್ಟು ಮೂರನೆಯದಾರಿಯು ಯಾವುದೂ ತೋರುವುದಿಲ್ಲ.

---

## ರವಿವರ್ಮಭೂಪ

ಇವನು ಕೇರಳದೇಶದವನು. ಚಂದ್ರಕುಲದ ಯಾದವಜಯಸಿಂಹನ ಮಗನು. ಕ್ರಿ. ಶ. ೧೨೬೫ರಲ್ಲಿ ಹುಟ್ಟಿದನು. ಇವನಿಗೆ ಮಹಾರಾಜಪರಮೇಶ್ವರ, ದಕ್ಷಿಣಭೋಜರಾಜ, ಸಂಗ್ರಾಮಧೀರನೆಂಬ ಅಪರ ನಾಮಗಳಿದ್ದುವಾಗಿ "ಅಸ್ತಿ ಕಿಲ ಸಂಗೀತಶಾಸ್ತ್ರಪಾರದೃಶ್ವನಾ ನಿಖಿಲಗುಣರತ್ನರೋಹಣಗಿರಿಣಾ ಕವಿಜನಮಯೂರ ಕಾಲಮೇಘೇನ ಸಾಹಿತ್ಯವಿದ್ಯಾವಿಚಕ್ಷಣೇನ ದಕ್ಷಿಣಭೋಜರಾಜೇನ ಮಹಾರಾಜ ಪರಮೇಶ್ವರೇಣ ಸಂಗ್ರಾಮಧೀರವೀರನಾಮಧೇಯೇನ **ಶ್ರೀರವಿವರ್ಮದೇವೇನ**" ...... ಎಂಬುದರಿಂದಲೂ.—

ಸಂಗ್ರಾಮಭೂಮಿಷು ಸಭಾಸು ಚ ಧೀರ ಏಷ
ಶಸ್ತ್ರೇಣ ಬುದ್ಧಿವಿಭವೇನ ಚ ತೈಕ್ಷ್ಣ್ಯಭಾಜಾ
ದರ್ಪಾಂಧಕಾರಿತಧಿಯೋ ನೃಪತೀನ್ ಬುಧಾಂಶ್ಚ
ಜಿತ್ವಾಕ್ಷಿತೌ ವಿಹರತೇ ಜಯಸಿಂಹಸೂನುಃ ॥ ೧೪

ಎಂಬ ಸೂತ್ರಧಾರನ ಹೇಳಿಕೆಯಿಂದ ಸ್ಪಷ್ಟಪಡುವುದು.

'ಅಲಂಕಾರಸರ್ವಸ್ವ' ಎಂಬ ಗ್ರಂಥದ ವ್ಯಾಖ್ಯಾತೃವಾದ ಸಮುದ್ರಬಂಧನು ಇವನನ್ನು "ಕೂಪಕಭೂಪತಿಃ" ಎಂದು ಹೇಳಿಕೊಂಡಿರುವುದರಿಂದ ಇವನು ಕೂಪಕದೇಶಕ್ಕೆ ರಾಜಧಾನಿಯಾದ ಕೊಲಂಬೋ ನಗರದ ರಾಜನಾಗಿದ್ದನೆಂದೂ ಆಗಣ ಕೊಲಂಬೊನಗರವು ಈಗಣ ಕೊಲ್ಲಂ ಅಥವಾ ಕ್ವಿಲಾನ್ ಎಂದೂ ತಿಳಿಯ

ಬರುತ್ತದೆ. ಈ ಕೊಲಂಬೋ ನಗರವು ಈಗಣ ತಿರುವಾಂಕೂರಿನ [Triven-drum] ಉತ್ತರಕ್ಕೂ, ಶ್ರೀವಲ್ಲಭ ಅಥವಾ ತಿರುವಲ್ಲದ ದಕ್ಷಿಣಕ್ಕೂ ಇದ್ದುದಾಗಿ ವರ್ಣಿತವಾಗಿದೆ. ಈ ವಿಚಾರವು "ಆರ್ಯೇ! ಸಮಾದಿಷ್ಟೋಽಸ್ಮಿ ಸಕಲಕಲಾಕುಶಲಸ್ಯ ಚಂದ್ರಕುಲ ಮಂಗಲಪ್ರದೀಪಸ್ಯ ಸಮಸ್ತ ಸಾಮಂತ ಶೇಖರೀ ಕ್ರಿಯಮಾಣ ಶಾಸನಸ್ಯ ವಿವಿಧ ಶಾಖಾವಲಂಬನ ಧರ್ಮತರುಮೂಲಕಂದಸ್ಯ ಪ್ರಣಯಿಜನ ಚಿಂತಾಮಣೇಃ ಕೋಲಂಬಪುರಪರಿಷ್ಕಾರಸ್ಯ ದೇವಸ್ಯ ರವಿವರ್ಮಣಃ"

ಎಂಬ ಸೂತ್ರಧಾರನ ಹೇಳಿಕೆಯಿಂದ ವ್ಯಕ್ತವಾಗುತ್ತದೆ.

ಇವನು ಪದ್ಮನಾಭನ ಆರಾಧಕನಾಗಿದ್ದು ರಾಜಕಾರ್ಯನಿಪುಣನೂ, ಕವಿಪುಂಗವನೂ, ರಣಧೀರನೂ ಆಗಿದ್ದುದಾಗಿ ತಿಳಿಯಬರುವುದರಿಂದ ಇವನು ಈಗಣ ತಿರುವಾಂಕೋರು [Travancore] ರಾಜರ ಪೂರ್ವಿಕನಾಗಿದ್ದಿರಬಹುದಾಗಿ ತೋರುತ್ತದೆ. ಇವನು ಪಾಂಡ್ಯರಾಜರನ್ನು ಜಯಿಸಿ ತನ್ನ ರಾಜ್ಯವನ್ನು ಕಂಚಿಯವರೆಗೂ ವಿಸ್ತರಿಸಿದ್ದುದಾಗಿ ಹೇಳಲ್ಪಟ್ಟಿದೆ.

**ಗ್ರಂಥ**—ಇವನು "ಪ್ರದ್ಯುಮ್ನಾಭ್ಯುದಯ"ಎಂಬ ಐದು ಅಂಕಗಳುಳ್ಳ ನಾಟಕವನ್ನು ಬರೆದಿರುವನು. ಇವನ ಕವಿತಾ ಧಾಟಿಯನ್ನು ಪರಿಶೀಲಿಸಿದರೆ ಶ್ರೀಹರ್ಷನ ನಾಗಾನಂದ ಮೊದಲಾದ ರೂಪಕಗಳಿಗಿಂತ ಯಾವವಿಧದಲ್ಲಿಯೂ ಕಡಿಮೆಯಾಗಿರುವಂತೆ ತೋರುವುದಿಲ್ಲ.

ಲೋಕಹಿತೈಷಿಯಾದ ನಾರದ ಮತ್ತು ಕೃಷ್ಣರಸಂಚಿಗೆ ಒಳಪಟ್ಟ ಸಕಲಕಲಾಭಿಜ್ಞನಾದ ಭದ್ರನಟನೆಂಬ ಗಾಯಕನೋರ್ವನು ಪ್ರದ್ಯುಮ್ನ, ಗದ, ಸಾಂಬರೊಡನೆ ವೇಷಾಂತರದಿಂದ ವಜ್ರಪುರಕ್ಕೆಬಂದು ರಾಜನಮಗಳಾದ ಪ್ರಭಾವತಿಗೆ ಸಂಗೀತಶಾಸ್ತ್ರವನ್ನು ಕಲಿಸುತ್ತ, ಒಂದಾನೊಂದುದಿವಸ ಅನುಪಮಸುಂದರನಾದ ಪ್ರದ್ಯುಮ್ನನ ಚಿತ್ರಪಟವನ್ನು ಪ್ರಭಾವತಿಗೆ ತೋರಿ, ಅವಳನ್ನು ಸೌಂದರ್ಯಮುಗ್ಧಳನ್ನಾಗಿಮಾಡಿ, ಪ್ರದ್ಯುಮ್ನನು ಪ್ರಭಾವತಿಯನ್ನು ನೋಡಲು ರಂಭಾಭಿಸರಣವೆಂಬ ರೂಪಕವನ್ನು ಕಲ್ಪಿಸಿ, ಇವರಿಬ್ಬರಿಗೂ ಗಾಂಧರ್ವವಿವಾಹವಾದನಂತರ ಪ್ರಭಾವತಿಯಕೋರಿಕೆಯಂತೆ ತನ್ನೊಡನೆ ಕರೆತಂದಿದ್ದ ಗದ ಮತ್ತು ಸಾಂಬರಿಗೆ ಚಂದ್ರಾವತಿ ಮತ್ತು ಗುಣವತಿಯರ ಪಾಣಿಗ್ರಹಣವನ್ನು ಮಾಡಿಸಿದನಂತರ ಸಂಧಿಸಿದ ಕೊಳಗುಳದಲ್ಲಿ ದಾನವೇಂದ್ರನಾದ ವಜ್ರನಾಭನು ಪ್ರದ್ಯುಮ್ನನಿಂದ ಹತನಾಗಲು ನಾರದ ಕೃಷ್ಣರೆಲ್ಲರೂ ಸೇರಿ ಪ್ರದ್ಯುಮ್ನನಿಗೆ ಪಟ್ಟಾಭಿಷೇಕವನ್ನುಮಾಡಿ ಸಂತಸಗೊಂಡರೆಂಬುದೇ ಕಥಾವಸ್ತು. ಇದನ್ನು ಹರಿವಂಶದಿಂದ ಆರಿಸಿಕೊಂಡಿರುವನು. ಮಾದರಿಗಾಗಿ ಕೆಲವನ್ನು ಬರೆಯುವೆವು.

ಈ ನಾಟಕದ ಕಥಾನಾಯಕನಾರೆಂಬವಿಚಾರದಲ್ಲಿ ಚರ್ಚೆಗೆ ಅವಕಾಶವಿಲ್ಲ ದಂತೆ:—

ಭರತಜಲಧಿಕರ್ಣಧಾರಃ ಪ್ರಬಂಧಾ ಯದುಕ್ಷ್ಮಾಪತಿ
ಸ್ತ್ರಿಭುವನವಿಜಯೀ ಮುರಾರೇಃ ಕುಮಾರಃ ಸ್ಮರೋ ನಾಯಕಃ ೧—೫

ಎಂದು ಸೂತ್ರಧಾರನೇ ಹೇಳಿಕೊಂಡಿರುವನು.

ವಸಂತಸಮಯವರ್ಣನ:—

ಚೂತೇಚೂತೇ ಪರಭೃತರವೈಃ ಕಲ್ಪ್ಯತೇ ಕಾಹಲಶ್ರೀಃ
ಸನ್ನಹ್ಯಂತೇ ವಿಜಯಕರಿಣಶ್ಚಂದನಾದ್ರೇಃ ಸಮೀರಾಃ
ಆವಿರ್ಗಂಧಂ ದಧತಿ ತರವೋಽಪ್ಯಸ್ತ್ರಜಾಲಂ ಸಮಂತಾ
ದುದ್ಯುಂಕ್ತೇ ತನ್ಮಧುಸಹಚರೋ ಜೇತುಮುರ್ವೀಂ ಮನೋಭೂಃ|| ೧—೬

ಭದ್ರನಟನು ಪ್ರಭಾವತಿಗೆ ಪ್ರದ್ಯುಮ್ನನಂವರ್ಣಿಸುವುದು.

ಅಸ್ತಿ ತ್ರಿಲೋಕೇ ಮಹಿತಾನ್ವಯಲಬ್ಧಜನ್ಮಾ
ಕಶ್ಚಿದ್ಯುವಾ ಭುಜಕದರ್ಥಿತವೈರಿಲೋಕಃ
ಶಂಸಂತಿ ಯಂ ಯುವತಯಃ ಸಮವೇಕ್ಷ್ಯ ಸಾಕ್ಷಾತ್
ಸೌಂದರ್ಯಸಾರಸದನಾಂಗಮನಂಗಮೇವ || ೨—೭

ಸೌಂದರ್ಯರಾಶಿರಖಿಲೋಽಪಿ ಚರಾಚರೇಷು
ಪ್ರಾಯೋ ಬಭೂವ ಪರಮಾಣುರಮುಷ್ಯ ಸೃಷ್ಟೌ
ನೋ ಚೇದಸಾವಿವ ಜಗತ್ತ್ರಯಮೋಹನಶ್ರೀಃ
ಸೃಜ್ಯೇತ ಕಶ್ಚಿದಪರೋಽಪಿ ಚ ತೇನ ಧಾತ್ರಾ || ೨—೧೨

ವಿರಹಿಯವರ್ಣನ:—

ಹುತಾಶನತಿ ಮೇ ಪರಂ ವಪುಷಿ ಹಂತ ಚಂದ್ರಾತಪಃ
ಶನೈಃ ಕ್ರಕಚತಿ ಸ್ಪೃಶನ್ ಕಮಲಿನೀತರಂಗಾನಿಲಃ
ವಿಹಾರಶುಕಮಂಡಲಃ ಶ್ರವಣಶೂಲತಿ ವ್ಯಾಹರಂ
ಸ್ತಥಾ ವಿಷಸಮರ್ಪಣತ್ಯಹಹ ! ಚಂದನಾಲೇಪನಂ || ೪—೧೧

ಅಹಹ! ನನ್ನ ಶರೀರದಮೇಲೆಬೀಳುವ ಹಿಮಕಿರಣಗಳು ಅಗ್ನಿಯಂತೆಯೂ, ಪದ್ಮಕಾಸಾರದಮೇಲೆ ಮೆಲ್ಲಗೆ ಬೀಸುತ್ತ ಬರುವ ತಂಗಾಳಿಯು ತಗುಲಿದರೆ ಗರಗಸದಂತೆಯೂ, ವಿಹರಿಸುತ್ತಿರುವ ಗಿಳಿವಿಂಡುಗಳ ಕಲಕಲರವವು ಕಿವಿಗಳಿಗೆ ಭರ್ಜಿಯಿಂದ ಇರಿಯಲ್ಪಟ್ಟಂತೆಯೂ, ಶರೀರಕ್ಕೆ ಹಚ್ಚಿದ ಶ್ರೀಗಂಧಲೇಪನವು ವಿಷಮಯವಾಗಿಯೂ ತೋರುವುದು.

---

ಮದನೋ ಮನ್ಮಥೋ ಮಾರಃ ಪ್ರದ್ಯುಮ್ನೋ ಮೀನಕೇತನಃ || ಇತ್ಯಮರಃ

## ಹೋ ೯ ಪ ದೇ ೯ ವ

ಇವನು ಕ್ರಿ. ಶ. ೧೩ನೆಯ ಶತಮಾನದಲ್ಲಿ ದೌಲತಾಬಾದಿನಲ್ಲಿ ಆಳಿದ ಹೇಮಾದ್ರಿಯ ಸಭಾಪಂಡಿತನಾಗಿದ್ದನು. ಇವನು 'ಮುಗ್ಧಬೋಧ' ಎಂಬ ಕಾವ್ಯವನ್ನೂ, ಕವಿಕಲ್ಪದ್ರುಮವೆಂಬ ಮತ್ತೊಂದು ಗ್ರಂಥವನ್ನೂ ಬರೆದಿರುವನು. ಇದರಲ್ಲಿ ಸರ್ವಧಾತುಗಣಗಳೂ ಶ್ಲೋಕರೂಪದಲ್ಲಿ ಬರೆಯಲ್ಪಟ್ಟಿರುವುವು.

---

## ಪ್ರಾ ಣ ಕ ರ ಸೂ ನು

ಇವನು ಪ್ರಾಣಕರನ ಮಗನೆಂಬುದು ಹೊರ್ತು ಮತ್ತಾವುದೂ ತಿಳಿಯುವಂತಿಲ್ಲ. ಇವನ ನಿಜವಾದ ಹೆಸರಾವುದೆಂಬುದು ತಿಳಿಯದು. ಇವನು ಮೇದಿನೀ ಎಂಬ ಕೋಶವನ್ನು ಬರೆದಿರುವನು. ಇವನ ಕಾಲದ ವಿಚಾರವಾಗಿ ಡಾ|| ಭಂಡಾರಕರರವರು ಸಾಯಣಾಚಾರ್ಯರ ಅನಂತರದವನೆಂದೂ ಕ್ರಿ. ಶ. ೧೫ನೆಯ ಶತಮಾನದವನೆಂದೂ ಹೇಳುವರು. ಕೆಲವರು ಮಲ್ಲಿನಾಥನಿಗಿಂತಲೂ ಹಿಂದಲವನಾಗಿರಬೇಕೆಂದು ಅಭಿಪ್ರಾಯಪಡುವರು. ಮಲ್ಲಿನಾಥನ ವ್ಯಾಖ್ಯಾನಗಳಲ್ಲಿ ಮೇದಿನೀ ಕೋಶದ ಶಬ್ದಗಳು ದೊರೆಯುವುವಾದುದರಿಂದ ಇವನು ಕ್ರಿ. ಶ. ೧೩ನೆಯ ಶತಮಾನದವನೆಂದರೆ ತಪ್ಪಾಗದು.*

---

## ಕೃ ಷ್ಣಾ ನ ೦ ದ

ಇವನು ಕಾಯಸ್ಥಬ್ರಾಹ್ಮಣನು. ಸಂಧಿವಿಗ್ರಹಕನು. ಇವನು ಕ್ರಿ. ಶ. ೧೩ನೆಯ ಶತಮಾನದವನು. ಸಾಹಿತ್ಯದರ್ಪಣಕಾರನು ಇವನ ಶ್ಲೋಕಗಳನ್ನು ಉದಾಹರಿಸಿಕೊಂಡಿರುವುದಲ್ಲದೆ ನೈಷಧಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವುದಾಗಿ ಹೇಳಿಕೊಂಡಿರುವನು. ಇವನು ಸಹೃದಯಾನಂದವೆಂಬ ಕಾವ್ಯವನ್ನು ಬರೆದಿರುವನು. ಇದರಲ್ಲಿ ಪುರಾಣಪ್ರಸಿದ್ಧನಾದ ನಳಮಹಾರಾಜನ ಕಥೆಯು ವರ್ಣಿತವಾಗಿರುವುದು.§ ಪ್ರಕೃತ ಅಚ್ಚಾಗಿ ದೊರೆತಿರುವದು ಆರು ಸರ್ಗಗಳುಮಾತ್ರ. ದಮಯಂತೀ ಪರಿಣಯ ಪೂರ್ತಿಯಾಗಿ ಹೇಳಿದೆ. ಇದಕ್ಕೆ ಶಠಕೋಪಾಚಾರ್ಯರ ವ್ಯಾಖ್ಯಾನವು ಇರುವುದು ಇದರ ಕೆಲವು ಶ್ಲೋಕಗಳನ್ನು ಬರೆಯುವೆವು.

---

* Descriptive Catalogue of Sanskrit manuscripts Tanjore Library P. 3876 Vol. IX

§ History of classical Sanskrit Literature P. 48

ಹಂಸವು ಹೇಳಿದ ದಮಯಂತಿಯ ಸೌಂದರ್ಯಮುಗ್ಧನಾದ ನಲೋನ್ಮಾದ ವರ್ಣನೆ:—

ತವ ನಿಪೀಯ ಸಖೇ ವಚನಾಮೃತಂ
ಶ್ರವಣಯುಗ್ಮಮಭೂನ್ಮಮ ಶೀತಲಂ
ತದವಧಿ ಪ್ರಸಭಂ ದಹತೀವ ಮೇ
ಹೃದಯಮುರ್ಮ ಕಥಂ ಸ್ಮರಮುರ್ಮುರಃ || ೪-೧೪

ದಹತು ನಾಮ ಸಖೇ ಮಲಯಾನಿಲಃ
ಕಬಲನಾತ್ಫಣಿನಾಂ ವಿಷದೂಷಿತಃ
ಅಮೃತದೀಧಿತಿರೇಷ ಸುಧಾಮಯೈ
ರಪಿ ಕರೈರ್ದಹತೀತಿ ಮಹಾದ್ಭುತಂ || ೪-೧೫

ಧ್ರುವಮಿಯಂ ಮಲಯಾನಿಲಚಾರಿಣಾಂ
ಫಣಭೃತಾಂ ಶ್ವಸಿತೋರ್ಮಿಪರಂಪರಾ
ನಪುನರೇಷ ಸ ದಕ್ಷಿಣಮಾರುತ
ಸ್ತನುಭೃತಾಂ ವಿತನೋತಿ ಸುಖಾನಿ ಯಃ ೪-೧೬

ದಹತಿ ಮೇ ಹೃದಯಂ ಹಿಮದೀಧಿತಿ
ಸ್ತುದತಿ ಚಂದನಶೈಲಸಮೀರಣಃ
ದಲಯತಿ ಪ್ರಸಭಂ ಪಿಕಪಂಚಮಃ
ಕಿಮವಲಂಬ್ಯ ಸಖೀಽಸ್ತು ಸಖೋದಯಃ ||೪-೧೭

ಸ್ಮೃತಿಭುವೋ ಯದಿ ಪಂಚ ಶಿಲೀಮುಖಾ
ಯದಿ ಚ ತೇ ಕುಸುಮೈರುಪಪಾದಿತಾಃ
ಅವಿರತಂ ನಿಪತಂತಿ ಸಹಸ್ರಶಃ
ಕಥಮಿಮಾ ಹೃದಯಂ ದಲಯಂತಿ ಚ || ೪-೧೮

ಶಶಿನಮಂಬುನಿಧೌ ವಿನಿವೇಶ್ಯ ವಾ
ನಯ ಸಖೇ ಚರಮಾಚಲಕಂದರಂ
ತವ ವಿರಂಚಿವಿಮಾನಧುರ್ಯತಾ
ಮುಪಗತಸ್ಯ ಭವಿಷ್ಯತಿ ಕಃ ಶ್ರಮಃ || ೪-೨೨

ಸ್ವಯಂವರಾವಸರೇ:—

ಅಭ್ಯಾಶಭಾಜೋಽಪಿ ನೃಪಾನಪಾಸ್ಯ
ಸಾ ನೈಷಧೇ ಕೇವಲಮುತ್ಸುಕಾಸೀತ್
ಗ್ರಹೇಷು ಸತ್ಸ್ವಪ್ಯಪರೇಷು ನೂನಂ
ವಿಲೋಕತೇ ಚಂದ್ರಮಸಂ ಚಕೋರೀ || ೫-೫೨

ತಾವಂತಿಕಾದ್ದೂರತರಂ ಪ್ರಯಾಂತೀಂ
ನ ಕೇವಲಂ ದೃಷ್ಟಿರನು ಪ್ರಯಾತಾ
ಶ್ರೀಸ್ಸೋಽಪ್ಯಶ್ವಾ ಮ್ಲಾನಮುಖಪ್ರಭಾಣಾಂ
ನೈಸರ್ಗಿಕೀ ಶ್ರೀರಪಿ ಪಾರ್ಥಿವಾನಾಂ || ೫-೫೩



## ಕೇಶವ †

ಇವನು ಚೋಳದೇಶದವನು. ಬ್ರಾಹ್ಮಣನು. ಚೋಳರಾಜನಾದ ಕುಲೋತ್ತುಂಗನ ಮಗ ರಾಜರಾಜನ ಆಶ್ರಯದಲ್ಲಿದ್ದವನು. ಕುಲೋತ್ತುಂಗನ ಮಗ ರಾಜರಾಜನೆಂದು ಕ್ರಿ. ಶ. ೧೨ ಮತ್ತು ೧೩ನೆಯ ಶತಮಾನಗಳೆರಡರಲ್ಲಿಯೂ ಒಬ್ಬೊಬ್ಬರು ದೊರೆಯುವರು.§ ವ್ಯಾಖ್ಯಾನಕಾರರಾದ ಮಲ್ಲಿನಾಥನೂ, ಇವನ ಹಿಂದಲವನಾದ ಅರುಣಾಚಲನಾಥನೂ, ಮಹಾಕಾವ್ಯಗಳಿಗೆ ವ್ಯಾಖ್ಯಾನವನ್ನು ಬರೆದಿರುವುದರಲ್ಲಿ ಮಲ್ಲಿನಾಥನು, ರಘುವಂಶದ ಮೊದಲನೆಯ ಸರ್ಗದ ನಾಲ್ಕನೆಯ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುವಾಗ "ವಜ್ರಂತ್ವಸ್ತ್ರೀಕುಲಿಶಶಸ್ತ್ರಯೋಃ || ಮಣಿಭೇದೇ ರತ್ನಭೇದೇ ಇತಿಕೇಶವಃ ಎಂದೂ, ಅರುಣಾಚಲನಾಥನು ಕುಮಾರಸಂಭವಕ್ಕೆ ಬರೆದಿರುವ 'ಪ್ರಕಾಶಿಕಾ'ಎಂಬ ವ್ಯಾಖ್ಯಾನದಲ್ಲಿ 'ತ್ರಿಷ್ವತ್ರೋಪಯುಕ್ತತಃ ಇತಿಕೇಶವಸ್ವಾಮಿವಚನಾದುಪಯಾಕ್ರಾದನ್ಯ ದಭಿದಾನಸ್ಯಾಪೀಷಶಬ್ದಸ್ಯ ವಿಶೇಷಲಿಂಗತ್ವಮುವಸೇಯಂ ಎಂದು ಹೇಳಿರುವರು. ಇವರು ಕ್ರಿಸ್ತಶಕ. ಹದಿಮೂರನೆಯ ಶತಮಾನಾನಂತರದಲ್ಲಿದ್ದವರು. ಇವರಿಗಿಂತ ಕೇಶವನು ಪ್ರಾಚೀನನಾಗಿರಬೇಕು ಎಂದರೆ ಕೇಶವನು ಕ್ರಿ. ಶ. ೧೩ನೆಯ ಶತಮಾನಕ್ಕೆ ಸೇರಿದವನೆಂದು ಊಹಿಸಬಹುದಾಗಿದೆ. ಇವನು "ನಾನಾರ್ಥಾರ್ಣವಸಂಕ್ಷೇಪ" ಎಂಬ ಕೋಶಗ್ರಂಥವನ್ನು ಬರೆದಿರುವನು. ಗ್ರಂಥಾಂತ್ಯದಲ್ಲಿ "ರಾಜರಾಜೀಯಾಪರನಾಮಾ ನಾನಾರ್ಥಾರ್ಣವ ಸಂಕ್ಷೇಪಃ" ಎಂದು ಹೇಳಿರುವುದರಿಂದ ನಾನಾರ್ಥಾರ್ಣವಸಂಕ್ಷೇಪಗ್ರಂಥಕ್ಕೆ ರಾಜರಾಜೀಯವೆಂಬ ಬೇರೊಂದು ಹೆಸರೆಂದೂ ರಾಜರಾಜನ ಆಶ್ರಯದಲ್ಲಿದ್ದು ಬರೆದುದರಿಂದ ಅದಕ್ಕೆ ರಾಜರಾಜೀಯವೆಂದು ಕರೆದಿರಬಹುದಾಗಿ ಭಾಸವಾಗುತ್ತದೆ. ಇದು ಆರು ಖಂಡಗಳಾಗಿ ವಿಭಾಗಿಸಲ್ಪಟ್ಟು ಶಬ್ದಗಳ ಲಿಂಗ ವಿವೇಚನೆಯು ಮಾಡಲ್ಪಟ್ಟಿರುವುದು. ಗ್ರಂಥವು ಏಕಾಕ್ಷರ, ದ್ವ್ಯಕ್ಷರ, ತ್ರ್ಯಕ್ಷರ, ಕಾಂಡಗಳೆಂದು ವಿಭಾಗಿಸಲ್ಪಟ್ಟಿರುವುದಲ್ಲದೆ ಪ್ರತಿಯೊಂದುಕಾಂಡವೂ ಪುಂ ಸ್ತ್ರೀ ನಪುಂಸಕ ವಾಚ್ಯ ನಾನಾಲಿಂಗಾಧ್ಯಾ

† "ಕಲ್ಪದ್ರು" ಎಂಬ ಕೋಶವನ್ನು ಬರೆದ ಕೇಶವನು ಇವನಲ್ಲ.

§ History of Cholas written in tamil by Mr. T. A. Gopinatha Rao Superintendent of Archeaology Travancore.

ಯಗಳಿಂದು ಐದು ಅಧ್ಯಾಯುಗಳಾಗಿ ಪ್ರತ್ಯೇಕಿಸಲ್ಪಟ್ಟಿರುವುವು. ಅಮರಕೋಶವೇ ಮೊದಲಾದ ಇತರಕೋಶಗಳಲ್ಲಿ ದೊರೆಯದ ಶಬ್ದಗಳು ಅನೇಕಾರ್ಥಗಳೊಡನೆ ಇದರಲ್ಲಿ ವಿವರಿಸಲ್ಪಟ್ಟಿವೆ. ಪ್ರಕೃತದೊರೆತಿರುವುದು ದ್ವ್ಯಕ್ಷರಕಾಂಡ ಪೂರ್ತಿಯಾಗಿ. ಉಳಿದ ಮೂರುಕಾಂಡಗಳು ಕಾಲಕ್ರಮದಲ್ಲಿ ಮುದ್ರಿಸಲ್ಪಡುವುವಾಗಿ ತ್ರಿವೇಂದ್ರಂ ಮ|| ರಾ|| ಶ್ರೀಗಣಪತಿಶಾಸ್ತ್ರಿಗಳು ಹೇಳಿರುವರು.

---

## ವೆಂಕಟನಾಥ

ಈತನು ಅನಂತಸೂರಿಯ ಮಗನು. ಪುಂಡರೀಕ ಸೋಮಯಾಜಿಯ ಮೊಮ್ಮಗನು. ಇವನ ತಾಯಿಯ ಹೆಸರು ತೋತಾರಂಬಾ. ಕಾಂಚೀ ಪುರದ ಬಳಿಯಲ್ಲಿರುವ ತೂಪ್ಪಲ್ ಎಂಬ ಅಗ್ರಹಾರವು ಇವನ ಜನ್ಮಭೂಮಿ.*

**ಕಾಲ:**—ಈತನು ಶಾಲಿವಾಹನ ಶಕ ೧೧೯೦ ಅಥವಾ ಕ್ರಿಶ ೧೨೬೮ ಕಲಿ ೪೩೭೧ ಕ್ಕೆ ಸಲ್ಲುವ ವಿಭವ ಸಂವತ್ಸರದ ಪುರಟಾಶಿಮಾಸ (ನೆಪ್ಟಂಬರು) ಬುಧವಾರ ಶ್ರವಣ ನಕ್ಷತ್ರದಲ್ಲಿ ಜನ್ಮಗ್ರಹಣಮಾಡಿದನು § ಇವನು ತನ್ನ ಇಪ್ಪತ್ತನೆಯ ವರ್ಷದ ವೇಳೆಗೆ ಈತನ ಸೋದರಮಾವಂದಿರಾದ ಆತ್ರೇಯ ರಾಮಾನುಜರ ಬಳಿ ವೇದ ವೇದಾಂಗ ತರ್ಕಮೀಮಾಂಸಾದಿ ಸಕಲಶಾಸ್ತ್ರಗಳನ್ನೂ $ ಕಲಿತು ಸಕಲ

* ಗುರು ಪರಂಪರಾ ಪ್ರಭಾವ. ಪು ೧೧೭—೧೧೮

§ B B. R· A S. vol P 277. ದೇಶಿಕರ ಜನ್ಮಸಂವತ್ಸರವು ವಿಭವನೆಂದು ಕೆಲವರೂ, ಕೆಲವರು ಶುಕ್ಲಸಂವತ್ಸರವೆಂದೂ ಹೇಳುವರು ಈಚೆಗೆ ಹೊಸದಾಗಿ ಅಚ್ಚಾಗಿರುವ ವಡಗಲೆ ಸಂಪ್ರದಾಯದ ಗುರುಪರಂಪರಾಪ್ರಭಾವದಲ್ಲಿಯೂ ಶುಕ್ಲಸಂವತ್ಸರವೆಂದಿದೆ ಆದರೆ ಮಣಿಪ್ರವಾಳದಲ್ಲಿಯೂ, ವೈಭವಪ್ರಕಾಶಿಕೆಯುಲ್ಲಿಯೂ, ಶ್ರೀನಿವಾಸ ಸೂರಿಯವ್ಯಾಖ್ಯಾನದಲ್ಲಿಯೂ, ‡(ಪುಟ ೨೧) ವಿಭವವೆಂದೆ ಹೇಳಿದೆ. ಅಲ್ಲದೆ ಆಚಾರ್ಯದಶಕ, ಆಚಾರ್ಯ ದ್ವಾತ್ರಿಂಶತ್, ಆಚಾರ್ಯ ಪಂಚಕದಲ್ಲಿಯೂ ವಿಭವವೆಂದೇ ಹೇಳಿದೆ ದೇಶಿಕರ ಅಷ್ಟೋತ್ತರ ಶತನಾಮಾವಳಿಯಲ್ಲಿಯೂ "ವಿಭವಾಬ್ದ ಸಮುತ್ಪನ್ನಃ" ಎಂದಿದೆ. ಹೀಗೂ ವಿಭವ ಸಂವತ್ಸರವೆಂದೇ ಸಿದ್ಧಾಂತವಾಗುತ್ತದೆ.

$ "ವಿಂಶತ್ಯಬ್ದೇವಿಶ್ರುತನಾನಾ ವಿಧವಿದ್ಯಃ" ಸಂಕಲ್ಪಸೂರ್ಯೋದಯ ಶ್ಲೋ ೧-೧೫
ಜ್ಯೋತಿಚ್ಛಂದಃ ಶಬ್ದಶಾಸ್ತ್ರಪ್ರವೀಣಃ ಕಾವ್ಯೇ ಶ್ರೇಣೀರೂಪಕಾಲಂಕೃತಿಜ್ಞಃ
ಮೀಮಾಂಸಾಯಾಃ ಬ್ರಹ್ಮಕರ್ಮಾನುಗಾಯಾಃ ಸ್ಪಷ್ಟಂ ಸಾಕ್ಷಾತ್ಸರ್ವತಂತ್ರಸ್ವತಂತ್ರಃ
ಸಾಂಖ್ಯೇಯೋಗೇ ಭಾಟ್ಟತಂತ್ರೇಗುರೂಕ್ತೌ ಶೈವೇಜೈನೇ ಶಂಕರೇಭಾಸ್ಕರೇಚ
ಶಾಸ್ತ್ರೇ ಬೌದ್ಧೇಯಾದವೇ ಗರ್ವಿತಾನಾಂ ಪ್ರತ್ಯಾಖ್ಯಾತು ಸರ್ವತಂತ್ರ ಸ್ವತಂತ್ರಃ
ಭರದ್ವಾಜ ಶಾಂಡಿಲ್ಯ ಹಾರೀತಮುಖ್ಯ ಸ್ಮೃತಿಸ್ತೋಮ ಸೂಕ್ತ್ಯರ್ಥನಿರ್ಣೇತಿದಕ್ಷಃ

ವಿದ್ಯಾಧೀತ ಸಂಪನ್ನನಾಗಿ ತಿರುಮಂಗೈ ಎಂಬ ಕನ್ಯೆಯನ್ನುವರಿಸಿ ಗೃಹಸ್ಥಾಶ್ರಮಿಯಾಗಿ ಕಂಚಿಯಲ್ಲಿವಸಿಸುತ್ತಿದ್ದು, ಅನಂತರ ಯಾತ್ರಾರ್ಥಿಯಾಗಿ ದಿವ್ಯದೇಶ ಕ್ಷೇತ್ರಗಳನ್ನು ಸುತ್ತಲಾರಂಭಿಸಿಮೊದಲು ತಿರುವಹೀಂದ್ರಪುರಕ್ಕೆ ಹೋಗಿ ‡ ಅಲ್ಲಿ ಗರುತ್ಮಂತನನ್ನೂ ಸಕಲ ವಿದ್ಯಾಪ್ರದಾತನಾದ ಹಯಗ್ರೀವನನ್ನೂ ಸ್ತುತಿಸಿ ವರಪ್ರಸಾದ ಲಬ್ಧನಾಗಿ ಹೊರಟು ಹಾಗೆಯೇ ಸುತ್ತುತ್ತ ಕ್ರಿ. ಶ ೧೨೯೧—೯೩ ರಲ್ಲಿ ಹಯಗ್ರೀವಸ್ತೋತ್ರ ಗರುಡಪಂಚಾಶತ್ ಎಂಬ ಸ್ತೋತ್ರಗಳನ್ನು ತಮ್ಮ ಅಭಿಮಾನ ದೇವತೆಗಳಮೇಲೆ ಬರೆದುದಲ್ಲದೆ ಪ್ರಾಕೃತದಲ್ಲಿ ಅಚ್ಯುತಶತಕವನ್ನೂ ಅನಂತರ ದೇವನಾಯಕ ಪಂಚಾಶತ್, ರಘುವೀರಗದ್ಯ, ಗೋಪಾಲವಿಂಶತಿ ಮೊದಲಾದವುಗಳನ್ನು ಬರೆದು ಉತ್ತರಕ್ಕೆ ಹೊರಟು ತಿರುಪತಿಯನ್ನು ಸಾರ್ದು ಅಲ್ಲಿ ದಯಾಶತಕವೇ ಮೊದಲಾದ ಗ್ರಂಥಗಳನ್ನು ಬರೆದನು. ಇವುಗಳಲ್ಲದೆ ಭೂಸ್ತುತಿ. ಶ್ರೀಸ್ತುತಿ. ದಶಾವತಾರಸ್ತೋತ್ರ, ತತ್ವಮುಕ್ತಾಕಲಾಪ, ನ್ಯಾಯಸಿದ್ಧಾಂಜನ, ಸೇಶ್ವರಮೀಮಾಂಸಾ, ಸಚ್ಚರಿತ್ರರಕ್ಷಾದಿ ಗ್ರಂಥಗಳನ್ನೂ, ಪ್ರಬೋಧಚಂದ್ರೋದಯವನ್ನು ನೋಡಿ. ವಿಶಿಷ್ಟಾದ್ವೈತ ಮತ ತತ್ವಭೋಧಕವಾದ ಸಂಕಲ್ಪಸೂರ್ಯೋದಯವೆಂಬ ನಾಟಕವನ್ನೂ, ಡಿಂಡಿಮಕವಿಕೃತ ರಾಘವಾಭ್ಯುದಯ ಕಾವ್ಯವನ್ನುನೋಡಿ ಯಾದವಾಭ್ಯುದಯ ಕಾವ್ಯವನ್ನೂ, ಮೇಘ ಸಂದೇಶವನ್ನುನೋಡಿ ಹಂಸಸಂದೇಶವನ್ನೂ ಬರೆದುದಲ್ಲದೆ ಪಾದುಕಾ ಸಹಸ್ರ, ಗರುಡದಂಡಕ, ಶಾರೀರಕಭಾಷ್ಯ, ದ್ರಮಿಡೋಪನಿಷತ್ಸಾರ, ಗೀತಾರ್ಥಸಂಗ್ರಹರಕ್ಷಾ, ರಹಸ್ಯತ್ರಯಸಾರ, ಅಧಿಕರಣಸಾರಾವಳೀ. ತಾತ್ಪರ್ಯಚಂದ್ರಿಕಾ, ತತ್ವಟೀಕಾಮೊದಲಾದ ಎಷ್ಟೋ ಗ್ರಂಥಗಳನ್ನು ಬರೆದುದಲ್ಲದೆ ತಮಿಳಿನಲ್ಲಿಯೂ ಅನೇಕ ಗ್ರಂಥಗಳನ್ನುಬರೆದಿರುವನು. ಮಣಿಪ್ರವಾಳ ಮತ್ತು ಪರಮತಭಂಗ, ಶತದೂಷಿಣೀ ಮೊದಲಾದ ಗ್ರಂಥಗಳು ತಮಿಳಿನಲ್ಲಿ ಬರೆಯಲ್ಪಟ್ಟಿರುವುವು. ಈ ಸಮಯದಲ್ಲಿಯೇ ಬರೆದುದಾಗಿಹೇಳುವ ಸಮಸ್ಯಾಸಹಸ್ರ ವೆಂಬುದು ಈಗ ಉಪಲಬ್ಧವಿಲ್ಲ. ಈ ಸಮಯದಲ್ಲಿ ಓರುಗಲ್ಲಿನಲ್ಲಿ ಆಳುತ್ತಿದ್ದ ಪಾಳ್ಯಗಾರ ಸರ್ವಜ್ಞ ಸಿಂಹನಾಯಕನು ವೆಂಕಟನಾಥನ ವಿದ್ವತ್ಪ್ರಭೆಯನ್ನು ಕೇಳಿ ಶ್ರೀ ವೈಷ್ಣವಮತ ತತ್ವ ನಿರ್ಧಾರಣವನ್ನುಂಟು ಮಾಡಿಕೊಡಬೇಕೆಂದು ಕೇಳಿಕೊಂಡುದಕ್ಕೆ ಆಚಾರ್ಯ

---

ಪುರಾಣಾ ಣಮಾದಿಷ್ಟ ಸಾಧಾರಣ ಶ್ರೀ ಸುತೋಭಾತಿ ಲೋಕೇಷ್ವನಂತಾರ್ಯಸೂರೇಃ ||
ಜಟಾವರ್ಣಚರ್ಚಾ ದ್ಯನೇಕ ಪ್ರಕಾರ ತ್ರಯೀಲಕ್ಷ್ಯ ಗೋಚ್ಚಾರಣೇ ವ್ಯಾಸಕಲ್ಪಃ
ತಥಾಕಲ್ಪಸೂತ್ರ ಪ್ರಯೋಗಾದ್ಯಭಿಜ್ಞೋ ಜಯತ್ಯನ್ನ ಹಂಸರ್ವತಂತ್ರಸ್ವತಂತ್ರಃ ||
ಸಪ್ತತಿರತ್ನಮಾಲಿಕೆ)

ಆತ್ರೇಯರಾಮಾನುಜರಿಗೆ. " ಅಪ್ಪುಳ್ಳಾರ್ " ಎಂದೂ ಹೆಸರು

‡ ತಿರುವಹೀಂದ್ರಪುರದಲ್ಲಿ ಸುಮಾರು ೧೭ ವರ್ಷಗಳು ಇದ್ದುದಾಗಿ ಹೇಳಿಸೆ.
(Arcot Gazetteer P. 321)

ದೇಶಿಕನು ಸಂತುಷ್ಟನಾಗಿ ಸುಭಾಷಿತನೀವೀ ತತ್ವಸಂದೇಶ, ರಹಸ್ಯಸಂದೇಶವೆಂಬ ಗ್ರಂಥಗಳನ್ನ ವ್ಯಾಖ್ಯಾನದೊಡನೆ ಬರೆದುಕಳುಹಿಸಿದನು. ಈತನು ಬರೆದಿರುವ ಸಣ್ಣ ಸಣ್ಣಸ್ತುತಿಗಳಲ್ಲಿ ಗೋಪಾಲವಿಂಶತಿ ಭೂಸ್ತುತಿ. ವರದಪಂಚಾಶತಿ, ಪ್ರಾರ್ಥನಾಷ್ಟಕ, ಹಯಗ್ರೀವಸ್ತುತಿ ಇವೇಮೊದಲಾದವು ಮುಖ್ಯವಾದವುಗಳು. ಈತನಿಗೆ ಕ್ರಿ ಶ. ೧೩೧೭ ರಲ್ಲಿ ಪುತ್ರೋತ್ಸವವಾಯಿತು. ಶಿಶುವಿಗೆ 'ವರದಾಚಾರ್ಯ'ಎಂದು ನಾಮಕರಣವಾದುದು. ಈತನು ವಿಶಿಷ್ಟಾದ್ವೈತಮತ ಪ್ರಸಾರಕ್ಕಾಗಿಯೇ ತನ್ನ ಜೀವಮಾನವೆಲ್ಲವನ್ನೂ ಕಳೆದು ಕ್ರಿ ಶ. ೧೩೬೮ ರಲ್ಲಿ ತನ್ನಂತಿರುವ ಶಿಲಾಪ್ರತಿಮೆಯೊಂದನ್ನು ಮಾಡಿ ಶಿಲ್ಪಾರ್ಥಸಾರ ಸಂಗ್ರಹವೆಂಬ ಗ್ರಂಥವನ್ನುಬರೆದು ಕ್ರಿ. ಶ. ೧೩೬೯ ರಲ್ಲ ಕೀರ್ತಿಶೇಷನಾದನು:—

ವೆಂಕಟನಾಥನ ಚರಮ ಶ್ಲೋಕವು ಹೀಗಿರುವುದು.

ಅಬ್ದೇನಮ್ಯೇಚಮಾರೇಗತವತಿತರಣೌವೃಶ್ಚಿಕಂಕೃತ್ತಿಕರ್ಕ್ಷೇ
ರಾಕಾಯಾಂವೆಂಕಟೇಶೋಯತಿನೃಪತಿಮತಂಸರ್ವತಃಸ್ಥಾಪಯತ್ವಾ
ವೇದಾಂತಾಚಾರ್ಯನಾಮಾವಿರಚಿತವಿವಿಧಾನೇಕ ದಿವ್ಯಪ್ರಬಂಧಃ
ಶ್ರೀಶೈಲಾಧೀಶಘಂಟಾಕೃತಿವಪುರಭವದ್ದೇಶಿಕೇಂದ್ರೋದಯಾಯ ||

ಈತನಿಗೆ ತೂಪ್ಪಿಲ್ ಪಿಳ್ಳೈ, ವೆಂಕಟೇಶ, ಘಂಟಾವತಾರ, ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರ, ವೇದಾಂತಾಚಾರ್ಯ ನಿಗಮಾಂತಮಹಾದೇಶಿಕ, ವೇದಾಂತ ದೇಶಿಕ, ದೇಶಿಕರೆಂಬ ಉಪನಾಮಗಳು. ವೇದಾಂತದೇಶಿಕನೆಂಬ ರೂಢಿವಾಚಕದಲ್ಲಿ ವೆಂಕಟನಾಥನೆಂಬ ನಿಜವಾದ ಹೆಸರು ಅಂತರ್ಹಿತವಾಗಿ ಹೋಗಿದೆ.

ಆಚಾರ್ಯದೇಶಿಕನ ವೈಭವಚರಿತೆಯನ್ನು ಹೇಳುವ ಸಮಾರಂಭದಲ್ಲಿ ಚರ್ಚಾಸ್ಪದವಾದ ಚಾರಿತ್ರಕ ವಿಚಾರಗಳನೇಕಗಳು ಸಮಾವೇಶಗೊಂಡಿವೆ. ಅವುಗಳ ಸಾರಾಸಾರ ವಿವೇಚನೆಯ ಹೊರ್ತು ವೆಂಕಟನಾಥನ ಚರಿತೆಯು ಪೂರ್ಣವಾಗದು.

(೧) ವಿದ್ಯಾರಣ್ಯರ ಸಂಬಂಧ
(೨) ಕೃಷ್ಣಮಿಶ್ರರ ದರ್ಶನ
(೩) ಅಕ್ಷೋಭ್ಯತೀರ್ಥರವಾದ

(೧) ವಿದ್ಯಾರಣ್ಯರ ಸಂಬಂಧ:—

(ಅ) ಒಂದಾನೊಂದು ದಿವಸ ವೇದಾಂತದೇಶಿಕನು ಮಾರ್ಗವಶಾತ್ ತುಂಗಭದ್ರಾತೀರದಲ್ಲಿ ಒಂದು ನಗರ ಸಮೀಪದಲ್ಲಿರುವ ಭಗವತ್ಸನ್ನಿಧಿಯಲ್ಲಿರಲು ಆಗ ಬಾಲ್ಯದಿಂದಲೂ ಸಹಪಾಠಿಗಳಾದ ವಿದ್ಯಾರಣ್ಯರು ವೈರಾಗ್ಯದಿಂದ ಸಂನ್ಯಾಸಮಂ

ಕೊಂಡು ಗಂಗಾಯಾತ್ರೆಯನ್ನು ಮಾಡಬೇಕೆಂದು ಬಂದು ತೂಪ್ಪಿಲ್ ಪಿಳ್ಳೆಯನ್ನು ಕಂಡು ಸಲ್ಲಾಪಾದಿಗಳನ್ನು ಮಾಡಿಕೊಂಡಿರಲು, ಸಮೀಪನಗರದ ರಾಜನು ತನ್ನ ಮಗಳಿಗೆ ಬ್ರಹ್ಮರಾಕ್ಷಸನು ಹಿಡಿದಿರುವನೆಂದೂ, ಯಾರಿಂದಲೂ ಬಿಡಿಸಲು ಸಾಧ್ಯವಾಗದೆ ಚಿಂತಾಕ್ರಾಂತನಾಗಿರುತ್ತಿದ್ದು ಯಾರೋ ಮಹಾತ್ಮರಿರ್ವರು ಬಂದಿರುವುದಾಗಿ ಕೇಳಿ ಅಲ್ಲಿಗೆ ಬಂದು ನಮಸ್ಕರಿಸಿ ಸ್ವಾಮಿ! ತಾವು ಹೇಗಾದರೂ ಮಾಡಿ ನನ್ನ ಮಗಳಿಗೆ ಹಿಡಿದಿರುವ ಬ್ರಹ್ಮರಕ್ಷಸ್ಸನ್ನೋಡಿಸಿ ಕಾಪಾಡಿಕೊಡಬೇಕೆಂದು ಪ್ರಾರ್ಥಿಸುತ್ತಿರುವುದನ್ನು ಕೇಳಿ ವಿದ್ಯಾರಣ್ಯರು ರಾಜನ ಕೋರಿಕೆಯನ್ನು ನಡೆಯಿಸಿ ಕೊಡಬೇಕೆಂದು ತೂಪ್ಪಿಲ್ ಪಿಳ್ಳೆಯನ್ನು ಪ್ರಾರ್ಥಿಸಿಕೊಂಡುದಕ್ಕೆ ತೂಪ್ಪಿಲ್ ಪಿಳ್ಳೆಯು ಅನಭಿಮುಖರಾಗಿರುತಿರ್ದು ಬೃಂದಾವನವೇ ಮೊದಲಾದ ದಿವ್ಯದೇಶಗಳನ್ನು ಕುರಿತು ಪ್ರಯಾಣಮಾಡಿದರು. (ಗುರುಪರಂಪರಾಪ್ರಭಾವ ಪುಟ. ೧೩೧)

(ಆ) ಅನಂತರ ವಿದ್ಯಾರಣ್ಯರು ಆ ರಾಜಪುತ್ರಿಗೆ ಹಿಡಿದಿದ್ದ ಬ್ರಹ್ಮರಾಕ್ಷಸನನ್ನೋಡಿಸಿ, ವಿಜಯನಗರವನ್ನುಂಟುಮಾಡಿ, ತಾವು ರಾಜವಲ್ಲಭರಾಗಿರುತಿರ್ದು ತಮ್ಮ ಮಿತ್ರರಾದ ತೂಪ್ಪಿಲ್ ಪಿಳ್ಳೆಯು ಉಂಛವೃತ್ತಿಯಲ್ಲಿರುವರೆಂಬುದನ್ನು ತಿಳಿದು ಕಡುನೊಂದು ತೂಪ್ಪಿಲ್ ಪಿಳ್ಳೆಗೆ ಅಯ್ಯಾ! ನೀವು ಇಷ್ಟಪಟ್ಟರೆ ರಾಜನ ಬಳಿಗೆ ಕರೆಯಿಸಿಕೊಂಡು ತನ್ನ ನಿಚಾರದಲ್ಲಿ ರಾಜನು ತಮ್ಮ ಇಷ್ಟಾನುವರ್ತಿಯಾಗಿರುವಂತೆ ಮಾಡುವೆನು. ಈ ರೀತಿ ಶ್ರಮಪಡುವುದು ಅವಶ್ಯಕವಿಲ್ಲವೆಂದು ಕಾಗದವನ್ನು ಬರೆದುಕಳುಹಿದುದಕ್ಕೆ ದೇಶಿಕರು ಅದನ್ನೋದಿನೋಡಿ ಅದಕ್ಕೆ ಪ್ರತ್ಯುತ್ತರವಾಗಿ:—

" ಶಿಲಂಕಿಮನಲಂಭವೇದನಲಮೌದರಂಬಾಧಿತುಂ
ಪಯಃಪ್ರಸೃತಿಪೂರಕಂ ಕಿಮುನಧಾರಕಂಸಾರಸಂ
ಅಯತ್ನಮಲಮಲ್ಲಕಂ ಪಥಿಪಟಚ್ಚರಂಕಚ್ಚರಂ
ಭಜಂತಿವಿಬುಧಾಮುಧಾಹ್ಯ ಹಹ! ಕುಕ್ಷಿತಃಕುಕ್ಷಿತಃ ||

ಎಂಬ ಶ್ಲೋಕವನ್ನು ಬರೆದು ಕಳುಹಿದಂತೆಯೂ ಅದನ್ನು ನೋಡಿ ವಿದ್ಯಾರಣ್ಯರು ದೇಶಿಕರ ವೈರಾಗ್ಯಸಂಪತ್ತಿಗೆ ತಲೆದೂಗಿ ಕೆಲವು ಕಾಲವನ್ನು ಕಳೆದು ಅನಂತರ ಹಿಂದೆ ಬರೆದಂತೆ ಮತ್ತೊಂದು ಪತ್ರಿಕೆಯನ್ನು ಬರೆದು ಕಳುಹಿಸಲು ದೇಶಿಕರು ಅದಕ್ಕೆ ಪ್ರತ್ಯುತ್ತರವಾಗಿ ಕೆಲವು ಶ್ಲೋಕಗಳನ್ನು ಬರೆದು ಕಳುಹಿಸಿದಂತೆಯೂ ಅವುಗಳೇ ವೈರಾಗ್ಯಪಂಚಕಗಳೆಂದೂ ಗುರುಪರಂಪರಾಪ್ರಭಾವವು ಹೇಳುತ್ತದೆ. (ಪುಟ ೧೩೩)

**ಮೊದಲನೆಯ ಹೇಳಿಕೆಯಲ್ಲಿ:**—ಇರ್ವರೂ ಬಾಲಸ್ನೇಹಿತರಾಗಿದ್ದು ಕಾಲಕ್ರಮದಲ್ಲಿ ಇರ್ವರೂ ಪರಸ್ಪರ ಅಗಲಿದ್ದು ಒಬ್ಬರೊಬ್ಬರ ವಿಚಾರವು ಪರಸ್ಪರ ತಿಳಿ

ಎಲ್ಲಿಯೋ ಹಠಾತ್ತಾಗಿ ತುಂಗಭದ್ರಾತೀರಕ್ಕೆ ಇರ್ವರೂ ಬಂದು ಕಾಕತಾಳನ್ಯಾಯ ದಿಂದ ಪರಸ್ಪರ ಸಲ್ಲಾಪ ಮಾಡುತ್ತಿದ್ದ ಹಾಗೂ, ಅಲ್ಲಿಯ ರಾಜನಿಗೆ ಇವರಿರ್ವರೂ ನೂತನರೆಂದೂ ಹಿಂದೆ ಯಾವಾಗಲೂ ನೋಡಿರಲಿಲ್ಲವೆಂದೂ ಸಂನ್ಯಾಸವಂ ಕೊಂಡಿರುವ ಮತ್ತು ಗಂಗಾಯಾತ್ರಾಭಿಲಾಷಿಯಾಗಿರುವ ವಿದ್ಯಾರಣ್ಯರಿಗೆ ವೆಂಕಟ ನಾಥನ ದರ್ಶನವು ಹಠಾತ್ತಾದುದಾಗಿ ಬೋಧೆಯಾಗುತ್ತದೆ.

**ಎರಡನೆಯುದರಲ್ಲಿ**.—ಸಂನ್ಯಾಸಿಗಳಾದ ವಿದ್ಯಾರಣ್ಯರು ರಾಜ್ಯಸೂತ್ರವನ್ನು ಕೈಗೊಂಡುದು ಆಶ್ರಮಧರ್ಮಕ್ಕೆ ಗೌಣವೆಂದೂ, ಕೇವಲ ವಿರಕ್ತರಾಗಿದ್ದ ವೇದಾಂತ ದೇಶಿಕನಿಗೆ "ತಮ್ಮ ರಾಜನ ಮೂಲಕ ಉಂಛವೃತ್ತಿಯು ಕಾರ್ಪಣ್ಯ ವನ್ನು ನೀಗಿಸುವುದಾಗಿ ಬರೆದ ವಿಚಾರವು ಅಲೌಕಿಕವೆಂದೂ ಹೇಳಲಾಗು ತ್ತದೆ. ಇವೆರಡರ ಸಮ್ಯಕ್ಪರಿಶೀಲನದಿಂದಲೂ ಈ ಕೆಳಗೆ ಹೇಳುವ ವಿಚಾರ ಗಳಿಂದಲೂ ವೆಂಕಟನಾಥನಿಗೂ ವಿದ್ಯಾರಣ್ಯರಿಗೂ ಪರಸ್ಪರ ಯಾವಸಂಬಂಧವೂ ಇಲ್ಲವೆಂಬುದು ಸ್ಪಷ್ಟಪಡುತ್ತದೆ. ವಿದ್ಯಾರಣ್ಯರ ಗುರುಗಳ ಹೆಸರು ಸರ್ವಜ್ಞ ವಿಷ್ಣು ಯೆಂದು ಹೇಳಿದೆ. ವೆಂಕಟನಾಥನ ವಿದ್ಯಾಗುರುಗಳು ಅವನ ಸೋದರ ಮಾವಂದಿರಾದ ಆತ್ರೇಯ ರಾಮಾನುಜರೆಂದಿದೆ. ಪರಸ್ಪರ ಮೈತ್ರಿಯುಂಟಾಗ ಬೇಕಾದರೆ ಬಾಲ್ಯಾರಭ್ಯ ಇಬ್ಬರೂ ಒಂದೇಸ್ಥಳ, ಶಾಲೆ, ಗುರು ಅಥವಾ ಮತ್ತಾವು ದಾದರೂ ಕಾರಣಾಂತರಗಳಿಂದ ಕಲೆತುದಾಗಿರಬೇಕು. ಹಾಗೆ ಇವರಿರ್ವರೂ ಸೇರಿದುದಾದ ವಿಚಾರವೆಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲ. ವಿದ್ಯಾರಣ್ಯರು ತಮ್ಮ ಬಾಲ್ಯದಲ್ಲಿ ಒಂದುವೇಳೆ ಕಂಚಿಗೆ ಬಂದು ಆತ್ರೇಯ ರಾಮಾನುಜರ ಬಳಿ ವಿದ್ಯಾಭ್ಯಾಸವನ್ನು ಮುಗಿಸಿಕ್ಕೊಂಡು ವಿಶೇಷ ವಿದ್ಯಾಭ್ಯಾಸಕ್ಕಾಗಿ ಸರ್ವಜ್ಞವಿಷ್ಣು ವಿನ ಬಳಿಗೆ ಹೋಗಿರಬಹುದೆನ್ನುವುದಾದರೆ ಹಾಗೆ ಹೇಳುವ ಪ್ರಮಾಣ ಗ್ರಂಥ ಗಳಾವುವು? ಹಾಗೆ ಹೋಗಿದ್ದರೆ ತಮ್ಮ ಗ್ರಂಥಗಳಲ್ಲಿ ಎಲ್ಲಿಯಾದರೂ ತಮ್ಮ ತಮ್ಮ ವಿದ್ಯಾಬೋಧಕರ ಹೆಸರನ್ನು ಹೇಳುತ್ತಿದ್ದರೆಂದೂ ಅಥವಾ ವೇದಾಂತ ದೇಶಿಕನು ತಮ್ಮ ಆಚಾರ್ಯರಾದ ಆತ್ರೇಯ ರಾಮಾನುಜರನ್ನು ಹೇಳುವಾವಸರದಲ್ಲಿ ವಿದ್ಯಾರಣ್ಯರ ಸಹಪಾಠಿತ್ವವನ್ನು ಕುರಿತು ಹೇಳದೆ ಇರುತ್ತಿರಲಿಲ್ಲವೆಂದೂ ನಮ ಗೆನಿಸುತ್ತದೆ. ಇದಲ್ಲದೆ ವಿದ್ಯಾರಣ್ಯರ ಭಾಷ್ಯಾದಿ ಗ್ರಂಥಗಳಲ್ಲಿ ದೇಶಿಕನ ಹೆಸರಾಗಲೀ ದೇಶಿಕ ಕೃತಗ್ರಂಥಗಳಲ್ಲಿ ವಿದ್ಯಾರಣ್ಯರ ಹೆಸರಾಗಲೀ ಹೇಳಿರುವಂತೆ ಎಲ್ಲಿಯೂ ಕಾಣಬರುವುದಿಲ್ಲ. ವಿದ್ಯಾರಣ್ಯರು ವಿಜಯನಗರದ ಅರಸರಲ್ಲಿ ಮಂತ್ರಿ ಪದವಿಯನ್ನು ವಹಿಸಿದ್ದುದಾಗಿ ಹೇಳುವ ಚಾರಿತ್ರಿಕ ಗ್ರಂಥಗಳು ಹೇರಳವಾಗಿ ದೊರೆ ಯುತ್ತವೆ. ಇವರ ಭಾಷ್ಯಾದಿ ಗ್ರಂಥಗಳಲ್ಲಿ:—

"ಇತಿ ಶ್ರೀವಿದ್ಯಾತೀರ್ಥ ಮಹೇಶ್ವರಾಪರಾವತಾರ ಶ್ರೀಮದ್ರಾಜಾಧಿರಾಜ ಪರಮೇಶ್ವರ ಶ್ರೀವೀರಬುಕ್ಕಮಹಾರಾಜಾಜ್ಞಾಪರಿಪಾಲಕ ಶ್ರೀಮಾಧವಾಚಾರ್ಯ

ವಿರಚಿತೇ..............." ಎಂದು ಹೇಳಿಕೊಂಡಿರುವದು ಕಂಡುಬರುತ್ತದೆ.| ಹೀಗೆ ಹೇಳಿರುವುದರಿಂದ ಮಹಾತ್ಮರಾದ ವಿದ್ಯಾರಣ್ಯರು ಬುಕ್ಕರಾಜನ ಬಳಿ ಕೆಲವುಕಾಲ ಮಂತ್ರಿಪದವಿಯಲ್ಲಿದ್ದು ಭಾಷ್ಯಾದಿಗ್ರಂಥಗಳನೇಕಗಳನ್ನು ರಚಿಸಿ ಕೊನೆಗೆ ತುರೀಯಾಶ್ರಮವನ್ನು ಸ್ವೀಕರಿಸಿರಬಹುದಾಗಿ ವ್ಯಕ್ತವಾಗುತ್ತದೆ. ಮೇಲಣ ಗದ್ಯಾವಲೋಕನದಿಂದ ವಿದ್ಯಾರಣ್ಯರು ತುರೀಯಾಶ್ರಮವನ್ನು ಕೈಗೊಳ್ಳುವುದಕ್ಕೆ ಮೊದಲು ಮಾಧವಾಚಾರ್ಯರೆಂಬ ಅಂಕಿತದಲ್ಲಿ ಬುಕ್ಕನೇ ಮೊದಲಾದವರಾಶ್ರಯದಲ್ಲಿ ಮಂತ್ರಿಪದವಿಯಲ್ಲಿದ್ದು ಮಹಾವಿದ್ವಾಂಸರಾಗಿ ಅನೇಕ ಗ್ರಂಥಗಳನ್ನು ಬರೆದು ತಾವು ವಿದ್ಯಾಪಕ್ಷಪಾತಿಯಾಗಿದ್ದುದರಿಂದ ತಮ್ಮಂತೆಯೇ ವಿದ್ಯಾವೈದುಷ್ಯವನುಳ್ಳ ವೆಂಕಟನಾಥನು ಉಂಛವೃತ್ತಿಯಿಂದ ಜೀವನವನ್ನು ನಾಗಿಸುತ್ತಿರುವುದನ್ನು ಜನರಿಂದ ಕೇಳಿ ದಾರಿದ್ರ್ಯಾನುಭವದಲ್ಲಿ ತಾವೂ ನುರಿತವರಾಗಿದ್ದುದರಿಂದ ಸ್ವಾಭಾವಿಕವಾಗಿ ನೊಂದು ರಾಜನಬಳಿಗೆ ಬರಲು ಕೇಳಿಕೊಂಡಿರಬಹುದಾಗಿಯೂ, ಅದಕ್ಕೆ ಪ್ರತ್ಯುತ್ತರವಾಗಿ ಬರೆದುಬಂದ ಶ್ಲೋಕಗಳನ್ನು ನೋಡಿ ರಾಜಕೀಯ ವಿಚಾರವಾಗಿ ಬೇಸತ್ತು ತುರೀಯಾಶ್ರಮವನ್ನೇಕೆ ಕೈಗೊಂಡಿರಬಾರದೆಂದು ನಮ್ಮ ಮನೋದೇವತೆಯು ತರ್ಕಿಸುತ್ತದೆ. ಇದಕ್ಕೆ ಅನುಗುಣವಾಗಿ ಆಗಣ ಕಾಲಧರ್ಮವು ಕೇವಲ ವಿಪರ್ಯಾಸದಲ್ಲಿದ್ದು ಪರಮತಸಹಿಷ್ಣುತೆಯು ಮಾಯವಾಗಿ ಸ್ವಮತಧರ್ಮಪ್ರಸರಣದಲ್ಲಿ ಪ್ರತಿಯೊಬ್ಬರೂ ದೀಕ್ಷಾಬದ್ಧರಾಗಿದ್ದರೇ ಹೊರ್ತು ಹೀಗೆ ಮಾಡುವುದರಿಂದ ರಾಗದ್ವೇಷಗಳಿಗೆ ಅವಕಾಶವುಂಟಾಗಿ ಸಮಾಜ ನೈತಿಕಹ್ರಾಸವೂ ಪರಸ್ಪರ ಸುಹೃದತ್ವವೂ ಮಣ್ಣುಪಾಲಾಗುವುದೆಂಬದನ್ನು ಅವರು ಅರಿಯದಾದರು. ಹೆಚ್ಚೇಕೆ ! ಕ್ರಿ. ಶ ೧೨-೧೩ನೆಯ ಶತಮಾನಗಳಲ್ಲಿ ಒಂದುಕಡೆ ಮಧ್ವದರ್ಶನ ಮತ್ತೊಂದುಕಡೆ ರಾಮಾನುಜದರ್ಶನ ಈದರ್ಶನಗಳ ಸ್ಪರ್ಧೆಯಲ್ಲಿ ದಕ್ಷಿಣ ಇಂಡಿಯಾದೇಶವು ಜರ್ಜರಿತವಾಗುತ್ತಿದ್ದಿತೆಂದೂ ನಾಲದುದಕ್ಕೆ ಮುಸಲ್ಮಾನರ ಹಾವಳಿಯಿಂದ ಚೂರ್ಣೀಕೃತವಾಗಿದ್ದಿತೆಂದು ಚರಿತ್ರೆಯು ಸಾರಿಸಾರಿ ಹೇಳುತ್ತದೆ.*

ಇವೇ ಮೊದಲಾದ ಕಾರಣಗಳಿಂದ ಇವರಿರ್ವರೂ ಪರಸ್ಪರ ಒಂದೇಸ್ಥಳದವರೆಂದಾಗಲಿ, ಮೈತ್ರಿಯುಳ್ಳವರೆಂದಾಗಲಿ, ಅಥವಾ ಸಹಪಾಠಿಗಳೆಂದಾಗಲಿ ಸರಿಯಾದ ಚರಿತ್ರಾಧಾರಗಳಿಲ್ಲದೆ ಹೇಳುವುದು, ಸರ್ವಸಮ್ಮತವಾಗದೆಂದೂ ಹಾಗೆ ಹೇಳುವುದಾದರೆ ಅವು ಮರಳಿನಲ್ಲಿನ ಗೋಡೆಯಂತಾಗುವುದೆಂದೂ ಹೇಳಿ ವೆಂಕಟನಾಥನಿಗೂ ವಿದ್ಯಾರಣ್ಯರಿಗೂ ಯಾವ ಸಂಬಂಧವೂ ಇಲ್ಲವೆಂದೂ ಸಮಕಾಲೀನರೆಂದು ಮಾತ್ರ ಹೇಳಬಹುದೆಂದೂ ಮತ್ತೊಂದುಸಲ ಹೇಳಬೇಕಾಗಿದೆ.

---

† ತೈತ್ತಿರೀಯ ಸಂಹಿತೆಯಭಾಷ್ಯವನ್ನು ನೋಡಿ

South India and her Mahomedan Invaders

ತುಂಗಭದ್ರಾ ಸಮೀಪದಲ್ಲಿದ್ದ ರಾಜ್ಯದ ಒಡೆಯನ ಮಗಳಿಗೆ ಬ್ರಹ್ಮರಕ್ಷಸ್ಸು ಹಿಡಿದಿದ್ದುದಾಗಿ ಗುರುಪರಂಪರಾಪ್ರಭಾವವು ಹೇಳುವುದುಹೊರ್ತು ರಾಜನ ಹೆಸರಾಗಲಿ ಅಥವಾರಾಜ್ಯದ ಹೆಸರಾಗಲಿ ಚಾರಿತ್ರಕದೃಷ್ಟಿಯಿಂದ ನಿರ್ದಿಷ್ಟವಮಾಡಿ ಹೇಳಿರುವುದಿಲ್ಲ. ಆದರೆ ವೈಭವ ಪ್ರಕಾಶಿಕೆಯಲ್ಲಿ ಮಾತ್ರ ವಿಜಯನಗರದ ಬುಕ್ಕರಾಯನೆಂದು ಹೇಳಿದೆ. ಇದುಸರಿಯಾದುದೆಂದು ಹೇಳಲಾಗುವದಿಲ್ಲ. ಏಕೆಂದರೆ ಕ್ರಿ. ಶ. ೧೩೩೬ರಲ್ಲಿ ಇನ್ನೂ ಸರಿಯಾಗಿ ವಿಜಯನಗರವು* ಸ್ಥಾಪಿತವಾಗಿರಲಿಲ್ಲ. ಆದುದರಿಂದ ಗುರುಪರಂಪರಾಪ್ರಭಾವದಲ್ಲಿ ಹೇಳಿರುವ ರಾಜನು ಯಾವನೋ ಆನೆಗೊಂದಿ ಸಂಸ್ಥಾನದವನಾಗಿರಬೇಕು. ಚರಿತ್ರೆಯು ಈ ವಿಚಾರದಲ್ಲಿ ಯಾವುದನ್ನೂ ಸ್ಪಷ್ಟಪಡಿಸಿಹೇಳಿರುವುದಿಲ್ಲ. ಆದುದರಿಂದ ಆನೆಗೊಂದಿಯ ಅಥವಾ ಹೊಯ್ಸಳರಾಜ್ಯದ ಯಾವನೋ ಆಶ್ರಿತ ರಾಜನೊಬ್ಬನಾಗಿರಬೇಕೆಂದೂ ಅವನ ಹೆಸರು ತಿಳಿಯದೆಂದೂ ಪ್ರಕೃತ ಹೇಳಿ ಮುಗಿಸಬೇಕಾಗಿದೆ.

ಇದಲ್ಲದೆ ವಿದ್ಯಾರಣ್ಯರ ನೇತೃತ್ವದಲ್ಲಿ ಆನೆಗೊಂದಿ ರಾಜ್ಯವು ವಿಜಯನಗರವೆಂಬ ಹೆಸರಿನಿಂದ ಕ್ರಿ. ಶ. ೧೩೪೦ರಲ್ಲಿ ಸ್ಥಾಪಿಸಲ್ಪಟ್ಟುದುದಾಗಿ ರೆ. ಹೀರಾಸರು ಒಕ್ಕಣಿಸಿರುವರು.‡ ಇದರಿಂದ ಕ್ರಿ. ಶ. ೧೩೩೬ರಲ್ಲಿ ವಿಜಯನಗರಸ್ಥಾಪನವಾಗಲ್ಲಿಲ್ಲವೆಂಬದು ನಿರ್ಧರವಾಗುತ್ತದೆ. ಹೀಗೆ ವೆಂಕಟನಾಥನ ಮತ್ತು ವಿದ್ಯಾರಣ್ಯರ ಸಂಬಂಧವು ಕೊನೆಗೊಂಡುದು.

(೨) ಕೃಷ್ಣಮಿಶ್ರರದರ್ಶನ:—

ಕೃಷ್ಣಮಿಶ್ರರೆಂಬ ಮಹಾಮೇಧಾವಿಯೊಬ್ಬರು ಬಂದು ವೇದಾಂತ ದೇಶಿಕರೊಡನೆ ಮೂರುದಿವಸಗಳುವಾದಮಾಡಿ ಪರಾಜಿತರಾಗಿ ತಾವುಬರೆದ ಪ್ರಬೋಧಚಂದ್ರೋದಯ ನಾಟಕವನ್ನು ನೋಡಬೇಕೆಂದು ಪ್ರಾರ್ಥಿಸಿದಂತೆಯೂ, ಅವರು ಅದನ್ನುನೋಡಿ ಮನ ಒಪ್ಪದೆ ಸಂಕಲ್ಪಸೂರ್ಯೋದಯವೆಂಬನಾಟಕವನ್ನುಬರೆದು ಕೃಷ್ಣಮಿಶ್ರರಿಗೆ ತೋರಿದಂತೆ ಗುರುಪರಂಪರಾಪ್ರಭಾವವು ಹೇಳುತ್ತದೆ. ಪ್ರಬೋಧಚಂದ್ರೋದಯನಾಟಕದಲ್ಲಿ ಕೀರ್ತಿವರ್ಮರಾಜನ ಹೆಸರನ್ನು ಸೂತ್ರಧಾರನು ಕೊಂಡಾಡಿರುವನು. ಕೀರ್ತಿವರ್ಮನು ಕ್ರಿ ಶ. ೧೧ನೆಯ ಶತಮಾನಾಂತ್ಯದವನೆಂದು ಸ್ಪಷ್ಟಪಡುತ್ತದೆ. ಈ ವಿಚಾರವನ್ನ ಚರಿತ್ರೆಯು ಸ್ಥಾಪಿಸುತ್ತದೆ. ಇದರಿಂದ ಪ್ರಬೋಧಚಂದ್ರೋದಯಕಾರರೂ ಕೀರ್ತಿವರ್ಮನೂ ಇಬ್ಬರೂ ಸಮ

* ವಿಜಯನಗರದ ಕಟ್ಟೋಣವು ಕ್ರಿ ಶ. ೧೩೨೮-೧೩೪೦ರಲ್ಲಿ
See South India and her Mahamedan invaders by S. Krishnawamy Iyenger P. 154

‡ The Aravidu Dynasty of Vijayanagara P. 10.

ಕಾಲೀನರು. ಎಂದರೆ ಕ್ರಿ. ಶ. ೧೧ನೆಯ ಶತಮಾನಾಂತ್ಯದವರು. ವೇದಾಂತದೇಶಿಕನು ೧೩ನೆಯ ಶತಮಾನ ಮತ್ತು ೧೪ನೆಯ ಶತಮಾನಾಂತ್ಯದಲ್ಲಿದ್ದವನಾದುದರಿಂದ ಪರಸ್ಪರ ಸಂಬಂಧವಿರದು.

(೩) ಅಕ್ಷೋಭ್ಯತೀರ್ಥರವಾದ:—

ವಿಜಯನಗರದಲ್ಲಿ ತತ್ವವಾದಿಗಳಾದ ಅಕ್ಷೋಭ್ಯತೀರ್ಥರಿಗೂ ಮಾಯಾವಾದಿಗಳಾದ ವಿದ್ಯಾರಣ್ಯರಿಗೂ ವೇದಾಂತವಿಚಾರದಲ್ಲಿ ಚರ್ಚೆಹುಟ್ಟಿ ಇವರಿರ್ವರ ಅಭಿಪ್ರಾಯಗಳನ್ನು ರಾಜಪತ್ರಿಕೆಯಮೂಲಕ ವಿಮರ್ಶೆಗಾಗಿ ವೇದಾಂತದೇಶಿಕರಬಳಿಗೆ ಕಳುಹಿಸಿಕೊಡಲು ಅವರು ಪ್ರತ್ಯುತ್ತರವಾಗಿ:—

"ಅಸಿನಾತತ್ತ್ವಮಸಿನಾ ಪರಜೀವಪ್ರಭೇದಿನಾ
ವಿದ್ಯಾರಣ್ಯಮಹಾರಣ್ಯಮಕ್ಷೋಭ್ಯಮುನಿರಚ್ಛಿನತ್" ||

ಎಂದು ಬರೆದುಕಳುಹಿಸಿದುದಾಗಿಯೂ, ಇದನ್ನುನೋಡಿ ವಿದ್ಯಾರಣ್ಯರು ಖತಿಗೊಂಡು ವೆಂಕಟನಾಥನು ಬರೆದುದಾದ "ಶತದೂಷಣೀ" ಎಂಬಗ್ರಂಥವನ್ನು ನಿರಸನಮಾಡುವುದಾಗಿ ಹೇಳಿಕಳುಹಿಸಲು, ಅದರಂತೆ ಕಳುಹಿಸಿ ಕೊಟ್ಟ ಶತದೂಷಣೀ ಗ್ರಂಥವನ್ನು ಆಮೂಲಾಗ್ರವಾಗಿನೋಡಿ ದೋಷಗಳಾವುವೂ ದೊರೆಯದೆ ಅಲ್ಲಿದೊರೆತ "ಚ" ಕಾರವಿಚಾರವಾಗಿ ಖಂಡನೆಯನ್ನುಮಾಡಲು, ವೆಂಕಟನಾಥನು ಅದನ್ನುನೋಡಿ "ಚಕಾರಸಮರ್ಥನ"ಎಂಬ ಗ್ರಂಥವನ್ನು ಬರೆದುಕಳುಹಿಸಿದುದನ್ನು ನೋಡಿ, ವಿದ್ಯಾರಣ್ಯರು ಪರಾಜಯುವನೊಪ್ಪಿಕೊಂಡುದಾಗಿ ಗುರುಪರಂಪರಾಪ್ರಭಾವವು ಹೇಳುತ್ತದೆ. ಇದು ನಮಗೆಸಮಂಜಸವೆನಿಸುವುದಿಲ್ಲ. ವಿಜಯನಗರದ ರಾಜನಾರೆಂಬುದಾಗಲಿ, ರಾಜಸಮ್ಮುಖದಲ್ಲಿ ಇವರಿರ್ವರೂಕಲೆತು ವಾದಮಾಡಿದ ವಿಚಾರವೇನೆಂಬುದಾಗಲಿ, ಕರೆಯಿಸಿಕೊಂಡಕಾರಣವಾಗಲಿ ಯಾವುದೂ ತಿಳಿಯಬರುವಂತಿಲ್ಲ. ಮೇಲಣ ಶ್ಲೋಕವನ್ನು ಅಕ್ಷೋಭ್ಯತೀರ್ಥರ ಅನುಯಾಯಿಗಳು ಹೇಳುವರು. ವಿದ್ಯಾರಣ್ಯರ ಅನುಯಾಯಿಗಳು:—

ಅಕ್ಷೋಭ್ಯಂಕ್ಷೋಭಯಾಮಾಸ ವಿದ್ಯಾರಣ್ಯೋ ಮಹಾಗುರುಃ||

ಎಂದು ಹೇಳುವರು. ಇದರಲ್ಲಿ ನಿಜವಾವುದೆಂಬುದು ತಿಳಿಯುವುದಿಲ್ಲ. ವೆಂಕಟನಾಥಕೃತ ಗ್ರಂಥಗಳಲ್ಲಿ ಹೇಳಿರುವಂತೆ ಎಲ್ಲಿಯೂ ಕಂಡುಬರುವುದಿಲ್ಲ. ಈ ವಿಚಾರವಾಗಿ ನಿಜಾಂಶವನ್ನು ಸೂಚಿಸುವ ಚರಿತ್ರಾಧಾರಗಳು ದೊರೆಯವು. ಇನ್ನು ಅಕ್ಷೋಭ್ಯತೀರ್ಥರ ಕಾಲವಾವುದೆಂಬುದನ್ನು ಹೇಳಬೇಕಾಗಿರುವುದು.

ಶ್ರೀಮಧ್ವಾಚಾರ್ಯರಿಗೆ ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಅಕ್ಷೋಭ್ಯತೀರ್ಥರೆಂಬ ನಾಲ್ಕುಜನಶಿಷ್ಯರಿದ್ದರೆಂದೂ ಇವರೆಲ್ಲರೂ ಆಚಾರ್ಯರಿಂದಲೇ

ಶಿಕ್ಷಿತರಾಗಿ ಆಚಾರ್ಯಾನಂತರ ಕ್ರಮವಾಗಿ ತುರೀಯಾಶ್ರಮವನ್ನು ವಹಿಸಿದುದಾಗಿ ಮಧ್ವವಿಜಯವು ಹೇಳುತ್ತದೆ. ಮಧ್ವಾಚಾರ್ಯರ ಕಾಲವ್ಯವಸ್ಥೆಯು ಅವ್ಯವಸ್ಥಿತವಾಗಿಯೇ ಇದೆ. ಪ್ರಕೃತಮಧ್ವಾಚಾರ್ಯರ ಕಾಲವಿಚಾರವಾಗಿ ಹೇರುವುವಾದ,

(೧) ಮಹಾಭಾರತ ತಾತ್ಪರ್ಯನಿರ್ಣಯ.

(೨) ಕ್ರಮವಾಗಿ ಬರೆಯಲ್ಪಟ್ಟು ಕಾಪಿಡಲ್ಪಟ್ಟಿರುವ ಆಯಾಮಠೀಯರಲ್ಲಿರುವ ಆಚಾರ್ಯಕ್ರಮಾನುಸರಣ.

(೩) ನರಹರಿತೀರ್ಥರಶ್ಲೋಕಗಳನೊಳಕೊಂಡಿರುವ ಶಾಸನಗಳು,

(೪) ದಕ್ಷಿಣಕನ್ನಡಜಿಲ್ಲೆಯ ಕೈಪಿಡಿ (ಮ್ಯಾನ್ಯುಯಲ್)

ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಆಚಾರ್ಯರ ಕಾಲವು ಕಲಿ ೪೩೦೦ ಎಂದು ಹೇಳಿವೆ. § ಎಂವರೆ ಇದು ದಕ್ಷಿಣಕನಡಾ ಜಿಲ್ಲೆಯ ಕೈಪಿಡಿಯಲ್ಲಿ ಹೇಳಿರುವ ಕ್ರಿ. ಶ. ೧೧೯೯ಕ್ಕೆ ಸರಿಹೋಗುತ್ತದೆ. ಉತ್ತರಾದಿ ಮಠಗಳಲ್ಲಿ ಆಯಾ ಮಠದ ಸ್ವಾಮಿಗಳು ತುರೀಯಾಶ್ರಮವನ್ನು ಸಾಧಿಸಿದಕಾಲ, ಜನ್ಮತಿಥಿ, ಪುಣ್ಯತಿಥಿ ಮೊದಲಾದವುಗಳೆಲ್ಲವೂ ಸಾಂಗೋಪಾಂಗವಾಗಿ ಸಂಶಯಕ್ಕಾಸ್ಪದವಿಲ್ಲದಂತೆ ಕ್ರಮವರಿತು ಬರೆಯಲ್ಪಟ್ಟಿವೆ, ಈ ಬರವಣಿಗೆಗಳ ಸಥ್ಯಾಂಶವನ್ನು ನೋಡಿ ಸಮರ್ಪಕವೆಂದು ನಂಬಿ, ಡಾ. ಅಫ್ರಿಷಿಟ್ (Aufrecht) ರವರೂ, ಡಾ. ರಾಮಕೃಷ್ಣಭಂಡಾರಕರವರೂ ಆ ಕಾಲವನ್ನೇ ಹೇಳಿಕೊಂಡಿರುವರು. ನರಹರಿತೀರ್ಥರವರ ಶ್ಲೋಕಗಳನೊಳಗೊಂಡಿರುವ ಶಾಸನಗಳಲ್ಲಿ ಹೇಳಿರುವ ಕಾಲವು ವಿಚಾರಗ್ರಸ್ತವಾಗಿದೆ. ಮಧ್ವಾಚಾರ್ಯರ ಜನ್ಮಸಂವತ್ಸರವು ವಿಳಂಬಿಯೆಂದೂ, ಗತಿಸಿದ ಸಂವತ್ಸರವು ಪಿಂಗಳವೆಂದು ಮಾತ್ರ ಹೇಳಿದೆ. ಆದರೆ ಯಾವವಿಳಂಬಿ, ಯಾವ ಪಿಂಗಳ ಎಂಬುದನ್ನು ನಿಷ್ಕರ್ಷಿಸಿ ಹೇಳಿರುವುದಿಲ್ಲ.

| | | | |
|---|---|---|---|
| ವಿಳಂಬಿಯು ಶಕ. | ೧೦೪೦ | .... ಕ್ರಿ. ಶ. | ೧೧೧೮ |
| .... .... | ೧೧೦೦ | .... ,, | ೧೧೭೮ |
| ... ... | ೧೧೬೦ | ... ,, | ೧೨೩೮ ರಲ್ಲಿ ಆಗಿದೆ. |
| ಪಿಂಗಳಸಂವತ್ಸರವು ಶಕ. | ೧೧೧೯ | .... ,, | ೧೧೯೭ |
| .... .... | ೧೧೭೯ | .... ,, | ೧೨೫೭ |
| .... .... | ೧೨೩೯ | .... ,, | ೧೩೧೭ಕ್ಕೆ ಬೀಳುತ್ತದೆ. |

ಮೆ|| ಸುಬ್ಬರಾಯರ ಮತ್ತು ಮಠದಲ್ಲಿರುವ ಪೀಳಿಗೆಯ ಕ್ರಮದ ಹೇಳಿಕೆಯನ್ನು ನೋಡಿದರೆ ವೆಂಕಟನಾಥನೂ ವಿದ್ಯಾರಣ್ಯರೂ ಹುಟ್ಟುವ ಎಷ್ಟೋ

§ See Chapter XXXII. Verse 131 and Chap. IX Verse 100

ವರ್ಷಗಳ ಹಿಂದೆ ಎಂದರೆ ಅಕ್ಷೋಭ್ಯತೀರ್ಥರು ಶಕ. ೧೧೬೯ ಅಥವಾ ಕ್ರಿ. ಶ. ೧೨೪೭ರಲ್ಲಿ ಸಮಾಧಿಸ್ಥರಾದರೆಂದು ಹೇಳಬೇಕಾಗುತ್ತದೆ. $

ವೆಂಕಟನಾಥನೂ ವಿದ್ಯಾರಣ್ಯರೂ, ಅಕ್ಷೋಭ್ಯತೀರ್ಥರೂ ಸಮಕಾಲೀನ ರೆನ್ನುವ ಗುರುಪರಂಪರಾಪ್ರಭಾವದ ಹೇಳಿಕೆಯನ್ನು ಮನ್ನಿಸುವುದಾದರೆ ಮಧ್ವಾ ಚಾರ್ಯರು ಗತಿಸಿದುದು ಕ್ರಿ. ಶ. ೧೩೧೭ನೆಯ ಪಿಂಗಳವೆಂದು ಹೇಳಿ ೧೨೦ ವರ್ಷಗಳು ಮುಂದರಿಸಬೇಕಾಗುತ್ತದೆ. *

ಮತ್ತೊಂದು ಗ್ರಂಥ ‡ ದಲ್ಲಿ ಅಕ್ಷೋಭ್ಯತೀರ್ಥರ ಪುಣ್ಯತಿಥಿಯು ಶಾ. ಶಕ. ೧೨೮೭—೮೮ ವಿಶ್ವಾವಸು ಸಂ. ಮಾರ್ಗಶಿರ ಪಂಚಮೀ ಕೃತ್ತಿಕವೆಂದಿದೆ. ಎಂದರೆ ಕ್ರಿ. ಶ ೧೩೬೫—೬೬ ನೆಯ ಸಂವತ್ಸರವೆಂದು ಹೇಳಿದಂತಾಗುತ್ತದೆ. ಈ ಕಾಲವೇ ನಿಜವೆಂದು ಒಪ್ಪುವದಾದರೆ ಮೇಲೆಹೇಳಿದ ಮೂವರ ಸಮಕಾಲೀನತೆಯನ್ನೂ ... ಬಹುದಾಗಿದೆ. ದಕ್ಷಿಣಕನಡಾ ಜಿಲ್ಲೆಯ ಪುಸ್ತಕದಲ್ಲಿ ಹೇಳಿರುವಂತೆ ಮಧ್ವಾಚಾರ್ಯರಕಾಲವು ಕ್ರಿ. ಶ ೧೧೯೯ ಅಥವಾ ಕ್ರಿ. ಶ ೧೨ ನೆಯ ಶತಮಾನ ವೆಂದೂ ಅವರ ನಾಲ್ವರುಶಿಷ್ಯರೂ ಸಮಕಾಲೀನರೆನ್ನುವುದಾದರೆ ಅವರನ್ನೂ ಕ್ರಿ. ಶ. ೧೩ನೆಯ ಶತಮಾನಕ್ಕೆ ಸೇರಿದವರೆಂದು ಹೇಳಿ ವೆಂಕಟನಾಥನ ಮತ್ತು ವಿದ್ಯಾರಣ್ಯರ ಕಾಲಕ್ಕೆ ಅಕ್ಷೋಭ್ಯರು ಸ್ಮೃತಿಶೇಷರಾಗಿದ್ದರೆಂಬುದು ವಿಶದವಾಗುತ್ತದೆ. ಮೇಲೆ ಹೇಳಿದ ವಿಚಾರಗಳೆಲ್ಲದರ ಪರಿಶೀಲನೆಯಿಂದ ಒಂದುವೇಳೆ ಈ ಮೂವರೂ ಸಮಕಾ ಲೀನರೆಂದು ಸಾಂಕೇತಿತರಾಗಿ ಪ್ರೇಕ್ಷಕರಾದರೂ, ಮತ್ತಾವುದಾದರೂ ಚಾರಿತ್ರಕ ಪ್ರಬಲಪ್ರಮಾಣಗಳು ದೊರೆಯುವವರೆಗೆ ಈ ವಿಚಾರಗಳೆಲ್ಲವೂ ವಿಚಾರಾತ್ಮಕವೆಂದು ಹೇಳಿ ಬಿಡಬೇಕಾಗುತ್ತದೆ. ವೆಂಕಟನಾಥನ ಕಾಲದ ರಾಜಕೀಯ ಪರಿಸ್ಥಿತಿಯು ಸ್ಥೂಲವಾಗಿ ಈ ಕೆಳಗೆ ಹೇಳುವಂತೆ ಸಂಕ್ಷೇಪವಾಗಿ ಬರೆದು ಮುಗಿಸಿದರೆ ಸಾಕೆಂದು ತೋರುವುದು:—

(೧) ಸುಲಿಗೆ, ದರೋಡೆ, ಕೊಲೆ, ವಿಗ್ರಹನಾಶನ ಮತ್ತು ಹಿಂದೂಮತ ತತ್ವ ನಿರೋಧವನ್ನು ಮೂಲಮಂತ್ರವಾಗಿ ಇಟ್ಟುಕೊಂಡಿದ್ದ ತುರುಷ್ಕರ ಹಾವಳಿಯಿಂದ ರಾಜ್ಯಸತ್ತೆಯಾಗಲಿ ಪ್ರಜಾನೆಮ್ಮದಿಯಾಗಲಿ ಯಾವುದೂ ಇರದೆ ಕ್ಷೋಭೆಗೆ ಕಾರಣ ವಾಗಿದ್ದಿತು. (೨) ಅಲ್ಲಲ್ಲಿ ಕಳೆದು ಉಳಿದುಕೊಂಡಿದ್ದ ರಾಜರಲ್ಲಿ ಅಂತಃ ಕಲಹವು ಎಲ್ಲೆಯನ್ನು ಮೀರಿದ್ದಿತು. (೩) ಪರಮತಸಹಿಷ್ಣುತೆಯು ಇರಲಿಲ್ಲ (೪)

$ The Life and teachings of Sri Madhava charya P. 30

* The Life and teachings of Sri Madhva charya P. 31.

‡ ಕಲ್ಪತರು ಪುಟ ೪.

ಪರಸ್ಪರ ಸೌಹಾರ್ದ್ರವು ಅಕ್ಷರದಲ್ಲಿದ್ದಿತು. (೫) ಜನರ. ಆಸ್ತಿ, ಪ್ರಾಣ, ಮತ್ತು ಧರ್ಮಗಳು ಅರಕ್ಷಕವಾಗಿದ್ದವು.

ಗ್ರಂಥಗಳು:—ಶ್ರೀ ವೆಂಕಟನಾಥಕೃತ ಗ್ರಂಥಗಳು ೧೨೧ ಎಂದು ಹೇಳಲ್ಪಟ್ಟಿದೆ. ಅವುಗಳನ್ನು ಹೀಗೆ ವಿಭಜಿಸಬಹುದು.

| | |
|---|---|
| ಸ್ತೋತ್ರಗಳು | ೩೨ |
| ಕಾವ್ಯಾದಿಗಳು | ೮ |
| ಅನುಷ್ಠಾನಾದಿ ಶಾಸ್ತ್ರಗಳು | ೨೪ |
| ರಹಸ್ಯಗಳು | ೩೨ |
| ಪ್ರಬಂಧಗಳು | ೨೪ |
| ಭಗವದ್ವಿಷಯ | ೧ |
| ಒಟ್ಟು. | ೧೨೧ |

ಇವುಗಳನ್ನು

(೧) ಸ್ತೋತ್ರಗಂಥಗಳು
(೨) ಮತಗ್ರಂಥಗಳು
(೩) ಮಿಶ್ರಗ್ರಂಥಗಳು

ಎಂದು ಮೂರುಭಾಗವಾಡಿ ಹೇಳಬಹುದು.

ಸ್ತೋತ್ರಗ್ರಂಥಗಳು:—ಗದ್ಯಪದ್ಯಗಳೆರಡರಲ್ಲಿಯೂ ಹೇಳಲ್ಪಟ್ಟಿವೆ. ಮತ ಗ್ರಂಥಗಳನೇಕಗಳು ದ್ರಾವಿಡದಲ್ಲಿಯೂ ಸಂಸ್ಕೃತದಲ್ಲಿಯೂ ಬರೆಯಲ್ಪಟ್ಟಿರುವುವು. ಮಿಶ್ರ ಗ್ರಂಥಗಳಲ್ಲಿ ಸಂಸ್ಕೃತಭಾಷೆಯಲ್ಲಿರುವುವಾದ ಮತ್ತು ಮುಖ್ಯವಾದ ಕೆಲವನ್ನು ಮಾತ್ರವೇ ಇಲ್ಲಿ ಹೇಳಿದೆ.

೧. ಕಾವ್ಯ (Poetry) ಯಾದವಾಭ್ಯುದಯ ಮತ್ತು ಹಂಸಸಂದೇಶ
೨. ನಾಟಕ (Drama) ಸಂಕಲ್ಪಸೂರ್ಯೋದಯ
೩. ನೀತಿಕಾವ್ಯ (Didactic Poems) ಸುಭಾಷಿತನೀವೀ
೪. ಭೂವಿವರಣೆ (Geography) ಭೂಗೋಳನಿರ್ಣಯ
೫. ಶಿಲ್ಪ (Silpa) ಶಿಲ್ಪಾರ್ಥಸಾರ
೬. ಧರ್ಮಶಾಸ್ತ್ರ (Dharma Sastra) ಹರಿದಿನತಿಲಕ
೭. ಪ್ರಯೋಗ (Prayoga) ಯಜ್ಞೋಪವೀತಪ್ರತಿಷ್ಠಾ
೮. ಮೀಮಾಂಸಾ (Mimamsa) ಸೇಶ್ವರಮೀಮಾಂಸಾ, ಪಾದುಕಾ ಮೀಮಾಂಸಾ
೯. ಪ್ರಾಕೃತ (Prakrit) ಅಚ್ಯುತಶತಕ

ಇವುಗಳಲ್ಲಿ ಸಂಸ್ಕೃತಕವಿಚರಿತೆಗೆ ಸಂಬಂಧಿಸುವುವಾದ ಕಾವ್ಯ, ನಾಟಕ, ನೀತಿಗ್ರಂಥಗಳನ್ನು ಮಾತ್ರವೇ ಬರೆಯಲು ಆರಿಸಿಕೊಂಡಿದೆ. ಮೇಲೆ ಕಾವ್ಯಗಳು ೮ ಎಂದು ಹೇಳಿ—(೧) ರಘುವೀರಗದ್ಯ, (೨) ಭೂಗೋಳನಿರ್ಣಯ, (೩) ಇದರ ವ್ಯಾಖ್ಯಾನ ಮತ್ತು (೪) ವೈರಾಗ್ಯಪಂಚಕ ಇವುಗಳು ಕಾವ್ಯಗಳೆಂದೂ ಹೇಳಿದೆ. ಕಾವ್ಯವಿಚಾರದಲ್ಲಿ ಇವುಗಳ ಅನುಸಂಧಾನವು ಹೇಗೆಂಬುದು ತಿಳಿಯದಾಗಿದೆ. ಶ್ರೀ ವೆಂಕಟನಾಥನ ಗ್ರಂಥಗಳನ್ನು ಹೇಳಿ ಮುಗಿಸುವ ಸಂಭವದಲ್ಲಿ ಈ ಕೆಳಗಣ ಶ್ಲೋಕಗಳು ಅಪ್ರಸಕ್ತವಾಗದು.

(೧) ಪರಶ್ಶತಂವಾಪಿಪರಸ್ಸಹಸ್ರಂ ಶ್ರೀವೇಂಕಟಾಚಾರ್ಯಕೃತಾಃ ಪ್ರಬಂಧಾಃ
ತತ್ರಾಲಮೇಕಃ ಖಲುಭುಕ್ತಿಮುಕ್ತ್ಯೋಃ ಕಾರ್ತ್ಸ್ನ್ಯೇನಕಸ್ತಾನ್ಗಣಯೇತ್
ಸಮಸ್ತಾನ್ ‖ ೨೦

(೨) ಅಪಿಚ ಭವಾಹಿದಷ್ಟಪರಿಮೂರ್ಛಿತಸ್ಯ ಭವಿನಃ ಪ್ರಬೋಧನಕರೀ
ಶಮದಮದೋಷಭೀತಿ ಭಗವತ್ತದೀಯಜನಭುಕ್ತಿಮುಕ್ತಿಜನನೀ
ವಿಷಯಪರತ್ವಕೋಪಮದಮೋಹಲೋಭ ಶರತಾದಿದೋಷಶಮನೀ
ಭುವಿಸದೃಶೀತರಾಸ್ತಿನಹಿಸೂಕ್ತಿರದ್ಯನಿಗಮಾಂತದೇಶಿಕಗಿರಃ ‖ ೩೬

(೩) ಯದುಕ್ತಯೋಯತಿಪತಿತಂತ್ರದೀಪಿಕಾಃ
ಸಲಕ್ಷಣಾಸ್ಸರಸತಮಾಸ್ಸತಾಂಮತಾಃ
ಸಮತ್ಸರೈರಪಿಸತತಂಪರೋಕ್ಷಿತಃ
ಪ್ರಶಂಸಿತಾಃ ಪರಿಕಲಯೇತ್ಸಸಂಶ್ರಿಯಂ ‖ ೩೮

(೪) ವಾಣೀಯಸ್ಯದ್ರಮಿಡೀಸಾಂಸ್ಕೃತೀಚ
ಪ್ರಾಯಃಪ್ರಾಚಾಮಾಶಯಾಪನ್ನವಾದೀತ್
ಅರ್ವಾಚಾಮಪ್ಯಾಸ್ಯವೈಯಾತ್ಯಮೂಲಂ
ಜೀಯಾತ್ಸೋಯಂ ಸರ್ವತಂತ್ರಸ್ವತಂತ್ರಃ ೩೯.

(೫) ವೇಂಕಟೇಶವಿದುಷಾರಚಿತಾನಾಂ
ಜ್ಞಾಯತೇನಗಣನಾಪಿಕೃತೀನಾಂ ‖ (ಸಪ್ತತಿರತ್ನಮಾಲಿಕಾ ೪೨)

(೬) ಶ್ರೀವೇಂಕಟಾರ್ಯೇಣಕೃತಾಃ ಪ್ರಬಂಧಾಃ
ಸಂಖ್ಯಾತುಮುರ್ವ್ಯಾಂ ವಿಬುಧೈರ್ನಶಕ್ಯಾಃ
ತತ್ರೈಕಮೇಕಂಪರಿಶೀಲಯಂತೋ
ಧನ್ಯಾನರಾಸ್ತೇಧರಣೀಂಪುನಂತಿ ‖ (ವೈಭವಪ್ರಕಾಶಿಕೆ ಪುಟ ೧೫೨)

ಎಂದು ಗ್ರಂಥೋತ್ಕರ್ಷತೆಯು ಹೇಳಿರುವುದು. ವೆಂಕಟನಾಥನ ಕೃತಿಯೊಂದೂ ಅಧ್ಯಾತ್ಮವಿಚಾರವೆಂದರೆ ಅತ್ಯುಕ್ತಿಯಲ್ಲ.

(೧) ಯಾದವಾಭ್ಯುದಯ:—

ಇದು ೨೪ ಸರ್ಗಗಳುಳ್ಳ ಮಹಾಕಾವ್ಯವೆಂದು ಹೇಳಲ್ಪಟ್ಟಿರುವುದಾದರೂ ನಮಗೆ ದೊರೆತಿರುವ ೧೨ ಸರ್ಗಗಳು ಮಾತ್ರ. ಡಿಂಡಿಮ ಕವಿಕೃತ ರಾಘವಾಭ್ಯುದಯವನ್ನು ನೋಡಿ ಯಾದವಾಭ್ಯುದಯವನ್ನು ಬರೆದಿರುವುದಾಗಿ ಕೆಲವರು ಹೇಳುವರು. ಡಿಂಡಿಮಕವಿಯ ವಿಚಾರವಾಗಲಿ ರಾಘವಾಭ್ಯುದಯ ಕಾವ್ಯದ ವಿಚಾರವಾಗಲಿ ಪ್ರಕೃತ ನಮಗೆ ತಿಳಿಯದಾಗಿದೆ. ಆದರೆ ಯಾದವಾಭ್ಯುದಯದ ಶ್ರೀಕೃಷ್ಣಚರಿತೆಯನ್ನು ನೋಡಿ ರಾಘವಾಭ್ಯುದಯವು ಶ್ರೀರಾಮಚರಿತೆಯಾಗಿರಬಹುದೆಂದೂಹಿಸಲು ಅವಕಾಶವಿದೆ. ಯಾದವಾಭ್ಯುದಯದ ೧೨ ಸರ್ಗಗಳಲ್ಲಿ ಶ್ರೀಕೃಷ್ಣನ ಜನ್ಮಾರಭ್ಯ ರುಕ್ಮಿಣೀಕಲ್ಯಾಣದವರೆಗೆ ವರ್ಣಿತವಾಗಿದೆ. ಇದಕ್ಕೆ ಸುಪ್ರಸಿದ್ಧನಾದ ಅಪ್ಪಯ್ಯದೀಕ್ಷಿತನು ವ್ಯಾಖ್ಯಾನವನ್ನು ಬರೆದಿರುವನು. ಕಾವ್ಯದಲ್ಲಿ ಅಲ್ಲಲ್ಲಿ ಕಂಡುಬರುವ ಬಂಧಗಳೂ, ಶ್ಲೇಷೆ, ಯಮಕ ಭಾಗಗಳನ್ನು ಬಿಟ್ಟರೆ ಉಳಿದ ಭಾಗಗಳೆಲ್ಲವೂ ಲಲಿತಪದ ಬಂಧಬಂಧುರವಾಗಿ ರಮ್ಯವಾಗಿಯೇ ಇದೆ. ಶೈಲಿಯು ಸರಳವಾಗಿದೆ. ಒಂದೇವಸ್ತುವನ್ನು ವಿಧವಿಧವಾಗಿ ಬಣ್ಣಿಸಿ ಮನರಂಜನಮಾಡುವದರಲ್ಲಿ ವೆಂಕಟನಾಥನು ತನ್ನ ಅಸೀಮಶಬ್ದ ಭಾಂಡಾಗಾರವೆಲ್ಲವನ್ನೂ ತೋರಿಸಿರುವನು. ಚಂದ್ರ ಮತ್ತು ಸಂಧ್ಯಾವರ್ಣನೆ, ದೇವಕಿಯ ಗರ್ಭವರ್ಣನೆ ಇವೇ ಮೊದಲಾದವು ನಿದರ್ಶನವಾಗಿರುವುವು. ಮಾದರಿಗಾಗಿ ಕೆಲವನ್ನು ಬರೆದು ಹೇಳುವೆವು.

ಸ್ಫುರತ್ಪ್ರಭಾಕೇ ಸರಮರ್ಕಬಿಂಬಂ ಮಮಜ್ಜ ಸಿಂಧೌ ಮಕರಂದತಾಮ್ರಂ
ಸಂಧ್ಯಾಕುಮಾರ್ಯಾಗಗನಾಂಬುರಾಶೇಃ ಕ್ರೀಡಾಹೃತಂಕ್ಷಿಪ್ತಮಿವಾರವಿಂದಂ || ೨-೪೧.

ಫಣಾಮಣಿಪ್ರೇಕ್ಷ್ಯ ಖರಾಂಶುಬಿಂಬ ಸ್ಸಂಧ್ಯಾಸುವರ್ಣೇಮವಲೋಕ್ಯ ಭೀತಃ
ತಾಪಾಧಿಕೋವಾಸರಪನ್ನಗೇಂದ್ರಃ ಪ್ರಾಯೇಣಪಾತಾಳಬಿಲಂವಿವೇಶ|| ೨-೪೨.

ಪ್ರದೋಷರಾಗಾರುಣ ಸೂರ್ಯಲಕ್ಷ್ಮಾದ್ವಿಶಾಗಜೋದ್ವೃಪ್ತ ಇವಾತಿಘೋರಃ
ಕಾಲೋಪನೀತಂಮಧುನಾಸಮೇತಂ ಮನ್ಯೇಪಯೋಧಿಃ ಕಬಳಂನ್ಯಭುಂಕ್ತ||೨-೪೩.

ತಮಾಂಸಿದುರ್ವಾರಬಲಸ್ಸಕಾಲಃ ಪ್ರಾಯೋವಿಲೋಪ್ತುಂಗಹಸಾದಿಶಾಂಚ
ಮನಾಂಸಿಕಾಮಶ್ಚಮನಸ್ವಿನೀನಾಂ ಪ್ರಾಯುಂಕ್ತಶೈತ್ಯಾಧಿಕಮರ್ಧಚಂದ್ರಂ||೨೫-೨.

ಈ ಕಾವ್ಯದಲ್ಲಿ ಉಪಮಾಲಂಕಾರ ವಾಕ್ಯಾಲಂಕಾರಗಳ ಬಾಹುಳ್ಯದಲ್ಲಿ ನೈಸರ್ಗಿಕವರ್ಣನೆಗಳು ಅಷ್ಟೊಂದು ಹೆಚ್ಚಾಗಿ ದೊರೆಯದಿದ್ದರೂ ಸಾಧಾರಣವಾಗಿ ಅಲ್ಲಲ್ಲಿ ಒಂದೊಂದು ದೊರೆಯುತ್ತದೆ. ಮಾದರಿಗಾಗಿ ಬರೆಯುವೆವು.

ರೋಮಂಥಫೇನಾಂಚಿತನೃಕ್ವಭಾಗೈ
ರಸ್ಪಂದನೈರರ್ಧನಿಮೀಲಿತಾಕ್ಷೈಃ
ಅನಾದೃತಸ್ತೃಣ್ಯರಸ್ಯೈರ್ಮುಕುಂದಃ
ಕಂಡೂಯಿತೈರ್ನಿರ್ವೃತಿಮಾಪವತ್ಸೈಃ || ೪-೮೪

ಶ್ರೀ ಕೃಷ್ಣನು ಕಾಳೀಯನ ದರ್ಪವನ್ನಡಗಿಸಿ, ಅವನ ಹೆಡೆಯಮೇಲೆ ಕಾಲೂರಿ ಕುಣಿಯುವುದಾದ ಈ ಶ್ಲೋಕವರ್ಣನವೂ, ಆ ಕುಣಿತಕ್ಕೆ ಸರಿಯಾದ ಆರೋಹಣ ಅವರೋಹಣಗಳಿಂದ ಕೂಡಿದ ಧ್ವನಿಯುತಾನ ವಿತಾನಗಳು. ಎಷ್ಟು ಮನೋಹರವಾಗಿರುವುದೆಂಬದನ್ನು ನೋಡಿ :—

ಲೋಲಾಪತಚ್ಚರಣಲೀಲಾಹತಿಕ್ಷರಿತ ಹಾಲಾಹಲೀ ನಿಜಫಣೇ
ನೃತ್ಯಂತಮಪ್ರತಿಘಕೃತ್ಯಂತಮಪ್ರತಿಮಮತ್ಯಂತ ಚಾರುವಪುಷಂ
ದೇವಾದಿಭಿಸ್ಸಮಯಸೇವಾದರತ್ವರಿತಹೇವಾಕ ಘೋಷಮುಖರೈಃ
ದೃಷ್ಟ್ವಾವಧಾನಮಧತುಷ್ಟ್ವಾವಶೌರಿ ಮಹಿರಿಷ್ಟ್ವಾವರೋಧಸಹಿತಃ|| ೧-೧೨೩

ವೆಂಕಟನಾಥನ ಕಾವ್ಯವಿಚಾರವಾಗಿ ಪ್ರಸಿದ್ಧಾಲಂಕಾರಿಕನಾದ ಅಪ್ಪಯ್ಯ ದೀಕ್ಷಿತನ ಹೇಳಿಕೆಯು ಹೀಗಿರುವುದು:—

ಇತ್ಥಂವಿಚಿಂತ್ಯಾಃ ಸರ್ವತ್ರ ಭಾವಾಃ ಸಂತಿ ಪದೇಪದೇ
ಕವಿತಾರ್ಕಿಕ ಸಿಂಹಸ್ಯ ಕಾವ್ಯೇಷು ಲಲಿತೇಷ್ವ ಪಿ||

ಕಾವ್ಯೇಷು—ಲಲಿತೇಷ್ವಪಿ—ಎಂದು ಹೇಳಿ ಮುಗಿಸಿರುವುದು ಅಕ್ಷರಶಃ ನಿಜ ವಾದುದಾಗಿದೆ. ಮಾದರಿಗೆ ಮೇಲಣಶ್ಲೋಕಗಳೇ ಸಾಕೆಂದು ತೋರುವುದು.

(೧) ತದಾತ್ವೇ ನೂತನಂಸರ್ವ ಮಾಯತ್ಯಾಂಚಪುರಾತನಂ
ನದೋಷಾಯೈತದುಭಯಂ ನಗುಣಾಯಚಕಲ್ಪತೇ || ಯಾ ಅ|| ೧—೬.

ಎಂಬದು, ಅಪ್ಪಯ ದೀಕ್ಷಿತನು ಕುವಲಯಾನಂದದಲ್ಲಿ ಉದಾಹರಿಸಿಕೊಂಡಿ ರುವ ಕಾಳಿದಾಸನ ಮಾಳವಿಕಾಗ್ನಿ ಮಿತ್ರದ:—

ಪುರಾಣ ಮಿತ್ಯೇವ ನಸಾಧುಸರ್ವಂ

ಎಂಬುದನ್ನು ಹೇಗೆ ಹೋಲುವುದೆಂಬುದನ್ನು ನೋಡಿ.

ದುರ್ಗುಣವನ್ನು ಮಾರ್ಪಡಿಸಿ ಸದಾಚಾರವಂತನನ್ನಾಗಿ ಮಾಡದ ಬಹು ವಿದ್ಯದಿಂದ ಏನುಪ್ರಯೋಜನ ಎಂಬ ಅರ್ಥವುಳ್ಳ:—

(೨) "ಸಚವೃತ್ತವಿಹೀನಸ್ಯನವಿದ್ಯಾಂಬಹ್ವಮನ್ಯತ" ೧—೨೨

ಎಂಬದು ಭರ್ತೃಹರಿ ಮೊದಲಾದ ನೀತಿಶಾಸ್ತ್ರಕಾರರು ಹೇಳಿರುವ ನೀತಿ ಸಾರವನ್ನು ಒಂದೇ ಪಾದದಲ್ಲಿ ಹೇಳಲ್ಪಟ್ಟಿರುವುದು.

(೩) ಅಪ್ಸಿತನಸಾಂರಾಜ್ಯಂ ಸೋಢ್ಧಕಾಮುಪರಾಜ್ಮುಖಿಂ
ಯದೃಚ್ಛಾಗತಮೈಶ್ವರ್ಯ ಮಾನೃಣ್ಯರುಚಿರನ್ವಭೂಃ|| ೧—೩೪.

ಕ್ಷಣ ಭಂಗುರವಾದ ಐಹಿಕ ವೃತ್ತಿಗೂ ಕರ್ತ್ರವ್ಯಕ್ಕಾಗಿ ಕರ್ತವ್ಯದ ಉಚ್ಛೃಧ್ಯೇಯಕ್ಕೂ ಜೀವದ ಅಂತ್ಯವನ್ನು ಕುರಿತು ಹೇಳುವುದಾದ ಈ ಶ್ಲೋಕವು ಎಷ್ಟು ಸಗುಣವಾಗಿದೆ.

ಇವುಗಳಲ್ಲದೆ ೪೩--೭೩ ರವರೆಗಿನ ವೈಕುಂಠವರ್ಣನವೂ. (ಒಂದನೆಯ ಸರ್ಗ) ಎರಡನೆಯಸರ್ಗದಲ್ಲಿ ದೇವಕಿಯ ಗರ್ಭವರ್ಣನವೂ, ತಕ್ಕುವಾದ ಉಪಮಾನೋಪಮೇಯಗಳಿಂದ ಬಹುಸುಗಮವಾಗಿ ಸಾಧಿಸಲ್ಪಟ್ಟಿದೆ.

ಶ್ರೀಕೃಷ್ಣನು ಅವತರಿಸಿದ ರಾತ್ರಿಯಲ್ಲಿನ ಚಂದ್ರೋದಯವರ್ಣನವು ಎಷ್ಟು ರಮ್ಯವಾಗಿರುವುದೆಂಬುದನ್ನು ನೋಡಿ ! ಇದನ್ನು ಅಪ್ಪಯ್ಯದೀಕ್ಷಿತನು ಕುವಲಯಾನಂದದಲ್ಲಿ (ರೂಪಕಸಂಕೀರ್ಣೋತ್ಪ್ರೇಕ್ಷಾ ಅಂಗಾಂಗೀ ಭಾವಸಂಕರಃ) ಎಂಬುದಕ್ಕೆ ಉದಾಹರಿಸಿಕೊಂಡಿರುವನು. *

ದಲೇಷ್ವಶೇಷಂತಮಹೀರುಹಾಣಾಂ
  ಛಾಯಾಸ್ತದಾಮಾರುತಕಂಪಿತಾನಾಂ
ಶಶಾಂಕಸಿಂಹೇನತಮೋಗಜಾನಾಂ
  ಲೂನಾಕೃತೀನಾಮಿವಗಾತ್ರಖಂಡಾಃ ॥ ೨—೮೧

ಸಂಸಾರದಲ್ಲಿನ ಮಾನವನ ವಿಧಿಯವರ್ಣನವು ಎಂತಹ ಭಾವಾರ್ಥದಿಂದ ಕೂಡಿರುವುದು. ಎಂಬುದಕ್ಕೆ ಈ ಶ್ಲೋಕವನ್ನು ನೋಡಿ:—

ಘನಪವಃ ಪರಿಪಾಕಮಲೀಮಸೈ
  ರ್ಗುರುಭಿರೂರ್ಮಿಭಿರನುಪದ್ರುತಃ
ಅತಿತತಾರದಿನಾಧಿಪತೇಸ್ಸುತಾ
  ಮನಘಯೋಗಮನಾಇವಸಂಸ್ಮೃತಿಂ ॥ ೩ — ೪೧

ಕೃಷ್ಣನು ಹಣ್ಣು ತೆಗೆದುಕೊಳ್ಳಲುಬಂದ ಕೃಷ್ಣನ ಕೈಗಳನ್ನುನೋಡಿ ಹಣ್ಣು ಮಾರುವವಳ ಸುಮನೋಭಾವವರ್ಣನವು:—

ಸುಜಾತರೇಖಾತ್ಮಕಶಂಖಚಕ್ರಂ
  ತಾಮ್ರೋದರಂತಸ್ಯಕರಾರವಿಂದಂ
ವಿಲೋಕಯಂತ್ಯಾಃ ಫಲವಿಕ್ರಯಿಣ್ಯಾ
  ವಿಕ್ರೇತುಮಾತ್ಮಾನಮಭೂದ್ವಿಮರ್ಶಃ ॥ ೪—೩೧

(೧) **ಹಂಸಸಂದೇಶ:**—ಮಹಾಕವಿ ಕಾಳಿದಾಸನು ಆದಿಕವಿಯಾದ ವಾಲ್ಮೀಕಿಯು ಬರೆದಿರುವ ರಾಮಾಯಣದಲ್ಲಿ ಶ್ರೀರಾಮನು ಅಶೋಕವನದಲ್ಲಿರುವ ವಿರಹಿಣಿಯಾದಸೀತೆಗೆ ಹನುಮಂತನಮೂಲಕ ಹೇಳಿಕಳುಹಿಸಿರುವ ಸಂದೇಶವನ್ನು ನೋಡಿ ಅದಕ್ಕೆ ಅನುಗುಣವಾದ ವಿಷಯ, ಶೈಲಿ, ಮತ್ತು ವೃತ್ತಗಳೇ ಮೊದಲಾದವುಗಳ ಜೋಡಣೆಗಳಿಂದ ಬರೆದುದಾಗಿರುವ ಮೇಘಸಂದೇಶಕಾವ್ಯವನ್ನುನೋಡಿ ಅದ

* ಕುವಲಯಾನಂದ ಅಂಗಾಂಗೀಭಾವ ಸಂಕರೋಯಥಾ|:—ಪುಟ ೧೭೯ ಅಲಂಕಾರ ಸಂಖ್ಯಾ ೧೨೦.

ರಂತೆಯೇ ಅಥವಾ ಅದಕ್ಕಿಂತ ಮಿಗಿಲೆನಿಸುವಂತಹ ಸಂದೇಶಕಾವ್ಯವನ್ನು ಬರೆಯ ಬೇಕೆಂಬ ಸ್ಪರ್ಧೆಯಿಂದ ವೆಂಕಟನಾಥನು ಹಂಸಸಂದೇಶವನ್ನು ಬರೆದಿರಬೇಕಾಗಿ ತೋರುತ್ತದೆ. ಮೇಘಸಂದೇಶದಲ್ಲಿ ವಿರಹಿಯಾದ ಯಕ್ಷನು ಪುಷ್ಕಲಾವರ್ತನೆಂಬ ಮೇಘನನ್ನು ದೌತ್ಯಕ್ಕಾಗಿಬೇಡುವಿಕೆ, ಬಹುದೂರದಲ್ಲಿರುವ ತನ್ನ ಪ್ರಿಯತಮೆಯನ್ನು ಜ್ಞಾಪಿಸಿಕೊಂಡು ತಾನು ಬಿಟ್ಟುಬಂದುದರ ದೆಸೆಯಿಂದ ಪರಸ್ಪರ ಉಂಟಾಗಿರುವ ವಿರಹವೇದನೆ, ಶಾಪಾವಧಿಯುತೀರಿ ತಾನುಬರುವವರೆಗೂ ಉಳಿದುಕೊಳ್ಳಬೇಕೆಂಬ ಆಶಾಪೂರ್ವಕವಾದಕೋರಿಕೆ, ದೂತನವಿಚಾರದಲ್ಲಿ ಕಾವ್ಯನಿರ್ವಹಣವಾಡಬಲ್ಲನೆಂಬ ಭರವಸೆ, ಶಕುನಗಳನಂಬುಗೆ, ಮಾರ್ಗಕ್ರಮಾಣವಿವರಣೆ, ವಿರಹಿಣಿಯ ಅವಸ್ಥಾಂತ ರಗಳು, ನಿರುಪದ್ರವವಾಗಿ ಮಾರ್ಗಕ್ರಮಣಮಾಡಿ ಪತ್ನಿಯೊಡನೆ ತನ್ನ ಕ್ಷೇಮ ವಾರ್ತೆಯನ್ನು ತಿಳುಹುವುದು, ಮಾರ್ಗದಲ್ಲಿ ದೊರಕುವುವಾದ ತೀರ್ಥಕ್ಷೇತ್ರಾದಿಗಳ ಮಹಾತ್ಮ್ಯವರ್ಣನೆ, ದೌತ್ಯವನ್ನು ಕೈಗೊಂಡಮೇಘರಾಜನಿಗೆ ಮಂಗಳಾಶಾಸನ ಇವೇ ಮೊದಲಾದವುಗಳನ್ನು ಸಮ್ಯಕ್ಪರಿಶೀಲಿಸಿ ಮೇಘಸಂದೇಶಕ್ಕಿಂತಲೂ ಇನಿದಾಗಿ ಬರೆಯಬೇಕೆಂದಾಶಿಸಿ ಬಹುತರ ಹಂಸಸಂದೇಶವನ್ನು ಬರೆದಿರಬೇಕಾಗಿ ಬೋಧೆಯಾ ಗುತ್ತದೆ. ಹಂಸಸಂದೇಶವು ಮೇಘಸಂದೇಶದ ಪಡಿನೆಳಲು. ಮೇಘ ಮತ್ತು ಹಂಸ ಸಂದೇಶಗಳಲ್ಲಿ ರಾಮಗಿರಿ ಮತ್ತು ಮಲಯಪರ್ವತಗಳ ಮಧ್ಯದಲ್ಲಿ ಎಲ್ಲಿಯೋ ಕೆಲವು ಪ್ರದೇಶಗಳನ್ನು ಹೊರ್ತು ಹಿಮಾಚಲದಿಂದ ಕನ್ಯಾಕುಮಾರಿಯವರೆಗಿನ ಇಂಡಿಯಾದೇಶದ ಮುಖ್ಯಭಾಗಗಳೆಲ್ಲವನ್ನೂಹೇಳಿದೆ. ಇವೆರಡು ಸಂದೇಶಕಾವ್ಯ ಗಳಲ್ಲಿಯೂ ಸಮಾನಾರ್ಥದ್ಯೋತಕವಾದ ಶಬ್ದಗಳೂ ಶ್ಲೋಕಗಳೂ ವರ್ಣನೆಗಳೂ ಇರುವುವು. ಮಾದರಿಗಾಗಿ ಕೆಲವನ್ನು ಇಲ್ಲಿಬರೆದಿದೆ.

ಪ್ರಯಾಣಮಾಡುವ ದೂತನಿಗೆ ಹಾಗೆಹೊರಡುವ ಮೊದಲು ಮುಖ್ಯ ಪ್ರೀತಿ ಪಾತ್ರರ ಅನುಜ್ಞೆಯನ್ನುಹೊಂದಿ ಅವರಸಹಾಯವನ್ನು ಕೋರಿಪ್ರಯಾಣಮಾಡಲು ನಾಯಕನು ಪೇಳುವಿಕೆ:—

(೧) ಆಪೃಚ್ಛಸ್ವ ಪ್ರಿಯಸಖಮಮುಂ ತುಂಗಮಾಲಿಂಗ್ಯ ಶೈಲಂ
ವಂದ್ಯೈಃ ಪುಂಸಾಂ ರಘುಪತಿಪದೈರಂಕಿತಂ ಮೇಖಲಾಸು
ಕಾಲೇ ಕಾಲೇ ಭವತಿ ಭವತೋ ಯಸ್ಯ ಸಂಯೋಗಮೇತ್ಯ
ಸ್ನೇಹವ್ಯಕ್ತಿಶ್ಚಿರವಿರಹಜಂ ಮುಂಚತೋ ಬಾಷ್ಪಮುಷ್ಣಂ ||
ಮೇಘ ಸಂ || ೧೨ ||

ಪ್ರಕ್ಷೀಣಾಂ ತ್ವದ್ವಿರಹಸಮಯೇ ಜಾತಹರ್ಷಾಮಿದಾನೀಂ
ಪ್ರತ್ಯಾಯಾಸ್ಯನ್ನನುನಯ ಶನೈಃ ಪದ್ಮಿನೀಂ ಸ್ವಾದುವಾಚಾ
ಸಾ ತೇ ತಂತ್ರೀಸ್ವನಸುಭಗಯಾ ಸ್ಯಾದಿತೀಹಾಭ್ಯನುಜ್ಞಾಂ
ಮನ್ಯೇ ಕುರ್ಯಾನ್ಮಧುಕರಗಿರಾ ಮೈಥಿಲೀಸೌಹೃದೇನ ||
ಹಂಸ ಸಂದೇಶ ||

(೨) ಗ್ರಾಮ್ಯ ಸ್ತ್ರೀಯರ ಗೀತವರ್ಣನೆ ;—

ಪಾದನ್ಯಾಸೈಃ ಕ್ವಣಿತರಶನಾಸ್ತತ್ರ ಲೀಲಾವಧೂತೈಃ
ರತ್ನಚ್ಛಾಯಾಖಚಿತವಲಿಭಿಃ ಚಾಮರೈಃ ಕ್ಲಾಂತಹಸ್ತಾಃ
ವೇಶ್ಯಾಸ್ತ್ವತ್ತೋ ನಖಪದಸುಖಾನ್ ಪ್ರಾಪ್ಯ ವರ್ಷಾಗ್ರಬಿಂದೂನ್
ಆಮೋಕ್ಷ್ಯಂತೇ ತ್ವಯಿ ಮಧುಕರಶ್ರೇಣಿದೀರ್ಘಾನ್ ಕಟಾಕ್ಷಾನ್ ||
ಪೂ. ಮೇ. ಸಂ || ೩೯ ||

ಪ್ರಸ್ತಾಪೀಡಪ್ರಚಲದಲಕಂ ವ್ಯಕ್ತತಾಟಂಕರತ್ನಂ
ಮುಕ್ತಾಚೂರ್ಣಸ್ಫುರಿತತಿಲಕಂ ವಕ್ತ್ರಮುತ್ತಾನಯಂತ್ಯಃ
ದೇಶೋ ತಸ್ಮಿನ್ ಕುವಲಯದೃಶೋಃ ಜಾತಕೌತೂಹಲಸ್ತ್ವಾಂ
ಮಾಲಾದೀರ್ಘೈರ್ ಮಧುರವಿರುತಂ ಮಾನಯಿಷ್ಯಂತ್ಯಪಾಂಗೈಃ ||
ಹಂಸ. ಸಂ. ||

(೩) ನದಿಯಲ್ಲಿ ಸ್ನಾನಮಾಡಿ ಪಾಪಗಳನ್ನು ಕಳೆದುಕೊಳ್ಳೆಂದು ದೂತನಿಗೆ ಹೇಳುವಿಕೆ :—

ವಕ್ಷ್ಯ ಸ್ಯಂತರ್ಬಹಿರಪಿ ಪರಾಂ ಶುದ್ಧಿಮಕ್ಷ್ಯಪಾಯಾಂ ||
ಹಂಸ. ಸಂ ||

ಅಂತಃಶುದ್ಧಸ್ತ್ವಮಪಿ ಭವಿತಾ ವರ್ಣಮಾತ್ರೇಣ ಕೃಷ್ಣಃ ||
ಮೇಘ ಸಂ || ೫೩ ||

(೪) ಸಮಾನಾಭಿಪ್ರಾಯಕ್ಕೆ:—

ವಿದ್ಯುತ್ವಂತಂ ಲಲಿತವನಿತಾಃ ಸೇಂದ್ರಚಾಪಂ ಸಚಿತ್ರಾಃ
ಸಂಗೀತಾಯ ಪ್ರಹತಮುರಜಾಃ ಸ್ನಿಗ್ಧಗಂಭೀರಘೋಷಂ
ಅಂತಸ್ತೋಯಂ ಮಣಿಮಯಭುವ ಸ್ತುಂಗ ಮಭ್ರಂಲಿಹಾಗ್ರಾಃ
ಪ್ರಾಸಾದಾಸ್ತ್ವಾಂ ತುಲಯಿತುಮಲಂ ಯತ್ರ ತೈಸ್ತೈರ್ವಿಶೇಷೈಃ ||
ಉ. ಮೇಘಸಂ ||೧||

ಲೀಲಾಖೇಲಂ ಲಲಿತಗಮನಾ ಶ್ಚಾರುನಾದಂ ಸಶಿಂಜಾಃ
ಭಲ್ಲಾಕ್ಷ್ಯಂ ತ್ವಾಂ ಸ್ಮರಶರದೃಶೋಃ ಗೌರಮಾಪಾಂಡುರಾಂಗ್ಯಃ
ಮುಗ್ಧಾಲಾಪಂ ಮಧುರವಚಸೋ ಮಾನಸಾರ್ಹಂ ಮನೋಜ್ಞಾಃ
ಯತ್ರಾನೀತಾಃ ಸುರಯುವತಯೋಃ ರಂಜಯೇಯುಃ ಸಮಗ್ರಂ ||
ಹಂಸಸಂ ||

(೫) ನಾಯಕಿಯಬಳಿಗೆ ದೂತನುಹೋಗಿ ಸಂಬಂಧವನ್ನು ಸೂಚಿಸುವಿಕೆ:—

ಭರ್ತುರ್ಮಿತ್ರಂ ಪ್ರಿಯಮವಿಧವೇ ವಿದ್ಧಿ ಮಾಮಂಬುವಾಹಂ
ತತ್ಸಂದೇಶೈರ್ಹೃದಯನಿಹಿತೈರಾಗತಂ ತ್ವತ್ಸಮೀಪಂ
ಯೋ ಬೃಂದಾನಿ ತ್ವರಯತಿ ಪಥಿ ಶ್ರಾಮ್ಯತಾಂ ಪ್ರೋಷಿತಾನಾಂ
ಮನ್ದ್ರಸ್ನಿಗ್ಧೈರ್ಧ್ವನಿಭಿರಬಲಾವೇಣಿ ಮೋಕ್ಷೋತ್ಸುಕಾನಿ ||
ಉ. ಮೇ. ೧೦೨.

ಪತ್ಯುರ್ದೇವಿ ಪ್ರಣಯಸಚಿವಂ ವಿದ್ಧಿ ದಿರ್ಘಾಯುಷೋ ಮಾಂ
ಜೀವಾತುಂ ತೇ ದಧತಮನಘಂ ತಸ್ಯ ಸಂದೇಶಮಂತಃ
ಶೂರಾಣಾಂ ಯಃ ಶರದುಪಗಮೋ ವೀರಪತ್ನೀವರಾಣಾಂ
ಸಂಮಾನಾರ್ಹಂ ಸಮಯಮುಚಿತಂ ಸೂಚಯೇತ್ಕೋಜಿತ್ಕಸ್ಯ ||
ಹಂಸ. ಸಂ ||

ಪಾತ್ರವಿವೇಚನೆ. ಮಹಾ ಕವಿಕಾಳಿದಾಸನು ತನ್ನ ಮೇಘ ಸಂದೇಶಕಾವ್ಯಕ್ಕೆ:—

ಕಶ್ಚಿತ್ (೧) ಕಾಂತಾವಿರಹಗುರುಣಾ (೨) ಸ್ವಾಧಿಕಾರಾತ್ಪ್ರಮತ್ತಃ
(೩) ಶಾಪೇನಾಸ್ತಂಗಮಿತಮಹಿಮಾ...... ....."

ಕಶ್ಚಿತ್:—ಯಾವನೋ ಹೆಸರು ಕುಲ ಶೀಲ ಗೋತ್ರ ವಯೋರೂಪ ಪದವಿ ವಿಹೀನನಾದ ಅನಾಮಧೇಯನಾದ ಒಬ್ಬ ಯಕ್ಷ.

ಕಾಂತಾವಿರಹಗುರುಣಾ:—(ಅವನಾದರೋ ಪ್ರಿಯತಮೆಯ ಅಗಲುವಿಕೆಯಿಂದ ಅನುಭವಿಸಲಶಕ್ಯವಾದ ವಿರಹದುಃಖದಿಂದ ಮ್ಲಾನನಾಗಿರುವವನು.

ಸ್ವಾಧಿಕಾರಾತ್ಪ್ರಮತ್ತಃ-ತನ್ನ ಕೆಲಸದಲ್ಲಿ ಅಜಾಗರೂಕತೆಯಿಂದ ಮೈಮರೆತಿರುವವನು.

ಶಾಪೇನಾಸ್ತಂಗಮಿತಮಹಿಮಾ:—ಕುಬೇರನಶಾಪದಿಂದ ಹೋಗಲಾಡಿಸಲ್ಪಟ್ಟ ಮಹಿಮೆಯುಳ್ಳವನು. ಇಂತಹನಾಯಕನನ್ನು ಆರಿಸಿಕೊಂಡಿರುವನು.

ಹಂಸಸಂದೇಶಕಾರನು:—

ವಂಶೇಜಾತಸ್ಸವಿತುರನಘೇ(೧)ಮಾನಯರ್ಮಾನುಷತ್ವಂ
ದೇವ(೨)ಶ್ರೀಮಾ(೩)ಜನಕತನಯಾನ್ವೇಷಣೇಜಾಗರೂಕಃ (೪) ||

ವಂಶೇಜಾತಸ್ಸವಿತುರನಘೇ :—ಅತ್ಯಂತಪರಿಶುದ್ಧವಾದ ಸೂರ್ಯಕುಲದಲ್ಲಿ ಹುಟ್ಟಿದವನು.

ದೇವಃ:—ಪರಮಪುರುಷನಾದ ಶ್ರೀರಾಮನು. ಮಾನಯರ್ಮಾನುಷತ್ವಂ:—ಲೋಕೋದ್ಧಾರಕ್ಕಾಗಿ ಮಾನವಲೀಲೆಯನ್ನು ಕೈಗೊಂಡವನು. ಶ್ರೀಮಾ:-ಸಕಲಗುಣಸಂಪದಸಮನ್ವಿತನು.

ಜನಕತನಯಾನ್ವೇಷಣೇಜಾಗರೂಕಃ:--ಸೀತೆಯನ್ನು ಹುಡುಕುವುದರಲ್ಲಿ ಕೊಂಚವೂ ಅಲಸಿಕೆಯಿಲ್ಲದೆ ಯಾವಾಗಲೂ ಜಾಗರೂಕನಾಗಿರುವವನು. ಇಂತಹ ನಾಯಕನನ್ನು ತನ್ನ ಕಾವ್ಯಕ್ಕೆ ಆರಿಸಿಕೊಂಡಿರುವನು. ಮೇಘಸಂದೇಶಕಾರನ ನಾಯಕನು ಲಕ್ಷಣಶಾಸ್ತ್ರಾನುಸಾರ "ಧೀರಲಲಿತ"ನೆನಿಸಿಕೊಳ್ಳುವನು. ಹಂಸ

ಸಂದೇಶಕಾರನು ತನ್ನ ಕಾವ್ಯಕ್ಕೆ ತಕ್ಕಂತೆ ಧೀರೋದಾತ್ತನಾಯಕನನ್ನಾರಿಸಿಕೊಂಡಿರುವನು. ಇವರಿರ್ವರೂ ಕಾವ್ಯಕ್ಕೆ ತಕ್ಕಂತೆನಾಯಕರಿಗೆ ತಕ್ಕುದಾದದೂತರನ್ನು ಆರಿಸಿಕೊಂಡು ಹೇಳಿರುವರು. ಮೇಘಸಂದೇಶಕಾರನು ದೌತ್ಯಕ್ಕೆ ಅಚೇತನವಾದ ಮೇಘವನ್ನು ಹೇಳಿರುವನು. ಏಕೆಂದರೆ ಕಾಮಾರ್ತ್ತರಿಗೆ ಇದು ಚೇತನವಸ್ತು ಇದು ಅಚೇತನವಸ್ತು ಇಂತಹ ಅಚೇತನವಸ್ತುಗಳ ಮೂಲಕ ಕ್ಷೇಮಸಮಾಚಾರಗಳನ್ನು ಹೇಳಿ ಕಳುಹಿಸುವುದಾದರೆ ಅವು ಚೇತನವಸ್ತುಗಳಬಳಿಗೆ ಹೋಗಿಹೇಳಬಲ್ಲುವೆ ? ಹೇಗೆ? ಎಂಬ ಯುಕ್ತಾ ಯುಕ್ತ ಪರಿಜ್ಞಾನವಿಲ್ಲದೆ ಹೋಗುವುದರಿಂದಲೇ ನಾಯಕನಾದ ಯಕ್ಷನು ಕೇವಲ ಅಚೇತನವಾದ ಮೇಘವನ್ನು ಕುರಿತು ತನ್ನ ಕ್ಷೇಮಸಮಾಚಾರವನ್ನು ಪ್ರಿಯಳಸಮೀಪಕ್ಕೆ ತೆಗೆದುಕೊಂಡುಹೋಗಲು ಯಾಚಿಸಿರುವುದಾಗಿವರ್ಣಿಸಿರುವನು. ಅದು ಹೀಗಿರುವುದು:—

> ಧೂಮಜ್ಯೋತಿಃಸಲಿಲಮರುತಾಂ ಸನ್ನಿಪಾತಃ ಕ್ವ ಮೇಘಃ
> ಸಂದೇಶಾರ್ಥಾಃ ಕ್ವ ಪಟುಕರಣೈಃ ಪ್ರಾಣಿಭಿಃ ಪ್ರಾಪಣೀಯಾಃ
> ಇತ್ಯೌತ್ಸುಕ್ಯಾದಪರಿಗಣಯನ್ ಗುಹ್ಯಕಸ್ತಂ ಯಯಾಚೇ
> ಕಾಮಾರ್ತಾ ಹಿ ಪ್ರಕೃತಿಕೃಪಣಾಶ್ಚೇತನಾಚೇತನೇಷು|| ಮೇ. ಸಂ ೫

ಹಂಸಸಂದೇಶಕಾರನು ತನ್ನ ಕಾವ್ಯಕ್ಕೆ ಧೀರೋದಾತ್ತನಾಯಕನನ್ನು ಆರಿಸಿಕೊಂಡು ವಿಷಯಕ್ಕೆ ತಕ್ಕುದಾದ, ಸಚೇತನವೂ ರಾಜಯೋಗ್ಯವೂ ಆದ ರಾಜಹಂಸನನ್ನು ಹೇಳಿರುವನು.

ಮಹಾಕವಿಕಾಳಿದಾಸನು ಪ್ರಣಯಿಜನರ ಮನೋವೃತ್ತಿಗಳನ್ನು ವಿಧವಿಧವಾಗಿ ಚಿತ್ರಿಸಿ ಮನರಂಜನಮಾಡುವುದರಲ್ಲಿ ಅದ್ವಿತೀಯನೆಂಬುದು ಲೋಕವಿದಿತವಿಚಾರ. ಅದಕ್ಕೆ ಬೇಕಾದರಸಿಕರ ಪ್ರಣಯವಾರ್ತಾಂದೋಳನದಲ್ಲಿ ನೀತಿಹ್ರಾಸವಾಗದಂತೆ ಅವರ ಮನಸ್ಸನ್ನು ಲೀನಮಾಡಿ ತದುಚಿತ ರಸಪೋಷಣೆಯಿಂದ ಆಹ್ಲಾದಸಂದಾಯಿಯಾದ:—

> ಮಧ್ಯೇ ಶ್ಯಾಮಃಸ್ತನ ಇವಭುವಃ ಶೇಷವಿಸ್ತಾರಪಾಂಡುಃ

ಅಥವಾ,

> ಸಭ್ರೂಭಂಗಂ ಮುಖಮಿವ ಪಯೋ ವೇತ್ರವತ್ಯಾಶ್ಚಲೋರ್ಮಿ

ಅಥವಾ,

> ಲೋಲಾಪಾಂಗೈರ್ಯದಿ ನ ರಮಸೇ ಲೋಚನೈರ್ವಂಚಿತೋಸಿ

ಅಥವಾ

> ಸಂಸರ್ಪಂತ್ಯಾಃ ಸ್ಖಲಿತಸುಭಗಂ ದರ್ಶಿತಾವರ್ತನಾಭಿಃ

ಅಥವಾ

> ಜ್ಞಾತಾಸ್ವಾದಃ ಪುಲಿನಜಘನಾಂ ಕೋವಿಹಾತುಂ ಸಮರ್ಥಃ

ಎಂಬಿವೇ ಮೊದಲಾದವುಗಳನ್ನು ಹೇಳುವುದರಿಂದ ವಿಷಯೋದ್ದೀಪನ ಮಾಡಿರುವನಾದರೂ ನಾಯಿಕಾ ನಾಯಕರ ಪ್ರಣಯ ಸಂಭಾವ್ಯರೀತಿಯನ್ನನುಸರಿಸಿ ವಿಷಯ ಚಾಂಚಲ್ಯಕ್ಕೆಡೆಗೊಡದೆ ಅಸೀಮಚತುರತೆಯಿಂದ ಶೃಂಗಾರರಸಪೋಷಣೆಯನ್ನುಮಾಡಿ ಇಂತಹ ಅಮೋಘ ಕಾವ್ಯವನ್ನು ರಚಿಸಿರುವನಾದುದರಿಂದಲೇ ಅವನ ಕಾವ್ಯವು ಲೋಕಾದರ್ಶಕವಾಗಿ ಈಹೊತ್ತಿಗೂ ರಸಿಕರುತಲೆದೂಗುವಂತೆ ಬೆಳಗುತ್ತಿದೆ. ಹಾಗಲ್ಲದಿದ್ದರೆ ವಿಷಯ ಸುಖ ಅಥವಾ ಪಶುವೃತ್ತಿಯೇ ಪ್ರಧಾನವಾಗಿ ಹೇಳುವುವಾದ ಇತರ ಕ್ಷುಲ್ಲಕಗ್ರಂಥಗಳಂತೆ ಕಾಲಧರ್ಮದಲ್ಲಿ ಲಯವಾಗಿಹೋಗುತ್ತಿದ್ದಿತು. ಅಲ್ಲದೆ ಮೇಘಸಂದೇಶಕಾರನ ಕಾಲಕ್ಕೆ ಸಮಾಜವು ವಿಷಯ ಲೋಲುಪತೆಯಲ್ಲಿದ್ದುದಾಗಿಯೂ, ಇಂತಹಸರಳವಿಚಾರಗಳೇ ಜೀವಿತದಧ್ಯೇಯವಾಗಿದ್ದಿತಾಗಿ ಭಾಸವಾಗುತ್ತದೆ. ಹಂಸಂದೇಶದಲ್ಲಿ ಸ್ತ್ರೀವರ್ಣನಾದಿಗಳು ಇಲ್ಲದೆ ಇಲ್ಲ. ಎಲ್ಲಿಯೋಸಮಯಕ್ಕೆ ತಕ್ಕಂತೆ, ಚಂಚಲ ಮನಸ್ಸು ಉದ್ವಿಗ್ನವಾಗದಂತೆ, ಕೆಲವು ಮಾತ್ರವೇ "ಸ್ತ್ರೋಕೋನ್ನಗ್ನ ಸ್ಫುರಿತಪುಳಿನಾಂತ್ವನ್ನಿವಾಸೇಚ್ಛಯೇವ" ಎಂಬ ಇಂತಹವುಗಳು ಅಲ್ಲಲ್ಲಿ ದೊರಕಬಹುದು. ಇವುಗಳಿಂದ ಕಾವ್ಯಸೌಂದರ್ಯಕ್ಕೆ ಮೆರಗುಕೊಟ್ಟಂತಾಗಿರುವುದಲ್ಲದೆ ಚೇತನವನ್ನು ವಿಷಯೋಪಾಸನೆಗೆ ಎಳೆಯುವುವಾಗಿಲ್ಲ. ಹೀಗಾಗಿ ವೆಂಕಟನಾಥನು ಹೇಳುವುದಕ್ಕೆ ಬೇಕಾದವಿಷಯಗಳನ್ನು ರಾಮಾಯಣದಿಂದ ತೆಗೆದುಕೊಂಡು ಮಾದರಿಗಾಗಿ ಮೇಘ ದೂತವನ್ನಿಟ್ಟುಕೊಂಡು ಬರೆದಿರುವುದು ನೈಜವಾಗಿದೆ. ಮೇಘಸಂದೇಶಕಾರನು ತನ್ನ ಕಾವ್ಯಕ್ಕೆ ಸೊಗಯಿಸುವ ವರ್ಷರ್ತುವನ್ನು ಕುರಿತುಹೇಳಿರುವನು. ವೆಂಕಟನಾಥನು ತನ್ನ ಕಾವ್ಯಕ್ಕೆ ಅನುಗುಣವಾದ ಶರದೃತುವನ್ನು ಕೊಂಡಾಡಿರುವನು. ಶ್ರೀರಾಮನು ಶರದೃತುವು ಪ್ರಾರಂಭವಾದುದನ್ನುನೋಡಿ ಯುದ್ಧಕ್ಕೋಸ್ಕರ ಸೈನ್ಯದೊಡನೆ ಹೊರಟುದಾಗಿಹೇಳಿದೆ. ಏಕೆಂದರೆ ದಂಡಯಾತ್ರೆಗೆ ಶರದೃತುವು ಅನುಕೂಲಸಮಯ. ಅಲ್ಲದೆ ಈ ಋತುವಿನಲ್ಲಿಯೇ ಹಂಸಗಳು ಹಿಮಾಲಯದೊಳಗಿರುವ ಮಾನಸರೋವರದಿಂದಹೊರಟು ದಕ್ಷಿಣಕ್ಕೆ ಬರುವುದಾಗಿಯೂ ಹೇಳಿದೆ.

ಆಂಜನೇಯನು ಅಶೋಕವನದಲ್ಲಿರುವ ವಿರಹಕ್ಲಾಂತಳಾದ ಸೀತೆಗೆ ರಾಮಸಂದೇಶವನ್ನು ತಿಳಿಸಿ ಅವಳಿಂದ ಕೊಡಲ್ಪಟ್ಟ ಚೂಡಾಮಣಿಯನ್ನು ತೆಗೆದುಕೊಂಡು ಬಂದು ಮಲಯಪರ್ವತಕ್ಕೆ ಹಿಂತಿರುಗಿ ಶ್ರೀರಾಮನಿಗೆ ಚೂಡಾಮಣಿಯನ್ನು ಕೊಟ್ಟು ಈ ಹೊತ್ತಿನಿಂದ ಒಂದು ತಿಂಗಳೊಳಗಾಗಿ ಬಂದು ತನ್ನನ್ನು ಕರೆದುಕೊಂಡು ಹೋಗದಿದ್ದರೆ, ಉಳಿಯೆನೆಂಬರ್ಥವುಳ್ಳ,

ಧಾರಯಿಷ್ಯಾಮಿಮಾಸಂತು ಜೀವಿತಂಶತ್ರುಸೂದನ
ಮಾಸಾದೂರ್ಧ್ವಂನಜೀವಿಷ್ಯೇ ತ್ವಯಾಹೀನಾನೃಪಾತ್ಮಜ ॥

ಎಂಬ ಸಂದೇಶವನ್ನು ಶ್ರೀರಾಮನಿಗೆ ಹೇಳುವನು. ಇನ್ನು ರಾಮನಿಗೆ ಸಾವಕಾಶವಿಲ್ಲ. ಸೀತೆಯು ಹೇಳಿಕಳುಹಿಸಿದಂತೆ ಒಂದುತಿಂಗಳೊಳಗಾಗಿ ಸೈನ್ಯದೊಡನೆ ಲಂಕೆಗೆಹೋಗಿ ಸೀತೆಯನ್ನು ಬಿಡಿಸಿಕೊಂಡೇ ಬರಬೇಕು. ಒಂದು ದಿವಸದ ಸಾವಕಾಶವೆಂದರೂ ವಿಚಾರವು ವಿಪರ್ಯಾಸದಲ್ಲಿ ಪರಿಣಮಿಸಬಹುದಾದ ಸಂಭವ, ಇತ್ಯಾದಿ ಯೋಚನೆಗಳಲ್ಲಿ ಶ್ರೀರಾಮನು ಮಗ್ನನಾಗಿದ್ದಾಗ ಅನತಿದೂರದಲ್ಲಿರುವ ಪದ್ಮಕಾಸಾರದಲ್ಲಿ ವಿಹರಿಸುತ್ತಿರುವ ಹಂಸದಮೇಲೆ ದೃಷ್ಟಿಯುಬಿದ್ದು, ಸೀತೆಯ ನಡಿಗೆಯನ್ನು ಅನುಕರಿಸುವ ಅದರ ಗಂಭೀರ ಗಮನವನ್ನೂ, ಸೀತೆಯ ಶುಭ್ರವಾದ ಉಡಿಗೆಗಳನ್ನು ಹೋಲುವ ಅಥವಾ ಶುಭ್ರದುಕೂಲಗಳಂತಿರುವ ಪಕ್ಷಧಾವಳ್ಯವನ್ನೂ, ಸೀತೆಯ ಕಾಲಂದಿಗೆಯ ಝುಣತ್ಕಾರವನ್ನು ಹೋಲುವಂತಿರುವ ಧ್ವನಿಯನ್ನೂ ಕೇಳಿ, ನೋಡಿ ಸೀತೆಯನ್ನು ಜ್ಞಾಪಿಸಿಕೊಂಡು:—

ತಸ್ಮಿನ್ ಸೀತಾಗತಿಮನುಗತೇ ತದ್ದುಕೂಲಾಂಕಮೂರ್ತೌ
ತನ್ಮಂಜೀರಪ್ರತಿಮನಿನದೇನ್ಯಸ್ತನಿಷ್ಪಂದದೃಷ್ಟಿಃ
ಧೀರಶ್ಚೇತೋವಿಲಯಮಗಮತ್ತನ್ಮಯತ್ವಾನ್ಮುಹೂರ್ತಂ
ಶಂಕೇತೀವ್ರಂಭವತಿಸಮಯೇಶಾಸನಂ ಮಾನಕೇತೋಃ ||

ಎಂಬಂತೆ ಮುಹೂರ್ತಕಾಲ ವಿರಹಸ್ತಬ್ಧನಾಗಿದ್ದರೂ, ಧೀರಚೇತನನಾದ ಶ್ರೀರಾಮನು ಅಂತಹ ಚಿತ್ತವಿಭ್ರಮಕ್ಕೆ ಅವಕಾಶಕೊಡದೆ ಇರುವನು. ಮೇಘಸಂದೇಶದ ಯಕ್ಷನು ವರ್ಷಾಕಾಲದ ಮೇಘವನ್ನು ನೋಡಿದ ಕೂಡಲೇ ತನ್ನ ಪ್ರಿಯತಮೆಯನ್ನು ನೆನಿಸಿಕೊಂಡು ವಿರಹಾತಿರೇಕದಿಂದ ವೈಮನಸ್ಯ ಅಧೀರನಾಗಿ ಹೋಗಿರುವನು. ಶ್ರೀರಾಮನು ಹನುಮನೊಡನೆ ಸಸೈನ್ಯನಾಗಿ ಸಮುದ್ರವನ್ನು ದಾಟಿ ಲಂಕೆಯನ್ನು ಮುತ್ತಿ ರಾಕ್ಷಸರನ್ನು ನಿರ್ಮೂಲವಮಾಡಿ ಸೀತೆಯನ್ನು ಬಿಡಿಸಿಕೊಂಡು ಹೋಗುವುದಾಗಿ ಹೇಳಿಕಳುಹಿಸಿದ ಶ್ರೀರಾಮ ಸಂದೇಶವನ್ನೂ ಹೇಳಿ ಬಂದ ಆಂಜನೇಯನಿಗಿಂತಲೂ ಅನೇಕ ವಿಚಾರಗಳಲ್ಲಿ ಸೀತೆಯನ್ನು ಹೋಲುವುದಾದ ಹಂಸವನ್ನು ಪ್ರೀತಿಸುವುದು ಸ್ವಾಭಾವಿಕವಾದುದಾಗಿಯೇ ಇದೆ. ಅಲ್ಲದೆ ಈ ಹಂಸವು ತನ್ನ ಸಂದೇಶವನ್ನು ಸೀತೆಯಬಳಿಗೆ ಹೋಗಿ ಹೇಳಬಲ್ಲುದೇ ಹೇಗೆಂಬ ವಿಚಾರದಲ್ಲಿ ಸಂಶಯಗೊಂಡವನಾಗದಿದ್ದುದರಿಂದಲೇ:—

ವಿಶ್ಲೇಷೇಣಕ್ಷುಭಿತಮನಸಾಂ ಮೇಘಶೈಲದ್ರುಮಾದೌ
ಯಾಚ್ಞಾದೈನ್ಯಂಭವತಿಕಿಮುತಕ್ಷ್ಮಾಪಿಸಂವೇದನಾರ್ಹೇ ||

ಎಂದು ಹೇಳಿಕೊಂಡಿರುವನು. ಕಾಳಿದಾಸನು ನಿರ್ಜೀವವಸ್ತುವಾದ ಮೇಘವನ್ನು ದೌತ್ಯಕ್ಕೆ ಪ್ರಾರ್ಥಿಸಿಕೊಂಡಿರುವಂತೆ ವಿರಹಸಂತಪ್ತನಾದ ಶ್ರೀರಾಮನು ರಾಮಾಯಣದಲ್ಲಿ ಪರ್ವತಗಳನ್ನೂ ಮರಗಳನ್ನೂ ಕುರಿತು ಪ್ರಾರ್ಥಿಸಿರುವಂತೆ ಕಂಡುಬರುವುದು.

ಕಚ್ಚಿತ್‌ಕ್ಷಿತಿಭೃತಾಂನಾಥ ದೃಷ್ಟಾಸರ್ವಾಂಗಸುಂದರೀ
ರಾಮಾರಮ್ಯೇವನೋದ್ದೇಶೇ ಮಯಾವಿರಹಿತಾತ್ವಯಾ ||

ಎಂದು ಪರ್ವತಗಳನ್ನೂ,

ಕದಂಬಯದಿಜಾನೀಷೇ ಹಂಸಸೀತಾಂಶುಭಾನನಾಂ
ಯದಿಕಾಲತ್ವಯಾದೃಷ್ಟಾ ಪಕ್ವತಾಲಫಲಸ್ತನೀ ||

ಎಂದು ಮರಗಳನ್ನೂ ಕೇಳಿಕೊಂಡಿರುವದು ವರ್ಣಿತವಾಗಿರುವುದು. ಆದರೆ ಹಂಸಸಂದೇಶದಲ್ಲಿ ಹೀಗಿರುವುದಿಲ್ಲ. ಇಲ್ಲಿ ಹಂಸವು ಜೀವಸಹಿತವಾಗಿರುವದು. ಆ ಪ್ರಾಣಿಗೆ ಸಂವೇದನಾರ್ಹತೆಯು ಇದ್ದೇ ಇರುವುದು. ಹೇಗೆಂದರೆ ರಾಮಾಯಣದಲ್ಲಿ ಶ್ರೀರಾಮನು ವನ್ಯಮೃಗಪಕ್ಷಿಗಳನ್ನೂ ನೋಡಿ ತನ್ನ ಪ್ರಿಯತಮೆಯಾದ ಸೀತೆಯನ್ನು ಎಲ್ಲಿಯಾದರೂ ನೋಡಿದಿರಾ ನೋಡಿದಿರಾ ಎಂದು ಬಗೆಬಗೆಯಾಗಿ ಹಂಬಲಿಸಿ ಕೇಳಿದುದಕ್ಕೆ ಅವು ಸೀತೆಯನ್ನು ನೋಡದಿದ್ದರೂ ಸೀತಾನ್ವೇಷಣ ತತ್ಪರನಾದ ರಾಮನಿಗೆ ಶರೀರದ ಚಲನದಿಂದ ಸೀತೆಯನ್ನು ನೋಡಿದುದಾಗಿ ತೋರ್ಪಡಿಸಿಕೊಂಡು ವಿರಹದುಃಖಿಯಾದ ಶ್ರೀರಾಮನಿಗೆ ಸಹಾಯವನ್ನು ಮಾಡಲಿಲ್ಲವೇ!

ಏವಮುಕ್ತಾನರೇಂದ್ರೇಣ ತೇಮೃಗಾಸ್ಸಹಸೋತ್ಥಿತಾಃ
ದಕ್ಷಿಣಾಭಿಮುಖಾಸ್ಸರ್ವೇ ದರ್ಶಯಂತೋನಭಸ್ಥಲಂ
ಮೈಥಿಲೀಹ್ರಿಯಮಾಣಾಸು ದಿಶಂಯಾಮನ್ವಪದ್ಯತ ||

ಹಂಸಸಂದೇಶಕಾರನು ಎಂದು 'ಹೇಳಿರುವುದರಿಂದ, ರಾಮನು ಹಂಸದಲ್ಲಿ ಒಂದು ವಿಧವಾದ ಅವ್ಯಾಜಬಂಧುತ್ವವನ್ನಾರೋಪಿಸಿ ಹಂಸವನ್ನು ಪ್ರಾರ್ಥಿಸಿರುವನೆಂಬುದು ಸಯುಕ್ತಿಕವೆಂದೂ ಶ್ರೀರಾಮನು ಹಂಸವನ್ನು ಕುರಿತು ಲಂಕೆಗೆ ಹೋಗಬೇಕಾದ ಗುರುತರಕಾರ್ಯವು ಇರುವುದೆಂದೂ ಇನ್ನೂ ದಕ್ಷಿಣಾಭಿಮುಖವಾಗಿ ಪದ್ಮಕಾಸಾರಗಳನ್ನರಸುತ್ತಾ ಹೋಗಲು ಎಲ್ಲಿಯಾದರೂ ಅತ್ಯಂತ ದಕ್ಷಿಣಭಾಗವು ರಾಕ್ಷಸರಿಂದ ಆವೃತವಾಗಿರುವುದೆಂದೂ, ಅಲ್ಲಿಗೆ ಹೋಗಬಾರದೆಂದೂ, ಹಾಗೆ ಒಂದು ವೇಳೆ ಹೋಗುವದಾದರೆ ತನ್ನ ಕಾರ್ಯವು ಕೆಡುವುದಲ್ಲದೆ ಹಂಸದ ಬುದ್ಧಿಯು ಮಾರ್ಪಟವಾಗಬಹುದಾಗಿ ಶಂಕಿಸಿ:—

ಸ್ಥಾನ್ಯೈರ್ದಿವ್ಯೈರುಪಚಿತಗುಣಾಂ ಚಂದನಾರಣ್ಯರಮ್ಯಾಂ
ಮುಕ್ತಾಸೂತಿಂಮಲಯಮರುತಾಂ ಮಾತರಂದಕ್ಷಿಣಾಶಾಂ
ಅಸ್ಮತ್ಪ್ರೀತ್ಯೈಜನಕತನಯಾ ಜೀವಿತಾರ್ಥಂಚಗಚ್ಛೇ
ಏಕಂರಕ್ಷಃ ಪದಮಿತಿಸಖೇ ದೋಷಲೇಶಂಸಹೇಥಾಃ || ಹಂ. ಸಂ ೯.

ಎಂದು ಹಂಸವನ್ನು ಕುರಿತು ಪ್ರಾರ್ಥಿಸಿ ಹೇಳಿಕಳುಹಿಸುವುದು "ಜನಕತನಯಳ ಜೀವಿತಾರ್ಥ"ಕ್ಕಾಗಿ ಹೋಗುವುದು ಪುನೀತವಾದುದಾದುದರಿಂದ ಇದರ

ಲ್ಲಾವುದಾದರೂ ದೋಷವಿರುವುದಾಗಿದ್ದರೂ "ಏಕೋಹಿದೋಷೋಗುಣಸನ್ನಿಪಾತೇ ನಿಮಜ್ಜತಿ" ಕ್ಷವಮಾರ್ಹವಾದುದುದಾಗಿಯೇ ಇರುವುದು. ಎಂದುಹೇಳಿರುವಂತೆ.

ಎಲೌ! ಹಂಸ!

ಪ್ರಕ್ಷೀಣಾಂತ್ವದ್ವಿರಹಸಮಯೇ ಜಾತಹರ್ಷಾಮಿದಾನೀಂ
ಪ್ರತ್ಯಾಯಾಸ್ಯನ್ನನುನಯಶನೈಃ ಪದ್ಮಿನೀಂ ಸ್ವಾದುವಾಚಾ ||

ಎಂಬಂತೆ ನೀನು ಹೊರಡುವ ಮೊದಲು ನಿನ್ನ ದಯಿತೆಯಾದ ಪದ್ಮಿನಿಯ ಅನುಜ್ಞೆಯನ್ನು ಪಡೆದು ಹೊರಡಬೇಕು. ಏಕೆಂದರೆ ನಿನ್ನವಿರಹದಿಂದ ಬಹುಕಾಲ ಪರಿತಪಿಸುತ್ತಿದ್ದು ಈಗತಾನೇ ಬಂದಿರುವ ಹಂಸರಾಜನಿಂದ ವಿಯೋಗವನ್ನನುಭವಿಸಬೇಕಾದುದಲ್ಲಾ ಎಂದು ದುಃಖಿಸುವ ಪದ್ಮಿನಿಗೆ ಉಪಾಯಾಂತರದಿಂದ ಸಾಧ್ಯವಾದಷ್ಟು ಜಾಗ್ರತೆಯಾಗಿ ಬಂದು ಪುನಃ ನಿನ್ನನ್ನು ಸೇರುವೆನೆಂದು ಮೆಲ್ಲನೆ ಹೇಳುವನಾಗು. ಹೀಗೆಹೇಳುವುದಾದರೆ ಪದ್ಮಿನಿಯು ಬಹುಕಾಲಕ್ಕೆ ಬಂದುಸೇರಿದ ಸ್ವಾಮಿಯನ್ನು ಇಷ್ಟುಜಾಗ್ರತೆಯಾಗಿ ಬಿಟ್ಟುಕೊಡುವಳೇ ಹೇಗೆ? ಎಂದು ಅನುಮಾನ ಬಂದರೆ ಶ್ರಿರಾಮನಿಗೆ ಈ ವಿಚಾರದಲ್ಲಿ ಸಂದೇಹವೇ ಇಲ್ಲ. ಏಕೆಂದರೆ.—

ಸಾಕೇತಂತ್ರೀಸ್ವನಸುಭಗಯಾ ಸ್ಯಾದಿತೀಹ್ಯಾಪ್ಯನುಜ್ಞಾಂ
ಮನ್ಯೇಕುರ್ಯಾನ್ಮಧುಕರಗಿರಾಮ್ಮೈಥಿಲೀಸೌಹೃದೇನ ||

ಎಂಬಂತೆ ಹಂಸದಪ್ರಣಯಿನಿಯುಪದ್ಮಿನಿ. ಸೀತೆಯೂ ಪದ್ಮಿನಿ, ಪದ್ಮಜೆ, ಮತ್ತು ಪದ್ಮಾಲಯೆ. ಆದುದರಿಂದ ಇವರಿರ್ವರಿಗೂ ಪರಸ್ಪರ ಮೈತ್ರಿಯು ಹುಟ್ಟಿರಲೇಬೇಕು. ಪ್ರಾಯಕವಾಗಿ ಹೆಂಗಸರ ಕಷ್ಟವನ್ನು ಹೆಂಗಸರು ಅರಿತು ಮರುಕಗೊಳ್ಳುವಂತೆ ಗಂಡಸರು ಅರಿತುಕೊಳ್ಳಲಾರರು. ಸ್ತ್ರೀಹೃದಯುವನ್ನು ಸ್ತ್ರೀಯೇಕಂಡು ಹಿಡಿದು ಮೆಚ್ಚುವಳು. ಆದುದರಿಂದಲೇ ಯಕ್ಷನು ಮೇಘನನ್ನುಕುರಿತು ಉಜ್ಜಯಿನಿಯಲ್ಲಿ ತಮ್ಮ ತಮ್ಮ ವಿಟರನ್ನು ಬೆರೆಯಲು ಸಂಕೇತಸ್ಥಳವನ್ನುಕುರಿತು ಸಾರುತ್ತಿರುವ ಅಭಿಸಾರಿಕೆಯರನ್ನು ಎಲೈ! ಮೇಘವೆ! ನಿನ್ನ ಗುಡುಗಿನ ಗರ್ಜನೆಯಿಂದ ಹೆದರಿಸಕೂಡದೆಂದೂ, ಗಾಡಾಂಧಕಾರದಲ್ಲಿ ಮಾರ್ಗಕ್ರಮಣಮಾಡಲು ಮಾರ್ಗ ದೊರಕದೇ ಹೋಗುವುದರಿಂದ ಅಂತಹರ ಬಳಿಗೆ ನಿನ್ನಭಾರ್ಯೆಯಾದ ಮಿಂಚನ್ನು ಸಹಾಯಕ್ಕೆ ಕಳುಹಿಸಿಕೊಡಬೇಕೆಂತ ಪ್ರಾರ್ಥಿಸಿಕೊಂಡಿರುವನು. ಹೀಗೆ ಅಪರಿಚಯ ಪಾಂಥಸ್ತ್ರಿಯರ ವಿಚಾರದಲ್ಲಿ ಇಷ್ಟು ಪ್ರೀತಿಯು ಇರುವಾಗ ಕೇವಲ ರಕ್ತಸಂಬಂಧಿಗಳನ್ನು ಪ್ರೀತಿಸುವುದು ಸ್ವಾಭಾವಿಕವಾದುದಾಗಿಯೇ ಇರುವುದು. ಇದಲ್ಲದೆ ಲೋಕದಲ್ಲಿ ತಮ್ಮ ಪ್ರೀತಿಪಾತ್ರರಾದ ಮಕ್ಕಳನ್ನು ಬಹುದೂರದೇಶಕ್ಕೆ ಅಥವಾ ಅಪರಿಚಯಸ್ಥಳಕ್ಕೆ ಕಳುಹಿಸಿಕೊಡಬೇಕಾದ ಸಂದರ್ಭದಲ್ಲಿ ತಾಯಿತಂದೆಗಳು ಆ

ಮಕ್ಕಳಿಗೆ ದುರ್ಮಾರ್ಗಕ್ಕೆ ಹೋಗಕೂಡದೆಂದೂ, ಹಾಗೆ ಹೋದರೆ ಹಾನಿತಟ್ಟದೆ ಇರದೆಂದೂ ಬುದ್ಧಿವಾದವನ್ನು ಹೇಳುವಂತೆ ಶ್ರೀರಾಮನು ಹಂಸವನ್ನು ಕುರಿತು :—

ಉದ್ಗ್ರೀಯೋಧಾಸ್ಸರಸಿಜವನಾದ್ದಕ್ಷಿಣಾಶಾನುಸಾರೀ
ಪರ್ಯಕ್ದೂರಾತ್ ಪ್ರಬಲಗರುತಾಂ ಪಕ್ಷಿಣಾಂದತ್ತವರ್ತ್ಮಾ ॥

ಎಂದು ಹೇಳಿಕಳುಹಿಸಿರುವನು. (ಇಲ್ಲಿ ಶ್ರೀರಾಮನಿಗೆ ತನ್ನ ಕಾರ್ಯವು ಕೆಡುವುದೆಂಬ ಭಯ. ಅಲ್ಲದೆ, ಅರಿಯದಸ್ಥಳಕ್ಕೆ ಕಳುಹಿಸಿದನೆಂಬ ಅಪವಾದ ಭಯ.)

ಎಲೈ ! ಹಂಸವೆ ! ನೀನು ಮಲಯ ಪರ್ವತದಿಂದ ಹಾರಿಹೋಗುವಾಗ ಮಾರ್ಗವಲ್ಲಿ ಕಂಡುಬರುವ ವಿನೋದಗಳನ್ನು ನೋಡುತ್ತಾ ಹಳ್ಳಿಯಪಾಮರಿಯರು “ಸಭ್ರೂಭಂಗೇಷ್ವಧಿಕ ಸುಭಗೈರ್ನಿಶ್ಚಿತಾಂಗಃ ಕಟಾಕ್ಷೈಃ” “ಭ್ರೂವಿಲಾಸಾನಭಿಜ್ಞೈಃ” “ಪ್ರೀತಿಸ್ನಿಗ್ಧೈರ್ಜನಪದವಧೂಲೋಚನೈಃ ಪೀಯಮಾನಃ” ಎಂಬಂತೆ ರೆಪ್ಪೆ ಮುಚ್ಚದೆ ನಿನ್ನನ್ನೇ ನೋಡುವರಾಗಿರಲು ಒಂದು ಕಡೆ ಆಂಧ್ರದೇಶ ಮತ್ತೊಂದುಕಡೆ ಕರ್ಣಾಟದೇಶ ಈ ಮಧ್ಯೆಹಾರಿಹೋಗುತ್ತಿರುವನಾಗಿ, ಪೈರುಪಚ್ಚೆಗಳನ್ನು ಕೆಡಿಸುವುವಾದಪಕ್ಷಿಗಳನ್ನೂ, ಕೀಟಗಳನ್ನೂ ಓಡಿಸುವುದಕ್ಕಾಗಿ ಗದ್ದೆಗಳನ್ನು ಕಾಯುತ್ತ ಮಾಮರಗಳಡಿಯಲ್ಲಿ ಮಲಗಿ ಸುಖಪಾರವಶ್ಯದಿಂದ ಹಾಡುತ್ತಿರುವ ಹಳ್ಳಿಯ ಹುಡುಗಿಯರ ಗಾನವನ್ನು ಕೇಳುತ್ತ ಅಲ್ಲ ಕಾಣಬರುವ ತಿರುಪತಿಯನ್ನು ಸಾರ್ಮ ಶೇಷಾದ್ರೀಶನಾದ ವೆಂಕಟೇಶ್ವರನನ್ನು ನಮಿಸಿ ಸ್ತುತಿಸಿ (ಹೊರಡುವಾಗ ಕುಲದೈವವನ್ನು ಸ್ತುತಿಸಿ ಕೈಗೊಂಡಕಾರ್ಯವು ಜಯಪ್ರದವಾಗಲೆಂದು ಪ್ರಾರ್ಥಿಸಿ ಪ್ರಯಾಣಮಾಡುವುದು ವಾಡಿಕೆ. ಹಾಗಲ್ಲದಿದ್ದರೆ ಕಾರ್ಯಸಿದ್ಧಿಯಾಗದಾಗಿ ಅವರ ನಂಬುಗೆ) ದಕ್ಷಿಣಕ್ಕಿರುವ ಕಾಳಹಸ್ತೀಶ್ವರನ ಅರ್ಚನೆಗಾಗಿ ದಡದಲ್ಲಿ ಬೆಳೆದಿರುವ ಪರಿಮಳ ಪೂಗಳನ್ನೆತ್ತಿಕೊಂಡು ಹೋಗುವಂತೆ ಮಂದಗಮನದಿಂದ ಪ್ರವಹಿಸುತ್ತಿರುವ ಸುವರ್ಣಮುಖರೀನದಿಯ ಸಾಂದ್ರಪುಳಿನ ಪ್ರದೇಶಗಳನ್ನು ನೋಡಿ ಆನಂದಿಸುತ್ತಾ ಆ ಮನೋಹರನೋಟದಲ್ಲಿಯೇ ಹೆಚ್ಚು ಹೊತ್ತನ್ನು ಕಳೆಯದೆ (ಹಾಗೆ ಹೆಚ್ಚಾಗಿ ಹೊತ್ತು ಕಳೆಯುವುದಾದರೆ ತನ್ನ ಉದ್ದಿಶ್ಯಕಾರ್ಯಕ್ಕೆ ಭಂಗ ಬರಬಹುದು. ಅಥವಾ ಆ ಸುಂದರನೋಟವನ್ನು ನೋಡುತ್ತ ಜಾಗ್ರತೆಯಾಗಿ ಹೊರಡಲನುವಾಗದಿರುವ ಅವನಿಗೆ ಕಾರ್ಯ ಗೌರವವನ್ನು ಜ್ಞಾಪಿಸಿ) ಕೆಲವು ಕಾಲ ಅಥವಾ ಕೊಂಚಹೊತ್ತು ವಿಹರಿಸಿ ಅಲ್ಲಲ್ಲಿತಿರುಗಾಡುತ್ತಿರುವ ಕಿರಾತರಿಗೆಸಿಕ್ಕದೆ ಶೀಘ್ರವಾಗಿ ಮುಂದಕ್ಕೆ ಪ್ರಯಾಣಮಾಡುವನಾಗು. (ಹಾಗೆ ಅಲ್ಲಿಯೇ ಹೆಚ್ಚು ಹೊತ್ತು ವಿಹರಿಸುತ್ತಿರುವೆಯಾದರೆ ಕಿರಾತರಕೈಗೆ ಸಿಕ್ಕಿ ಪ್ರಾಣಾಪಾಯವು ಒದಗುವುದಲ್ಲದೆ ತನ್ನ ಕೆಲಸವೂ ಕೈಗೂಡದೆ ಹೋಗುವುದಾದುದರಿಂದ ಎಚ್ಚರಿಕೆಯಾಗಿರು) ಈ ವಿಚಾರದಲ್ಲಿ ಕವಿಯು ಹೇಳಿರುವುದಾದ:—

"ಬಂದೀಕುರ್ಯುರ್ಯಸ್ತುಟವಸಳಯೋ ಮಾಧವಂಲಂ ಕಿರಾತಾಃ"

ಎಂಬುದು ಎಷ್ಟು ಸೊಗಸಾಗಿರುವುದು ! ಮೇಘಸಂದೇಶದಲ್ಲಿ ಹೀಗೆಹೇಳದೆ ಕವಿಯು ಮೇಘನಿಗೆ ಅನೇಕಾನೇಕ ಸುಂದರನೋಟಗಳನ್ನು ಹೇಳಿರುವನಾದರೂ ಅವನ್ನನುಭವಿಸುವುದರಿಂದುಂಟಾಗುವ ಕಾಲವಿಳಂಬವನ್ನು ಸೂಚಿಸದೆ:—

"ಮಂದಾಯಂತೇನಖಲುಸುಹೃದಾ ಮಭ್ಯುಪೇತಾರ್ಥಕೃತ್ಯಾಃ"

ಎಂದು ಸಾಧಾರಣವಾಗಿ ಹೇಳಿ ಜಾಗ್ರತೆಯಾಗಿ ಹೊರಡಬೇಕಾದ ಅಥವಾ ವಿಹರಿಸಬೇಕಾದ ವಿವೇಚನೆಯನ್ನು ಮೇಘನಿಗೇ ಬಿಟ್ಟಿರುವನು. ಅನಂತರ ಎಲೈ! ಹಂಸವೇ! ಅಲ್ಲಿಂದ ಹೊರಟು ತುಂಡೀರಮಂಡಲದ ಎಲ್ಲೆಯನ್ನು ಹೊಕ್ಕು ಭೂವಲಯದಂತಿರುವ ಕಾಂಚೀನಗರವನ್ನು ನೋಡಿ ಆನಂದಿಸಿ ಅಲ್ಲಿ ಪ್ರವಹಿಸುತ್ತಿರುವ ಸರಸ್ವತೀ ನದಿಯಲ್ಲಿ ಮಿಂದು ಶುದ್ಧಾಂತಃಕರಣನಾಗಿ ಪರಾಪರವಸ್ತುವಾದ ವರದರಾಜನನ್ನು ಸೇವಿಸುವನಾಗು. ಅಲ್ಲಿಂದ ಚೋಳ ಮತ್ತು ಪಾಂಡ್ಯದೇಶದ ಮಧ್ಯದಲ್ಲಿರುವ ಮಹಾ ಅಡವಿಯನ್ನು ನಿಶ್ಶಬ್ದವಾಗಿ ದಾಟಿ ಚೋಳದೇಶವನ್ನು ಹೊಕ್ಕು

ಕುರ್ವನ್ನಾನಾಕುಸುಮರಜಸಾಯತ್ರಚಿತ್ರಂವಿತಾನಂ
ಪೂಗಾರಣ್ಯೇ ಮೃದುವಿಚಲರ್ಯಾ ಪಾಳಿಕಾಚಾಮರಾಣಿ
ಪಾದನ್ಯಾಸಕ್ಷಮಮವಕಿರ್ರ್ಕಾಸ್ಮಿತಲಂಪುಷ್ಪಜಾಲೈಃ
ಪ್ರಾಯೋವಾಯುಃ ಅಪರಿಜನವಿಧಿಂಪಂಚಬಾಣಸ್ಯಧತ್ತೇ ॥

ಎಂಬಂತೆ ಮದನನ ಮಿತ್ರನಾದ ದಕ್ಷಿಣಾಪಥಸಮಿರಾರಣನು ರಸ್ತೆಯಲ್ಲಿ ಹೂಗಳನ್ನು ಎರಚುವುದರಿಂದಲೂ ಬೀಸಣಿಗೆಗಳಿಂದಲೂ ಛತ್ರಿಗಳೊಡನೆ ನಿನಾಗಮನವನ್ನು ನಿರೀಕ್ಷಿಸುತ್ತಿರುವನು. ಇಂತಹನಿಂದ ನೀನು ಸತ್ಕರಿಸಲ್ಪಡುವನಾಗು, ಅಲ್ಲದೆ ಮಹಾವೈಭವದಿಂದ ಹರಿಯುತ್ತಿರುವ ಕಾವೇರೀ, ದೊಡ್ಡದೊಡ್ಡ ಅಡಿಕೆಮರಗಳಿಂದ ಕೂಡಿದ ತೋಪುಗಳು ಇವುಗಳೆಲ್ಲವೂ ನಿನ್ನ ಕಣ್ಣಿಗೆ ಹಬ್ಬವನ್ನುಂಟು ಮಾಡುವುವಾಗಿರುವುವು.

ಆದುದರಿಂದ ಎಲೆ! ಹಂಸ!

ಸಹ್ಯೋತ್ಸಂಗಾತ್ಸಪರಿಮರುತಾಸಾಗರಂನೀಯಮಾನಾಂ
ಭದ್ರಾಲಾಪೈರ್ವಿಹಿತಕುಶಲಾಂ ತಾದೃಶಾನಾಂದ್ವಿಜಾನಾಂ
ಯಾಮುಷ್ಕನ್ನಾಸರಸಕುಹಳೀ ಪತ್ರಸಾತ್ಯೈರ್ನಿಶಾಂತೇ
ಮಂದಸ್ಮೇರಾಂ ಮಧುಪರಿಮಳೈರ್ವಾಸಯಂತೀವಪೂಗಾಃ ॥

ಎಂಬಂತೆ ಮೃದುಧಾಟಿಯಿಂದ ಪ್ರವಹಿಸುತ್ತಿರುವ ಸಹ್ಯಾದ್ರಿಜಾತಳಾದ ಕಾವೇರಿಯು ವಯೋವೃದ್ಧನೊಬ್ಬನ ಜತೆಯಲ್ಲಿ, ಹುಟ್ಟಿದ ಮನೆಯಿಂದ ಗಂಡನ ಮನೆಗೆ ಹೋಗುವ ವಧೂಟಿಯಂತೆ, ಅಥವಾ ಬ್ರಾಹ್ಮಣಾಶೀರ್ವಾದಮಂ ಕೊಂಡು

ಗೆಳತಿಯರಿಂದಲಂಕರಿಸಲ್ಪಟ್ಟ ಪರಿಮಳ ಪೂಗಳಿಂದಲಂಕೃತಳಾಗಿ ಹೋಗುತ್ತಿರುವ ರಮಣಿಯಂತೆ ಪ್ರವಹಿಸುತ್ತಿರುವ ಕಾವೇರಿಯನ್ನು ಸಂದರ್ಶಿಸಿ ಶ್ರೀರಂಗಕ್ಕೆ ಬಂದು ರಂಗನಾಥನ ದರ್ಶನವನ್ನು ಪಡೆದುಅಲ್ಲಿಂದ ಪಾಂಡ್ಯದೇಶಕ್ಕೆ ಹೋದರೆ ಅಲ್ಲಿ ಕಾಣುವ ತಾಮ್ರಪರ್ಣಿಯಲ್ಲಿ ಸ್ನಾನಮಾಡಿ ಅದರ ಮಳಲೊಡ್ಡುಗಳಲ್ಲಿ ಕೊಂಚ ವಿಶ್ರಾಂತಿಯನ್ನು ಹೊಂದುವನಾಗು.

ಕಾಳಿದಾಸನು ಹೇಳುವ ಯಕ್ಷನಿಗೆ, ತಾನು ಹೇಳುವ ಸ್ಥಳಗಳ ವಿಚಾರವು ಸಂಪೂರ್ಣವಾಗಿ ಗೊತ್ತಿದ್ದುದರಿಂದ ಅಲಕಾವತೀ ಪತ್ತನದ ಸೊಬಗು, ನಗರ ಸಾಗರ, ಹರ್ಮ್ಯೋದ್ಯಾನ, ತಟಾಕ, ವಾಪೀಕೂಪಾದಿಗಳನ್ನು ಬೇಕಾದುದಕ್ಕಿಂತಲೂ ಹೆಚ್ಚಾಗಿ ವರ್ಣಿಸಿರುವನು. ಆದರೆ ಶ್ರೀರಾಮನಿಗೆ ಲಂಕೆಯೆಂಬುದೊಂದು ಇರುವು ದೆಂದೂ ಅದು ರಾಕ್ಷಸರಿಂದಾವೃತವಾಗಿರುವುದೆಂದೂ ಹನುಮನಿಂದ ತಿಳಿಯು ಬಂದುದು ಹೊರ್ತು ಆ ವಿಚಾರವಾಗಿ ಹೆಚ್ಚಾಗಿ ತಿಳಿಯದು. ಲಂಕೆಯೆಂಬು ದೊಂದು ಪತ್ತನವಿರುವುದೆಂದೂ ಅಲ್ಲಿ ರಾವಣನೆಂಬ ರಾಕ್ಷಸನು ಆಳುತ್ತಿರುವ ನೆಂದೂ ಅವನು ಅಪ್ಸರೆಯರನ್ನೂ ಲೋಕಪಾಲಕರ ಹೆಂಗಳೆಯರಿಗೆ ತೊಂದರೆ ಕೊಡುತ್ತಿರುವನೆಂಬುದನ್ನು ಮಾತ್ರ ಇತರರಿಂದ ಕೇಳಿದ್ದನು. ಇದಂತಿರಲಿ, ಶಿಂಶುಪಾವೃಕ್ಷದಡಿಯಲ್ಲಿ ಕುಳಿತಿರುವ ಸೀತೆಯನ್ನು:—

ಸಾಮೋದ್ರೃಷ್ಟಿಶ್ಶಫರನಯನಾ ಸನ್ನುತಭ್ರೂಸ್ಸುಕೇಶೀ
ತನ್ವೀಟುಂಗಸ್ತನಭರನತಾತಪ್ತಜಾಂಬೂನದಾಭಾ ||

ಎಂದು ವರ್ಣಿಸಿ.

ಇತ್ಯಾದಿ ಇದೇ ಸಮಾನಾರ್ಥಪದಯೋಜನದ ಶ್ಲೋಕವು ಮೇಘಸಂದೇಶ ದಲ್ಲಿ ಕಂಡುಬರುವುದು. ಅದು ಹೀಗಿರುವುದು.

ತನ್ವೀಶ್ಯಾಮಾಶಿಖರಿದಶನಾಪಕ್ವಬಿಂಬಾಧರೋಷ್ಠೀ
ಮಧ್ಯೇಕ್ಷಾಮಾಚಕಿತಹರಿಣೀಪ್ರೇಕ್ಷಣಾನಿಮ್ನನಾಭಿಃ ||
ಶ್ರೋಣೀಭಾರಾದಲಸಗಮನಾಸ್ತೋಕನಮ್ರಾಸ್ತನಾಭ್ಯಾಂ
ಯಾತತ್ರಾಸ್ಯಾದ್ಯುವತಿವಿಷಯೇಸೃಷ್ಟಿರಾದ್ಯೇವಧಾತುಃ ||

ಎಲೆ! ಹಂಸ! ನೀನುಹೋಗಿ ಶಿಂಶುಪಾವೃಕ್ಷದಡಿಯಲ್ಲಿ ಕುಳಿತಿರುವ ಸೀತೆ ಯನ್ನು ನೋಡುವಾಗ ಅವಳು ಯಾವುದಾದರೊಂದು ಕಾರ್ಯವನ್ನು ಮಾಡುತ್ತಿರ ಬಹುದು. ಅಥವಾ ಕಾಳಿದಾಸನು ಹೇಳುವಂತೆ:—

"ಪ್ರಾಯೇಣೈತೇರಮಣವಿರಹೇಷ್ವಂಗನಾನಾಂವಿನೋದಾಃ"

ಎಂಬಂತೆ ಆಚರಿಸುತ್ತಿರಬಹುದು. ಅಥವಾ ಎಲ್ಲಿಯೋ ದೂರದೇಶಕ್ಕೆ ಹೋಗಿ ಬಂದ ಪಕ್ಷಿಗಳನ್ನು ಕುರಿತು ಎಲೈ! ವಿಹಂಗಗಳೇ! ನೀವು ಸಂಚರಿಸಿದ ಸ್ಥಳಗಳಲ್ಲಿ ನನ್ನ ರಾಮನನ್ನು ಕಾಣಿರಾ! ಕಾಣಿರಾ! ಎಂದು ಅಂಗಲಾಚಿ ಕೇಳುತ್ತಿರಬಹುದು.

ಅಥವಾ ಆಂಜನೇಯನು ಹೇಳಿಬಂದಂತೆ ಶ್ರೀರಾಮನು ಸಸೈನ್ಯನಾಗಿ ಬರುತ್ತಿರಬಹುದಾಗಿ ಭಾವಿಸಿ ಉತ್ತರದಿಕ್ಕಿನಕಡೆಗೆ ನೋಡುತ್ತಿರಬಹುದು. ಅಥವಾ ಅವಳ ಮೈಮೇಲಣ ಆಭರಣಗಳನ್ನು ನೋಡಿ ರಾಮನ ಸ್ಪರ್ಶಸುಖವಿಚಾರವಾಗಿ ಕೇಳುತ್ತಿರಬಹುದು ಅಥವಾ ಹಿಂದೆ ತಾನುಅನುಭವಿಸಿದ ಸುಖಸಂಕಥಾವಿನೋದಗಳನ್ನು ಜ್ಞಾಪಿಸಿಕೊಳ್ಳುತ್ತಿರಬಹುದು ಅಥವಾ

ಶುದ್ಧಮಿಂದೋಃಶ್ವಪಚಭವನೇ ಕೌಮುದೀವಿಸ್ಫುರಂತೀ
ಮಾನೀತಾಂವಾವಿಷದಭುವನೇ ಪಾರಿಜಾತಸ್ಯ ಶಾಖಾಂ ||

ಅಥವಾ

ಸೂಕ್ತಿಂರಮ್ಯಾಂಖಲಪರಿಸರೇ ಸತ್ಕವೇಃ ಕೀರ್ತ್ಯಮಾನಾಂ
ವರ್ಷಾಕೀರ್ಣಾಮಿವಕಮಲಿನೀ ವ್ಯಾಹತಾರ್ಥಾಮಿವೋಕ್ತಿಂ
ಪಂಕಾಶ್ಲಿಷ್ಟಾಮಿವಬಿಸಲತಾಂ ಪಕ್ವವೇತಾವಿವೇಭೀಂ
ಮೇಘಚ್ಛನ್ನಾಮಿವ ಶಶಿಕಲಾಂವಿಪ್ಲುರುದ್ಧಾಭಿವಾಸಾಂ

ಅಥವಾ

ವ್ಯಾಘ್ರೀವೇತಾಮಿವಶಶವಧೂಂಭೂತಲೇಜ್ಯಾಮಿವಾಸ್ತಾಂ ||

ಎಂಬತೆ ಕಣ್ಣುಮುಚ್ಚಿಕೊಂಡು ತನ್ನ ಆತ್ಮಾರಾಮನನ್ನು ಮನದಲ್ಲಿ ಚಿತ್ರಿಸುತ್ತಿರಬಹುದು ಅಥವಾ ಹಾಗೆ ಚಿತ್ರಿಸಿ ನೋಡಿನೋಡಿ ಕೊಂಚಕೊಂಚವಾಗಿ ಸುಯ್ಗರೆಯುಬಹುದು. ಈ ಸಂದರ್ಭದಲ್ಲಿ ಮಹಾಕವಿಕಾಳಿದಾಸನ ಯಕ್ಷನು ದೂತನಾದ ಮೇಘನನ್ನು ಕುರಿತು ಇಂತಹ ಸಂದರ್ಭದಲ್ಲಿ "ಯಾಮಮಾತ್ರಂಸಹಸ್ವ" (ಕೆಲವುಕಾಲದವರೆಗೆ ಕಾದಿರಬೇಕಾಗಿ) ಎಂದು ಪ್ರಾರ್ಥಿಸಿರುವನು. ಹಾಗಿಲ್ಲದಿದ್ದರೆ ಅವಳ ಸ್ವಪ್ನಾನುಭವದ ಸೌಖ್ಯಕ್ಕೂ ವಿಚ್ಛೇದನ ಉಂಟಾಗಬಹುದು ಎಂದು ಹೀಗೆ ಹೇಳಿರುವನು. ಹಂಸಸಂದೇಶಕಾರನಾದರೋ:—

ಮಾಭೂದಸ್ಯಾಃ ಪ್ರಣಯಿನಿಮಯಿ ಸ್ವಪ್ನಲಬ್ಧೇಕಥಂಚಿತ್
ಸದ್ಯಃಕಂಠಚ್ಯುತಭುಜಲತಾಗ್ರಂಧಿಗಾಢೋಪಗೂಢಂ ||

ಎಂದು ಹೇಳಿ.

ಎಲೈ! ಹಂಸ! ಹೀಗೆ ಇರುವ ಸೀತೆಯನ್ನು ನೋಡಿ "ನಿದ್ರಾಸಮಯಮುಚಿತಂ ವೀಕ್ಷ್ಯನಕ್ತಂಚರೀಣಾಂ" ಎಂಬಂತೆ ರಾಕ್ಷಸರು ಹಗಲೆಲ್ಲವೂ ಮಲಗಿ ರಾತ್ರಿಯೆಲ್ಲವೂ ಎದ್ದಿರುವರಾದುದರಿಂದಲೂ, ನೀನು ಹೋಗುವ ವೇಳೆಗೆ ಸಂಧ್ಯಾಕಾಲವಾಗುವುದಾದುದರಿಂದಲೂ, ನೀನು ರಾಕ್ಷಸರಿಗೆ ಕಾಣಿಸಿಕೊಳ್ಳದಹಾಗೆ ಎಲ್ಲಿಯಾದರೂ ಅಕ್ಕಪಕ್ಕದ ಕಾಸಾರದಲ್ಲಿ ಆ ರಾತ್ರಿಯನ್ನು ಕಳೆದು, ಪ್ರಾತಃಕಾಲದಲ್ಲಿ ಎದ್ದು ಯಾರಿಗೂ ಕಾಣಿಸಿಕೊಳ್ಳದಂತೆ ನೀನು ಬಂದುದನ್ನು ಸೀತೆಗೆ ತಿಳಿಸುವುದಕ್ಕಾಗಿ ದಶರಥ ಮತ್ತು ಜನಕರಾಜನ ವಂಶಾವಳಿಯನ್ನು ಗಾನಮಾಡು. (ಹನುಮನೂ ಹಿಂದೆ ಹಾಗೆ ಮಾಡಿದ್ದನು) ಅವಳು ನಿನ್ನ ಗಾನವನ್ನು ಕೇಳಿ ನಿನ್ನನ್ನು

ನೋಡುವಳು. ಅನಂತರ ನಿಧಾನವಾಗಿ ನೀನು ಬಂದಕಾರ್ಯವನ್ನು ಅವಳೊಡನೆ ಹೇಳಿ ಶ್ರೀರಾಮನು ಸಸೈನ್ಯನಾಗಿ ಈಗಲೇ ಹೊರಟುಬಂದು ರಾಕ್ಷಸರನ್ನು ಕೊಂದು ನಿನ್ನನ್ನು ಖಂಡಿತವಾಗಿಯೂ ಕರೆದುಕೊಂಡು ಹೋಗುವವನಾಗಿದಾನೆಂದು ತಿಳಿಸುವವನಾಗು. ಹಾಗೆ ನೀನು ಎಲ್ಲಾ ವಿಚಾರಗಳನ್ನೂ ತಿಳಿಸುವಮೊದಲು ಹನುಮನು:-

ವೈದೇಹಿ! ಕುಶಲೀರಾಮಸ್ತ್ವಾಂಚ ಕೌಶಲಮಬ್ರವೀತ್

ಎಂದು ಹೇಳಿದಂತೆ.

ಭವತೀಭಾಗಧೇಯೋನಜೀವನ್

ಕಲ್ಯಾಣೀತ್ವಾಂ ಕುಶಲಮನಘಃ ಕೋಶಲೇಂದ್ರೋನುಯುಂಕ್ತೆ ||

ಎಂಬಂತೆ ಈಗಲೂ ಶ್ರೀರಾಮನು ಕುಶಲನಾಗಿರುವನೆಂಬುದನ್ನು ಮರೆಯದೆ ಹೇಳು. ಆಗ ಅವಳಿಗೆ ಇತರ ವಿಷಯಗಳನ್ನು ತಿಳಿದುಕೊಳ್ಳುವ ಕುತೂಹಲವು ಹುಟ್ಟುವುದು. ಆದುದರಿಂದ ನೀನೂ ಹಾಗೆ ಮಾಡುವನಾಗು. ಎಂದು ಹೇಳಿ ದೌತ್ಯಸಂಭಾವನಾರೂಪವಾದ:—

ಸ್ವೈರಂಲೋಕಾನ್ವಿಚರನಿಖಿಲಾನ್ ಸೌಮ್ಯಲಕ್ಷ್ಮ್ಯೇವವಿಷ್ಣುಃ

ಸ್ವರ್ವಾಕಾರೈಸ್ತ್ವದನುಗುಣಯಾಸೇವಿತೋ ರಾಜಹಂಸ್ಯಾಃ ||

ಎಲೈ ಹಂಸವೇ! ನೀನು ಹೀಗೆ ಸಮಸ್ತಲೋಕಗಳನ್ನು ಸಂಚರಿಸುವನಾಗಿ ವಿಷ್ಣುವು ಹೇಗೆ ಲಕ್ಷ್ಮಿಯಿಂದ ಯಾವಾಗಲೂ ಸೇವಿಸಲ್ಪಡುತ್ತಿರುವನೋ ಹಾಗೆ ನೀನೂ ಯಾವಾಗಲೂ ರಾಜಹಂಸಿಯಿಂದ ಸೇವಿಸಲ್ಪಡುವನಾಗುತ್ತಿರು. ಎಂದು ಮಂಗಳಾಶಾಸನ ಮಾಡಿ ಕಾವ್ಯವನ್ನು ಮುಗಿಸಿರುವನು. ಯಕ್ಷನಹೇಳಿಕೆಯಲ್ಲಿ ಇಷ್ಟು ಖಂಡಿತವಿಲ್ಲ. ಅದು ನಿಷೇಧಾರ್ಥದಲ್ಲಿ ಹೇಳಿದೆ. ನಾಯಕನು ವಿರಹ ದುಃಖದಿಂದ ಬಳಲಿದವನಾದುದರಿಂದ:—

ಮಾಭೂದೇವಂ ಕ್ಷಣಮಪಿಚತೇ ವಿದ್ಯುತಾವಿಪ್ರಯೋಗಃ ||

ಎಂದು ಹೇಳಿ ಕಾವ್ಯವನ್ನು ಮುಗಿಸಿರುವನು.

**ಸಂಕಲ್ಪಸೂರ್ಯೋದಯ:**—ಇದರಲ್ಲಿ ಹತ್ತು ಅಂಕಗಳಿರುವುವು. ವೆಂಕಟನಾಥನು ಕೃಷ್ಣಮಿಶ್ರನ ಪ್ರಬೋಧಚಂದ್ರೋದಯ ನಾಟಕವನ್ನು ನೋಡಿ ಭಿನ್ನಭಿನ್ನ ಮನೋವೃತ್ತಿಯ ಜನರನ್ನು ಭಿನ್ನಭಿನ್ನರಸೋತ್ಪಾದನದಿಂದ ಏಕಕಾಲದಲ್ಲಿ ಸಂತೋಷಗೊಳಿಸುವುದು ನಾಟಕವೆಂದೂ

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಽಪ್ಯೇಕಂಸಮಾರಾಧನಂ ೧

ಎಂಬ ಕಾಳಿದಾಸೋಕ್ತಿಯನ್ನು ನೆನೆದು ಅಂತಹುದಾದ ಒಂದು ನಾಟಕವನ್ನು ಬರೆಯುವುದರ ಮೂಲಕ ವಿಶಿಷ್ಟಾದ್ವೈತಪ್ರಕ್ರಿಯೆಗಳನ್ನು ಸಕಲರ ಅವಗಾಹನೆಗೆ ತರಲುಜ್ಜುಗಿಸಿ ಹಾಗೆಯೇ ನಾಟಕವನ್ನು ಬರೆದು ಅದನ್ನು ಸಂಕಲ್ಪ

ಸೂರ್ಯೋದಯವೆಂದು ಕರೆದಿರುವನು. † ಈ ಹೆಸರಿನ ಕಲ್ಪನೆಗೆ "ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತಚ್ಛೇಷಗತ್ಯನು ಸ್ಮೃತಿಯೋಗಾಚ್ಚ ಹಾರ್ದಾನು ಗೃಹೀತಃ ಶತಾಧಿಕಯಾ" ಎಂಬ ಬಾದರಾಯಣಸೂತ್ರವು ಮೂಲವಾಗಿರಬೇಕಾಗಿತೋರುತ್ತದೆ. ಅಲ್ಲದೆ ಪ್ರಾಚೀನಗ್ರಂಥಗಳಲ್ಲಿ ಈ ಸಂಸಾರವು ರಾತ್ರಿಯೆಂದೂ ತಮಸ್ಸೆಂದೂ ವರ್ಣಿತವಾಗಿದೆ. ಸಂಪೂರ್ಣಚಂದ್ರೋದಯವು ತಮೋಕರವನ್ನೋಡಿಸಬಲ್ಲುದಾದರೂ ರಾತ್ರಿಯನ್ನು ನಿರ್ಮೂಲ ಮಾಡುವ ಶಕ್ತಿಯು ಸೂರ್ಯನಿಗೆ ಹೊರ್ತು ಮತ್ತಾರಿಗೂ ಶಕ್ಯವಲ್ಲವಾದುದರಿಂದ ಸಂಸಾರವೆಂಬ ರಾತ್ರಿಯು ಈಶ್ವರಾನುಗ್ರಹವೆಂಬ ಸಂಕಲ್ಪಸೂರ್ಯೋದಯದಿಂದ ನಾಶಮಾಡಲ್ಪಡುವುದೆಂಬುದನ್ನು ತನ್ನ ನಾಟಕದ ಮಂಗಳಾಚರಣದಲ್ಲಿ:—

"ಯದ್ಭಕ್ತಿಪ್ರಚಯಾತ್ಮಕೇದಿಸವಪುಃಶೇದೃಷ್ಟಿಕ್ಷಮಃಕ್ಷೇತ್ರಿಣಃ
ಕ್ಷಿಪ್ರಂಸಂಸೃತಿಶರ್ವರೀಂ ಕ್ಷಪತಿಯತ್ಸಂಕಲ್ಪಸೂರ್ಯೋದಯಃ
ತತ್ತ್ವೈರಸ್ತ್ರವಿಭೂಷಣೈರಧಿಗತಸ್ವಾಧೀನ ನಿತ್ಯೋನ್ನತಿಃ
ಶ್ರೀಮಾನಸ್ತು ಸಮೇಸಮಸ್ತವಿಪದುತ್ತಾರಾಯನಾರಾಯಣಃ" ||

ಎಂದು ಹೇಳಿಕೊಂಡಿರುವನು. ವ್ಯಾಖ್ಯಾನಕಾರರು.—

ಸಂಸಾರಾಖ್ಯನಿಶೀಥಸುಪ್ತತನುಭೃತ್ಸಂಬೋಧನಾಯಾಗ್ರಣೀ
ಸ್ಸೂರೀಣಾಂನಿಬಬಂಧದೇಶಿಕವರಸ್ಸಂಕಲ್ಪಸೂರ್ಯೋದಯಂ
ಯತ್ರೈತತ್ಪರಿಚಿನ್ವತಾಂ ಸಭಗವತ್ಸಂಕಲ್ಪಸೂರ್ಯೋನಿಶಾಂ
ಮಾಯಾಂಭಾಗವತೀಂ ವಿಮೋಕ್ಷ್ಯವಿಮಲಾಂಧತ್ತೇ ದೃಶಂಶಾಶ್ವತೀಂ" ||

ಎಂದು ಸಮರ್ಥಿಸಿರುವುದು ಕಂಡು ಬರುತ್ತದೆ.—

"ಇಹಸಂಕಲ್ಪಸೂರ್ಯೋದಯೇ ಮಹಾನಾಟಕೇ ಸಕಲಶಾರೀರಕ ಶಾಸ್ತ್ರಾರ್ಥ ಸಂಗ್ರಹೀತಃ. ಶಾರೀರಕಶಾಸ್ತ್ರಾರ್ಥಶ್ಚಪಂಚವಿಧಃ. ಸ್ವಸಿದ್ಧಾಂತಸ್ಥಾಪನಂ ಪ್ರಥಮಂ, ತತಸ್ತತ್ಪ್ರತಿಪಕ್ಷನಿರಾಸಃ, ತತಸ್ತದುಕ್ತೋಪಾಯನಿಶ್ಚಯಃ, ತತಸ್ತದ್ವಿರೋಧಿವಿಲಯಪೂರ್ವಕಮುಪಾಯಪರಿಗ್ರಹಃ, ತತೋಮೋಕ್ಷ ಪ್ರಾಪ್ತಿರಿತಿ, ಇಮೇಪಂಚಾರ್ಥಾಃ ಪಂಚಾಂಕೇಷುವಕ್ತವ್ಯಾಃ, ಅತ್ರದ್ವೈಗುಣ್ಯೇನದಶಾಂಕಾಃಪ್ರಯುಕ್ತಾಃ, ತತ್ರಪ್ರಥಮೇಂಕೇ ಸ್ವಸಿದ್ಧಾಂತಸ್ಥಾಪನಂ ದ್ವಿತೀಯೇಂಕೇಸ್ವಸಿದ್ಧಾಂತವಿರೋಧಿನಃ ಪರಸಿದ್ಧಾಂತಾಃಪ್ರತಿಕ್ಷಿಪ್ತಾಃ ತೃತೀಯೇಂಕೇತುಸ್ವಸಿದ್ಧಾಂತೋಪಾಯನಿಶ್ಚಯಃ,ಚತುರ್ಥಾದಿಷು ಅಷ್ಟಮಾಂತೇಷೂಪಾಯವಿರೋಧಿನೋ ನಿರಸ್ತಾಃ, ಉಪಾಯಪರಿಕರಾ

† ಸುಂದರದೇವನ ಮುಕ್ತಿಪರಿಣಯ, ಆನಂದರಾಯ ಮಖಿಯ ವಿದ್ಯಾಪರಿಣಯ, ರತ್ನಖೇಟ ಶ್ರೀನಿವಾಸದೀಕ್ಷಿತನ ಭಾವನಾಪುರುಷೋತ್ತಮಾ ಘನಶ್ಯಾಮನ ಪ್ರಚಂಡ ರಾಹೂದಯ ಇವು. ಈ ಜಾತಿಗೆಸೇರಿದುದು.

ಶ್ಲೋಕ್ತಾಃ, ಉಪಾಯವಿರೋಧಿನಃ ಕಾಮಕ್ರೋಧಾದಯಃ ತತ್ರಚತು ರ್ಥೇಂಕೇ, ಕಾಮಾದೀನಾಂ ಆಪಾತತಃ ಪ್ರಾಬಲ್ಯಕಥನಪೂರ್ವಕಂ ದೌರ್ಬಲ್ಯ ಪ್ರತಿಪಾದನಂ, ಪಂಚಮೇಂಕೇ ಡಂಭಾದೀನಾಂನಿರಸನೀಯ ತ್ವಖ್ಯಾಪನಂ, ಉಪಾಯಪರಿಕರಸ್ತುದ್ವಿವಿಧಃ ಸ್ಥಾನಮಾಲಂಬನಂಚೇತಿ. ತತ್ರಸಮಾಧಿ ಸ್ಥಾನಂನಿರೂಪಿತಂ ಷಷ್ಠೇಂಕೇ, ಸಪ್ತಮೇತು ಆಲಂಬನರೂ ಪಶ್ಶುಭಾಶ್ರಯೋನಿರ್ಣೀತಃ, ಅಷ್ಟಮೇಂಕೇ ಕಾಮಕ್ರೋಧಲೋಭಾದಿ ವಿಜಯಉಕ್ತಃ ನವಮೇಂಕೇವಿಜಿತವಿರೋಧನಃ ಪರಿಗೃಹೀತಸ್ಥಾನಶು ಭಾಶ್ರಯಸ್ಯ ಸಮಾಧಿರೂಪೋಪಾಯಲಾಭಉಕ್ತಃ, ದಶಮೇಂಕೇನಿಶ್ರೇ ಯಸಲಾಭಉಕ್ತಃ,ಅಯಮೇವ ಮುಮುಕ್ಷೂಣಾಮನುಷ್ಠಾನಕ್ರಮಶ್ಚ"

ಎಂಬಂತೆ ಮೇಲೆ ಹೇಳಿದವುಗಳೆಲ್ಲವೂ ಕ್ರಮವರಿತು ಪ್ರತಿಪಾದಿಸಲ್ಪಟ್ಟಿರು ವುವು. ಮೊದಲನೆಯ ಅಂಕವು ಬ್ರಹ್ಮಸೂತ್ರಭಾಷ್ಯದ ಸಮನ್ವಯಾಧ್ಯಾಯವನ್ನು ಹೋಲುತ್ತದೆ. ಇದರಲ್ಲಿ ವೇದಾಂತದ ಮುಖ್ಯತತ್ವಗಳೆಲ್ಲವೂ ಪ್ರತಿಪಾದಿಸಲ್ಪಟ್ಟಿವೆ. ಎರಡನೆಯದು ಅವಿರೋಧಾಧ್ಯಾಯವನ್ನು ಹೋಲುತ್ತದೆ. ಇದರಲ್ಲಿ ಭಿನ್ನಭಿನ್ನ ಮತಗಳ ನಿರೂಪಣವಿರುವುದು. ಮೂರರಿಂದ ಒಂಭತ್ತನೆಯ ಅಂಕಗಳಲ್ಲಿ ವೈರಾಗ್ಯ ತಪಸ್ಸು ಮೊದಲಾದ ಸಾಧನಸಾಮಗ್ರಿಯುಗಳು ಹೇಳಲ್ಪಟ್ಟಿವೆ. ಹತ್ತನೆಯ ಅಂಕ ದಲ್ಲಿ ಸಾಧನ ಮತ್ತು ಫಲಶ್ರುತಿಯು ಇರುವುದು. ಇದರ ಮುಖ್ಯರಸವು ಶಾಂತಿ ರಸ. ಎಲ್ಲಾ ರಸಗಳಿಗಿಂತಲೂ ಶ್ರೇಷ್ಠವಾದ ರಸವು ಶಾಂತಿರಸವೆಂದೂ ಅದು ಮನಸ್ಸಿನ ದುಃಖಪರಂಪರೆಯನ್ನು ಹೋಗಲಾಡಿಸಿ ಇತರ ರಸಗಳ ಉದ್ವೇಗಕ್ಕೆ ಅವಕಾಶಕೊಡದೆ ಸಮಾಹಿತಚಿತ್ತತೆಯನ್ನುಂಟುಮಾಡುವುದಾದುದರಿಂದ:— "ಶಮಸ್ತುಪರಿಶಿಷ್ಯತೇಶಮಿತಚಿತ್ತಖೇದೋರಸಃ" ಎಂದು ಹೇಳಿ ಶ್ರೀರಂಗ ಕ್ಷೇತ್ರವೇ ತಮ್ಮ ನಾಟಕಕ್ಕೆ (ರಂಗ) ವೇದಿಕೆಯೆಂದೂ ಶ್ರೀ (ರಂಗ) ನಾಥನೇ ಅಭಿ ನಯಕಾರನೆಂದೂ ಒಕ್ಕಣಿಸಿ ಮುಗಿಸಿರುವನು.

ಪ್ರಬೋಧಚಂದ್ರೋದಯದಲ್ಲಿ ದರ್ಪಣವಾಕ್ಯವು:—

ಗೌಡಂರಾಷ್ಟ್ರಮನುತ್ತಮಂ ನಿರುಪಮಾತತ್ರಾಪಿರಾಢಾಪುರೀ
**ಭೂರಿಶ್ರೇಷ್ಠಿಕನಾಮ** ಧಾಮಪರಮಂತತ್ರೋತ್ತಮೋನಃಪಿತಾ ||

ಎಂದು ಹೇಳಿರುವುದು:—

ಸಂಕಲ್ಪಸೂರ್ಯೋದಯದಲ್ಲಿ ದರ್ಪಣವಾಕ್ಯವು,

ತುಂಡೀರಂಮಂಡಲಂಮೇಕುಲಪತಿರಪಿ **ಚಸ್ಕಂದಭೂಪಾಲವಂದ್ಯಃ**
ಕ್ಷೇತ್ರಂಸತ್ಯವ್ರತಾಖ್ಯಂಕ್ಷಿತಿ ತಿಲಕನಿಭಂಕ್ಷುದ್ರಕಾಂಚ್ಯಗ್ರಹಾರಃ ||

ಎಂದಿರುವುದು. ಪ್ರಬೋಧಚಂದ್ರೋದಯದರಲ್ಲಿ 'ಭೂರಿಶ್ರೇಷ್ಠಕನಾಮ' ಎಂಬುದನ್ನು ಹೇಳಿರುವುದರಿಂದ ಧನಮದವೇ ಅಹಂಕಾರಕ್ಕೆ ಮುಖ್ಯವೆಂದು ಹೇಳಿದೆ. ಸಂಕಲ್ಪಸೂರ್ಯೋದಯದಲ್ಲಿ 'ಸ್ಕಂದಭೂಪಾಲವಂದ್ಯಃ' ಎಂಬುದನ್ನೂ ಹೇಳಿ ಉತ್ತಮಕುಲದಲ್ಲಿ ಹುಟ್ಟೋಣವು ಅಹಂಕಾರಕ್ಕೆ ಮುಖ್ಯವೆಂದು ತೋರಿಸಲ್ಪಟ್ಟಿದೆ. ದುರ್ಯೋಗದಿಂದ ಧನನಷ್ಟವಾದರೆ ಆ ಮದವೂ ಅದರೊಂದಿಗೆ ನಾಶವಾಗಿ ಹೋಗುತ್ತದೆ. ಶ್ರೇಷ್ಠಕುಲಸಂಜಾತನೆಂಬ ಮದವಾದರೋ ಆ ಮರಣಾಂತವಿರುವುದಾದುದರಿಂದ ಇದೇ ಹೆಚ್ಚಿನದೆಂದು ಹೇಳಿದೆ. ಹೀಗೆ ಪ್ರಬೋಧಚಂದ್ರೋದಯದಲ್ಲಿ ಡಂಭನವಾಕ್ಯವು:—

ಸದನಮುಪಗತೋಹಂ ಪೂರ್ವಮಂಭೋಜಯೋನೇ
ಸ್ಸಪದಿ ಮುನಿಭಿರುಚ್ಚೈರಾಸನೇಷೂಜ್ಝಿತೇಷು
ಸಶಪಥಮನುನೀಯ ಬ್ರಹ್ಮಣಾಗೋಮಯಾಂಭಃ
ಪರಿಮೃಜಿತನಿಜೋರಾ ವಾಶು ಸಂವೇಶಿತೋಸ್ಮಿ ||

ಎಂದಿರುವುದು.

ಸಂಕಲ್ಪಸೂರ್ಯೋದಯದಲ್ಲಿ ಡಂಭನ ವಾಕ್ಯವು:—

ಮಯಿಚರತಿಕದಾಚಿತ್ಸತ್ಯಲೋಕೋಪಕಂಠೇ
ಸಪದಿಸನಕ ಮುಖ್ಯೈಸ್ಸಾಕ ಮಭ್ಯುಜ್ಜಿಹಾನಃ
ಸವಿನಯನಿಭೃತಾಂಗಸ್ಸಪ್ತಶಃಕ್ಷಾಲಿತೇನ
ಸ್ವಯಮುದವಹದರ್ಘ್ಯಂಪಾಣಿನಾಪದ್ಮಯೋನಿಃ ||

ಎಂದಿರುವುದು.

ಬ್ರಹ್ಮನಮನೆಗೆ ಹೋಗಿದ್ದಾಗ ಋಷಿಗಳೆಲ್ಲರೂ ತಮ್ಮತಮ್ಮಾಸನವನ್ನು ಬಿಟ್ಟು ಎದ್ದುದಾಗಿಯೂ, ಬ್ರಹ್ಮನು ಆಣೆ ಭಾಷೆಗಳಿಂದ ಸಂತೈಸಿ ಗೋಮಯದಿಂದ ಸಾರಿಸಿದ ತನ್ನ ತೊಡೆಯಮೇಲೆ ಬ್ರಹ್ಮನು ತನ್ನನ್ನು ಕೂರಿಸಿಕೊಂಡುದಾಗಿಯೂ ಹೇಳಿದೆ. ಸಂಕಲ್ಪಸೂರ್ಯೋದಯದಲ್ಲಿ ತಾನೊಂದಾವರ್ತಿ ಸತ್ಯಲೋಕದ ಸಮೀಪಕ್ಕೆ ಹೋಗಿರುವುದನ್ನು ತಿಳಿದ ಕೂಡಲೇ ಬ್ರಹ್ಮನು ನನ್ನೆಡೆಗೆ ಜ್ಞಾನನಿಷ್ಠರಾದ ಸನಕಾದಿಗಳೊಡನೆ ಬಂದು ನನ್ನನ್ನು ಎದಿರುಗೊಂಡು ನಿವೃತ್ತಿಧರ್ಮವನ್ನಾಶ್ರಯಿಸಿ ಏಳುಸಲ ತೊಳೆದುಕೊಂಡ ಕೈಯಿಂದ ತನಗೆ ಅರ್ಘ್ಯವಿತ್ತುದಾಗಿ ಹೇಳಿರುವುದು. ಇದರಲ್ಲಿ ಬರಬೇಕೆಂಬ ಸಂಕಲ್ಪವಿಲ್ಲದೇ ಹಠಾತ್ತಾಗಿ ಎಲ್ಲಿಯೋ ಬಂದಿರುವುದನ್ನು ಕೇಳಿದ ಕೂಡಲೇ ಸನಕಾದಿಗಳೊಡನೆ ಬಂದು ಒಂದುಸಲ ತೊಳೆದಮಾತ್ರದಿಂದಲೇ ಪರಿಶುದ್ಧವಾಗಬಹುದಾದ ಕೈಯ್ಯನ್ನು ಏಳಾವರ್ತಿ ತೊಳೆದುಕೊಂಡು ಅರ್ಘ್ಯವನ್ನು ತಂದುದಾಗಿ ಹೇಳುವುದು ಡಂಭನಪರಾಕಾಷ್ಠತೆಯನ್ನು ತೋರಿಸುವು

ದಾದ ಕಾರಣ ಪ್ರಬೋಧಚಂದ್ರೋದಯದ ಹೇಳಿಕೆಗಿಂತಲೂ ಸಂಕಲ್ಪಸೂರ್ಯೋದಯದ ಹೇಳಿಕೆಯು ಚಮತ್ಕಾರವೆಂದರೆ ಹೆಚ್ಚಾಗದು. ಹೀಗೆಯೇ ಅನೇಕ ಭಾಗಗಳು ವಿಮರ್ಶಾತ್ಮಕರಿಗೂ ವಿಚಾರಪರರಿಗೂ ದೊರೆಯುವುವು. ಸಂಕಲ್ಪ ಸೂರ್ಯೋದಯದಲ್ಲಿ ಕಾಮನನ್ನು:—

" ಅರ್ಧಾವಶೇಷಿತಮಹೇಶ್ವರಪೌರುಷೋಯಂ " ಎಂದು ವಿಶೇಷಿಸಿ ಹೇಳಿರುವುದು ಎಷ್ಟು ಚೆಲುವಾಗಿರುವುದು!

ವಸಂತೋತ್ಸವವರ್ಣನಾಪರವಾದ:—

ಚೂಡಾವೇಲ್ಲಿತ ಚಾರುಹಲ್ಲಕಭರವ್ಯಾಲಂಬಿಲೋಲಂಬಕಾಃ
ಕ್ರೀಡಂತ್ಯತ್ರ ಹಿರಣ್ಮಯಾನಿದಧತಃ ಶೃಂಗಾಣ್ ಶೃಂಗಾರಿಣಃ
ತನ್ವಂಗೀಕರಯಂತ್ರಯಂತ್ರಣಕಲಾತಂತ್ರಕ್ಷರದ್ಘುಸ್ತ್ರಿಕಾ
ಕಸ್ತೂರೀಪರಿವಾಹಮೇದುರಮಿಲಜ್ಜಂಬಾಲಲಂಬಾಲಕಾಃ || ೧-೩೨

ಎಂಬ ಶ್ಲೋಕವು ರತ್ನಾವಳೀ ನಾಟಿಕೆಯ—

ಸ್ರಸ್ತಾಸ್ಸ್ರಗ್ದಾಮಶೋಭಾಂತ್ಯಜತಿವಿರಚಿತಾಮಾಕುಲಃ ಕೇಶಪಾಶಃ
ಕ್ಷೀಬಾಯಾನೂಪುರೌಚದ್ವಿಗುಣತರಮಿಮೌ ಕ್ರಂದತಃ ಪಾದಲಗ್ನೌ |
ವ್ಯಸ್ತಃ ಕಂಪಾನುಬಂಧಾದನವರತಮುರೋಹಂತಿ ಹಾರೋಽಯಮಸ್ಯಾಃ
ಕ್ರೀಡಂತ್ಯಾಃ ಪೀಡಯೇವಸ್ತನಭರವಿನಮನ್ಮಧ್ಯ ಭಾಗಾನಪೇಕ್ಷಂ ||

ಎಂಬ ಶ್ಲೋಕವನ್ನು—

ಶೈಲೀಂ ವಿಲೋಪಯತಿ ಶಾಂತಿಮಧಃಕರೋತಿ
ವ್ರೀಡಾಂಪ್ಯುದಸ್ಯತಿವಿರಕ್ತಿಮುಪಹ್ನುತೇಚ. || ೧-೩೯

ಎಂಬುದು ಚಂಡಕೌಶಿಕಕಾರನ—

ಚಿತ್ತಂಪ್ರಸಾದಯತಿಲಾಘವಮಾದಧಾತಿ
ಪ್ರತ್ಯಂಗಮುಜ್ಜ್ವಲಯತಿ ಪ್ರತಿಭಾವಿಶೇಷಂ
ದೋಷಾನುದಸ್ಯತಿ ಕರೋತಿಚಧಾತುಸಾಮ್ಯಂ
ಆನಂದಮರ್ಪಯತಿಯೋಗವಿಶೇಷಗಮ್ಯಂ || ೨—೮

ಎಂಬುದನ್ನೂ—

ತ್ರಯಾಜುಷ್ಟ್ಯಃ ಪಶ್ಯಾಯವಿಧಿವದಿಹಯಷ್ಟಾಸ್ತ್ವಯಮಹಂ
ವಿಧತ್ತೇಚಾತ್ರಿಃಗ್ಯಂಶಮದಮಮುಖೇಯಂಗುಣಗಣಃ
ಅಕಸ್ಮಾದುದ್ವೇಷ್ಯೋಭವತಿಭಗವಾನಾತ್ಮಕವಿಷಃ
ಪಶುರ್ಬದ್ಧೋಮುಕ್ತಿಂ ಭಜತಿವಿಗಲತ್ಕರ್ಮನಿಗಳಃ || ೧-೮೦

ಎಂಬುದು ವೇಣೀಸಂಹಾರಕಾರನ—

ಚತ್ವಾರೋವಯಮೃತ್ವಿಜಃ ಸಭಗವಾನ್ಕರ್ಮೋಪದೇಷ್ಟಾಹರಿಃ
ಸಂಗ್ರಾಮಾಧ್ವರದೀಕ್ಷಿತೋ ನರಪತಿಃ ಪತ್ನೀಗೃಹೀತವ್ರತಾ

ಕೌರವ್ಯಾಃ ಪಶವಃ ಪ್ರಿಯಾಪರಿಭವಕ್ಲೇಶೋಪಶಾಂತಿಃ ಫಲಂ
ರಾಜನ್ಯೋಪನಿಮಂತ್ರಣಾಯರಸತಿ ಸ್ಫೀತಂ ಯಶೋದುಂದುಭಿಃ ||

ಎಂಬುದನ್ನು ಜ್ಞಾಪಕಕ್ಕೆ ತರುವುದಾಗಿದೆ.—

ಇದರಲ್ಲಿನ ವಿಶೇಷವೇನೆಂದರೆ, ಯಜ್ಞವನ್ನು ಮಾಡುವುದು ಕರ್ಮಶ್ರದ್ಧೆಯಿಂದ ಹೊರ್ತು ಕ್ರೋಧದಿಂದಲ್ಲ. ಹಾಗೆ ಯಜ್ಞದಲ್ಲಿ ವಧೆಯಾದ ಪಶುಗಳು ಸ್ವರ್ಗಕ್ಕೆ ಹೋಗುವುದಾಗಿ ಕರ್ಮಠರ ನಂಬುಗೆ. ಭೀಮನ ಆಗ್ರಹಕ್ಕೆ ಪಾತ್ರರಾದ ಕೌರವರು ಕ್ರೋಧದಿಂದ ಕೊಲ್ಲಲ್ಪಟ್ಟಿರುವರೇ ಹೊರ್ತು ಸ್ವರ್ಗಸುಖಾಕಾಂಕ್ಷೆಯಿಂದಲ್ಲವೆಂಬುದು ಸ್ಪಷ್ಟಪಡುವುದು.

ಏತೇನಿರ್ಝರನಿರ್ಝರೌಸ್ಸರಭಸುಧಾಪ್ರಾಗ್ಭಾರವಿಭ್ರಾಜಿತಂ
ಮಾನೋಲ್ಲುಂಛನಮಾನಲುಂಛನ ಮಹಾಧಾನುಷ್ಕಬಾಣೋತ್ಕರಂ
ಛಾಯಾಲೀನಮಹೇಂದ್ರವಾರವನಿತಾಧಮ್ಮಿಲ್ಲ ಮಾಲೋಚಿತಂ
ಶಾಖಾಗ್ರೈರ್ಮುಂಚಂತಿ ಪುಷ್ಪನಿಕರಂ ವೃಕ್ಷಾ ಮರುತ್ಪ್ರೇರಿತಾಃ || ೨-೩

ಎಂಬ ಶ್ಲೋಕವು ಭವಭೂತಿಯ ಉತ್ತರರಾಮಚರಿತದ:—

ಕಂಡೂಲದ್ವಿಪಗಂಡಪಿಂಡಕಷಣಾಕಂಪೇನ ಸಂಪಾತಿಭಿ
ರ್ಘರ್ಮಸ್ರಂಸಿತ ಬಂಧನೈಸ್ಸ್ವ ಕುಸುಮೈರರ್ಚಂತಿ ಗೋದಾವರೀಂ
ಛಾಯಾಪಸ್ಕಿರಮಾಣವಿಷ್ಕಿರ ಮುಖವ್ಯಾಕೃಷ್ಟ ಕೀಟತ್ವಚಃ
ಕೂಜತ್ಕ್ಲಾಂತಕಪೋತಕುಕ್ಕುಟಕುಲಾಃ ಕೂಲೇ ಕುಲಾಯದ್ರುಮಾಃ ||

ಎಂಬ ಈ ಶ್ಲೋಕವನ್ನು ನೆನಪಿಗೆ ತರುತ್ತದೆ.

ಇದರ ಕೆಲವು ಶ್ಲೋಕಗಳು:—

ಮಾಯೆಯ ಬಲೆಗೆ ಸಿಲುಕಿ ದಿಕ್ಕುತೋರದೆ ವಿಲಪಿಸುತ್ತಿರುವ ಜೀವನ ವರ್ಣನವು ಎಷ್ಟು ಮನೋಹರವಾಗಿದೆ.

ಪತ್ಯೌದೂರಂಗತವತಿರವೌ ಪದ್ಮಿನೀವಪ್ರಸುಪ್ತಾ
ಮ್ಲಾನಾಕಾರಾಸುಮುಖಿನಿಭೃತಾವರ್ತತೇ ಬುದ್ಧಿರಂಬಾ
ಮಾಯಾಯೋಗಾನ್ಮಲಿನಿತರುಚೌವಲ್ಲಭೇತುಲ್ಯಶೀಲಾ
ರಾಹುಗ್ರಸ್ತೇತುಹಿನಕಿರಣೇನಿಷ್ಪ್ರಭಾಯಾಮಿನೀವ || ೧-೭೫

ತನ್ನ ವಲ್ಲಭನಾದ ಸೂರ್ಯನು ಕಾಣದೇ (ಬಹುದೂರ) ಹೋದಾಗ ಪ್ರಣಯಿನಿಯಾದ ಕಮಲಿನಿಯೂ ಸಂಕುಚಿತಳಾಗುವಂತೆ, ಬುದ್ಧಿಯೂ ತನ್ನ ವಲ್ಲಭನಾದ ಜೀವಾತ್ಮನು ಮಾಯಾಸಂಬಂಧವನ್ನುವಹಿಸಿ ಸ್ಥಾವರತ್ವವನ್ನು ಹೊಂದಿದಾಗ, ಪತಿವ್ರತೆಯಂತೆ ಸಕಲಕಾರ್ಯವಿರಹಿತಳಾಗಿ ಸಂಕುಚಿತಳಾಗುವಳು. ಅದೇ ಜೀವಾತ್ಮನು

ಜಂಗಮತ್ವವನ್ನು ವಹಿಸಿ ಕಳಾಹೀನನಾಗಿರುವದಂ ಕಂಡು ಬುದ್ಧಿಯೂ ಕೂಡಾ ರಾಹುಗ್ರಸ್ತನಾದ ತುಹಿನಕಿರಣನ (ಚಂದ್ರಮನ) ರಾತ್ರಿಯಂತೆ ಕಳಾಹೀನಳಾಗಿ ರುವಳು.

ಕಾವೇರೀವರ್ಣನವು ಹೀಗಿರುವುದು:—

ಉನ್ನಿದ್ರಾಂಬುಜವಾಟಿಕಾ ಮುಭಯತೋರೋಧೋನಿರೋಧೋಲ್ಲಲ
ತ್ಸ್ರೋತಸ್ಸಂಭೃತಸಾರಿಣೀಶತಕೃತಸ್ವಚ್ಛಂದಕಚ್ಛಾಪ್ಲವಾಂ
ಖೇಲಚ್ಚೋಲವಧೂವಿಧೂತಕಬರೀ ಶೈವಾಲಿತಾಮನ್ವಹಂ
ಪಶ್ಯೋಮುಪ್ಲವಮಾನಹಂಸಮಿಥುನಸ್ಮೇರಾಂಕವೇರಾತ್ಮಜಾಂ || ೧-೨೪

ಎಲೆ! ವಸಂತ! ಈ ಕವೇರಕನ್ಯೆಯ (ಕಾವೇರಿಯ) ಇರ್ಕಡೆಗಳಲ್ಲಿಯೂ ಜಲ ಸಮೃದ್ಧಿಯಿಂದ ತುಂಬಿ ಹರಿಯುವ ಕಾಲುವೆಗಳು ನೋಡುವುದಕ್ಕೆ ರಮಣೀಯ ವಾಗಿರುವುವು. ತಾವರೆಯ ಬಳ್ಳಿಗಳು ಕಾಡುಗಳಂತೆ ಬೆಳೆದು ಅರಳಿದ ಹೂಗಳಿಂದ ತುಂಬಿರುವುವು. ಇಲ್ಲಿ ಚೋಳಾಂಗನೆಯರು ಸ್ನಾನಮಾಡುವಾಗ ಬಿಚ್ಚಿಹೋದ ಕೇಶಪಾಶಗಳು ನೀರಿನಲ್ಲಿ ಹರಡಲ್ಪಟ್ಟು ಪಾಚಿಗಳಂತೆ ಕಾಣುವುವು. ಅಲ್ಲಲ್ಲಿ ಸಂಚರಿಸುವ ಹಂಸಗಳನ್ನು ನೋಡಿದರೆ ಅವು ಕಾವೇರಿಯ ಮುಂದಸ್ಮಿತದಂತೆ ಕಾಣಬರುವುದು.

ಮಂದಾಕಿನೀ ವರ್ಣನವು ಹೀಗೆ:—

ಕಚ್ಚೋತ್ತಂಸಿತಕಲ್ಪವೃಕ್ಷಶಿಖರೋದ್ಭಾಸಮಾನವಾಸಂತಿಕಾ
ಗಂಧೋದ್ಗಾರಸುರತ್ನಾವ್ಯ ಲಹರೀಶೋಭಮಾನರೋಧೋಂತರಾ
ಅಂಹೋದುಸ್ಸಹಜನ್ಮಸಂಚರ ಭ್ರಮಾಸಿದ್ಧಾನಿ ಶುದ್ಧಾಕೃತಿಃ
ದುಃಖಾನಿಕದಾಸುಕರಿಷ್ಯತಿಸ್ತ್ವಯಂಮಂದಾನಿಮಂದಾಕಿನೀ || ೨-೨

ಅಯೋ! ವಿಚಾರಣಾ! ಇಗೋಗಂಗಾ! ಈ ಮಂದಾಕಿನಿಯು ನೀರಿನಿಂದ ವ್ಯಾಪ್ತವಾದ ಸ್ಥಳದಲ್ಲಿರುವ ಕಲ್ಪತರುವಿನ ಶಿಖರಕ್ಕೆ ಈ ಮಾಧವೀಲತೆಯು ಹಬ್ಬಿ ಅದರ ಪರಿಮಳದಿಂದ ಕೂಡಿದ ಅಲೆಗಳು ದಡವನ್ನಲಂಕರಿಸುವಂತೆ ಹರಿಯುತ್ತ ಲಿದೆಯಾದರೂ ಈ ಮಂದಾಕಿನಿಯು ಸಂಸಾರಚಕ್ರಕ್ಕೆ ಭ್ರಮೆಗೊಂಡು ಶಿಲ್ಕಿ ಸುತ್ತಿಸುತ್ತಿ ಬಳಲಿಬೆಂಡಾಗಿ ದುಃಖಿಸುತ್ತಿರುವ ಜೀವರ ಖೇದಗಳನ್ನು ಯಾವಾಗ ಪರಿಹರಿಸುವಳೋ ತಿಳಿಯಲಿಲ್ಲ.

ಅಬಲಾರಾಮಣೀಯಕತೆಯ ವಿಚಾರವಾಗಿ:—

ಸ್ಮೇರೇಣಸ್ತನಕುಟ್ಮಲೇನ ಭುಜಯೋ ರ್ಮಧ್ಯಂತಿರೋಧಿತ್ಸಿತಂ
ನೇತ್ರೇಣಶ್ರವಣಂ ಲಿಲಂಘಯಿಷತಂ ನೀಲೋತ್ಪಲ ಶ್ರೀಮುಷಾ
ಅಂಗಂಪರ್ವಮಲಂಚಿಕೀರ್ಷಿತಮಹೋಭಾವೈಸ್ಮರಾಚಾರ್ಯಕೈಃ
ಕನ್ಯೇನಾಂವಿಜಗೀಷ ತಂಚವಯಸಾಧನ್ಯೇನ ಮನ್ಯೇಜಗತ್ || ೩-೫

ಅಹಹ! ಇದೋ! ಸುಂದರಿಯರ ಕಣ್ಣುಗಳು ಆದೀರ್ಘವಾಗಿ ಕಿವಿಯ ವರೆಗೆ ವ್ಯಾಪಿಸಿ ಕಾಂತಿಯಲ್ಲಿ ನೈದಿಲೆಯನ್ನು ಮೀರಿಸಿದೆ. ಅವರ ಅವಯವಗ ಳಾದರೋ ಮೀನಕೇತನನಿಂದ ಉಪದೇಶಿತವಾದ ಭಾವಗಳಿಂದ ಕೂಡಿ ರಮ್ಯವಾ ಗಿವೆ ಅವರ ಯೌವನವು ಪ್ರಶಂಸಾಯೋಗ್ಯವಾದವುಗಳಾಗಿ ಲೋಕವನ್ನು ಜೈಸಲು ಆತುರಗೊಳ್ಳುವದಾಗಿದೆ. ಅವರ ವಯೋಧರ್ಮವದಂತಿರಲಿ! ಅವರ ವಿಲಾಸಗ ಳನ್ನು ನೋಡು! ಪುರುಷಾರ್ಥ ಮುಖ್ಯಸೂಚಿತವಾದ ಹುಬ್ಬುಗಳು, ಅರ್ಚಿರಾದಿ ಗತಿಯನ್ನು ಕೂಡಾ ಜರೆಯುವ ವೈಯ್ಯಾರದ ನಡಿಗೆಗಳು, ಮದ ಮದಿಸಿದ ಚಂಚಲತಾರಕೆಗಳುಳ್ಳ ಕಣ್ಣುಗಳು ಮನ್ಮಥಾದ್ವೈತೋಪನಿಷತ್ತು ಅಥವಾ ಕಾಮಾ ಗಮ ರಹಸ್ಯವನ್ನು ವಿಶದೀಕರಿಸುವುವಾಗಿವೆ.

ಕಾಷಾಯ ದಂಡಶರಣರಾದ ಕಲಿಯುಗದ ಸನ್ಯಾಸಿಗಳ ವಿಚಾರವಾಗಿ:—

ಭಿಕ್ಷೇತಿಶಿಷ್ಯಜನರಕ್ಷಣ ದಕ್ಷಿಣೇತಿ
ಶುಟೀತಿ ಶಾಶ್ವತಮಠೋಪಧಿಕಲ್ಪನೇತಿ
ಗ್ರಂಥೋಪಸಂಗ್ರಹಣಮೌಲ್ಯ ಮಿತಿಬ್ರುವಾಣಾಃ
ಸನ್ಯಾಸಿನೋಪಿದಧತೇ ಸತತಂಧನಾಯಾಂ || ೫-೨೨

ಎಂದು ಹೇಳಿರುವುದರಿಂದ ಆ ಕಾಲದಲ್ಲಿಯೂ ಶಿಷ್ಯಜನರಕ್ಷಣೆಗೆಂದೂ, ಮಠ ಗಳನ್ನು ಕಟ್ಟಿಸುವೆನೆಂದೂ, ಗ್ರಂಥೋಪಸಂಗ್ರಹಕ್ಕಾಗಿ ಧನಸಹಾಯವನ್ನೂ ಮಾಡಿ ರೆಂದೂ, ಧನಕ್ಕಾಗಿ ಬಾಯಿ ಬಾಯಿ ಬಿಡುವ ಸನ್ಯಾಸಿಗಳು ಇದ್ದರಾಗಿ ಬೋಧೆ ಯಾಗುತ್ತದೆ.

ಡಂಭನ ಹೇಳಿಕೆಯು ಹೀಗಿರುವುದು:—

ನಿರ್ಜಿತ್ಯಕ್ಷಿತಿಮಂಡಲಂ ಭೃಗುಪತಿರ್ಮಹ್ಯಂ ಪ್ರದಾತುಂ ಪುನಃ
ಪ್ರಹ್ವಃಪ್ರಾರ್ಥಯತನ್ಯಷೇಧಿ ಚ ಮಯಾ ವಿಶ್ವಂ ತೃಣೀಕುರ್ವತಾ
ಅಸ್ಮಾದ್ವೈಭವದೃಷ್ಟಿಸಂಭೃತಚಮತ್ಕಾರೈ ರಮರ್ತ್ಯೇಶ್ವರೈಃ
ದತ್ತೌ ಧಿಕ್ಕೃತವಾನಹಂ ಶಮಧನಃ ಸ್ವರ್ಗಾಪವರ್ಗಾವಪಿ || ೫ ೨

ಎಲೆ! ಕುಹನೆ! ನಾನು ಎಂತಹ ನಿಸ್ಪೃಹನೆಂಬುದನ್ನು ನೀನು ಬಲ್ಲೆಯಾ ನೋಡು! ಮಹಾಪರಾಕ್ರಮಿಯಾದ ಪರಶುರಾಮನು ಭೂಮಂಡಲವೆಲ್ಲವನ್ನೂ ಜಯಿಸಿ ನನಗೆ ಕೊಡುವುದಕ್ಕೆ ಎಷ್ಟೋ ವಿಧದಿಂದ ತಲೆವಾಗಿ ಪ್ರಾರ್ಥಿಸಿದರೂ ವಿಶ್ವವನ್ನೇ ತೃಣವಾಗೆಣಿಸಿರುವ ನಾನು ನಿರಾಕರಿಸಿಯೇ ಬಿಟ್ಟೆನು. ತಿಳಿಯಿತೆ! ಇದಲ್ಲದೆ ನನ್ನ ವೈಭವಾತಿಶಯಗಳನ್ನು ನೋಡಿ ಅಚ್ಚರಿಗೊಂಡ ದೇವತೆಗಳು ಸ್ವರ್ಗಾಪವರ್ಗಗಳನ್ನು ಕೂಡಾ ಕೊಡಲು ಬಂದರಾದರೂ ಶಮಧನನಾದ ನಾನು ಅದನ್ನು ನಿರಾಕರಿಸಿದೆನು.

ಮನ್ಮಥನ ಹೇಳಿಕೆ.—

ಇಕ್ಷುಃ ಪೇಶಲಮಾದ್ರಿಶಂ ಮಮಧನುಃ ಪುಷ್ಪಾಣ್ಯಮೀ ಸಾಯಕಾಃ
ತಂತ್ರೀ ಮಂಜುಲನಿಸ್ವನಾ ಮಧುಕರಶ್ರೇಣೀ ಶುಭಾ ಶಿಂಜಿನೀ
ಭೀರುಃ ಸನ್ನಬಲಾಜನೋ ಮಮ ಬಲಂ ಕಥ್ಯಂ ಪರಂ ಕಥ್ಯತೇ
ಸೋಽಹಂ ನಿರ್ಜಿತಶೂಲಭೃತ್ಪ್ರಭೃತಿಕಃ ಸಂಕಲ್ಪಸಿದ್ಧೋದಯಃ ೪-೧

ಎಲೆ! ವಸಂತ! ಕೇಳು ನನ್ನ ಬಿಲ್ಲಾದರೋ ಸರಸರಸವಾದ ಮೃದುವಾದ ಇಕ್ಷುದಂಡವು. ನನ್ನ ಬಾಣಗಳೋ ಅತಿಕೋಮಲವಾದ ಪುಷ್ಪಂಗಳು. ಶಿಂಜಿನಿಯಾದರೋ ತಂತ್ರಿಯಂತೆ ಝೇಂಕರಿಸುವ ಭ್ರಮರಗಳು. ನನ್ನ ಸೈನ್ಯವಾದರೋ ಭೀರುಗಳಾದ ಅಬಲೆಯರು. ಹೀಗೆ ಇದ್ದರೂ ಶೂಲಪಾಣಿಯೇ ಮೊದಲಾದವರನ್ನು ಜಯಿಸಿ ಸಂಕಲ್ಪಮಾತ್ರದಿಂದಲೇ ಸಿದ್ಧವಾದ ವಿಭವವುಳ್ಳವನಾಗಿರುವೆನು.

ಇತರ ಶ್ಲೋಕಗಳು:—

ತರತುವಿಶ್ವನಯಾಬ್ಧಿಮಧಿರೋಹತುಶೈಲಕಟೀಂ
ಧಮತುಚಧಾತುವರ್ಗಮಭಿಗಚ್ಛತುಶಸ್ತ್ರಮುಖಂ
ತದಿದಮುರುಂತುದಂಯದುಪಬಹ್ವಧಾಯಭಿಯಾ
ಧನಮದಮೇದುರಕ್ಷಿತಿಭೃದಙ್ಗಣಚಂಕ್ರಮಣಂ ॥ ೬-೩

ಹೆಚ್ಚಾಗಿ ಲಾಭದೊರಕುವುದೆಂದು ಸಮುದ್ರವನ್ನಾದರೂ ದಾಟಬಹುದು. ಧಾತುಗಳೆಲ್ಲವನ್ನೂ ಕರಗಿಸಿ ನೀರಾಗಿಸಬಹುದು. ಅತಿದುರ್ಗಮವಾದ ಬೆಟ್ಟವನ್ನಾದರೂ ಹತ್ತಬಹುದು. ಹಾಗಲ್ಲದಿದ್ದರೆ ರಣರಂಗದಲ್ಲಿ ಹೊಡೆದಾಡಬಹುದು. ಆದರೆ ಧನಮದಾಂಧತೆಯಿಂದ ಕೂಡಿ ಕೊಬ್ಬಿದ ರಾಜನಮನೆಯಲ್ಲಿ ಯಾವಕಾಲಕ್ಕೇನುಬರುವುದೋ ಎಂದು ಪದೇಪದೇ ಚಿಂತಿಸುತ್ತಾ ಭೀತಿಯಿಂದಿರುವಿಕೆಯು ಮಾತ್ರ ಇವುಗಳೆಲ್ಲದಕ್ಕಿಂತಲೂ ಅತ್ಯಂತ ದುಃಖಕರವಾದುದು. ಅಯ್ಯೋ !

ಪ್ರತ್ಯಂಗಕಂಪ ಪರಿಣರ್ತಿತ ಕಂಚುಕೇಸ್ಮಿನ್
ಪರ್ಯಾಪ್ತರೂಢಪಲಿತೇ ಪರತಂತ್ರಪಿಂಡೇ
ಅಕ್ಷೀಣರಾಗಮಜರಾಮರಜೀವಿತಾಶಂ
ಮಾಮೇವಹಂತ ! ಹಸತೀವಮಮಾಂತರಾತ್ಮಾ ॥ ೬-೪

ಇಗೋ ! ಜರಾಪೀಡಿತನಾದ ನನಗೆ ವಯೋಧಿಕ್ಯದಿಂದ ಮೈಎಲ್ಲವೂ ನಡುಗುತ್ತಿರುವುದು. ನಾನು ತೊಟ್ಟಿರುವ ಕವಚವಾದರೋ ನಡುಗುತ್ತಿರುವ ಶರೀರದೊಂದಿಗೆ ತಾನೂ ನಡುಗುತ್ತಿರುವುದು. ಶರೀರದಲ್ಲಿರುವ ಕೂದಲುಗಳೆಲ್ಲವೂ ಬಿಳುಪಾಗಿ ಹೋಗಿರುವುವು. ಇಷ್ಟು ವಿಪನ್ನಾವಸ್ಥೆಯಲ್ಲಿರುವುದಾದರೂ ಪರ

ತಂತ್ರವಾದ ಈ ಶರೀರದಲ್ಲಿ ಇನ್ನೂ ಬದುಕಿರಬೇಕೆಂಬ ಆಶೆಯು ಹೆಚ್ಚುತ್ತಿರುವ ದನ್ನು ನೋಡಿ ನನ್ನ ಅಂತರಾತ್ಮವೇ ನನ್ನನ್ನು ಹಾಸ್ಯಮಾಡುವಂತಿದೆ.

ಶಿಲಂ ಕಿಮನಲಂ ಭವೇದನಲ ಮೌದರಂ ಬಾಧಿ ತುಂ
ಪಯಃ ಪ್ರಸೃತಿಪೂರಕಂ ಕಿಮುನಧಾರಕಂಸಾರಸಂ
ಅಯತ್ನಮಲಮಲ್ಲಕಂ ಪಥಿಪಟಚ್ಚರಂ ಕಚ್ಚರಂ
ಭಜಂತಿವಿಭುಧಾ ಮುಧಾಹ್ಯ ಹಹ ! ಕುಕ್ಷಿತಃ ಕುಕ್ಷಿತಃ ||

ಕಣದಲ್ಲಿಬಿದ್ದಿರುವ ಅಥವಾ ಉದರಿರುವ ಕಾಳುಗಳನ್ನು ಆರಿಸಿಕೊಳ್ಳುವುದ ರಿಂದ ಕ್ಷುಧೆಯು ಅಡಗದೆ ? ಕೊಳದಲ್ಲಿನ ಒಂದು ಬೊಗಸೆನೀರನ್ನುಕುಡಿದು ಪ್ರಾಣ ಧಾರಣಮಾಡಿಕೊಳ್ಳಲು ಆಗದೆ. ? ಅಯತ್ನದಿಂದ ಮಾರ್ಗದಲ್ಲಿ ದೊರೆಯುವುದಾದ ಯಾವುದಾದರೊಂದು ಚಿಂದಿಯಿಂದ ಮಾನವು ಮುಚ್ಚದೆ? ಅಯ್ಯೋ ! ವಿದ್ಯಾ ವಂತರಾದವರು ಈ ಹಾಳುಉದರ ಪೂರಣಕ್ಕಾಗಿ ಈ ನೀಚರಾಜಾಶ್ರಯವನ್ನು ಮಾಡುವರಲ್ಲವೆ ? ಅಹಹ !

ಸುಭಾಷಿತನೀವೀ:—ಇದು ನೀತಿಭೋಧಕಗ್ರಂಥ. ಇದರಲ್ಲಿ ೧೪೪ಶ್ಲೋಕಗ ಳಿದ್ದು ೧೨ ಪದ್ಧತಿಗಳಾಗಿ ವಿಂಗಡಿಸಲ್ಪಟ್ಟಿದೆ. ಇದಲ್ಲದೆ ಪ್ರತಿಹನ್ನೆರಡು ಶ್ಲೋಕ ಗಳಿಗೂ ಒಂದು ಶ್ಲೋಕವು ಹೆಚ್ಚಾಗಿಕೊಟ್ಟಿರುತ್ತದೆ. ಹನ್ನೆರಡು ಶ್ಲೋಕಗಳನ್ನು 'ಭಾವುಕ'ವೆಂದೂ ಕೊನೆಯದಾದ ಒಂದು ಶ್ಲೋಕವನ್ನು 'ಪ್ರಿಯ'ವೆಂದೂ ಹೇಳಲ್ಪ ಟ್ಟಿದೆ. ಮೇಲೆ ಹೇಳಿದ ಹನ್ನೆರಡು ಪದ್ಧತಿಗಳಲ್ಲಿ ಐದು ದುರ್ಜನ ಪದ್ಧತಿಯನ್ನೂ, ಮತ್ತೈದು ಸಜ್ಜನರ ಕಾರ್ಯಗಳನ್ನೂ, ಹನ್ನೊಂದನೆಯದು ಸತ್ಕವಿಗಳ ವಿಚಾರ ವನ್ನೂ ಕೊನೆಯದು ವಿವೇಚನಾಜ್ಞಾನವನ್ನೂ ಹೇಳುತ್ತದೆ. ಇದನ್ನು ಸರ್ವಜ್ಞ (?) ಸಿಂಗಪ್ಪನಾಯಕನಿಗಾಗಿ ಅವನು ಕೇಳಿಕೊಂಡಮೇರೆ ಬರೆದುದಾಗಿಯೂ ಇಂತಹು ವಾದ ಇನ್ನುಮೂರು ಗ್ರಂಥಗಳನ್ನು ಬರೆದುದಾಗಿಯೂ ಅವು ತತ್ತ್ವಸಂದೇಶ, ರಹ ಸ್ಯಸಂದೇಶ, ರಹಸ್ಯಸಂದೇಶವಿವರಣವೆಂದು ಕರೆಯಲ್ಪಟ್ಟಿರುವುದಾಗಿಯೂ ತಮ್ಮ ಮತತತ್ತ್ವದ ಅಭಿಪ್ರಾಯವೆಲ್ಲವನ್ನು:—

ಸತ್ತ್ವಸ್ಥಾನ್ ಭೃತಂ ಪ್ರಸಾದಯ ಸತಾಂ ವೃತ್ತಿಂ ವ್ಯವಸ್ಥಾಪಯ
ತ್ರಸ್ಯ ಬ್ರಹ್ಮವಿದಾಗಸಸ್ತೃಣಮಿವ ತ್ರೈವರ್ಗಿಕಾನ್ ಭಾವಯ
ನಿಕ್ಷೇಪೇ ಶೇಷಿಣೇ ನಿಕ್ಷಿಪನ್ನಿಜಭರಂ ಸರ್ವಂಸಹೇ ಶ್ರೀಸಖೇ
ಧರ್ಮಂಧಾರಯ ಚಾತಕಸ್ಯ ಕುಶಲೀ ಧಾರಾಧರೈಕಾಂತಿನಃ ||

ಎಂಬ ಒಂದು ಶ್ಲೋಕದಲ್ಲಿ ಬರೆದು ಮೇಲೆ ಹೇಳಿದ ಅರಸುಮಗನಿಗೆ ಕಳುಹಿಸಿದುದಾಗಿ ಕಥೆಯು ಇದೆ. ಪ್ರಕೃತ ಈ ಸಿಂಗಪ್ಪನಾಯಕನಾರೆಂಬುದನ್ನು ತಿಳಿಯಬೇಕಾಗಿದೆ.

ಪ್ರೊ|| ಶೇಷಗಿರಿಶಾಸ್ತ್ರಿಗಳು ಮೇಲೆ ಹೇಳಿದ ಅರಸುಮಗ ಸಿಂಗಪ್ಪನಾಯಕನು ಸರ್ವಜ್ಞಸಿಂಗಮನಾಯುಡು ಅಥವಾ 'ರಸಾರ್ಣವಸುಧಾಕರ' ವನ್ನು ಬರೆದ ಸಿಂಹಭೂಪಾಲನಾಗಿರಬೇಕೆಂದೂ, ಅವನು ಈಗಣ ವೆಂಕಟಗಿರಿರಾಜರ ಮೂಲ ಪುರುಷನೆಂದೂ, ಕ್ರಿ. ಶ. ೧೩೩೦ರಲ್ಲಿದ್ದನೆಂದೂ, ವೇದಾಂತದೇಶಿಕರ ಮಕ್ಕಳಾದ ನಯಿನಾರಾಚಾರ್ಯರವರು ವಾದಕ್ಕಾಗಿ ಈತನ ಸಭೆಗೆ ಹೋಗಿದ್ದರೆಂದೂ ಒಕ್ಕಣಿಸಿರುವರು.

ರಾವಬಹದ್ದೂರ ವೀರೇಶಲಿಂಗಂಪಂತಲುಯವರು ಆಂಧ್ರಕವಿ ಶ್ರೀನಾಥನ ಕಾಲವನ್ನು ನಿರ್ಣಯಿಸುವುದರಲ್ಲಿ ಈ ಸರ್ವಜ್ಞಸಿಂಗಮನಾಯುಡುವಿನ ಕಾಲವನ್ನು ವಿಮರ್ಶಿಸಿ ಕ್ರಿ. ಶ. ೧೪೨೨-೧೪೪೭ರವರೆಗೆ ವಿಜಯನಗರದಲ್ಲಾಳಿದ ಪ್ರೌಢದೇವ ರಾಯನ ಸಮಕಾಲೀನನೆಂದಿರುವರು. ಅಲ್ಲದೆ ಇವನು ಭೇತಾಲನಾಯುಡುವಿನ ಅಥವಾ ಜೇವರಡ್ಡಿಯ ಹತ್ತನೆಯ ತಲೆಯವನೆಂದೂ, ವೆಂಕಟಗಿರಿಯ ಅರಸುಗಳ ಮೂಲಪುರುಷನೆಂದೂ, ಅವನು 'ಚಮತ್ಕಾರಚಂದ್ರಿಕಾ' ಎಂಬ ಲಕ್ಷಣಶಾಸ್ತ್ರವನ್ನು ಬರೆದಿರುವುದಾಗಿಯೂ ಅದನ್ನೇ ಸಿಂಗಭೂಪಾಲೀಯವೆಂದು ಕರೆಯುವುದಾಗಿಯೂ ಹೇಳಿರುವರು. ಇವರ ಹೇಳಿಕೆಯಂತೆ ಶ್ರೀನಾಥನು ರಾಜಮಹೇಂದ್ರದಲ್ಲಿ ಆಳಿದ ವೇಮಾರೆಡ್ಡಿಯ ಆಸ್ಥಾನ ಪಂಡಿತನೆಂದೂ, ಭೀಮವರದಲ್ಲಿನ ವೇಮಾರಡ್ಡಿಯ ಶಾಸನವು ಕ್ರಿ. ಶ. ೧೪೩೪ ಎಂದು ಕಾಲವು ಹೇಳಿರುವುದಾಗಿ ಗೊತ್ತಾಗುತ್ತದೆ. ಈ ಶ್ರೀನಾಥನೇ ಸರ್ವಜ್ಞಸಿಂಗಮ ನಾಯುಡುವಿನ ಆಸ್ಥಾನಕ್ಕೆ ಹೋಗಿ ಅಲ್ಲಿ ಕವಿಸಾರ್ವಭೌಮನೆಂಬ ಬಿರುದನ್ನು ಗಳಿಸಿಕೊಂಡು ಬಂದಂತೆಯೂ ಹೇಳಬೇಕಾಗುತ್ತದೆ. ಆಂಧ್ರಭಾಗವತಕಾರನಾದ ಬಮ್ಮೆರ ಪೋತರಾಜು ಸರ್ವಜ್ಞಸಿಂಗಮನಾಯುಡುವಿನ ಆಸ್ಥಾನಪಂಡಿತನು. ಮತ್ತು ಶ್ರೀನಾಥನ ಮೈದುನನು.

ಮಹಾವ್ಯಾಖ್ಯಾತೃವಾದ ಮಲ್ಲಿನಾಥನು ಸರ್ವಜ್ಞಸಿಂಗಮನಾಯುಡುವಿನ ಆಸ್ಥಾನಕ್ಕೆ ಹೋಗಿದ್ದುದಾಗಿಯೂ, ಮಲ್ಲಿನಾಥನು ಕ್ರಿ. ಶ. ೧೫ನೆಯ ಶತಮಾನದವನೆಂದು ಡಾ|| ಭಂಡಾರಕರ ಮತವಿರುವುದು.

ಮೇಲೆ ಹೇಳಿದ ಕಾರಣಗಳಿಂದ 'ರಸಾರ್ಣವಸುಧಾಕರ'ಕಾರ ಅಥವಾ ಸಿಂಗಭೂಪಾಲೀಯನು ಕ್ರಿ. ಶ. ೧೩೬೯ರವರೆಗೆ ಇದ್ದ ಶ್ರೀವೇದಾಂತಾಚಾರ್ಯರವರ ಸಮಕಾಲೀನನಾಗಿರನೆಂದೂ ಪ್ರೊ|| ಶೇಷಗಿರಿಶಾಸ್ತ್ರಿಗಳ ಹೇಳಿಕೆಯು ಸಮಂಜಸವಾಗದೆಂದೂ ಹೇಳಬೇಕಾಗುತ್ತದೆ. ಹಾಗಾದರೆ ಕಥೆಯಲ್ಲಿ ಹೇಳಲ್ಪಡುವ ಸಿಂಗಪ್ಪನಾಯಕನಾರೆಂಬುದನ್ನು ಕಂಡುಹಿಡಿಯಬೇಕಾಗಿದೆ. ರಸಾರ್ಣವಸುಧಾಕರದ ಮೊದಲನೆಯ ಭಾಗದಲ್ಲಿ ಹೇಳಿರುವ ಸಿಂಹಭೂಪಾಲನ ವಂಶಾವಳಿಯನ್ನು ಪರಿಕ್ಷಿಸಿ ಹೇಳುವುದು ಅಪ್ರಾಸಂಗಿಕವಾಗದು.




ಮೇಲೆ ಹೇಳಿದ ವಂಶಾವಳಿಯಲ್ಲಿ ರಸಾರ್ಣವಸುಧಾಕರಕಾರನ ಅಜ್ಜನ ಹೆಸರು ಸಿಂಗಪ್ರಭುವೆಂದು ಹೇಳಿದೆ. ಈ ವಂಶಾವಳಿಯನ್ನೂ, ರಾಜಮಹೇಂದ್ರವರದ ರಡ್ಡಿರಾಜರ ವಂಶಾವಳಿಯನ್ನೂ ಹೋಲಿಸಿ ನೋಡಿದರೆ ಸಿಂಗಪ್ರಭುವು ಶ್ರೀವೇದಾಂತಾಚಾರ್ಯರ ಸಮಕಾಲೀನನೆಂದು ಸ್ಪಷ್ಟವಾಗುತ್ತದೆ.

ಕೊಂಡವೀಡು (ಕೃಷ್ಣಾಜಿಲ್ಲಾ) ಮತ್ತು ರಾಜಮಹೇಂದ್ರದಲ್ಲಾಳಿದ ರಡ್ಡಿ ಅರಸುಗಳನ್ನು ವೀರೇಶಲಿಂಗಂಪಂತಲು ಯವರ ಗ್ರಂಥದಿಂದ ಸಂಗ್ರಹಿಸಬಹುದಾಗಿದೆ.

೧. **ಪೋಲಯ ವೇಮರಡ್ಡಿ** :—ಕ್ರಿ. ಶ. ೧೩೨೮-೧೩೫೩ರ ವರೆಗೆ. ಇವನು ಓರಂಗಲ್ಲಿನ ಎರಡನೇ ಪ್ರತಾಪರುದ್ರನ ಸೇನಾಪತಿಯಾಗಿದ್ದು ೧೩೨೮ರಲ್ಲಿ ಸ್ವತಂತ್ರನಾಗಿ 'ಪೆನುಕೊಂಡ' ಎಂಬುದನ್ನು ಸ್ವಾಧೀನಪಡಿಸಿಕೊಂಡು ಆಳಿದನು.

೨. **ಅನವೇಮರಡ್ಡಿ** :—ಇವನು ಪೋಲಯ ವೇಮರಡ್ಡಿಯ ಮಗನು. ಕ್ರಿ. ಶ. ೧೩೪೦-೧೩೬೯ರ ವರೆಗೆ. ಇವನ ರಾಜಧಾನಿಯು ನೆಲ್ಲೂರುಬಳಿಯಣ ಅಡ್ಡಂಕಿ. ಇವನು ಪಾತಾಳಗಂಗೆಯ ಹತ್ತಿರ

ವಿರುವ ಶ್ರೀಶೈಲಕ್ಕೆ ಸೋಪಾನ ವೀಥಿಯನ್ನು ಕಟ್ಟಿಸಿದನು. ಸಂಸ್ಕೃತ ಅಮರುಕಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವನು.

೩. **ಅಲ್ಲಯವೇಮರಡ್ಡಿ** :—ಇವನು ಅನವೇಮರಡ್ಡಿಯ ಸೋದರನು. ಕ್ರಿ. ಶ. ೧೩೭೦-೧೩೮೧ರ ವರೆಗೆ ಆಳಿದನು.

೪. **ಅನ್ನಪೋತರಡ್ಡಿ**:—ಇವನು ಅನವೇಮರಡ್ಡಿಯಮಗನು. ಇವನು ವೆಂಕಟ ಗಿರಿಯ ಮಾದನಾಯಕನೊಡನೆ ಕಾಳಗವಾಡಿ ತಂದೆಯು ಜೀವಿಸಿದ್ದಾಗಲೇ ಕ್ರಿ. ಶ. ೧೩೬೯ ಕ್ಕೆ ಮುಂಚಿತವಾಗಿಯೇ ಮೃತನಾಗಿ ಹೋಗಿದ್ದನು.

೫. **ಕುಮಾರಗಿರಿವೇಮಾರಡ್ಡಿ** :—ಇವನು ವೆಂಕರಡ್ಡಿಯ ಮಗನು. ಕ್ರಿ. ಶ. ೧೩೮೨—೧೪೦೫ ರವರೆಗೆ ಆಳಿದನು. ಇವನು ತನ್ನ ಸೋದರಿಯ ಗಂಡನಾದ ಅಲ್ಲಾದ ಭೂಪತಿಗೆ ರಾಜಮಹೇಂದ್ರ ವನ್ನು ಬಳುವಲಿಯಾಗಿ ಕೊಟ್ಟನು.

೬ **ಅಲ್ಲಾದ ಭೂಪತಿ** :—ಇವನು ಕುಮಾರಗಿರಿವೇಮಾರಡ್ಡಿಯ ಮೈದುನನು. ಇವನು ರಾಜಮಹೇಂದ್ರದಿಂದ ಸಿಂಹಾದ್ರಿಯವರೆಗೆ ರಾಜ್ಯ ವನ್ನು ವಿಸ್ತರಿಸಿ ಕ್ರಿ. ಶ. ೧೪೧೫ ವರೆಗೆ ಆಳಿದನು.

**ವೇಮಾರಡ್ಡಿ ಮತ್ತು ವೀರಭದ್ರರಡ್ಡಿ**:—ಇವರಿರ್ವರೂ ಅಲ್ಲಾದ ಭೂಪತಿಯ ಮಕ್ಕಳು. ಇವರಿರ್ವರೂ ರಾಜಮಹೇಂದ್ರದಲ್ಲಿ ಒಟ್ಟಿಗೆ ಆಳಿದರು. ವೇಮಾರಡ್ಡಿಯು ಚಿಲ್ಕಸರೋವರದವರೆಗೆ ರಾಜ್ಯವನ್ನು ವಿಸ್ತ ರಿಸಿದ್ದಲ್ಲದೆ ಆಂಧ್ರಕವಿ ಶ್ರೀನಾಥನಿಗೆ, ಆಶ್ರಯದಾತನಾ ಗಿದ್ದನು. ಭೀಮವರ್ಮದಲ್ಲಿರುವ ಶಾಸನದಲ್ಲಿ ಕ್ರಿ. ಶ. ೧೪೩೪ ಎಂದು ಶಾಸನಕಾಲವು ಕಂಡುಬರುತ್ತದೆ.

ಈ ಮೇಲ್ಕಂಡ ವಿಷಯುಗಳ ವಿಮರ್ಶನದಿಂದ ವೆಂಕಟಗಿರಿಯ ಮಾಧವನಾ ಯಕ ಅಥವಾ ಮಾದನಾಯಕನೆಂಬುವನು ಸುಮಾರು ಕ್ರಿ. ಶ. ೧೩೬೯ರಲ್ಲಿ ಜೀವಿ ಸಿದ್ದು ಅನ್ನಪೋತರಡ್ಡಿಯನ್ನು ಕಾಳಗದಲ್ಲಿ ಕೊಂದಿರಬೇಕೆಂದು ಸ್ಪಷ್ಟವಾಗುತ್ತದೆ. ಈ ಮಾಧವ ಅಥವಾ ಮಾದನಾಯಕನ ತಂದೆಯೇ ಮೇಲಣ ವೆಂಕಟಗಿರಿರಾಜ ವಂಶಾವಳಿಯಲ್ಲಿ ಹೇಳಿರುವ ಸಿಂಗಪ್ರಭು. ಇವನೇ ಶ್ರೀವೇದಾಂತಾಚಾರ್ಯರ ಸಮಕಾಲೀನನೆಂಬುದು ಸಿದ್ಧಾಂತವಾಗುತ್ತದೆ ಕಥೆಯಲ್ಲಿ ಕಂಡುಬರುವ

ದಾದ "ಮಾಧವಾತ್ಮಜ" ಎಂಬುದು ತಪ್ಪಾಗಿ ಹೇಳಿರುವಂತೆ ಕಂಡುಬರುತ್ತದೆ. ಅದಕ್ಕೆ ಬದಲು ಯಾಚವನಾತ್ಮಜ ಎಂದಿರಬೇಕು. ಈ ಸಿಂಗಪ್ರಭುವೇ ಮೇಲೆ ಹೇಳಿದ ಸರ್ವಜ್ಞ (?) ಸಿಂಗಪ್ಪನಾಯಕ. ಈ 'ಸರ್ವಜ್ಞ'ನೆಂಬ ಬಿರುದು ಇವನಿಗೆ ಹೇಗೆ ಬಂದಿತೆಂಬುದು ತಿಳಿಯದಾಗಿದೆ. "ರತ್ನಪೇಟಿಕಾ" ಎಂಬ ವ್ಯಾಖ್ಯಾನದಲ್ಲಿ ಎಲ್ಲಿಯೂ ಹೇಳಿರುವಂತೆ ಕಂಡುಬರುವುದಿಲ್ಲ.

'ಸುಭಾಷಿತನೀವಿ' ಎಂಬುದಕ್ಕೆ ರತ್ನಪೇಟಿಕಾ ಎಂಬವ್ಯಾಖ್ಯಾನವನ್ನು ಶ್ರೀನಿವಾಸ ಸೂರಿಯು ಬರೆದಿರುವನು. ಮಾದರಿಗಾಗಿ ಕೆಲವು ಶ್ಲೋಕಗಳನ್ನು ಬರೆಯುವೆವು. ಶ್ಲೋಕಗಳು ಅನ್ಯಾಪದೇಶ ಮತ್ತು ಶ್ಲೇಷೆಯಿಂದಕೂಡಿದೆ. ಗ್ರಂಥಕಾರರಿಗೆ ಪಾಂಚಾಲೀಶೈಲಿಯಲ್ಲಿ ಬಹುಪಕ್ಷ ಪಾತವೆಂದರೆ ಹೆಚ್ಚಲ್ಲ. ಕೆಲವು ಸಂದರ್ಭಗಳಲ್ಲಿ ಗೌಡೀಶೈಲಿಯನ್ನನುಕರಿಸುವಂತೆ ತೋರುತ್ತದೆ.

ಮಾದರಿಗಾಗಿ ಕೆಲವು ಶ್ಲೋಕಗಳು: --

ನಿಮೀಲಯತು ಲೋಚನೇ ನ ಹಿ ತಿರಸ್ಕೃತೋ ಭಾಸ್ಕರಃ
ಶ್ರವಃ ಸ್ಥಗಯತು ಸ್ಥಿರಂ ಪರಭೃತಃ ಕಿಮು ಧ್ವಾಂಕ್ಷತಿ
ಸ್ವಯಂ ಭ್ರಮತು ಬಾಲಿಶೋ ನ ಖಲು ಬಂಭ್ರಮೀತಿ ಕ್ಷಿತಿಃ
ಕದರ್ಥಯತು ಮುಷ್ಟಿಭಿಃ ಕಥಯ ಕಿಂ ನಭಃ ಕ್ಷುಭ್ಯತೇ
ದೃಪ್ತಪದ್ಧತಿಃ ॥ ೧೨ ॥

ಮದಾಂಧನು ಪರಶ್ರೀಯನ್ನನ್ನು ನೋಡಿ ಸಹಿಸದವನಾಗಿ ತನ್ನ ಸರ್ವಜ್ಞತ್ವವನ್ನು ವ್ಯಕ್ತಪಡಿಸುವನಾದರೂ ತಾನು ಅವಿವೇಕಿ ಎಂಬುದೇ ವ್ಯಕ್ತವಾಗುತ್ತದೆ. ಹೇಗೆಂದರೆ ಅವಿವೇಕಿಯು ತಾನು ಕಣ್ಣನ್ನುಮುಚ್ಚಿಕೊಂಡರೆ ಸೂರ್ಯನನ್ನು ತಿರಸ್ಕರಿಸಿದಂತೆಯೂ, ಕಿವಿಗಳನ್ನು ಮುಚ್ಚಿಕೊಂಡರೆ ಪರಭೃತಾಲಾಪ (ಕೋಗಿಲೆಯ ಕೂಗನ್ನು) ವನ್ನು ಕಾಗೆಯ ಕರ್ಕಶ ಧ್ವನಿಗೆ ಸಮವಾಗಿ ಮಾಡಿದಂತೆಯೂ, ಮೂರ್ಖ ಅಥವಾ ಬಾಲಕನಂತೆ ತಾನು ಚಕ್ರಾಕಾರವಾಗಿ (ಗಿರ್ರನೆ) ಸುತ್ತಿದರೆ ಭೂಮಿಯು ತಿರುಗುವಂತೆಯೂ, ತನ್ನ ಕೈಯಿಂದ ಗುದ್ದಿದರೆ ಆಕಾಶವನ್ನೇ ಕ್ಷೋಭಿಸಿದಂತೆಯೂ ಭಾವಿಸುತ್ತಾನೆ. ಹೀಗೆ ಮಾಡುವುದರಿಂದ ತನ್ನ ಅವಿವೇಕವು ಲೋಕಕ್ಕೆ ವ್ಯಕ್ತವಾಗುವುದೇ ಹೊರತು ಅವನ ಸರ್ವಜ್ಞತ್ವವು ಎಂದಿಗೂ ವ್ಯಕ್ತಪಡುವುದಿಲ್ಲ.

ಜನಿತ್ವಾಪಿ ಮಹಾಗೋತ್ರೇ ನಿಮ್ನಗಾವಕ್ರಚೇಷ್ಟಿತಾಃ
ವೈಪರೀತ್ಯಂ ವಿತನ್ವಂತಿ ಸಮೇಷು ವಿಷಯೇಷು ಚ ॥ ಖಲಪದ್ಧತಿಃ॥ ೪

ಕೆಲವರು ಕೇವಲ ಉತ್ತಮವಂಶದಲ್ಲಿ ಹುಟ್ಟಿದರೂ ದುರ್ಮಾರ್ಗಪ್ರವರ್ತಕರಾಗಿಯೇ ಇರುವರು. ಹೇಗೆಂದರೆ ನದಿಯು ದೊಡ್ಡ ಬೆಟ್ಟದಲ್ಲಿ ಹುಟ್ಟಿದರೂ ಇದು ಸಮಪ್ರದೇಶ ಇದು ವಿಷಮ ಪ್ರದೇಶವೆಂದು ಲಕ್ಷಿಸದೆ ಎಲ್ಲಾ ಕಡೆಗಳಲ್ಲಿಯೂ ಹೇಗೆ ವಿಪರೀತವಾಗಿಹರಿಯುವುದೋ ಹಾಗೆ ಕೆಲವರು ಉತ್ತಮ ಕುಲಜಾತರಾದಾಗ್ಯೂ (ಪೂರ್ವಕರ್ಮಾನುಸಾರವಾಗಿ) ಇವರು ಕೆಟ್ಟವರು ಇವರು ಒಳ್ಳೇಯವರೆಂಬ ಗುಣಾಗುಣಗಳನ್ನು ವಿವೇಚಿಸದೆ ಎಲ್ಲರಲ್ಲಿಯೂ ವಿಪರೀತಾಚರಣೆಯನ್ನೇ ಮಾಡುತ್ತಾರೆ.

ಮಂಡೂಕರಾವಿಣಂ ಸರ್ಪಂ ಗೋಮುಖಂ ಚ ಮೃಗಾದಿನಂ
ನ ಸುಹೃತ್ವೇನ ಮನ್ಯೇತ ಮಾನಯಂತಂ ಚ ವೈರಿಣಂ ||
ಅಸೇವ್ಯಪದ್ಧತಿಃ || ೮ ||

ಕಪ್ಪೆಯಂತೆಕೂಗುವ ಸರ್ಪವನ್ನೂ (ಸರ್ಪಜಾತಿಯಲ್ಲಿ ಇಂತಹ ಸರ್ಪವೂ ಇದೆ) ಮೃಗಗಳನ್ನು ಭಕ್ಷಿಸುವ ಗೋಮುಖದಂತಿರುವ ವ್ಯಾಘ್ರವನ್ನೂ (ವ್ಯಾಘ್ರ ಜಾತಿಯಲ್ಲಿ ಗೋಮುಖದಂತಿರುವ ವ್ಯಾಘ್ರವೂಇದೆ.) ಬಹುವಾಗಿ ಮರ್ಯಾದೆಯನ್ನು ಮಾಡುವ ಹಗೆಯನ್ನೂ ಸ್ನೇಹಿತನೆಂಬದಾಗಿ ತಿಳಿಯಬೇಡ.



## ೧೪ನೆಯ ಶತಮಾನ.

## ಪ್ರ ತಾ ಪ ರು ದ್ರ (೨)

ಇವನು 'ಕಾಕತೀಯ' ಅರಸನೆಂದೂ ಮುಮ್ಮಡಾಂಬೆಯ ಮಗನೆಂದೂ ತಂದೆಯ ಹೆಸರು ಮಹಾದೇವನೆಂದೂ;—

ಕೌಸಲ್ಯಾಸೀತ್ಪ್ರಥಮಜನನೀ ದೇವ ಕೀಚ ದ್ವಿತೀಯಾ
ವಿಷ್ಣೋರ್ಮಾತಾ ತದನುಮಹಿತಾ ಮುಮ್ಮಡಾಂಬಾತೃತಿಯಾ
ಯಸ್ತ್ರೇತಾಯಾಂ ರಘುಪತಿರಭೂದ್ದ್ವಾಪರೇ ಶೌರಿರಾಸೀತ್
ತ್ರಾತುಂಕ್ಷೋಣೀಂ ಸ ಜಯತಿ ಕಲೌ ವೀರರುದ್ರಾವತಾರಃ || *

ಎಂಬುದರಿಂದಲೂ:—

ಪುರಾಕಿಲಕಾಕತಿ ಕುಲಸಂಭೂತೇ ಗಣಪತಿನಾಮ್ನಿ ಮಹಾರಾಜೇ ದುಹಿತೃಮಾತ್ರಸಂತಾನೇ ಕದಾಚಿದ್ದೈವ ಯೋಗೇನ ಕಾಲಪರಿಪಾಕ ಮುಪೇಯುಷಿ ತನ್ಮಹಿಷೀ ರುದ್ರದೇವೀನಾಮರಾಜ್ಞೀ ಬಹೂನಿವರ್ಷಾಣಿ ತದ್ರಾಜ್ಯಮಕಂಟಕಂ ಪರಿ

* ಪ್ರತಾಪ ರುದ್ರೀಯ. ಪುಟ. ೧೨ ಶ್ಲೋಕ ೨೦

ಪಾಲ್ಯ ಪರಿಣತಾಸತಿ ದೌಹಿತ್ರೇಪ್ರತಾಪರುದ್ರೇರಾಜ್ಯಧುರಾನಿದಧೇ" ‡ ಎಂಬುದರಿಂದ ಸ್ಪಷ್ಟಪಡುತ್ತದೆ. ಕಾಕತಿಯ ಅರಸರವಂಶಾವಳಿಯು ಹೀಗಿರುವುದು.:—




ಇವನು ಕ್ರಿ. ಶ. ೧೨೯೧ರಲ್ಲಿ ಸಿಂಹಾಸನವನ್ನು ಹತ್ತಿದನು. ಇವನಿಗೆ ಕುಮಾರ ರುದ್ರದೇವ ಮಹಾರಾಜ ಎಂಬ ಹೆಸರುಗಳಿದ್ದವು.*

‡ ಪ್ರತಾಪ ರುದ್ರೀಯ ಪುಟ. ೧೨೩.

§ ರುದ್ರಾಂಬಾಯಾಃ ಪಿತಾಸೋಮಾಂಬಾ ಗಣಪತಿದೇವೌ (ಪ್ರತಾಪ ರುದ್ರೀಯ. Foot Note 105)

$ Historical Sketches of ancient Dekhan P. 275

* Ancient Dekhan P. 296

ಇವನು ಎರಡನೆಯ ಪ್ರತಾಪರುದ್ರನೆಂದೂ ಕಾಕತೀಯರಾಣಿಯಾದ ರುದಪ್ರಾಂಬೆಯು ತನ್ನ ಮುಮ್ಮಗ ಎರಡನೆಯ ಪ್ರತಾಪರುದ್ರನಿಗೆ ಸಿಂಹಾಸನವನ್ನು ಕೊಟ್ಟಂತೆಯೂ ಇವನು ಕ್ರಿ. ಶ. ೧೨೯೧ರಲ್ಲಿ ಸಿಂಹಾಸನವನ್ನು ಹತ್ತಿದಂತೆಯೂ ಇವನ ಕಾಲದಲ್ಲಿಯೇ ತೆಲಂಗಾಣರಾಜ್ಯವು ಮಹಮ್ಮದೀಯರ ಪಾಲಾದುದಾಗಿಯೂ ತಿಳಿಯಬರುತ್ತದೆ.§

ಹಿಂದೆ ಹೇಳಿದ ಕಾಕತೀಯರ ವಂಶಾವಳಿಯಲ್ಲಿ ಪ್ರತಾಪರುದ್ರನೆಂಬ ಅರಸನು ಒಬ್ಬನೇ ಇದ್ದುದಾಗಿ ಖಂಡಿತವಾಗುತ್ತದೆ. ಮೇಲಣ ಹೇಳಿಕೆಯಲ್ಲಿ ಇವನನ್ನು ಎರಡನೆಯ ಪ್ರತಾಪರುದ್ರನೆಂದು ಕರೆದಿದೆ. ಹೀಗೆ ಹೇಳಿರುವುದರಿಂದ ಕಾಕತೀಯರಾಜರಲ್ಲಿ ಮೊದಲನೆಯ ಪ್ರತಾಪರುದ್ರನಾರೆಂಬ ಶಂಕೆಯು ಉಂಟಾಗುವುದು ಸಹಜವಾಗಿದೆ. ಆದರೆ ಓರಗಲ್ಲಿನಲ್ಲಿ ಆಳಿದ ಗಣಪತಿ ಅರಸರ ವಂಶಾವಳಿಯಲ್ಲಿ:—

ತ್ರಿಭುವನಮಲ್ಲ
|
ಪ್ರೋಲರಾಜ + ಕುಪ್ಪಮ್ಮ
|
(ಇವನ ಹಿಂದೆ ಹತ್ತುಜನ ರಾಜಪುತ್ರರು ಆಳಿದುದಾಗಿ ತೋರುತ್ತದೆ.
|
ಪ್ರತಾಪರುದ್ರ (೧)
|
ಗಣಪತಿದೇವ

(ಇವನು ಸತ್ತನಂತರ ಇವನ ಮಗಳು ರುದ್ರಾಂಬೆಯು ಕ್ರಿ. ಶ. ೧೨೫೭ ೧೨೯೫ರವರೆಗೆ ಆಳಿದಳು.)

ರುದ್ರಾಂಬೆಯಮಗಳು + ಮಹಾದೇವ
|
ಪ್ರತಾಪರುದ್ರ (೨) ೧೨೯೫-೧೩೨೩

(ಇವನು ದೆಹಲಿಗೆ ಸೆರೆಯೊಯ್ಯಲ್ಪಟ್ಟನು) ಎಂದು ಹೇಳಲ್ಪಟ್ಟಿದೆ.$ ಇದರಿಂದ ಪ್ರೋಲರಾಜನ ಅನಂತರಬಂದ ಮೊದಲನೆಯ ಪ್ರತಾಪರುದ್ರನು ಹಿಂದೆ ಹೇಳಿದ ಕಾಕತೀಯವಂಶಾವಳಿಯಲ್ಲಿ ಎರಡನೆಯ ಪ್ರೋಲನ ಅನಂತರ ಹೇಳಿರುವ ರುದ್ರದೇವನಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಈ ಕಾರಣಗಳಿಂದ ಮುಮ್ಮಡಾಂಬೆಯಮಗ ಪ್ರತಾಪರುದ್ರನನ್ನು ಎರಡನೆಯ ಪ್ರತಾಪರುದ್ರನೆಂದು ಕರೆಯಬೇಕಾಗುವುದು.

§ South India & her mahamedan Invaders P. 66.

$ The never to be Forgottn Empire Geneology P. 9

ಪ್ರತಾಪ ರುದ್ರನ ನಿಜವಾದ ಹೆಸರು "ನಂದ"ನೆಂದೂ, ಪ್ರತಾಪರುದ್ರನೆಂಬ ಹೆಸರು ನಾಮಾಂತರವೆಂದೂ ಇವನು ಶೈವಮತಾವಲಂಬಿಯಾಗಿಜೈನರನೇಕರನ್ನು ಕೊಲ್ಲಿಸಿದನಾದುದರಿಂದ ರುದ್ರನೆಂಬುದು ನಾಶಸೂಚಕಾರ್ಥವಾದುದರಿಂದ ಇವನನ್ನು ಪ್ರತಾಪರುದ್ರನೆಂದು ಕರೆದಿರುವುದಾಗಿಯೂ ಮೆ|| ಸ್ಟರ್ಲಿಂಗರವರು ಒಕ್ಕಣಿಸಿರುವರು* ಇದೊಂದು ಸೋಜಿಗ! ವೇದದಲ್ಲಿ ರುದ್ರನೆಂಬ ಶಬ್ದಕ್ಕೆ ಅನೇಕಾರ್ಥಗಳಿರುವುವು. ಮೆ|| ಸ್ಟರ್ಲಿಂಗರವರ ಹೇಳಿಕೆಯ ಬದಲು ಇವನು ರಣಧೀರನಾಗಿದ್ದು ಶತ್ರು ನಿಗ್ರಹವನ್ನು ಮಾಡುತ್ತಿದ್ದನಾದುದರಿಂದ ಮಹಾಪ್ರತಾಪಶಾಲಿಯೆಂದೂ ಪ್ರತಾಪರುದ್ರನೆಂದೂ ಏಕೆಕರೆಯಿಸಿ ಕೊಂಡಿರಬಾರದು ? ಶಬ್ದಗಳ ಭಿನ್ನಾರ್ಥ ಕಲ್ಪನೆಯಿಂದ ಹೆಸರಿನ ನಿಜತ್ವವನ್ನು ಸಾಧಿಸುವುದು ಬಹು ಸಾಹಸದ ಕೆಲಸವೆಂದು ತೋರುತ್ತದೆ. ಪ್ರತಾಪ ರುದ್ರನ ಆಸ್ಥಾನ ಪಂಡಿತನಾದ ವಿದ್ಯಾನಾಥನು ತನ್ನ ಆಶ್ರಯದಾತನ ಚರಿತವನ್ನು ಬರೆದು ಆತನ ಕಲ್ಯಾಣಗುಣವರ್ಣನೆಯನ್ನುಮಾಡಿ ಅವುಗಳನ್ನು ಬೇಕಾದ ಉದಾಹರಣೆಗಳಿಂದ ಸಮರ್ಥಿಸಿರುವ ಪ್ರತಾಪರುದ್ರೀಯವೆಂಬ ಅಲಂಕಾರಗ್ರಂಥದಲ್ಲಿ ಪ್ರತಾಪ ರುದ್ರನ ಹೆಸರನ್ನು ಹೇಳುವಾಗ ನಂದನೆಂಬ ಹೆಸರೂ ಪ್ರತಾಪ ರುದ್ರನಿಗೆ ಇದ್ದಿತಾಗಿ ಹೇಳಬಹುದಾಗಿದ್ದಿತು. ಹಾಗೆ ಎಲ್ಲಿಯೂ ಹೇಳಿರುವುದಿಲ್ಲವಾದುದರಿಂದ ಬಹುಜನ ಸಮ್ಮತವಾದ ಪ್ರತಾಪರುದ್ರನೆಂಬ ಹೆಸರಿನಿಂದಲೇ ಕರೆಯಬೇಕಾಗಿರುವುದು.

ಯಂ. ಕೃಷ್ಣಮಾಚಾರ್ಯರವರು. ಕ್ರಿ. ಶ. ೧೨೯೪-೧೩೨೫ರವರೆಗೆ ಓರಂಗಲ್ಲಿನಲ್ಲಿ ಆಳಿದವನು ರುದ್ರದೇವನೆಂದು ಮಾತ್ರ ಹೇಳಿರುವುದು ಹೊರ್ತು ಅವನು ಕಾಕತೀಯ ಅರಸನೆಂದಾಗಲಿ ಅವನಿಗೆ ಪ್ರತಾಪರುದ್ರನೆಂಬ ಹೆಸರಿದ್ದಿತೆಂದಾಗಲಿ ಹೇಳಿರುವುದಿಲ್ಲ.†

ಪ್ರತಾಪರುದ್ರನು ರಣಧೀರನಾಗಿದ್ದಂತೆ ಕಲಾಭಿಜ್ಞನಾಗಿದ್ದುದಾಗಿ:—

ವಾಣೀಂಮುಖೇನಗೋತ್ರಾಭ್ಯಾಂಶ್ರಿಯಂದೋಷ್ಣಾಚ ಮೇದಿನೀಂ
ಮಾನಯಂಸ್ತುಲ್ಯತಾಂಧತ್ತೇ ತಾಸುರುದ್ರನರೇಶ್ವರಃ ||

ಚಾತುರ್ಯಂಕಿಮುವರ್ಣ್ಯತೇ ಗುಣನಿಧೇಃ ಶ್ರೀವೀರರುದ್ರಪ್ರಭೋ
ರ್ಯತ್ರಾನ್ಯೋನ್ಯವಿರುದ್ಧಯೋರಪಿಮಹದ್ವಾಣೀಶ್ರಿಯೋರಾರ್ಜವಂ
ಕಿಂಚಾಭ್ಯಾಂಸದೃಶೋಪಚಾರಲಲಿತಾಂತತ್ರಾದ್ಯಶ್ರೈರುತ್ಸವೈ
ರ್ನಿಸ್ಸಾಪತ್ನ್ಯಮಿಮಾಂಭುವಂಸಪ್ನಪತಿರ್ಧತೇದಿಶಾಂಜಿತ್ವರಃ ||

ಎಂಬ ಶ್ಲೋಕಗಳಿಂದ ತಿಳಿಯಬರುತ್ತದೆ. §

---

* Asiatic Researches Vol. XV act. and Rev. Taylors Hand Book of Hindu Mythology and Philosophy P. 77-79.

† Classical Sanskrit Literature P. 103.

§ ಪ್ರತಾಪ ರುದ್ರೀಯ ಪುಟ ೧೧-೧೮ ಶ್ಲೋ. ೧೯-೩೭.

ಕಾಕತೀಯರೆಂದರೆ "ಕಾಕತಿರ್ನಾಮದುರ್ಗಾಶಕ್ತಿ ಕೀಕಶಿಲಾನಗರೇಶ್ವರಾ ಣಾಂಕುಲದೇವತಾಸಾಶಕ್ತಿರ್ಭಜನೀಯಾಸ್ಯೇತಿ ಕಾಕತೀಯಃ" † ಕಾಕತಿ ಎಂಬ ದುರ್ಗಿಯನ್ನೇ ಕುಲದೇವತೆಯನ್ನಾಗಿ ಪೂಜಿಸುವವರೇ ಕಾಕತೀಯರು ಇವರಧ್ವಜ ದಲ್ಲಿ ವರಾಹದ ಗುರುತಿರುವುದಾಗಿ:—

ಮಾಥಾನಾಚಲಮೂಲಮೇಚಕ ಶಿಲಾಸಂಘಟ್ಟನಶ್ಯಾಮಿತಾ
ಕಾರಂಯುತ್ತುಹಿನದ್ಯುತೌಸ್ಫುರತಿತತ್ಸಾರಂಗಮಾಚಕ್ಷತೇ
ಮನ್ಯೇನನ್ಸಿಹವೀರ ರುದ್ರನೃಪತೇಃ ಕೀರ್ತಿಶ್ರಿಯಾನಿರ್ಜಿತ
ಸ್ತನ್ಮುದ್ರಾಂಕ ವರಾಹವಿಂದುವುುರಸಾಬಿಭೃತ್ಸವಿಜೃಂಭತೇ* ||

ಎಂಬುದರಿಂದ ಗೊತ್ತಾಗುತ್ತದೆ.:—

ಇವನು ಯಯಾತಿ ಚರಿತವೆಂಬ ಏಳು ಅಂಕಗಳುಳ್ಳನಾಟಕವನ್ನು ಬರೆದಿರು ವದಾಗಿಯೂ ಯಯಾತಿಶರ್ಮಿಷ್ಠೆಯರ ಪರಿಣಯು ವಿಚಾರವು ಹೇಳಿರುವುದಾಗಿ ಯಂ. ಕೃಷ್ಣಮಾಚಾರ್ಯರವರ ಒಕ್ಕಣಿಕೆಯು ಇರುವುದು.$ ಆದರೆ ಗ್ರಂಥವು ಅನು ಪಲಬ್ಧವು.



## ವಿ ದ್ಯಾ ನಾ ಥ

ಇವನು ಬ್ರಾಹ್ಮಣನು. ಓರಂಗಲ್ಲಿ (warrangal) ನಲ್ಲಿ ಆಳಿದ ಪ್ರತಾಪ ರುದ್ರನ ಆಸ್ಥಾನಪಂಡಿತನು. ಇವನು ತನ್ನ ಆಶ್ರಯದಾತನ ಹೆಸರಿನಲ್ಲಿ ಅಲಂಕಾರ ಗ್ರಂಥವನ್ನುಬರೆದು ಅದನ್ನು ಪ್ರತಾಪರುದ್ರೀಯವೆಂದೇ ಕರೆದಿರುವನು.

ಈ ವಿಚಾರವು:—

ಪ್ರತಾಪರುದ್ರದೇವಸ್ಯ ಗುಣಾನಾಶ್ರಿತ್ಯನಿರ್ಮಿತಃ
ಅಲಂಕಾರಪ್ರಬಂಧೋಽಯಂ ಸಂತಃ ಕರ್ಣೋತ್ಸವೋಽಸ್ತುನಃ || ೯
ಕಾಕತೀಯನರೇಂದ್ರಸ್ಯ ಯಶೋಭೂಷಯಿತುಂಕೃತಾ
**ವಿದ್ಯಾನಾಥ**ಕೃತಶ್ಶ್ರೀಯಂ ಸ್ವಯಂಕೇನವಿಭೂಷ್ಯತೇ || ೧೦ ||

ಎಂದು ಹೇಳಿರುವ ಪ್ರತಾಪರುದ್ರೀಯ ಶ್ಲೋಕಗಳಿಂದ ವ್ಯಕ್ತವಾಗುತ್ತದೆ. ಇದಕ್ಕೆ ಪ್ರಸಿದ್ಧವ್ಯಾಖ್ಯಾನಕಾರನಾದ ಮಲ್ಲಿನಾಥನ ಮಗ ಕುಮಾರಸ್ವಾಮಿ ಕೃತ ರತ್ನಾಪಣವೆಂಬ ವ್ಯಾಖ್ಯಾನವಿರುವುದು. ಈ ಅಲಂಕಾರಗ್ರಂಥಕ್ಕೆ ಪ್ರತಾಪರುದ್ರ ಯಶೋಭೂಷಣವೆಂಬ ನಾಮಾಂತರವಿರುವುದಾಗಿ ಆಯಾ ಪ್ರಕರಣಾಂತ್ಯದಲ್ಲಿ

† ಪ್ರತಾಪ ರುದ್ರೀಯ ಪುಟ ೭. F. N.
* ಪ್ರತಾಪರುದ್ರೀಯ P. 37
$ Classical Sanskrit Lateratura P. 103.

'ಇತಿಶ್ರೀವಿದ್ಯಾನಾಥಕೃತೌಪ್ರತಾಪರುದ್ರಯಶೋಭೂಷಣಾಲಂಕಾರಶಾಸ್ತ್ರೇ' ಎಂದು ಹೇಳಿರುವುದರಿಂದ ಗೊತ್ತಾಗುತ್ತದೆ. ವಿದ್ಯಾನಾಥನವಿಚಾರವಾದ ಈ ಕಥೆ ಯೊಂದಿರುವುದು.

ವಿದ್ಯಾನಾಥನು ಗರ್ಭಾಷ್ಟಮದಲ್ಲಿ ಉಪನೀತನಾಗಿ ಚಿಕ್ಕತನದಲ್ಲಿಯೇ ವೇದ ವಿದ್ಯೆಯನೋದಿ, ದುರ್ಯೋಗದಿಂದ ಕೊಂಚವಾಗಿದ್ದ ಪಿತರಾರ್ಜಿತವಿತ್ತಾಪಾರ ವೆಲ್ಲವೂ ದಾಯಾದಿಗಳಿಂದ ಅಪಹೃತವಾಗಲು ಬಹುಕಷ್ಟದಿಂದ ಜೀವನವನ್ನು ಸಾಗಿಸುತ್ತ ತನ್ನ ಹದಿನಾರನೆಯ ವಯಸ್ಸಿನಲ್ಲಿ ರಾಮಾಯಣಾದಿ ಸಂಸ್ಕೃತಗ್ರಂಥ ಗಳನ್ನೋದಿ, ಅದರಲ್ಲಿ ಹೇಳಿರುವ ಪ್ರಾಚೀನರಾಜರ ಜೀವನಚರಿತೆಯನ್ನು ಮನನ ಮಾಡುತ್ತ ತನ್ನ ನಾಲ್ವತ್ತನೆಯ ವಯಸ್ಸಿನಲ್ಲಿ ಸೃಷ್ಟಿಕ್ರಮವನ್ನು ಕುರಿತು ಉತ್ತಮ ಗ್ರಂಥವನ್ನು ಬರೆದು ಅದರಿಂದ ಕೊಂಚಮಟ್ಟಿಗೆ ದ್ರವ್ಯಸಹಾಯವಾದುದಾದರೂ ಮದುವೆಗೆ ನೆರದಿರುವ ತನ್ನೊಬ್ಬಳೇ ಮಗಳಿಗೆ ವಿವಾಹವನೆಸಗಲು ಉಪಪತ್ತಿ ಇಲ್ಲ ದುದಕ್ಕೆ ಪರಿತಪಿಸುತ್ತ, "ನಿರಾಶ್ರಯಾನಶೋಭಂತೇಪಂಡಿತಾವನಿತಾಲತಾ" ಎಂಬು ದನ್ನು ಜ್ಞಾಪಿಸಿಕೊಂಡು ಎಂತಾದರೂ ಯಾವುದಾದರೊಂದು ಕಾರಣದಿಂದ ರಾಜಾಶ್ರಯವನ್ನು ಸಂಪಾದಿಸಲುಜ್ಜುಗಿಸಿ ಒಂದಾನೊಂದು ದಿವಸ ಮಂತ್ರಿಯಬಳಿ ರಾಜಸಭೆಯಲ್ಲಿ ಕುಳಿತುಕೊಂಡಿರಲು ಏಲೇಶ್ವರಾಗ್ರಹಾರದಶಿವಯ್ಯನೆಂಬ ಕವಿ ಯೊಬ್ಬನು ರಾಜಸಮ್ಮುಖಕ್ಕೆ ಬಂದು ರಾಜವರ ! ಅಗ್ರಹಾರದವರ ದುಸ್ಥಿತಿಯ ನ್ನೇನೆಂದು ಹೇಳಲಿ:—

ನವಲಕ್ಷಧನುರ್ಧರಾಧಿನಾಥೇ
ಪೃಥಿವಿಂಶಾಸತಿವೀರಭದ್ರಭೂಪೇ
ಅಭವತ್ಪರಮಾಗ್ರಹಾರಪೀಡಾ

ಎಂದು ಹೇಳಿದುದನ್ನು ಕೇಳಿ. ಅಹಹ ! ಎಂತಹ ಅಸಂಗತ ! ಹಾಗಾಗಲು ಕಾರಣವೇನು ? ಒಡನೆ ಬ್ರಾಹ್ಮಣರ ಭೂಮಿಕಾಣಿಗಳನ್ನು ಬಿಟ್ಟುಕೊಡತಕ್ಕು ದೆಂದು ಆಜ್ಞಾಪಿಸಿ ಕೋಪದಿಂದ ವಿದ್ಯಾನಾಥನಕಡೆ ನೋಡಲು ವಿದ್ಯಾನಾಥನು:-

"ಕುಚಕುಂಭೇಷು ಕುರಂಗಲೋಚನಾನಾಂ"

ಎಂದು ಶ್ಲೋಕಪೂರ್ತಿಯನ್ನು ಮಾಡಲು ರಾಜನು ಪಂಡಿತೋತ್ತಮ ! ಕವಿ ಶಿವಯ್ಯನು ಹೇಳಿದುದೇನೆಂದು ಪುನಃ ಕೇಳಿದುದಕ್ಕೆ ವಿದ್ಯಾನಾಥನು:—

ನವಲಕ್ಷಧನುರ್ಧರಾಧಿನಾಥೇ
ಪೃಥಿವಿಂಶಾಸತಿವೀರಭದ್ರಭೂಪೇ
ಅಭವತ್ಪರಮಾಗ್ರಹಾರಪೀಡಾ
ಕುಚಕುಂಭೇಷುಕುರಂಗಲೋಚನಾನಾಂ ||

ಎಂದು ತಿರುಗಿಸಿ ಹೇಳಿದುದನ್ನು ಕೇಳಿ ರಾಜನು ಸಂತುಷ್ಟನಾಗಿರಲು. ಕಾಲ ಕ್ರಮದಲ್ಲಿ ದೆಹಲಿಯ ಚಕ್ರವರ್ತಿಗೂ ಇವನಿಗೂ ಕೊಳಗುಳ ಒದಗಿ ಪ್ರತಾಪ ರುದ್ರನು ಸೋತು ಸೆರೆಗೊಯ್ಯಲ್ಪಟ್ಟು ಮೂರು ವರ್ಷಗಳು ಕಾರಾಗೃಹವನ್ನನುಭ ವಿಸಿ ಅನಂತರ ಮುಕ್ತನಾಗಿ ತನ್ನ ರಾಜ್ಯಕ್ಕೆ ಬಂದು ತನ್ನ ವಿಚಾರವಾಗಿ ಬರೆದಿರುವ **ಪ್ರತಾಪರುದ್ರೀಯ**ವೆಂಬ ಗ್ರಂಥವನ್ನು ನೋಡಿ, ಕಡುಸಂತಸಗೊಂಡು ವಿದ್ಯಾನಾಥ ನಿಗೆ ಬೇಕಾದಷ್ಟು ಧನಕನಕ ವಸ್ತ್ರಾದಿಗಳನಿತ್ತು ರಾಜ್ಯಭಾರವನ್ನು ತನ್ನ ತಮ್ಮ ನಾದ ಅನಮದೇವನಿಗೆ ವಹಿಸಿ ತಾನು ವಿರಕ್ತನಾದನು. ವಿದ್ಯಾನಾಥನು ಈರೀತಿ ದೊರೆತ ದ್ರವ್ಯದಿಂದ ಮಗಳ ವಿವಾಹವನ್ನು ಸಾಂಗವಾಗಿ ನೆರವೇರಿಸಿ ಸುಖದಿಂದಿರು ತಿರ್ದು ಕಾಲಕ್ರಮದಲ್ಲಿ ಅನಮದೇವನ ರಾಜ್ಯಸಮಯದಲ್ಲಿ ತನ್ನ ೫೫ನೆಯ ವಯಸ್ಸಿನಲ್ಲಿ ಮೃತನಾದನು.* ಇವನು ಕ್ರಿ. ಶ. ೧೪ನೆಯ ಶತಮಾನದವನು.

ಇವನು ಪ್ರತಾಪರುದ್ರೀಯವೆಂಬ ಅಲಂಕಾರಗ್ರಂಥವಲ್ಲದೆ ಪ್ರತಾಪರುದ್ರ ಕಲ್ಯಾಣವೆಂಬ ನಾಟಕವನ್ನೂ ಬರೆದಿರುವನು ಇದರಲ್ಲಿ ೫ ಅಂಕಗಳಿರುವವು ಕಥಾ ನಾಯಕನ ವಿಚಾರವಾಗಿ ಸೂತ್ರಧಾರನು:—

ತಂ ಸುಜಾತಂ ಸಮುದ್ವೀಕ್ಷ್ಯ ಕ್ಷೋಣ್ಯಾಂ ರವಿಮಿವೋದಿತಂ
**ಪ್ರತಾಪರುದ್ರ** ಇತ್ಯಾಖ್ಯಾಮಕರೋತ್ಕಾಕತೀಶ್ವರಃ ॥ ೧—೧೧.
ವಿಷ್ಣೋರ್ವಿಶೇಷಾತ್ಕೆ ವೀರಸ್ಯ ಕಾಕತೀಯಕುಲೇ ಸ್ಥಿತಂ
ಅವತಾರಮಮುಂ ಜ್ಞಾತ್ವಾ **ವೀರರುದ್ರಂ** ಪ್ರಚಕ್ಷತೇ ॥ ೧—೧೨.

ಎಂದೂ, ಕವಿಯ ವಿಚಾರವಾಗಿ:—

ತೇಜಃ ಪರ್ಯಾಯಹಾರಯೋಃ
ಕಿಂಕಿಂ ಸಂಬೋಧನಂ ಮತಂ
ಕಿಮಾಶೀರ್ವಾದವಿಷಯೋ
**ವಿದ್ಯಾನಾಥ**ಕೃತಿಶ್ಚ ಕಾ ॥ ೧—೧೦.

ಎಂದೂ ಹೇಳಿಕೊಂಡಿರುವನು.

ಈ ನಾಟಕದಲ್ಲಿ ಪಾರ್ವತೀ ಪರಮೇಶ್ವರರ ವಿವಾಹಸಂಬಂಧವನ್ನು ಸೂಚಿಸು ವುದಾದ ಮಂಗಳಾಚರಣೆಯ ಮೂಲಕ ನಾಟಕಾರಂಭವನ್ನು ಮಾಡಿ, ಪ್ರತಾಪ ರುದ್ರನ ದಿಗ್ವಿಜಯ ಮತ್ತು ರಾಜ್ಯ ಪ್ರಾಪ್ತಿಯನ್ನು ಹೇಳಿ ಮುಗಿಸಿರುವನು ಪ್ರತಾಪರುದ್ರ ಕಲ್ಯಾಣ—ಎಂಬದು ಪ್ರತಾಪರುದ್ರನು ರಾಜ್ಯಲಕ್ಷ್ಮಿಯನ್ನು ವರಿಸಿ ಪಟ್ಟಾಭಿಷಿಕ್ತನಾದನೆಂಬುದು ಈ ನಾಟಕದ ಕಥಾವಸ್ತು. ಇದನ್ನು ಪ್ರತಾಪ ರುದ್ರೀಯದಲ್ಲಿ ನಾಟಕೋದಾಹರಣ ಪ್ರಕರಣದಲ್ಲಿ:—

* Dekkan Poets P. 44-48

ಭದ್ರಾಂ ಕೌತುಕವೇದಿಮಾಗತವತೋರಸ್ಯೋನ್ಯಮಾಸೇದುಷೋಃ
ಶ್ಶೈಲ್ಯಿಮೇರುಹಿಮಾಚಲಪ್ರಭೃತಿಭಿರ್ದೇವೈರ್ಹರೀಂದ್ರಾದಿಭಿಃ
ವ್ಯಾಪ್ತಾಂ ಪಾರ್ಶ್ವಯುಗೇ ಪುರೋಂಬುಜಭುವಾ ಪಶ್ಚಾಚ್ಚ ಮೇನಾದಿಭಿಃ
ಸಾಧ್ವೀಭಿಃ ಶಿವಯೋರಪಾಂಗಸರಣಿರ್ವೈವಾಹಿಕೀ ಪಾತುವಃ ‖ ‡

ಎಂಬ ಪ್ರತಾಪರುದ್ರಕಲ್ಯಾಣದ ನಾಟಕದ ಮಂಗಳಾಚರಣವನ್ನು ಹಾಗೆ ಹಾಗೇ ಉದಾಹರಿಸಿಕೊಂಡಿರುವನು.

ಈ ನಾಟಕದಲ್ಲಿ ಯಾವುದಾದರೊಂದು ಹೇಳಿಸಿಕೊಳ್ಳುವಂತಹ ವಿಚಾರಗಳೊಂದೂ ಕಂಡುಬರುವುದಿಲ್ಲವಾದುದರಿಂದ ಈ ನಾಟಕವನ್ನು ಸಹೃದಯರಿಂದ ವಿವೇಚಿಸುವರಿಗೆ ಪ್ರತಾಪರುದ್ರೀಯವೆಂಬ ಲೋಕೋತ್ತರ ಅಲಂಕಾರ ಗ್ರಂಥವನ್ನು ಬರೆದು ಕೀರ್ತಿಶೇಷನಾಗಿರುವ ವಿದ್ಯಾನಾಥನೂ, ಪ್ರತಾಪರುದ್ರಕಲ್ಯಾಣನಾಟಕವನ್ನು ಬರೆದಿರುವ ವಿದ್ಯಾನಾಥನೂ ಭಿನ್ನವ್ಯಕ್ತಿಗಳೇ ಅಥವಾ ಏಕವ್ಯಕ್ತಿಯೋ ಹೇಗೆಂಬ ಸಂದೇಹಕ್ಕೆಡೆಗೊಡುತ್ತದೆ. ಏಕವ್ಯಕ್ತಿಯೆನ್ನುವುದಾದರೆ ವಿದ್ಯಾನಾಥನು ಕೇವಲ ಬಾಲ್ಯದಲ್ಲಿ ಪ್ರತಾಪರುದ್ರ ಕಲ್ಯಾಣ ನಾಟಕವನ್ನು ಬರೆದು ಕಾಲಕ್ರಮದಲ್ಲಿ ಪ್ರತಾಪರುದ್ರನ ಆಶ್ರಯಯೋಗವನ್ನು ಹೊಂದಿ "ಪ್ರತಾಪರುದ್ರೀಯ" ಎಂಬ ಅಲಂಕಾರ ಗ್ರಂಥವನ್ನು ಬರೆದು ಉದಾಹರಣಕ್ಕೆ ತಾನು ಬರೆದಿರುವ ನಾಟಕವನ್ನೇ ಹೇಳಿಕೊಂಡಿರಬೇಕಾಗಿ ಯೋಚಿಸಲಾಗುತ್ತದೆ. ಆದರೆ ಈ ಎರಡು ಗ್ರಂಥಗಳ ಸಮ್ಯಕ್ಪರಿಶೀಲನದಿಂದಲೂ, ತುಲನಾತ್ಮಕ ದೃಷ್ಟಿಯಿಂದ ವಿವೇಚಿಸುವರಿಗೆ ಪರಸ್ಪರ ಭಿನ್ನವ್ಯಕ್ತಿಗಳಾಗಿರಬೇಕೆಂದು ತೋರುತ್ತದೆ. ಇದು ಸರಿಯೆಂದು ನಮಗೆನಿಸುತ್ತದೆ. ನಾಟಕರಚನೆಯೂ ಸಾಧಾರಣ, ವರ್ಣನೆಯೂ ಸಾಧಾರಣ, ವಿಷಯವೂ ಸಾಧಾರಣ, ಶೈಲಿಯೂ ಸಾಧಾರಣವಾಗಿರುವುದರಿಂದ ಯಾವನೋ ವಿದ್ಯಾನಾಥ ನಾಮಸಾಮ್ಯದ ಸಾಧಾರಣ ಕವಿಯೊಬ್ಬನು ಬರೆದಿರಬಹುದಾಗಿ ತೋರುತ್ತದೆ. ಹೇಗೂ ಚರ್ಚಾಸ್ಪದವಾದ ವಿಚಾರ.



## ಸಿ ೦ ಗ ಭೂ ಪಾ ಲ

ಇವನು "ರೇಚೆಲ್ಲ"ವಂಶದವನು. ಇವನರಾಜ್ಯವು ವಿಂಧ್ಯಾದ್ರಿಗೂ ಶ್ರೀಶೈಲಕ್ಕೂ ಮಧ್ಯದಲ್ಲಿ ಇದ್ದಿತೆಂದೂ, ಇದಕ್ಕೆ "ರಾಜಾಚಲಂ" ಎಂಬದು ವಂಶಪಾರಂಪರ್ಯವಾಗಿ ರಾಜಧಾನಿಯಾಗಿತ್ತೆಂತಲೂ ತಿಳಿಯುಬರುತ್ತದೆ. ಇವನ ತಂದೆಯ. ಹೆಸರು ಅನಂತ. ತಾಯಿಯ ಹೆಸರು ಅನ್ನಮಾಂಬಾ. ಈ ಅನಂತನಿಗೆ ಅನ್ನಪೋತನೆಂದೂ

‡ (ಪ್ರತಾಪರುದ್ರೀಯೇ ನಾಟಕಪ್ರಕರಣಂ ಪುಟ ೯೩.

ಹೆಸರು. ಇವನ ಅಜ್ಜನು ಸಿಂಗಪ್ರಭು. ಮುತ್ತಜ್ಜನು ದಾಚಯನಾಯಕ. ಸಿಂಗ ಭೂಪಾಲನನ್ನು ಸಿಂಗಮನಾಯಕನೆಂದೂ ಕರೆಯುವುದುಂಟು. ಇವನ ವಂಶಾವಳಿ:-




(೧) ಅನ್ನಪೋತ (೨) ಕುಮಾರ ದಾಚಯ (೩) ವಲ್ಲಭರಾಯ ಇತರ ಮೂವರು

ಸಿಂಗ ಭೂಪಾಲನ ವಿಚಾರವಾಗಿ:—

ತತ್ರ ರೇಚಿಲ್ಲವಂಶಾಬ್ಧಿ ಶರದ್ರಾಕಾಸುಧಾಕರಃ
ಕಲಾನಾಧಿರುದಾರ ಶ್ರೀರಾಸೀದ್ದಾಚಯನಾಯಕಃ ॥ ೫
ತಸ್ಯ ಭಾರ್ಯಾ ಮಹಾಭಾಗ್ಯಾ ವಿಷ್ಣೋಃ ಶ್ರೀರಿವ ವಿಶ್ರುತಾ
ಪೋಚಮಾಂಬಾ ಗುಣೋದಾರಾ ಜಾತಾ ತಾಮರಸಾನ್ವಯಾತ್ ॥ ೮
ತಯೋರಭೂವನ್ ಕ್ಷಿತಿಕಲ್ಪವೃಕ್ಷಾಃ
ಪುತ್ರಾಸ್ತ್ರಯಸ್ತ್ರಾಸಿತ ವೈರಿವೀರಾಃ
ಸಿಂಗಪ್ರಭುರ್ವೇನ್ನಮನಾಯಕಶ್ಚ
ವೀರಾಗ್ರಣೀ ರೇಚಮಹೀಪತಿಶ್ಚ ॥ ೯
ಸೋಯಂ ರಂಗಮಹೀಪಾಲೋ ವಸುದೇವ ಇತಿಸ್ಫುಟಂ
ಅನಂತಮಾಧವಾಯಸ್ಯ ತನೂಜೌ ಲೋಕರಕ್ಷಕೌ ॥ ೧೫
ಅನ್ನಮಾಂಬೇತಿ ವಿಖ್ಯಾತಾ ತಸ್ಯಾಸೀದ್ಧರಣೀಪತೇಃ
ದೇವೀ ಶಿವಾ ಶಿವಸ್ಯೇವ ರಾಜಮೌಲೀರ್ಮಹೋಜ್ವಲಾ ॥ ೨೪
ತಯೋರಭೂತಾಂ ಪುತ್ರೌ ದ್ವಾವಾದ್ಯೋ ದೇವಗಿರೀಶ್ವರಃ
ದ್ವಿತೀಯಸ್ತ್ವದ್ವಿತೀಯೋಸೌ ಯಶಸಾ ಸಿಂಗಭೂಪತಿಃ ॥ ೨೬
ಮಂದಾರಪಾರಿಜಾತಕ ಚಂದನಸಂತಾನ ಕಲ್ಪಮಣಿಸದೃಶೈಃ
ಅನಪೋತದಾಚವಲ್ಲಭವೇದಗಿರಿಸ್ವಾಮಿಮಾಂಚಯಾ ಸ್ವಪನ್ನಯ
ಸಂಜ್ಞೈಃ ॥ ೩೫

ಎಂಬಿವೇ ಮೊದಲಾಗಿ ಹೇಳಲ್ಪಟ್ಟದೆ.

ಕಾಲ:—ಇವನು ಕ್ರಿ ಶ ೧೩೩೦ ರಲ್ಲಿದ್ದುದಾಗಿ ವೆಂಕಟರಾಜರ ವಂಶಾವಳಿ ಚರಿತದಿಂದ ಗೊತ್ತಾಗುತ್ತದೆ. ಆದುದರಿಂದ ಇವನನ್ನು ಕ್ರಿ. ಶ. ೧೪ನೆಯ ಶತಮಾನದ ಪೂರ್ವಾರ್ಧದವನೆನಬೇಕಾಗುವುದು.

ಗ್ರಂಥ:—'ಇವನು ರಸಾರ್ಣವಸುಧಾಕರ' ಎಂಬ ಅಲಂಕಾರ ಗ್ರಂಥವನ್ನು ಬರೆದಿರುವನು. ಇದರಲ್ಲಿ ನಾಟ್ಯಾಲಂಕಾರದಲ್ಲಿನ ರಂಜಿಕೋಲ್ಲಾಸವೆಂದೂ, ರಸಿಕೋಲ್ಲಾಸವೆಂದೂ, ಭಾವೋಲ್ಲಾಸವೆಂದೂ, ಮೂರುತೆರನಾಗಿರುವುವು. ಪ್ರತಿ ಉಲ್ಲಾಸದಕೊನೆಯಲ್ಲಿ “ ಇತಿ ಶ್ರೀಮದಾಂಧ್ರಮಂಡಲಾಧೀಶ್ವರ ಪ್ರತಿಗಂಡ ಭೈರವ ಶ್ರೀಯನ್ನಪೋತನರೇಂದ್ರನಂದನ ಭುಜಬಲಭೀಮ ಶ್ರೀಸಿಂಗಭೂಪಾಲರ ಚಿತೇರಸಾರ್ಣವಸುಧಾಕರನಾಮ್ನಿನಾಟ್ಯಾಲಂಕಾರೇ .........ಎಂದಿದೆ. ಇದರಲ್ಲಿ ನಾಯಕ ನಾಯಿಕಾ ಲಕ್ಷಣಗಳನ್ನು ಹೇಳಿ ಅವರವರ ಭಾವನಿರೂಪಣೆಯನ್ನು ಮನಮುಟ್ಟುವಂತೆ ತೋರಿಸಿರುವನು. ಇದರಲ್ಲಿ ಹೇಳಿರುವ ಅನೇಕಶ್ಲೋಕಗಳು ದಶರೂಪಕ ಶ್ಲೋಕಗಳನ್ನು ಹೋಲುವುವು. ಇವನ ಶ್ಲೋಕಗಳನ್ನು ಮಹಾ ವ್ಯಾಖ್ಯಾನಕಾರನಾದ ಮಲ್ಲಿನಾಥನು ತನ್ನ ವ್ಯಾಖ್ಯಾನದಲ್ಲಿ ಉದಾಹರಿಸಿ ಕೊಂಡಿರುವನು. ಇದಲ್ಲದೆ ' ಸಂಗೀತ ರತ್ನಾಕರ ವ್ಯಾಖ್ಯಾ ' ಎಂಬ ಬೇರೊಂದು ಗ್ರಂಥವನ್ನು ಇವನು ಬರೆದಿರುವುದಾಗಿ ತಿಳಿಯಬರುತ್ತದೆ. ಗ್ರಂಥವು ಉಪಲಬ್ಧವಿಲ್ಲ.



## ವಿ ಶ್ವ ನಾ ಥ (೧)

ಇವನು ಬ್ರಾಹ್ಮಣನು. ಎರಡನೆಯ ಪ್ರತಾಪರುದ್ರನ ಸಮಕಾಲೀನನು. ಇವನು 'ಸೌಗಂಧಿಕಾಹರಣ' ಎಂಬ ನಾಟಕವನ್ನು ಬರೆದಿರುವನು. ಇದು ಪ್ರೇಕ್ಷಣಿಕ ಜಾತಿಗೆ ಸೇರಿದುದು. ಈ ವಿಚಾರವು:—

> ಅದ್ಯಖಲುನಿಖಿಲರಾಜಲೋಕ ಮೌಳಿಮಾಣಿಕ್ಯಮಂಜರೀಪುಂಜಕಿಂಜಲ್ಕಿತ ಚರಣಾರವಿಂದೇನವೃಂದಾರಕನಗರಕಾಮಿನೀಮುಖಾದಿಪಾಸಚತುರಯಶಃ ಕರ್ಪೂರಚಾಲೇನವೇಲಾವನಾವಲೀ ವಿಶ್ರಾಂತನಿಜಬಲತುರಂಗನಿರ್ಘೋಷಣದುರವಲಿಪ್ತದಮನವೀರಭದ್ರೇಣ ರಾಜ್ಞಾಪ್ರತಾಪರುದ್ರೇಣ ಸಂಭಾವಿತೈರಶೇಷವಿದ್ಯಾವಿಶೇಷಸಾರಸರ್ವಜ್ಞ ಧೌರೇಯಮತಿಭಿಃ ಸಭಾಸದ್ಭಿ ರಾಹೂಯಸಬಹುಮಾನಮಾದಿಷ್ಟೋಸ್ಮೀತಿ ||

ಎಂಬ ಸೂತ್ರಧಾರನ ಹೇಳಿಕೆಯಿಂದಲೂ, ಕವಿಯು ತನ್ನ ಸೋದರ ಮಾವನಾದ ಅಗಸ್ತ್ಯನೆಂಬವನ ಬಳಿಯಲ್ಲಿದ್ದು ವಿದ್ಯಾಭ್ಯಾಸವನ್ನು ಮಾಡಿದ ಹಾಗೆ:—

ವಾಚಸ್ತಸ್ಯ ಕವೇರುದಾರಮಧುರಾ ಇತ್ಯತ್ರ ಚಿತ್ರಂ ಕಿಮು
ಪ್ರಖ್ಯಾತಃ ಸಕಲಾಸುದಿಕ್ಷುಗುಣಿಷು ಶ್ರೇಯಾನಗಸ್ತ್ಯಸ್ಸಧೀಃ
ವೇಧಶ್ಚಂದ್ರಮುಖೀಕರಾಂಗುಲಿದಲಾಸಂಗಕ್ವಣದ್ವಲ್ಲಕೀ
ವಾಚೋಯುಕ್ತಿಸಹೋಕ್ತಿದರ್ಶಿತಸುಧಾಜನ್ಮಾ ಸ ಯನ್ಮಾತುಲಃ ||

ಎಂಬ ಶ್ಲೋಕದಿಂದ ತಿಳಿಯಲಾಗುತ್ತದೆ.

ಪಾಂಡವರು ಅಜ್ಞಾತವಾಸಿಗಳಾಗಿರುವಾಗ ಒಬ್ಬಾನೊಬ್ಬ ಗಂಧರ್ವನು ತಂದುಕೊಟ್ಟ ಸೌಗಂಧಿಕವೆಂಬ ಹೂವನ್ನು ನೋಡಿ, ದ್ರೌಪದಿಯು ಅಂತಹ ಹೂಗಳನ್ನು ತರಿಸಿಕೊಡಬೇಕೆಂದು ಭೀಮನನ್ನು ಪ್ರಾರ್ಥಿಸುವಳು. ಭೀಮನು ಅಂತೆಯೇ ಆಗಲೆಂದು ಹೂವನ್ನರಸುತ್ತಾ ಶೈಲಾಂತರಾಳವನ್ನುಹೊಕ್ಕು ನೋಡುತ್ತ ಗಂಧಮಾದನ ಪರ್ವತದ ಬಳಿಗೈದಿ, ಅಲ್ಲಿದ್ದ ಗಂಧಮಾದನಾದಿ ಕಪಿಸೈನ್ಯವನ್ನು ನೋಡಿ ಅತೀತಭುಜಬಲವುಳ್ಳ ಆಂಜನಾನಂದನನಿಗಾನಂದವಾಗುವ ಹಾಗೆ ಶ್ರೀರಾಮ ಕಥೆಯನ್ನುಹೇಳಲು, ಮಾರುತಿಯು ಆನಂದಗೊಂಡು ಭೀಮನಬಳಿ ಸಾರ್ದು ಬಂದ ಹದನಮಂ ವಿಚಾರಿಸಿ ಹೂವಿರುವ ಸ್ಥಳವನ್ನು ಹೇಳಲು ಭೀಮನು ಹೊರಟು ಅಲ್ಲಿರ್ದ ಕುಬೇರನಕಡೆಯವರಾದ ತೋಟಗಾರರನ್ನು ಮರ್ದಿಸಿ, ಸಮಾಧಾನ ಮಾಡಲು ಬಂದ ಕುಬೇರನೊಡನೆ ಮಾತನಾಡುತ್ತಿರುವಷ್ಟರಲ್ಲಿ ಭೀಮನನ್ನು ಹುಡುಕುತ್ತ ಬರುತಲಿದ್ದ ದ್ರೌಪದಿ ಮತ್ತು ಯುಧಿಷ್ಠಿರಾದಿಗಳನ್ನು ಘಟೋತ್ಕಚನು ಇಲ್ಲಿಗೆ ಕರೆತರಲು ಅವರೆಲ್ಲರೂ ಭೀಮನೊಡಗೊಂಡು ಹರ್ಷಚಿತ್ತನಾದ ಕುಬೇರನಿಂದ ಬೇಕಾದಷ್ಟು ಹೂಗಳನ್ನು ಸ್ವೀಕರಿಸಿ ನಡೆತಂದರೆಂಬುದೇ ಕಥೆಯ ಸಾರಾಂಶ. ಈ ನಾಟಕದ ಶೈಲಿಯು ಪಾಂಚಾಲೀರೀತಿಯಲ್ಲಿರುವುದು. ಇದರಲ್ಲಿ ಭೀಮನಿಗೂ ಹನುಮನಿಗೂ ನಡೆದ ವಿಚಾರಗಳು ಚೆಲುವಾಗಿರುವುವು. ಭಾಷಣವು ವೀರರಸೋತ್ಸಾಹದಿಂದ ಕೂಡಿಕೊಂಡಿರುವುದು.

ಮಾದರಿಗಾಗಿ ಕೆಲವು ಶ್ಲೋಕಗಳನ್ನು ಬರೆಯುವೆವು. ಹನುಮ ಮತ್ತು ಭೀಮನ ಸಂವಾದವನ್ನು ಕೇಳಿ ಸಾಶಂಕರಾಗಿ ಹನುಮನು ರಾಮಾಯಣ ಕಾಲದವನೆಂದೂ, ಭೀಮನು ಮಹಾಭಾರತದ ಕಾಲದವನೆಂದೂ, ಇವೆರಡರ ಕಾಲಕ್ಕೆ ಬಹಳ ಅಂತರವಿರುವುದೆಂದೂ ತರ್ಕಿಸುವ ಪಾಠಕರು ಹನುಮನು ಚಿರಜೀವಿ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳುವರಾಗಬೇಕು.

ಸರೋವರ ವರ್ಣನೆ:—

ಏತಾಸ್ತಾಃ ಕದಲೀವನಾಂತರಭುವೋ ನೀರಂಧ್ರನದ್ಧದ್ರುಮ
ಚ್ಛಾಯಾಂತಃ ಶಿಶಿರೀಭವತ್ತಲಗುಹಾನಿದ್ರಾಣಸಿದ್ಧಾಧ್ವಗಾಃ
ಯತ್ರ ಕ್ರೀಡತಿ ಪಾಕಜರ್ಜರಪತತ್ಪಾಕ್ಷೀರಗುಚ್ಛಾವಲೀ
ಪೀಡಾಮ್ರೇಡನಪಿಂಜರೀಕೃತನಿಜಕ್ರೋಡಂ ಕುರಂಗೀಕುಲಂ || ೯೯

ಸೋಪಾನೋಪಲಮೂಲಘಟ್ಟಿತಮುಕುರಪ್ರೇಂಖತ್ತರಂಗಾಕುಲಂ
ದೃಷ್ಟೇರ್ದರ್ಶಿತದೃಷ್ಟಿವೃದ್ಧಿ ತದಿದಂ ದಿವ್ಯಂ ಸರೋ ದೃಶ್ಯತೇ
ಯಕ್ಷಸ್ತ್ರೀಕುಚಕುಟ್ಮಲಾದ್ವಿಲುಲಿತಂ ಯಸ್ಯ ಪ್ರಸಾದಂ ಶನೈ
ರಾಬಧ್ನಾತಿ ತಲಪ್ರದೇಶನಿಪತತ್ಕಾಶ್ಮೀರಪಂಕಂ ಪಯಃ || ೧೦೦

ಸರಸ್ಸಿನ ರಾಮಣೀಯಕತೆಯ ವಿಚಾರವಾಗಿ:—

ಉದ್ದಾಮಪ್ರಚಲಪದೋಪಮರ್ದನೇ
ಷ್ವಕ್ಲಿಷ್ಟಾನಿ ಪ್ರತಿನವಕಾಂತಕೇಸರಾಣಿ
ಏತಸ್ಮಿನ್ ಕನಕಮಯಾನಿ ವಸ್ತುಶಕ್ತ್ಯಾ
ಪದ್ಮಾನಿ ಭ್ರಮರಕದರ್ಥನಾಂ ಸಹಂತೇ || ೧೦೧

ಅಶ್ರಾಂತಮಸ್ಯ ಸರಸೋ ಲಹರೀವಿಮರ್ದಾ
ದುದ್ದಾಮಬದ್ಧಜಲಶೀಕರದುರ್ದಿನಾರ್ದ್ರಾಃ
ಸೌಗಂಧಿಕಪ್ರಸೃತಸೌರಭಸಾರ್ಥವಾಹಾಃ
ಶ್ರಾಂತಿವ್ಯಯಂ ವಿದಧತೇ ಮಮ ಗಂಧವಾಹಾಃ || ೧೦೨

ತೋಟವು ಅಪರಿಮಿತ ಯಕ್ಷರಕ್ಷಿತವಾಗಿರುವುದನ್ನು ನೋಡಿ ಭೀಮನು:—

ಅಸ್ಯ ರಕ್ಷಾಕರೈರ್ಯಕ್ಷೈರ್ಯದ್ಯಸ್ಯ ಸ್ಯಾನ್ಮಮ ಸಂಗರಃ
ಶ್ಲಾಘ್ಯಮೇತದ್ಭವೇತ್ಕರ್ಮ ಧನ್ಯಂ ಭುಜಬಲಂ ಚ ಮೇ || ೧೦೩

ಚೌರೇಣೇವ ಮಯಾಹೃತೇಷು ರಭಸಾದೇತೇಷ್ವವೀರೋಚಿತಂ
ಕಿಂ ದೋಷ್ಣಾ ಮಮ ಶೂರಸಿಂಹಮೃಗಯಾವೈತಂಸಿಕೇನಾಮುನಾ
ಕಿಂ ಬ್ರೂಯುರ್ಭುವನತ್ರಯೀ ಭುಜಭೃತಃ ಸರ್ವೇऽಪಿ ಮಾಮಾದೃಶಂ
ಯದ್ವಾ ವೀರವಧೂತ್ವಗರ್ವಮಹತೀ ಮನ್ಯೇತ ಕಿಂ ದ್ರೌಪದೀ || ೧೦೪

ಕೋಪವರ್ಣನವು:—

ಪ್ರಸರತಿ ದರಸ್ಪಷ್ಟಾಪಾಂಗಪ್ರಭಂ ದೃಶಿ ರಕ್ತತಾ
ಸ್ಫುರಣಮಧರಂ ಲೀಢೇ ಸ್ವೇದೋऽಪ್ಯುದೇತಿ ಕಪೋಲಯೋಃ
ಭೃಕುಟಿರಪಿ ಚ ಸ್ಪಷ್ಟಂ ಭಾಲೇ ಪದಂ ತನುತೇ ತತೋ
ವಿಕೃತಯ ಇಮಾಃ ಕೋಪಾರಂಭಂಮುಖಸ್ಯ ವಿವೃಣ್ವತೇ || ೭೨

ಭೀಮಸೇನನು ಅಂಜನಾಸುತನನ್ನು ಕುರಿತು:—

ಲೋಕಾನಾಮುಪಕರ್ತುಮೇವ ಭವತೋ ಜಾತಾಭಿಜಾತಾ ಜನಿ
ಸ್ತದ್ರಕ್ಷಾಂಸಿ ವಿಮರ್ದಿತಾನಿ ಬಹುಶೋ ದುಷ್ಟಾನಿ ಧೀರ ತ್ವಯಾ
ಈದೃಕ್ಪೌರುಷಸಾಹಸೈಕರಸಿಕಂ ಸೂತ್ವಾ ಸುತಂ ತ್ವಾಮಭೂ
ದ್ದೇವೋ ಗಂಧವಹಃ ಸ ಏಷ ಭುವನೇಷ್ವಗ್ರೇಸರಃ ಪುತ್ರಿಣಾಂ

ಎಲೈ! ಹನುಮನೆ! ಲೋಕದಲ್ಲಿ ಜನರಿಗೆ ಉಂಟಾಗುವ ಕಷ್ಟಗಳನ್ನು ಪರಿಹರಿಸಿ ಅವರಿಗೆ ಉಪಕಾರವಮಾಡಬೇಕೆಂಬ ಉದ್ದೇಶದಿಂದ ನೀನು ಜನ್ಮವನ್ನೆತ್ತಿರುವೆ. ಎಲೈ! ವೀರ! ನಿನ್ನಿಂದ ಆ ನೀಚ ರಾಕ್ಷಸರನೇಕರು ಹತಗೊಳಿಸಲ್ಪಟ್ಟರು. ಇಂತಹ ಅತುಲ ಭುಜಬಲ ಪರಾಕ್ರಮಿಯಾದ ನಿನ್ನನ್ನು ಪಡೆದ ತಂದೆಯಾದ ವಾಯುವನ್ನು ಸುಪುತ್ರವಂತರಲ್ಲಿ ಅಗ್ರಗಣ್ಯನೆಂದೆನಬೇಕಾಗುವುದು.

ಭೀಮನು ಯಕ್ಷಭಟರನ್ನು ಕುರಿತು: —

ಸಾಕಂ ಸ್ತ್ರೀಭಿರರಣ್ಯಸೀಮ್ನಿ ಮದಿರಾಂ ಪೀತ್ವಾ ಮದಾಂಧಸ್ಥಿತೈ
ರ್ಯುಷ್ಮಾಭಿಃ ಕ್ವವಿಲೋಕಿತಾ ರಣಭುವೋ ಧೀರೈಕಗವ್ಯಕ್ರಮಃ
ಶೂರಾಶ್ಚೇದಪಿ ಯೂಯಮಾದೃಶ ಇಮೇ ಶಸ್ತ್ರೈರಲಂ ದೋಷ್ಮತಾಂ
ನಿಷ್ಪ್ರಾಣಾಯ ಭವತ್ಸ್ವಪಿ ಸ್ಥಿತವತೇ ಶೌರ್ಯಾಯದತ್ತೋಂಜಲಿಃ ॥ ೧೧೫

ಅರಣ್ಯದಲ್ಲಿ ಸ್ತ್ರೀಯರೊಡನೆ ಕೂಡಿ ವಿಹರಿಸುತ್ತ ಸ್ವಚ್ಛಂದವೃತ್ತಿಯಿಂದ ಮದ್ಯಪಾನ ಮಾಡುತ್ತಿರುವ ನಿಮಿಗೆ ಯುದ್ಧರಂಗದಲ್ಲಿ ಪರಾಕ್ರಮಿಗಳ ಸಾಮರ್ಥ್ಯವು ಹೇಗೆತಾನೇ ತಿಳಿದೀತು! ನೀವು ಪರಾಕ್ರಮಿಗಳೇ ಆಗಿ ಭುಜಬಲವುಳ್ಳವರಾಗಿದ್ದರೆ ಈ ಶಸ್ತ್ರಂಗಳಿಂದೇನುಪ್ರಯೋಜನ! ವೃಥಾಜೀವಿಸುತ್ತಿರುವ ನಿಮ್ಮ ಶೌರ್ಯಕ್ಕೆ ಜಲಾಂಜಲಿ ಛೆ! ತಿಳಿಯಿತೆ!



## ಭಾ ಸ್ಕ ರ

ಇವನು ಬ್ರಾಹ್ಮಣನು. ಶ್ರೀವಿದ್ಯಾರಣ್ಯರ ಗೌರವಾರ್ಥ (homage)ವಾಗಿ ನೆರೆದ ವಿದ್ವನ್ಮಂಡಲಿಯ ಸಂತೋಷಾರ್ಥವಾಗಿ ಬರೆದುದಾಗಿ ಸೂತ್ರಧಾರನ ಹೇಳಿಕೆಯಿಂದ “ಅದ್ಯಖಲ್ವಾದಿಷ್ಟೋಸ್ಮಿವಿಮಲತರನಿಜಕೀರ್ತಿಕರ್ಪೂರಕರಂಡೀಕೃತ ನಿಖಿಲ ಬ್ರಹ್ಮಾಂಡೇನ ದಿಗಂತದಂತಾವಳ ಕುಂಭಮಂಡಲ ಮಂಡನಾಯಮಾನ ಪ್ರತಾಪಸಿಂಧೂರೇಣ ಸಕಲಕಲಾಕಲಾಪಕೋವಿದೇನ ವಿದ್ಯಾರಣ್ಯ ಶ್ರೀಚರಣಾರವಿಂದ ವಂದನಮಹೋತ್ಸವಮಿಳಿತೇನಾಮುನಾಸಾಮಾಜಿಕೇನ......ಎಂದು ಹೇಳಿರುವುದರಿಂದ ಇವನು ಕ್ರಿ. ಶ. ೧೪ನೆಯ ಶತಮಾನಕ್ಕೆ ಸೇರಿದವನೆಂದು ಹೇಳಬೇಕಾಗುವುದು.

ಇವನು ‘ಉನ್ಮತ್ತರಾಘವ’ ಎಂಬನಾಟಕವನ್ನು ಬರೆದಿರುವನು. ಇದು ರೂಪಕಭೇದವಾದ ‘ಪ್ರೇಕ್ಷಣಿಕ’ ಜಾತಿಗೆಸೇರಿದುದು. ಸೀತಾವಿಯೋಗಸಂತಪ್ತನಾದ ರಾಮನು. ಸೀತೆಯನ್ನುನೆನೆಸಿ ಮನಬಂದಂತೆ ಹಂಬಲಿಸಿ ಹುಡುಕಿಕೊಂಡು ತಿರುಗುತ್ತಿದ್ದನಾದುದರಿಂದ ಈ ಪ್ರೇಕ್ಷಣಿಕವನ್ನು ‘ಉನ್ಮತ್ತರಾಘವ’ ಎಂದೇ ಕರೆದಿರುವನು.

ವನಾಂತರದಲ್ಲಿ ಪುಷ್ಪಾವಚಯವನ್ನುಮಾಡುತ್ತ ಅನೇಕಾಶ್ರಮ ನದೀನದಂ ಗಳನ್ನು ಕಳೆದು, ಪುಷ್ಪಾವಚಯಕ್ಕಾಗಿ ಅಗಸ್ತ್ಯಾಶ್ರಮವನ್ನು ಹೊಂದಿ ಅದೃಶ್ಯಳಾಗಿ ಹರಿಣಿಯರೂಪವನ್ನುಧರಿಸಿದ ಜಾನಕಿಯನ್ನು ಜ್ಞಾನದೃಷ್ಟಿಯಿಂದ ಅರಿತವನಾದಾ ಕುಂಭಸಂಭವನು ಶಾಪವಿಮುಕ್ತಳನ್ನಾಗಿಮಾಡಿ ಸೀತೆಯನ್ನು ಹುಡುಕಿಕೊಂಡು ತಿರುಗುತ್ತಿರುವ ಶ್ರೀರಾಮನಿಗೆ ತಂದೊಪ್ಪಿಸಿದನೆಂಬುದೇ ಕಥಾವಸ್ತು. ಶೈಲಿಯು ಸುಲಭವಾಗಿದ್ದು ಲಕ್ಷ್ಮಣನೊಡನೆ ಸೀತೆಯನ್ನು ಹುಡುಕುತ್ತಿರುವ ರಾಮನ ದುಃಖೋದ್ಗಾರವು ವಾಚಕರನ್ನು ಕಣ್ಣೀರಿಡುವಂತೆ ಮಾಡುತ್ತದೆ. ಇದರಲ್ಲಿ ಕರುಣರಸವು ಮೂರ್ತಿಮತ್ತಾಗಿ ತೋರಿಸಲ್ಪಟ್ಟಿದೆ. ಗ್ರಂಥವು ಬಲು ಚಿಕ್ಕದಾ ದರೂ ಗಂಭೀರಭಾವದಿಂದಕೂಡಿ ರಸಪೋಷಣೆಯು ಚೆಲುವಾಗಿದೆ. ಮಾದರಿ ಗಾಗಿ ಕೆಲವನ್ನು ಬರೆಯುವೆವು.

ವಸಂತಸಮಯವರ್ಣನ:—

ಮಾಕಂದಾಳಿಂಮಲಯಪವನಾಮಂದಮಾಂದೋಳಯಂತೀ
ಮಜ್ಜತ್ಯಸ್ಯಾಮಧುಕರಯುವಾಮಂಜರೀಣಾಂಮರಂದೇ
ಆಸೇವಂತೇಮುಕುಳನಿಕರಾನಾಸಮಂತಾದಶೋಕಾ
ವಕ್ತುಂಮತ್ತಾಃ ಪಿಕಯುವತಯಃ ಪಂಚಮಂಪ್ರಾರಭಂತೇ ||

ರಾಮನ ದುಃಖೋದ್ಗಾರವು ಹೀಗಿರುವುದು:—

ಜ್ವಲತ್ತುಷಾರಾಗ್ನಿಕಣೋಪಮಾನಿ
ಸೀತಾನದೃಷ್ಟೇತಿದುರಕ್ಷರಾಣಿ
ಕರ್ಣಂಪ್ರವಿಷ್ಟಾನಿಹತಾದಮೂನಿ
ಸರ್ವಾಂಗತಾಪಂಜನಯಂತಿಹಂತ ||

ವಿರಹಂಮಮಸೋಢುಮಕ್ಷಮಾತ್ವಂ
ವನವೀಥೀಷ್ವಪಿಮಾಮನುದ್ರುತಾಸಿ
ಅಕೃತಾಗಸಮೇನಮದ್ಯಮುಕ್ತ್ವಾ
ವದಕುತ್ರಾಸಿಕುರಂಗಶಾಬನೇತ್ರೇ ||

ಪ್ರಾಣಪ್ರಿಯಾಂಪ್ರಾಪ್ತವತೀಂಕಠೋರಾಮಕೀರ್ತಿತವ್ಯಾಂಪದವೀಮಕಾಂಡೇ
ತ್ರೈಲೋಕ್ಯಲಾವಣ್ಯಲಲಾಮಭೂತಾಂಹಾ! ಜಾನಕೀಂಕುತ್ರವಿಲೋಕಯಾಮಿ||

ಎಂಬ ಈ ದುಃಖೋದ್ಗಾರಮೇಳನವು ಭವಭೂತಿಯ ಉತ್ತರರಾಮಚರಿತ ವನ್ನು ಸ್ಮರಣೆಗೆ ತರುವುದಿಲ್ಲವೆ ?



## ಜೈನ ರಾಜಶೇಖರ

ಇವನು ಪಾಟ್ಣಾಬಳಿಯವನು. ಪ್ರಬಂಧಕೋಶವೆಂಬ ಗ್ರಂಥವನ್ನು ರಚಿಸಿರುವನು. ಇದು ಗದ್ಯಗ್ರಂಥ. ಪಂಚತಂತ್ರದಶೈಲಿಯನ್ನು ಹೋಲುವುದು. ಕಥೆಗೆ ಬೇಕಾದ ವಿಷಯಗಳನ್ನು ಇವನ ಉಪಾಧ್ಯಾಯ ತಿಲಕ ಸೂರಿಯಿಂದ ಸಂಗ್ರಹಿಸಿ ದೆಹಲಿಯಲ್ಲಿ ವಿ. ಸ. ೧೪೦೫ ಅಥವಾ ಕ್ರಿ. ಶ. ೧೩೪೮ರಲ್ಲಿ ಮಹಮ್ಮದ್ ಬಿನ್ ತೊಗಲಖನ ಅತ್ಯಂತ ನಂಬಿಕೆಯವನಾದ ಜಯಸಿಂಹನ ಮಗ ಮದನಸಿಂಹನ ಆಶ್ರಯದಲ್ಲಿ ಬರೆದು ಮುಗಿಸಿದನು *



## ಇರುಗಪದಂಡಾಧಿನಾಥ

ಇವನಿಗೆ ಭಾಸ್ಕರನೆಂದೂ ಹೆಸರು. ವೇದಭಾಷ್ಯವನ್ನು ಬರೆದ ಸುಪ್ರಸಿದ್ಧ ಸಾಯಣನ ಸೋದರ, ಮಾಯಣನಮಗ. ಇವನು ಕ್ರಿ. ಶ. ೧೪ನೆಯ ಶತಮಾನದಲ್ಲಿ ವಿಜಯನಗರದಲ್ಲಾಳಿದ ಎರಡನೆಯ ಹರಿಹರರಾಜನ ಬಳಿ ಸೈನ್ಯಾಧಿಕಾರಿಯಾಗಿದ್ದನು. ಹರಿಹರರಾಜನು ಕ್ರಿ. ಶ. ೧೩೭೭—೧೪೦೪ರ ವರೆಗೆ ಆಳಿದನು. ಅವನ ಆಶ್ರಯದಲ್ಲಿ 'ನಾನಾರ್ಥರತ್ನಮಾಲಾ'ಎಂಬ ಕೋಶವನ್ನು ಬರೆದುಮುಗಿಸಿದನು. ಈ ವಿಚಾರವು.: —

> ಸೋಽಯಂಗ್ರಥ್ನಾತಿನಾನಾರ್ಥರತ್ನಮಾಲಾಂಗುಣೋಜ್ವಲಾಂ
> ಶ್ರೀಮಾನಿ**ರುಗಪದಂಡೇಶೋ**ನಾತ್ಯಲ್ಪಂನಾತಿವಿಸ್ತರಂ ||

ಎಂಬುದರಿಂದ ವ್ಯಕ್ತವಾಗುತ್ತದೆ.$

> ಕಾಂಡೈಃಸ್ಯುರರ್ಥರೇಕದ್ವಿತ್ರಿಚತುರ್ವರ್ಣವರ್ತಿಭಿಃ
> ಸಂಕೀರ್ಣಾವ್ಯಯಕಾಂಡಾಭ್ಯಾಮಿತಿಷಡ್ಭಿರನುಕ್ರಮಾತ್ ||

ಎಂಬಂತೆ ಏಕಾಕ್ಷರ ದ್ವ್ಯಕ್ಷರ ತ್ರ್ಯಕ್ಷರ ಚತುರಕ್ಷರವೆಂಬ ೪ ಕಾಂಡಗಳೂ ಸಂಕೀರ್ಣಕಾಂಡ ಅವ್ಯಯ ಕಾಂಡವೆಂಬ ಎರಡು ಕಾಂಡಗಳೂ ಒಟ್ಟು ಆರುಕಾಂಡಗಳಾಗಿ ಭಾಗಿಸಲ್ಪಟ್ಟಿರುವುವು.



## ಮಾಧವ§

ಇವನು ಕ್ರಿ. ಶ. ೧೪ನೆಯ ಶತಮಾನದಲ್ಲಿ ಧಾತುಪಾಠಕ್ಕೆ ವೃತ್ತಿಯನ್ನು ಬರೆದಿರುವನು.

---

* History of Classical Sanskrit Literature P. 123.

$ ನಾನಾರ್ಥರತ್ನಮಾಲಾ ೨

§ ಉದ್ಧವದೂತಕಾರನಾದಮಾಧವನು ಇವನಲ್ಲ

# ವಿ ಶ್ವ ನಾ ಥ (೨)

ಇವನು ಬ್ರಾಹ್ಮಣನು. ಚಂದ್ರಶೇಖರನ ಮಗನು. ಇವನಿಗೆ ಕವಿರಾಜ ನೆಂಬ ಹೆಸರೂ ಇದ್ದಿತು. ಇವನು ತನ್ನ ಗ್ರಂಥಗಳಲ್ಲಿ ಜಯಂತ ಮತ್ತು ಅಲ್ಲಾ ವುದ್ದೀನನ ವಿಚಾರವಾಗಿ ಹೇಳಿಕೊಂಡಿರುವನು. ಪ್ರಖ್ಯಾತಖಿಲ್ಜಿವಂಶದವನಾದ ಅಲ್ಲಾವುದ್ದೀನನು. ಕ್ರಿ ಶ. ೧೩೧೬ರಲ್ಲಿ ಸತ್ತುಹೋದನು. ಇದಲ್ಲದೆ ಗೋವಿಂದ ಠಾಕೂರನೆಂಬವನು ಕ್ರಿ. ಶ. ೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ಬರೆದಿರಬಹು ದಾದ "ಕಾವ್ಯಪ್ರದೀಪ" ಎಂಬ ಗ್ರಂಥದಲ್ಲಿ ಇವನ ವಿಚಾರವಾಗಿ ಬರೆದಿರುವನಾದುದ ರಿಂದ ವಿಶ್ವನಾಥನ ಕವಿತಾಕಾಲವು ಕ್ರಿ. ಶ. ೧೨೫೭ ಅಥವಾ ಕ್ರಿ. ಶ ೧೩೬೫ ರಲ್ಲಿ ಆಗಿರಬೇಕೆಂದು ತೋರುವುದು.

**ಗ್ರಂಥಗಳು:** – (೧) ಸಾಹಿತ್ಯದರ್ಪಣ
(೨) ರಾಘವವಿಲಾಸ
(೩) ಚಂದ್ರಕಲಾನಾಟಿಕಾ
(೪) ಕುವಲಯಾಶ್ವಚರಿತ
(೫) ಪ್ರಶಸ್ತಿರತ್ನಾವಳಿ
(೬) ನೃಸಿಂಹವಿಜಯ

ಸಾಹಿತ್ಯದರ್ಪಣವು ಸರ್ವಾಲಂಕಾರಗ್ರಂಥಗಳಿಗೆಲ್ಲಾ ಉತ್ತಮ ಪ್ರಮಾಣ ಗ್ರಂಥವಾಗಿದ್ದು ಸಾಹಿತ್ಯ ಜಿಜ್ಞಾಸುಗಳಿಗೆ ಅಂತ್ಯಂತೋಪಯುಕ್ತವಾಗಿದೆ. ಇದಕ್ಕೆ ಶ್ರೀರಾಮಚರಣತರ್ಕವಾಗೀಶಭಟ್ಟಾಚಾರ್ಯಕೃತ "ವಿವೃತಿ"ಯು ಇರುವುದು. ರಾಘವವಿಲಾಸವು ಹೆಸರಿಗೆ ತಕ್ಕಂತೆ ರಾಮಚರಿತೆಯನ್ನು ಹೇಳುವುದು. ಕುವಲಯಾ ಶ್ವಚರಿತವೆಂಬುದು ಪ್ರಾಕೃತದಲ್ಲಿ ಬರೆಯಲ್ಪಟ್ಟಿದೆ. ಪ್ರಶಸ್ತಿರತ್ನಾವಳಿಯಲ್ಲಿ೧೬ಪ್ರಶಸ್ತಿ ಗಳಿದ್ದು (Panegyrics) ಬೇರೆಬೇರೆ ಭಾಷೆಯಲ್ಲಿ ಬರೆಯಲ್ಪಟ್ಟಿರುವುದು.

ನೃಸಿಂಹ ವಿಜಯದಲ್ಲಿ ಹಿರಣ್ಯಕಶಿಪುವಿನ ವಧೆಯು ವರ್ಣಿತವಾಗಿರುವದು. ಶೈಲಿಯು ಸರಳವಾಗಿಯೂ ಮೃಧುಮಧುರವಾಗಿ ನವರಸಂಗಳಿಂದ ಕೂಡಿ ಹೇಳುವು ದಕ್ಕೆ ಸೊಂಪಾಗಿಯೂ ಕೇಳುವುದಕ್ಕೆ ಇಂಪಾಗಿಯೂ ಇರುವುದು. ರಾಘವ ವಿಲಾಸದಲ್ಲಿನ ಕರುಣರಸೋದಾಹರಣೆಗಾಗಿ ಹೇಳಲ್ಪಟ್ಟಿರುವ ಅನೇಕ ಶ್ಲೋಕ ಗಳಲ್ಲಿ ಒಂದನ್ನು ಇಲ್ಲಿ ಕೊಟ್ಟಿದೆ.

ವಿಪಿನೇಕ್ವ ಜಟಾನಿಬಂಧನಂ ತವಚೇದಂಕ್ವ ಮನೋಹರಂವಪುಃ
ಅನಯೋರ್ಘಟನಾವಿಧೇಸ್ಫುಟಂ ನನುಖಡ್ಗೇನಶಿರೀಷಕರ್ತನಂ ||

ಚಂದ್ರಕಲಾನಾಟಕದಲ್ಲಿನ ಸ್ತ್ರೀವಿಚಾರದ ಹೇಳಿಕೆಯು ಹೀಗಿರುವುದು:—

ತಾರುಣ್ಯಸ್ಯವಿಲಾಸಸ್ಸಮಧಿಕ ಲಾವಣ್ಯಸಂಪದೋಹಾಸಃ
ಧರಣೀತಲಸ್ಯಾಭರಣಂ ಯುವಜನಮನಸೋವಶೀಕರಣಂ

ಸ್ತ್ರೀಯಾನಾಂ ಮುದಿತಾಮೃತೇನ ಹೃದಯಂ ಸಂಕರ್ಷಯಂತಂಸದಾ
ರಾಧಾಕೇಳಿಕಥಾಸುಸಂತತರತಂ ಧ್ಯಾಯಾಮಿಕೃಷ್ಣಾಭಿದಂ || ೧-೪

ಎಂಬ ಶ್ಲೋಕದಲ್ಲಿ ಕೃಷ್ಣದಾಸನೆಂಬ ಗುರುವನ್ನು ಶ್ಲೇಷಿಸಿಹೇಳಿಕೊಂಡಿರುವನು.

ಇದರ ಕೆಲವು ಶ್ಲೋಕಗಳು:—

ಕೃಷ್ಣನು ಮುಂದೆನೋಡಿ, ಹರ್ಷದಿಂದ ಪ್ರಿಯಾಲಾಪನನ್ನುಕುರಿತು.

ಇದಂ ಮಧುರನೀತಿಭಿರ್ಮಧುಕರಾಂಗನಾನಾಂ ಸಖೇ
ಕಲಾಪಿಕುಲನರ್ತನೈಃ ಪಿಕಕದಂಬಕೋಲಾಹಲೈಃ
ಲತಾನವವಧೂಲಸನ್ಮಲಯಾನುರಾಗೋದ್ಗಮೈ
ರ್ಮಮಾಗಮನಮಂಗಳಂ ಪರಿಕರೋತಿ ಮನ್ಯೇ ವನಂ|| ೧-೧೬

ಎಲೈ! ಗೆಳೆಯಪ್ರಿಯಾಲಾಪ! ಈ ವೃಂದಾರಣ್ಯವು ಹೆಣ್ಣುದುಂಬಿಗಳ ಮನೋಹರವಾದ ಝೇಂಕಾರದಿಂದಲೂ, ನವಿಲುಗಳನರ್ತನದಿಂದಲೂ, ಪಿಕಂಗಳ ಕೋಲಾಹಲದಿಂದಲೂ, ನೂತನವಾಗಿ ವಿಕಸಿತಂಗಳಾದ ಕಿಸಲಯಗಳ ಅನುರಾಗದಿಂದೆಂಬಂತೆ ಕೂಡಿರುವ ಲತೆಗಳಿಂದಲೂ ನನ್ನಆಗಮನಕ್ಕೆ ಮಂಗಳವನ್ನುಂಟುಮಾಡುವಂತೆ ಕಾಣುತ್ತಿರುವುದು.

ಭೃಂಗಾಳೀನಯನೈರ್ನಿಮೇಷವಿಮುಖಂ ದೂರಾತ್ಸಮಾಲೋಕ್ಯ ಮಾ
ಮಾನಂದಾಸ್ರುಜಲಂ ಸ್ರವಂತಿ ವಿಗಲನ್ಮಾಧ್ವೀಕಬಿಂದುಚ್ಛಲಾತ್
ಆಹ್ವಾನಂ ಮಲಯಾನಿಲಪ್ರಚಲಿತೈಃ ಶಾಖಾಗ್ರಹಸ್ತೈಶ್ಚ ಮೇ
ಸ ಪ್ರೇಮ ಪ್ರಥಯಂತ್ಯುಪಾಯನಫಲೈರ್ನಮ್ರಾಃ ಕಿಲೈತೇ ದ್ರುಮಾಃ||

ದುಂಬಿಗಳಸಮೂಹವು ನಿಲವಾಗಿರುವ ಕಣ್ಣುಗಳಿಂದ ರೆಪ್ಪೆಯನ್ನು ಹೊಡೆಯದೆ ನನ್ನಬರುವಿಕೆಯನ್ನು ದೂರದಿಂದನೋಡಿ ಮಧುಬಿಂದುಗಳ ನೆಪದಿಂದಲೋ ಎಂಬಂತೆ ಕಣ್ಣೀರನ್ನು ಸುರಿಸುತ್ತವೆ. ಮತ್ತುಈ ವೃಕ್ಷಗಳು ಫಲಭಾರದಿಂದ ಬಗ್ಗಿರುವುದನ್ನುನೋಡಿ ಮಂದಮಾರುತನು ಶಾಖಾಗ್ರಗಳಲ್ಲಿರುವ ಈ ಫಲಗಳನ್ನು ನನಗೆ ಕಾಣಿಕೆಯನ್ನು ಕೊಡುವುದಕ್ಕಾಗಿ ಬಗ್ಗಿವೆಯೋಎಂಬಂತೆ ಕಾಣುತ್ತದೆ.

ಉತ್ಫುಲ್ಲಪಂಕಜನಿಷಕ್ತಭಸದ್ದ್ವಿರೇಫಃ
ಕಿಂಚಿದ್ವಿನಿದ್ರಕುಮುದೋತ್ಕರಸಂಭೃತಶ್ರೀಃ
ಆಮೂಲಸದ್ಧವಿವಿಧಾದ್ಭುತಮಾಲ್ಯಮಾಲ
ಶ್ಚಿತ್ರಂ ನ ಕಸ್ಯ ತನುತೇಲಲಿತಸ್ತಮಾಲಃ|| ೩—೯

ವಿಕಸಿತಕಮಲದಲ್ಲಿ ಆಸಕ್ತವಾಗಿ ಶಬ್ದಮಾಡುವ ದುಂಬಿಯುಳ್ಳ, ಅರೆಮುಕುಳಿತ (ಕೋಂಚವಾಗಿಅರಳಿದ) ಕುಮುದಗಳ ಕಾಂತಿಯುಳ್ಳ, ಬುಡದಿಂದ

ತುದಿಯವರೆಗೆ ಕಟ್ಟಲ್ಪಟ್ಟ ಅನೇಕವಿಧ ಪುಷ್ಪಗಳಮಾಲಿಕೆಯಂತೆ ಮನೋಹರವಾಗಿರುವ ಈ ತಮಾಲವೃಕ್ಷವು ಯಾರಿಗೆತಾನೇ ಆಶ್ಚರ್ಯವನ್ನುಂಟು ಮಾಡುವುದಿಲ್ಲ.

ಕ್ರೀಡಂತೀ ನಿಜಮಂದಿರೇಷು ನಿಭೃತಂ ಬಾಲ್ಯಾತ್ಸಖೀಭಿಃ ಸಮಂ
ನಿತ್ಯಂ ಕೃತ್ರಿಮಪುತ್ರಿಕಾದಿಷು ರತಾ ಭಾವಾನಭಿಜ್ಞಾ ಹಿ ಯಾ
ಪಿತ್ರಾ ಪುತ್ರವತಾಪಿ ವತ್ಸಲತಯೋತ್ಸಂಗೇ ಪರಂ ಲಾಲಿತಾ
ಸಖ್ಯಃ ಪಶ್ಯತ ಚಾತುರೀಷು ಸಹಸಾ ಸೈಷಾತಿಭೂಮಿಂ ಗತಾ ೪-೧೦

ಬಾಲ್ಯದಿಂದಲೂ ಸಖಿಯರೊಡನೆ ತನ್ನಮನೆಯಲ್ಲಿ ವಿಧವಿಧವಾದ ಆಟಗಳನ್ನಾಡುವಳಾಗಿ, ಯಾವಾಗಲೂ ಕೃತ್ರಿಮವಾದ ಬೊಂಬೆಗಳ ಕ್ರೀಡಾದಿಗಳಲ್ಲಿ ತನ್ನ ಭಾವಗಳನ್ನರಿಯದೆ ಆ ಸಕ್ತಳಾಗಿ, ಮಗನಿಗಿಂತಲೂ ಹೆಚ್ಚಾದ ಪ್ರೀತಿಯಿಂದ ತಂದೆಯ ತೊಡೆಯಮೇಲೆ ಲಾಲಿಸಲ್ಪಟ್ಟವಳಾಗಿರುವ ರಾಧೆಯು ತನ್ನಶಕ್ತಿಮೀರಿ ಚಾತುರ್ಯಗಳನ್ನು ತೋರಿಸುತ್ತಿರುವಳಲ್ಲಾ ! ಆಶ್ಚರ್ಯ !

---

## ರಾ ಮ ಚಂ ದ್ರ

ಇವನು ಕ್ರಿ. ಶ. ೧೫ನೆಯ ಶತಮಾನದಲ್ಲಿ 'ಪ್ರಕ್ರಿಯಾಕೌಮುದೀ' ಎಂಬ ಗ್ರಂಥವನ್ನು ಪಾಣಿನಿಯವ್ಯಾಕರಣದಮೇಲೆ ಬರೆದನು.

---

## ಧ ನ ದ (ಧ ನ ದ ರಾ ಜ)

ಇವನು ಸೋನವಂಶದವನು. ದೇಹಡನ ಮಗನು. ಇವನು ಹೇಳಿಕೊಂಡಿರುವ:—

ಯಾವತ್ಕಲ್ಪಕಥಾಕುತೂಹಲಕರೀ ಯಾವಚ್ಚ ಜೈನಾಗಮಃ
ಶೇಷಂ ಸಾದರಮಾದಧಾತಿ ಧರಣೀಂ ಶೀರ್ಷೇಣ ಯಾವಚ್ಚಿರಂ
ಯಾವತ್ಸಂತಿ ಪಯೋಧಯೋಽಪಿ ನಿಖಿಲಾ ಮರ್ಯಾದಯೋದ್ಯನ್ಮುದೋ
ವಿದ್ವತ್ಸು ತ್ರಿಶತೀ ವಿರಾಜತುತಮಾಂ ತಾವದ್ಧನೇಶಾಜ್ಞಯಾ ||
ನೀತಿ ಧನದಶತಕ ೧೦೩.

ಎಂಬುದರಿಂದ ಇವನು ಜೈನನೆಂದು ಹೇಳಲಾಗುತ್ತದೆ.

**ಕಾಲ:**—ವರ್ಷೇ ವ್ಯೋಮಾಂಕವೇದಕ್ಷಿತಿ (೧೪೯೦) ಪರಿಕಲಿತೇವಿಕ್ರಮಾಂಭೋಜಬಂಧೋಃ
ವೈಶಾಖೇ ಮಾಸಿ ವಾರೇ ತ್ರಿದಶಪತಿಗುರೋಃ ಶುಕ್ಲಪಕ್ಷೇಽಹಿತಿಥ್ಯಾಂ
ಜೀವಾಜ್ಞೇ ಸೌಮ್ಯನಾಮ್ನಿ ಪ್ರಗುಣಜನಗಣೇ **ಮಂಡಪೇ**ದುರ್ಗಕಾಂಡೇ
ಗ್ರಂಥಸ್ಯಾಸ್ಯ ಪ್ರತಿಷ್ಠಾಮಕೃತ **ಧನಪತಿರ್ದೇಹಡ** ಸ್ಯೈಕವೀರಃ ||
ನೀತಿ ಧನದಶತಕ ೧೦೨.

ಎಂದೂ,

ಪ್ರತಿಶತಕಾಂತ್ಯದಲ್ಲಿ:—

"ಇತಿ ತಪಃ ಸಿದ್ಧತರಖರತರಾಮ್ನಾಯಸೋನವಂಶಾವತಂಸಮಾಲಕುಲತಿಲಕಸಂಘಪಾಲಶ್ರೀಮದ್ದೇಹಡಾತ್ಮಜವಿವಿಧಬಿರುದರಾಜೀವಿರಾಜಮಾನಶ್ರೀಧನರಾಜವಿರಚಿತೇ ಶತಕತ್ರಯೇ............... " ಎಂದು ಹೇಳಿರುವುದರಿಂದ ಇವನು ವಿಕ್ರಮ ಸಂ. ೧೪೯೦ ಕ್ರಿ. ಶ. ೧೪೩೪ರಲ್ಲಿ ಈ ಶತಕತ್ರಯವನ್ನು ಬರೆದುದಾಗಿಯೂ, ಸೋನಕುಲ ಅಥವಾ ಶ್ರೀಮಾಲ ಕುಲದವನೆಂದೂ, ದೇಹಡನ ಮಗನೆಂದೂ ತಿಳಿಯಬರುತ್ತದೆ. ಧನದರಾಜವಿರಚಿತೇ ಎಂದು ಹೇಳಿರುವುದರಿಂದ ರಾಜನಾಗಿರಬಹುದೇ ? ಎಂಬ ಶಂಕೆಯುತಲೆದೋರುತ್ತದೆ. ಸಂದೇಹವು ಸರಿಯೆನ್ನುವುದಾದರೆ ಯಾವದೇಶಕ್ಕೆ ರಾಜನಾಗಿದ್ದನೆಂಬುದು ತಿಳಿಯದಾಗಿದೆ.

**ಗ್ರಂಥ:**—ಇವನು ನೀತಿಧನದ, ಶೃಂಗಾರಧನದ, ವೈರಾಗ್ಯಧನದ ಎಂಬ ಶತಕತ್ರಯವನ್ನು ಬರೆದಿರುವನು. ಇದು ಭರ್ತೃಹರಿಯ ಶತಕತ್ರಯದಂತೆ ಲಲಿತವಾಗಿಲ್ಲ ಮತ್ತು ರೂಢಿಯಲ್ಲಿಲ್ಲ. ಕವಿಯು ಹೇಳುವ ಅಥವಾ ಮಾಡುವ ಪ್ರತಿಜ್ಞೆಯು ಗ್ರಂಥದ ಮೊದಲಿನಲ್ಲಾಗಲಿ, ಅಥವಾ ಕೊನೆಯಲ್ಲಾಗಲಿ ಇರುವುದು ರೂಢಿ. ಇದರಲ್ಲಿ ಪ್ರತಿಜ್ಞೆಯು ಎರಡನೆಯದಾದ ನೀತಿಧನದಶತಕದ ಕೊನೆಯಲ್ಲಿ ಹೇಳಿದೆ. ಪ್ರತಿಶತಕದಲ್ಲಿಯೂ ನೂರು ಶ್ಲೋಕಗಳಿಗಿಂತ ಹೆಚ್ಚಾಗಿವೆ.

ಇದರ ಕೆಲವು ಶ್ಲೋಕಗಳು:—

ಮಾ ಗಾಃ ಕಾಂತ ನಿಶಾಮುಖೇ ಪರಗೃಹಂ ಮಾ ಗಾಸ್ತಥೋಽಹರ್ಮುಖೇ
ವೇಶ್ಮಾಸ್ಮಾಕಮಿದಂ ದ್ವಯಂ ವಿತನುತೇ ಚಾಯುಃ ಕ್ಷತಿರ್ಯೋಷಿತಾಂ
ಮಾಭೂತ್ಕಾಂಚನ ವಂಚಿತೇತಿ ರಮಣೀ ಮಾ ಭೂದಹೋ ಖಂಡಿತಾ
ಮುಗ್ಧಾ ಭಾವಮುಪಾಚಕಾರ ರಮಣೀತ್ಥಂ ವಾರಯಂತೀ ಪತಿಂ ||
ಶೃಂ. ಧ. ಶ. (೭೯)

ಪ್ರತಿದಿವಸವೂ ಪ್ರಾತಃಸಂಧ್ಯಾ ಕಾಲಗಳಲ್ಲಿ ಪರಸ್ತ್ರೀ ಗೃಹದಲ್ಲಿ ಅಲೆಯುತ್ತಿರುವ ಪತಿಯನ್ನು ನೋಡಿ ಮುಗ್ಧಳಾದ (ವಿಚಕ್ಷಣಳಾದ) ಪತ್ನಿಯು ಎಲೈ! ಪತಿಯೇ! ನೀನು ಪರಸ್ತ್ರೀ ಗೃಹದಲ್ಲಿರುವುದಾದರೆ ಅದು ಸ್ತ್ರೀಯರಿಗೆ ಆಯುಃ ಕ್ಷೀಣವನ್ನುಂಟುಮಾಡುತ್ತದೆ. ನಿನಗೆ ಪರಗೃಹದಲ್ಲಿ, ಯಾವಾಗಲೂ ಯಾವ ಯಾವ ಸುಖಗಳು ಉಂಟಾಗುವುವೋ ಅವುಗಳೆಲ್ಲವೂ ಇಲ್ಲಿಯೇ ಉಂಟಾಗುತ್ತದೆ. ಆದುದರಿಂದ ಎಲೆ! ರಮಣ! ನಾನು ಆಭರಣಾದ್ಯಲಂಕಾರ ಧನಗಳಿಂದ, ವಂಚಿತಳೂ, ಇತರರ ಅವಮಾನಕ್ಕೆ ಪಾತ್ರಳೂ ಆಗಬಾರದೆಂದು ನಿನಗೆ ಇಷ್ಟವಿರುವುದಾದರೆ ಇತಃಪರ ಪರಸ್ತ್ರೀಯರ ಗೃಹಗಳಿಗೆ ಹೋಗದಿರು. (ಎಂದು ತನ್ನ ಮನೋಭಾವವನ್ನು ವ್ಯಕ್ತಪಡಿಸುತ್ತಾ ಪತಿಯು ಇತರರ ಮನೆಗೆ ಹೋಗುವುದನ್ನು ವಾರಣಮಾಡುತ್ತಿದ್ದಳು.)

ನಾಥ ತ್ವಂ ಬಹುವಲ್ಲಭೋ ವಯಮಮೀ ಜಾತಾ ದಯಾಭೂಮಯೋ
ಭೂಯಸ್ತಲ್ಪಮುಪಾಗತೋಽಸಿ ಸಹಸಾ ತತ್ರೇಽಧಿಕಂ ಸಾಹಸಂ
ಅನ್ಯಸ್ತ್ರೀಜನಭುಕ್ತಮುಕ್ತಮಧಮ ಸ್ಪಷ್ಟಾಪರಾಧಂ ನರಂ
ಚಿತ್ತೇನಾಪಿ ಖಲು ಸ್ಪೃಶಂತಿ ನ ಶರಂ ಚಂಡಾಲವದ್ಯೋಷಿತಃ||ಶೃಂ.ಶ ೮೮

ಎಲೈ ! ಪತಿಯೇ ! ನೀನು ಬಹು ಪತ್ನೀರತನು. ನಾವಾದರೋ ದಯೆಗೆ ಪಾತ್ರರಾದವರು. ನೀನು ಅನೇಕವೇಳೆ ವಿಚಾರವಿಲ್ಲದೆ ನನ್ನೊಡನೆ ಏಕಶಯ್ಯಾಗತನಾಗುವೆ, ಆದರೆ ಅದಕ್ಕಿಂತಲೂ ಅಧಿಕವಾದುದೇನಂದರೆ ಕೇಳು! ಉತ್ತಮರಾದವರು ಚಂಡಾಲರನ್ನು ಹೇಗೆ ದೂರೀಕರಿಸುವರೋ ಹಾಗೆ ಪರಸ್ತ್ರೀ ಸಂಪರ್ಕದಿಂದ ಕಳಂಕಿಯಾಗಿಯೂ ಸ್ಪಷ್ಟಾಪರಾಧಿಯಾಗಿಯೂ ಇರತಕ್ಕವರನ್ನು ಉತ್ತಮ ಸ್ತ್ರೀಯರು ಮನಸ್ಸಿನಲ್ಲಿಯೂ ಸ್ಮರಿಸುವುದಿಲ್ಲವೆಂಬುದನ್ನು ತಿಳಿ.

ಸ್ವಾತಂತ್ರ್ಯಾದಿವ ಯೋಷಿತೋ ನಯಪಥಾಭಾವಾದಿವ ಶ್ರೀಭರಾ
ನಿಃ ಸ್ನೇಹಾದಿವ ಬಾಂಧವಾಃ ಪರಗುಣದ್ವೇಷಾದಿವ ಪ್ರೀತಯಃ
ಕಾರ್ಪಣ್ಯಾದಿವ ಸೇವಕಾ ಬಹುಮೃಷಾಲಾಪಾದಿವ ಪ್ರತ್ಯಯಾ
ಗರ್ವಾದನ್ಯರತಾ ಭವಂತಿ ಸಹಸಾ ಲೋಕಾಃ ಸ್ವಯಂ ಭೂಪತೇಃ||
ನೀತಿ ಧನದಶತಕ ೭೪.

ಸ್ವಾತಂತ್ರ್ಯದ ದೆಸೆಯಿಂದ ಹೆಂಗಳೆಯರೂ, ದುರ್ಮಾರ್ಗತನದಿಂದ ಧನಿಕರೂ, ಸ್ನೇಹದೂರತೆಯಿಂದ ನೆಂಟರೂ, ಪರಗುಣದ್ವೇಷದಿಂದ ಪ್ರೀತಿಯೂ, ಕಾರ್ಪಣ್ಯ (ಕೃಪಣತ್ವ) ದಿಂದ ಸೇವಕರೂ, ಬಹು ಸುಳ್ಳು ಹೇಳುವುದರಿಂದ ನಂಬಿಕೆಯೂ ತಪ್ಪಿಹೋಗುವಂತೆ ಅಥವಾ ಬೇರೆ ಬೇರೆಯಾಗುವಂತೆ ಲೋಕವು (ಪ್ರಜೆಗಳು) ಮದಾಂಧನೂ, ಅನ್ಯರತನೂ ಅದ ರಾಜನನ್ನು ಜಾಗ್ರುತೆಯಾಗಿ ಬಿಟ್ಟು ಬಿಡುತ್ತಾರೆ.

ಹಾಸೇ ವಾಚಿ ನಿರೀಕ್ಷಣೇಽಪಿ ಸರಸೇ ಲೀಲಾಯಿತೇ ವಾ ಮನೋ
ಮಾ ಧೇಹಿ ಪ್ರಸಭಂ ನಿರಾಕುರುತರಾಂ ಯಾಂತಂ ಕದಾಚಿ ದ್ವದಿ
ಭೂರಿಃ ಕೈತವಕರ್ಮಣೋ ಧನಮನು ಪ್ರೇಮೋಪಪತ್ತಿಃ ಸ್ಥಿರಾ
ಮತ್ತತ್ಸ್ನಕಜಸರ್ವಿನಾ ಮದಿರಯಾ ವೇಶ್ಯಾನವಶ್ಯಾ ನೃಣಾಂ || ೮೮

ಎಲೈ ! ಮಾನವ ! ನೀನು ವೇಶ್ಯೆಯರ ವಿಚಾರದಲ್ಲಿ ಪರಿಹಾಸಯುಕ್ತವಾದ ಮಾತು, ಅಪಾಂಗವೀಕ್ಷಣ, ಸರಸಸಲ್ಲಾಪಾದಿಗಳಲ್ಲಿ ಮನಕೊಡದಿರು. ಏಕೆಂದರೆ ಇವರು (ವೇಶ್ಯೆಯರು) ದಾರಿಯಲ್ಲಿ ಹೋಗುವವರನ್ನು ಸಾಧಾರಣವಾಗಿ ತಿರಸ್ಕರಿಸುತ್ತಾರೆ. ಕೃತ್ರಿಮಗಳೆಲ್ಲದಕ್ಕೂ ಇವರು ಆಶ್ರಯದಾತರು. ದುಡ್ಡಿಲ್ಲದೆ ಇವರಲ್ಲಿ

ಪ್ರೇಮವು ಹುಟ್ಟದು. ಮೋಹ (ಮತ್ತತೆ) ಗೊಳಿಸುವುದರಲ್ಲಿ ನಿಸ್ಸೀಮರು. ಮದಿರೆ(ಮದ್ಯ)ಯು ಹೊರ್ತು ವಶರಾಗರು. ಆದುದರಿಂದ ಇವರಲ್ಲಿ ಮನಸ್ಸನ್ನು ಇಟ್ಟು ಮೋಹಿಸಿ ಕೆಡಬೇಡ ಎಚ್ಚರಿಕೆ!

ವಿತ್ತಂ ವೀಕ್ಷ್ಯೈವ ಹಾಸೋ ಬಹುವಿಧವಿನಯೋ ವಂಚನಾಯೋಪಯುಕ್ತೋ
ಮೋಹಸ್ಯೈವೋಪಪತ್ತ್ಯೈ ದೃಢಮೃದುಲಭುಜಾಶ್ಲೇಷಶಿಕ್ಷೋಪದೇಶಃ
ಶೀಲಭ್ರಂಶಾಯ ಪುಂಸಾಂ ರತವಿಧಿಷು ಗಲದ್ವ್ರೀಡಿತಂ ಕೈತವೇನ
ಪ್ರಾಯೋ ಮೂರ್ಚ್ಛಾಕರಸ್ಮರಾರ್ತೌ ಮನಸಿ ಚ ಕಠಿನೇ ಮೂರ್ಚ್ಛನಾಯೇತರಸ್ಯ||೮೩

ದುಡ್ಡು ಅಥವಾ ಹಣವಿರುವವನನ್ನು ಕಂಡರೆ ಪರಿಹಾಸಯುಕ್ತವಾದ ಮಾತನಾಡುತ್ತಾರೆ. ವಂಚಿಸುವುದಕ್ಕೆ ಉಪಯುಕ್ತವಾದ ವಿನಯಗಳನ್ನು ತೋರಿಸುತ್ತಾರೆ. ಮೋಹೋತ್ಪಾದನೆಗಾಗಿ ದೃಢವಾಗಿಯೂ ಇರತಕ್ಕ ಭುಜಾಶ್ಲೇಷವನ್ನು ಕೋರುತ್ತಾರೆ. ಸಚ್ಛೀಲವನ್ನು ಹಾಳುಮಾಡುವುದಾದ ಕ್ರೀಡೆಗಳಲ್ಲಿ ಕೃತ್ರಿಮವಾದ ನಿರ್ಲಜ್ಜೆಯನ್ನು ತೋರಿಸುತ್ತಾರೆ. ಇತರರನ್ನು ಮೋಹಪರವಶರನ್ನಾಗಿ ಮಾಡಿ ವಂಚಿಸಲು ಯತ್ನಿಸುತ್ತಾರೆ. ಇವರ ಮನಸ್ಸು ಕಾಠಿನ್ಯವನ್ನು ಬಿಡುವುದಿಲ್ಲ. ಆದುದರಿಂದ ಎಲೈ ಧನಿಕನೆ! ವೇಶ್ಯೆಯರ ವಿಚಾರದಲ್ಲಿ ಎಚ್ಚರದಿಂದಿರು.

ಕಾಷ್ಠಾಂತಾಬದ್ಧರಶ್ಮೀ ಶಶಿದಿವಸಕರಾವೇವ ನಿರ್ಮಾಯ ಪಾತ್ರೇ
ಪುಣ್ಯಂ ಪಾಪಂ ವಿವಿಕ್ತಸ್ತುಲಯಿತುಮಸಕೃದ್ವ್ಯಂಭತೀವೇಹ ಕೋಽಪಿ
ಪುಣ್ಯಸ್ಯ ಜ್ಯೋತಿರೇಕದ್ವಿಲಸತಿ ಸವಿತುರ್ಮಂಡಲೇ ದೀಪ್ಯಮಾನಂ
ಚಂದ್ರಸ್ಯಾಂತರ್ಯದೇತನ್ಮಲಿನಮಿವ ಪರಂ ದೃಶ್ಯತೇ ಪಾಪಮೇತತ್||
ವೈರಾಗ್ಯಧನದಶತಕ ೫.

ಪಾಪಪುಣ್ಯಗಳನ್ನು ತೂಕಮಾಡಲು ಒಂದು ತಕ್ಕಡಿಯನ್ನು ಮಾಡಿಕೊಂಡು ಸೂರ್ಯ ಚಂದ್ರರನ್ನು ಪಾತ್ರವನ್ನಾಗಿಮಾಡಿ ಪುಣ್ಯಪಾಪಗಳನ್ನೆಷ್ಟು ಸಲ ಬೇರೆ ಬೇರೆ ಮಾಡಿದರೂ ಸೂರ್ಯನ ತೇಜೋರಾಶಿಯಂತೆ ಪುಣ್ಯವೂ ಚಂದ್ರನ ಕಳಂಕದಂತೆ ಪಾಪವೂ ಕಾಣಲ್ಪಡುತ್ತದೆ.

ದಾರಾಜಾತೋಪಕಾರಾ ಅಜನಿಷತ ಯತಃ ಪ್ರೀತಿಭಾರಾಃ ಕುಮಾರಾ
ವಿತ್ತಾನೀತಾನಿ ಯೂಯಂ ವಿವಿಧವಿಧಿಮುಖೇ ಸ್ವೋಪಯೋಗಂ ಚಿರೇಣ
ಮಿತ್ರಾನ್ ಪ್ರಾರ್ಥಯೇ ವಃ ಸ್ಖಲಿತಮಪಿ ಕದಾ ಮಿತ್ರಕಾರ್ಯಾನ್ಮನೋ ಮೇ
ಕರ್ಮಚ್ಛೇದೋದ್ಯಮಾಯ ಕ್ಷಿತಿಧರವಿವರೇ ವಾಸಮಿಹಾಮಹೇಽದ್ಯ ||
ವೈರಾಗ್ಯ ಧನದಶತಕ ೭೧

ಹೆಂಡತಿಯೂ ಉಪಕೃತಳಾದಳು. ಮಕ್ಕಳು ಬಹುವಾಗಿ ಪ್ರೀತಿಸಲ್ಪಟ್ಟರು. ಬೇಕುಬೇಕಾದಂತೆ ದ್ರವ್ಯವ್ಯಯವೂ ಆದುದು. ಸ್ನೇಹಿತರಿಗಾಗಿ ನಾನಾವಿಧವಾದ ಸ್ಖಾಲಿತ್ಯಗಳನ್ನಾಚರಿಸಿದುದಾದುದು. ಆದುದರಿಂದ ಎಲೈ! ಗೆಳೆಯರೆ! ನಾನು

ಈಗ ಕರ್ಮಚ್ಛೇದನವನ್ನು ಮಾಡಿಕೊಂಡು ಮುಕ್ತಿ ಹೊಂದುವುದಕ್ಕೋಸ್ಕರ ಈ ತಾಪತ್ರಯ ದೂರವಾಗಿರುವ ಯಾವುದಾದರೊಂದು ಗುಹೆಯಲ್ಲಿ ವಾಸಮಾಡಬೇಕೆಂದು ಆಶಿಸುತ್ತೇನೆ. (ಎಂದರೆ ತಪಸ್ಸಿಗಾಗಿ ವನಾಂತರವನ್ನು ಹೊಂದಲಾಶಿಸುತ್ತೇನೆಂದು ಭಾವವು.

ನಿರ್ವಾಣಂ ಗಂತುಕಾಮಸ್ತ್ವಮಸಿ ಯದಿ ತದಾ ಮುಂಚ ಕರ್ಮಾಣಿ ದೂರಾ
ದೇಕಂ ಪದ್ಬ್ರಹ್ಮ ಚಿತ್ತೇ ಕುರುಸಪದಿ ಮಹಾಮೋಹ ಸಂದೋಹಹಾರಿ
ಬೋಧೇ ಯಸ್ಯಾಸ್ಯ ಸದ್ಯೋ ವಿಷಯವಿಷಧರೋ ನೈತಿ ಪಾರ್ಶ್ವಂ ಕದಾಚಿ
ನ್ನೈವಂ ನ್ನೈವ ಪ್ರಭಾವಂ ಪ್ರಕಟಯತಿ ನಿಜಂ ಸತ್ಕೃತಂ ದುಷ್ಕೃತಂ ಚ॥೮

ಎಲೈ! ಮನುಷ್ಯನೆ! ನೀನು ಮೋಕ್ಷವನ್ನು ಹೊಂದಲಿಚ್ಛಿಸುವೆಯಾದರೆ, ನೀನು ಮಾಡುತ್ತಿರುವುದಾದ ಎಲ್ಲಾ ಕರ್ಮಗಳನ್ನೂ ದೂರಮಾಡಿ ಅಜ್ಞಾನನಾಶಕವಾದ ಬ್ರಹ್ಮ (ವಿದ್ಯ) ನಲ್ಲಿ ಮನಸ್ಸಿಡು. ಅದರಿಂದ ಸತ್ಕಾರ್ಯವಾಗಲಿ, ದುಷ್ಕಾರ್ಯವಾಗಲಿ ಯಾವುದೂ ನಿನ್ನ ಸಮೀಪದಲ್ಲಿ ಸುಳಿಯದು. ಅದರಿಂದ ನೀನು ಮುಕ್ತಿಯನ್ನು ಹೊಂದಬಹುದು.

## ಪಟ್ಟುಭಟ್ಟ

ಇವನು ಮಚಲಿಪಟ್ಟಣದ ಬಳಿ ಇರುವ ಕಾಕವ್ಯಾಣಿ ಎಂಬ ಗ್ರಾಮದಲ್ಲಿ ಹುಟ್ಟಿದನು. ವಾಧೂಲ ಕುಲಾವತಂಸನು. ಇವನು 'ಪ್ರಸಂಗ ರತ್ನಾವಳೀ' ಎಂಬ ಗ್ರಂಥವನ್ನು ಶಾ. ಶ. ೧೩೩೮ ಅಥವಾ ಕ್ರಿ. ಶ. ೧೪೧೭ ರಲ್ಲಿ ಬರೆದನು. ಇದು ಹೆಸರಿಗೆತಕ್ಕಂತೆ ನೀತಿ, ಆಚಾರ, ವ್ಯವಹಾರ, ರಾಜನೀತಿಗಳಿಂದ ಕೂಡಿ ಸುಭಾಷಿತ ಗ್ರಂಥವೆಂದೆನಿಸಿಕೊಂಡಿರುವುದು. ಇದರ ೭೭ ನೆಯ ಅಧ್ಯಾಯದಲ್ಲಿ ವಿಕ್ರಮಾದಿತ್ಯನನ್ನು ಮೊದಲುಮಾಡಿಕೊಂಡು ಪೈತಾಪುರದ ಸಿಂಹಭೂಪತಿಯು ವರೆಗಿನ ರಾಜಕುಮಾರರ ಹೆಸರುಗಳು ಹೇಳಲ್ಪಟ್ಟಿರುವುವು. ಗಾಥೆಗಳು ಹೇರಳವಾಗಿವೆ. ಅಭಿಪ್ರಾಯವು ಸೂತ್ರದಂತೆ ಚಿಕ್ಕ ಚಿಕ್ಕವಾಗಿವೆ. ಇದರಲ್ಲಿ ಚಾರಿತ್ರಕ ವಿಷಯಗಳು ಯಾವುವೂ ಇರುವುದಿಲ್ಲ.

## ಚಂದ್ರಚೂಡ

ಇವನು ಪುರುಷೋತ್ತಮ ಭಟ್ಟನ ಮಗನು, ಕ್ರಿ. ಶ. ೧೫ ನೆಯ ಶತಮಾನಾಂತ್ಯದಲ್ಲಿ ಕಾಶಿಯ ಬಳಿಯಲ್ಲಿದ್ದುದಾಗಿ ತಿಳಿಯಬರುತ್ತದೆ. ಇವನು 'ಕಾರ್ತವೀರ್ಯವಿಜಯ' ಎಂಬ ೧೪ ಸರ್ಗಗಳುಳ್ಳ ಕಾವ್ಯವನ್ನು ಬರೆದಿರುವನು. ಇದರಲ್ಲಿ ಕಾರ್ತವೀರ್ಯನ ಚರಿತವು ಹೇಳಲ್ಪಟ್ಟಿರುವುದು. ಇವನ ವರ್ಣನೆಯೂ ಮತ್ತು ಶೈಲಿಯೂ ಹರ್ಷನ ಚರಿತೆಯನ್ನು ಹೋಲುವುದು.

## ವಿದ್ಯಾಭೂಷಣ

ಇವನು ವಂಗದೇಶದವನು. ಚೈತನ್ಯನ ಶಿಷ್ಯನು ಕ್ರಿ. ಶ. ೧೫ನೆಯ ಶತಮಾನದವನು. 'ಸಾಹಿತ್ಯ ಕೌಮುದೀ' ಎಂಬ ಅಲಂಕಾರ ಗ್ರಂಥವನ್ನು ಬರೆದಿರುವನು ಇದರಲ್ಲಿ ಶ್ರೀಚೈತನ್ಯನು, ಪ್ರತಾಪ ರುದ್ರ ಗಜಪತಿಯನ್ನು ತನ್ನ ಮತಕ್ಕೆ ಹೇಗೆ ಸೇರಿಸಿ ಕೊಂಡನೆಂಬುವದು ವರ್ಣಿತವಾಗಿರುವುದು.

## ಕೇದಾರಭಟ್ಟ

ಇವನು ಕಾಶ್ಯಪಗೋತ್ರೀಯನಾದ ಪವ್ಯಕನಮಗನು. ಕ್ರಿ. ಶ. ೧೫ ನೆಯ ಶತಮಾನಾರಂಭದಲ್ಲಿ ಇವನು 'ವೃತ್ತರತ್ನಾಕರ' ವೆಂಬ ಗ್ರಂಥವನ್ನು ಬರೆದನು. ಇದರಲ್ಲಿ ೬ ಭಾಗಗಳಿದ್ದು ಛಂದೋಲಕ್ಷಣ, ಉತ್ಪತ್ತಿ ಪ್ರಯೋಗಾದಿಗಳನ್ನು ಹೇಳಿ ಮುಗಿಸಿರುವನು. ಇದಕ್ಕೆ ನಾರಾಯಣನೆಂಬವನು ವ್ಯಾಖ್ಯಾನವನ್ನು ಕ್ರಿ. ಶ. ೧೫೫೬ ರಲ್ಲಿ ಬರೆದನು.

## ವಾಮನಭಟ್ಟಬಾಣ *

ಇವನು ತ್ರೈಲಿಂಗ ದೇಶದಲ್ಲಿ ಹುಟ್ಟಿದವನು. ವತ್ಸಕುಲದವನು. ವೀರ ನಾರಾಯಣಾಪರಮನಾಯಕ ವೇಮಭೂಪಾಲನ ಆಶ್ರಿತನು. ಒಂದಾನೊಂದು ತಾಮ್ರದ ಶಾಸನದಲ್ಲಿ ಇವನ ಕಾಲವು ಶಕ ಸಂ. ೧೩೩೩ ಅಥವಾ ಕ್ರಿ. ೧೪೧೧ ಎಂದು ಹೇಳಲ್ಪಟ್ಟದೆ § 'ಶಬ್ದ ಚಂದ್ರಿಕಾ' ಎಂಬ ಗ್ರಂಥದಲ್ಲಿ ಬಾಣನೆಂಬ ಹೆಸರು ಕಂಡುಬರುವುದು. ಬಾಣ ಭಟ್ಟನನ್ನು ಮೀರಿಸಬೇಕೆಂದುಯೋಚಿಸಿ ವೇಮ ಭೂಪಾಲ ಚರಿತವನ್ನು ಬರೆದಿರಬಹುದಾಗಿ ತೋರುತ್ತದೆ. ಇವನು ವಾಮನ ಭಟ್ಟಬಾಣನೆಂದು ಖ್ಯಾತನಾಮಕನಾಗಿದ್ದುದಲ್ಲದೆ ಅಭಿನವ ಭಟ್ಟಬಾಣನೆಂದೂ ಕರೆಯಲ್ಪಡುತ್ತಿದ್ದುದಾಗಿ ವೇಮಭೂಪಾಲ ಚರಿತದ,:—

ಭಾಣಾದನ್ಯೇ ಕವಯಃ
  ಕಾಣಾಃ ಖಲು ಸರಸಗದ್ಯ ಸರಣೀಷು |
ಇತಿಜಗತಿರೂಢಮಯಶೋ
  ವಾಮನಬಾಣೋಽಪಮಾರ್ಷ್ಟಿ ವತ್ಸಕುಲಃ ೧-೬

* ಇವನ ಮೊದಲಿನ ಹೆಸರು ವಾಮನಭಟ್ಟನೆಂದಿದ್ದು ಕಾಲಕ್ರಮದಲ್ಲಿ ಕಾದಂಬರೀಶೈಲಿಯನ್ನು ಅನುಕರಿಸಿ ಬರೆದನಾದುದರಿಂದ ಬಾಣನೆಂಬ ಹೆಸರನ್ನು ಸೇರಿಸಿ ಹೆಸರನ್ನು ವಾಮನಭಟ್ಟಬಾಣನೆಂದು ಹೇಳಿಕೊಂಡಿರಬಹುದಾಗಿ ನನಗೆ ತೋರುತ್ತದೆ.

§ History of classical Sanskrit Literature P. 104

ವಿಶ್ವಾಧಿಕವಿಭವೋ ವೇಮಭೂಪಾಲಃ" ಎಂದಿರುವುದರಿಂದ ಗ್ರಂಥಕಾಲಕ್ಕೆರಾಜನು ಜೀವಿಸಿರಬೇಕಾಗಿತೋರುತ್ತದೆ. ಆದುದರಿಂದ ವೇಮಭೂಪಾಲನೂ ವಾಮನಭಟ್ಟ ಬಾಣನೂ ಸಮಕಾಲೀನರೆಂದಾದುದು. ವೇಮಭೂಪಾಲನು ಪೆದ್ದ ಕೋಮಟಿಯ ಮಗನು. ಮಾಚವೇಮನ ಸೋದರನ ಮುಮ್ಮಗನು. ಮಾಚವೇಮನು ಸಕಲ ಕಲಾಚತುರನಾಗಿದ್ದು ಅಮರುಶತಕಕ್ಕೆ 'ಶೃಂಗಾರ ದೀಪಿಕಾ' ಎಂಬ ವ್ಯಾಖ್ಯಾನ ವನ್ನೂ, ಸಂಗೀತ ಚಿಂತಾಮಣಿಯೊಂಬುದನ್ನೂ ಬರೆದುದಾಗಿ ತಿಳಿಯುಬರುತ್ತದೆ. ಇದರಿಂದ ಅಣ್ಣವೇಮನೂ, ವೇಮಭೂಪಾಲನೂ ಸಮಕಾಲೀನರೆಂದು ಹೇಳಿದುದ ರಿಂದ ಕ್ರಿ. ಶ. ೧೫ ನೆಯ ಶತಮಾನದ ಪೂರ್ವಾರ್ಧದವನೆಂದು ಸಿದ್ಧವಾಗುತ್ತದೆ.

ಇವನ ಗ್ರಂಥಗಳು—

೧. ವೇಮಭೂಪಾಲ ಚರಿತಂ
೨. ಪಾರ್ವತೀ ಪರಿಣಯ
೩. ನಳಾಭ್ಯುದಯ
೪. ಶೃಂಗಾರ ಭೂಷಣ
೫. ರಮಾನಾಥ
೬. ಶಬ್ದ ರತ್ನಾಕರ
೭. ಶಬ್ದ ಚಂದ್ರಿಕಾ

**ವೇಮಭೂಪಾಲಚರಿತಂ:—**

ಇದು ಗದ್ಯಕಾವ್ಯ. ಇದರಲ್ಲಿ ನಾಲ್ಕು ಉಚ್ಛ್ವಾಸಗಳಿರುವುವು. ಕವಿಯು ತನ್ನ ಆಶ್ರಯದಾತನಾದ ವೇಮಭೂಪಾಲನ ವಂಶಾವಳಿ, ದಿಗ್ವಿಜಯ ವಿಚಾರಗಳನ್ನು ಬಹು ಸೊಗಸಾಗಿ ಕೀರ್ತಿಸಿರುವನು. 'ಗದ್ಯಂಹೃದ್ಯಂ'ಎಂಬುದು ಇವನಲ್ಲಿ ಅಕ್ಷ ರಶಃ ನಿಜವಾಗಿದೆ. ಇವನ ಪದ್ಯಧೋರಣೆಯೂ ಬಹು ಲಲಿತ ಮಧುರವಾಗಿರುವು ದರಿಂದ 'ಪದ್ಯಂವಧ್ಯಂ'ಎಂದು ಹೇಳಿರುವುದು ಗದ್ಯೋತ್ಕರ್ಷತೆಯನ್ನು ತೋರಿಸು ವುದಕ್ಕೆಮಾತ್ರ ಹೇಳಿರಬಹುದೆಂದು ತೋರುತ್ತದೆ. ಈ ವಿಚಾರದಲ್ಲ ಶೃಂಗಾರಭೂಷಣ ಮತ್ತು ಪಾರ್ವತೀಪರಿಣಯನಾಟಕ ಇವು ಸ್ಪಷ್ಟಗೊಳಿಸುವುವು. ಪ್ರತಿ ಉಚ್ಛ್ವಾಸದ ಕೊನೆಯಲ್ಲಿ "ಇತಿ ಶ್ರೀಗದ್ಯಕವಿಸಾರ್ವಭೌಮಸ್ಯ ವತ್ಸಕುಲತಿಲಕಸ್ಯ ಮಹಾಕವೇ ರಭಿನವಭಟ್ಟಬಾಣಸ್ಯ ಕೃತೌ" ಎಂದಿರುವುದು. ರೆಡ್ಡಿವೇಮ ಭೂಪಾಲನಿಗೆ ವೀರನಾರಾಯಣನೆಂದೂ, ಇವನ ಚರಿತೆಗೆ ವೀರನಾರಾಯಣ ಚರಿತವೆಂದೂ ಹೆಸರು. ಭಾಷೆಯಬಿಕ್ಕಟ್ಟು, ವಿಷಯದಸನಿಗಟ್ಟು, ರಸೌಚಿತ್ಯ, ಶೈಲಿಯಮಾರ್ದ್ರವ, ಕಲ್ಪನೆಯ ಪೂರ್ಣತೆ ಇವುಗಳನ್ನು ಇವನ ಗ್ರಂಥಗಳಲ್ಲಿ ಕಾಣಬಹುದಾಗಿದೆ. ಇಷ್ಟಾದರೂ ಕಥಾವಸರದಲ್ಲಿ ವಿದೂಷಕನನ್ನುರಾಕ್ಷಸನೋರ್ವನು ಹಿಡಿದುಕೊಂಡು ದಾಗಿಕಲ್ಪಿಸಿ ಹೇಳುವುದಕ್ಕಿಂತಲೂ ರಾಜನನ್ನು ಹುಡುಕಿಕೊಂಡು ಬಂದ ವಿದೂಷಕ

ಕವಿಭಿರಭಿನವಬಾಣಃ ಕಾವ್ಯಮತ್ಯದ್ಭುತಾರ್ಥಂ
ಭುವನ ಮಹಿತಭೂಮಾನಾಯಕೋವೇಮಭೂಪಃ |
ತ್ರಿಭುವನಮಹನೀಯ ಖ್ಯಾತಿಮಾನೇಷಯೋಗಃ
ಪ್ರಕಟಯತಿನ ಕೇಷಾಂ ಪಂಡಿತಾನಾಂ ಪ್ರಹರ್ಷಂ || ೧-೭

ಎಂಬ ಶ್ಲೋಕಗಳಿಂದ ತಿಳಿಯಬರುತ್ತದೆ. ಕಾವ್ಯದ ಕೊನೆಯಲ್ಲಿ....''ಸರ್ವೋತ್ಕರ್ಷೇಣ ವರ್ತಮಾನಃ, ''ಸಾಕ್ಷಾಲ್ಲಕ್ಷ್ಮೀಸಮುಚ್ಚಾರ್ಯಮಾಣಜಯಶಬಃ ವಿಶ್ವವಿಶ್ವಂಭರಾಪಾಲಮೌಳಿಮಾಲಾಮಕರಂದಸುರಭಿತಚರಣಾರವಿಂದೋ ಜಯತಿ ನನ್ನುಮತ್ತಾವುದಾದರೂ ವನ್ಯಪಶುಗಳು ಹಿಡಿದುಕೊಂಡುದಾಗಿಯೂ, ವಿದೂಷಕನ ಆಕ್ರಂದನ ಧ್ವನಿಯನ್ನುಕೇಳಿ ಅದನ್ನುಬಿಡಿಸುವುದಕ್ಕಾಗಿ ರಾಜನು ಹೋದಂತೆಯೋ ಹೇಗೋ ಬರೆದುದಾಗಿದ್ದರೆ ಇವನ ಸಂವಿಧಾನ ಚತುರತೆಗೆ ಮತ್ತಷ್ಟುಮೆರಗು ಹೆಚ್ಚುತಲಿತ್ತೆಂದು ತೋರುತ್ತದೆ. ಲೋಕವು ಭಿನ್ನರುಚಿಯುಳ್ಳುದು. ಮಹಾಕವಿವಾಮನ ಭಟ್ಟಬಾಣನ ವಿಚಾರವಾಗಿ ಕಾವ್ಯವು ಹೀಗೆ ಹೇಳುತ್ತದೆ.

ಪ್ರತಿಕವಿಭೇದನಬಾಣಃ ಕವಿತಾತರುಗಹನವಿಹರಣಮಯೂರಃ
ಸಹೃದಯಲೋಕಸುಬಂಧುರ್ಜಯತಿ **ಶ್ರೀಭಟ್ಟಬಾಣಕವಿರಾಜಃ**
ಜಯತಿ **ಕವಿಭಟ್ಟಬಾಣೋ** ದಧತಿ ಕವಿಮನ್ಯಭಾವಮನ್ಯೇಽಪಿ
ಪ್ರದ್ಯೋತಯತಿ ರವೌ ದ್ಯಾಂ ಖದ್ಯೋತಾಖ್ಯಾ ನ ಕಿಂತು ಕೀಟಮಣೇಃ
ಸುಗುಣಾಲಂಕೃತಿಸುಭಗಾ ಫಣಿತಿರಿಯಂ **ಭಟ್ಟಬಾಣ** ಭವದೀಯಾ
ಅಧರಯತಿ ವಿಧುತನಖಮುಖಮುಖರಿತವೀಣಾನಿನಾದಮಾಧುರ್ಯಂ||

ವೇಮಭೂಪಾಲಚರಿತದ ಕಥಾಸಾರಾಂಶ: —

ಅಸ್ತಿ ತ್ರಿಲಿಂಗೇಷ್ವಡ್ಡಂಗಿನಾಮಧೇಯಾ ನಗರೀ| ತತ್ರೈಕದಾ ನಾರಾಯಣ ಚರಣಕಮಲಸಂಭೂತೇ ಚತುರ್ಥೇವರ್ಣೇ ಸಮುತ್ಪನ್ನಃ ಕಾಮಾಭಿಧಾನೋನರಪತಿರಶಿಷದಶೇಷಮವನಿಚಕ್ರಂ | ತಸ್ಮಾತ್ಪ್ರಸ್ರುತೇ ಮಹತಿ ವಂಶೇ ಶೌರ್ಯೋಷ್ಮಸಂತಪ್ತಸಮಸ್ತಸಾಮಂತಚಕ್ರಃ ಪ್ರೋಲ್ಲಭೂಪತಿರುದಭೂತ್ | ಸ ಹಿ ಕದಾಚಿದ್ವಸಂತಸಮಯೇ ಮೃಗಯಾಕ್ಷಿಪ್ತಚೇತಾಃ ಮಹಾರಣ್ಯಂ ವಿಗಾಹ್ಯಾಶ್ಚರ್ಯದರ್ಶನೇನ ಹರಿಣೇನ ಸುದೂರಮಾಕೃಷ್ಟಃ ಕಂಚನ ಮಹನೀಯಮಾರಾಮಮಾಸದತ್ | ತತ್ರಾನಾಘ್ರಾತಪೂರ್ವಮಂಗನಾಂಗಪರಿಮಲಮುದ್ವಹಂತಂ ಪವಮಾನಮಭ್ಯಜಿಘ್ರತ್| ತದನುಸಾರೇಣ ವಿಚರನ್ ಕಸ್ಮಿಂಶ್ಚಿದುಪವನೇ ಬಾಲತರುಷಂಡಮಧ್ಯೇ ಸಹಕಾರಪೋತಾಶ್ರಿತಡೋಲಾಯಾಮುಪವಿಷ್ಟಾಂ ಕಲಮಧುರಾಲಾಪಿನೀಂ ಕಾಂಚಿತ್ ಕನ್ಯಕಾಮದ್ರಾಕ್ಷೀತ್ | ದೃಷ್ಟಮಾತ್ರೈವ ಸಾ ತಸ್ಯ ಹೃದಯಮ

ವಿಕ್ಷತ್, ಸೋಽಪಿ ತಸ್ಯಾಃ | ಹಂತ! ಪರಸ್ಪರದರ್ಶನಾನುಕ್ಷಣಮೇವ ರಾಕ್ಷಸೇನಗಲೇ ಗೃಹೀತಸ್ಯ ವಿದೂಷಕಸ್ಯಾಕ್ರಂದನಮಶನಿಮಿವ ಶ್ರವಸಿ ಪಾತಿತಮಾಕರ್ಣ್ಯ ವಿಸ್ಮೃತಾನ್ಯಕರ್ತವ್ಯಃ ತದುನ್ಮೋಚನಾಯ ಸ ಭೂಪತಿಸ್ತಸ್ಮಾತ್‌ಪ್ರದೇಶಾದನ್ಯತ್ರಸರಭಸಮುಯಾಸೀತ್ ||

ಅಥ ರಾಕ್ಷಸಾತ್ ವಿದೂಷಕಂ ಮೋಚಯಿತ್ವಾ ಪುನಸ್ತಮೇವೋದ್ದೇಶಮಾಗತ್ಯ ತಾಂ ಕನ್ಯಕಾಮದೃಷ್ಟ್ವಾ ವಿಷಣ್ಣಹೃದಯಃ ಸರ್ವತೋಽನ್ವಿಷ್ಯಾನಧಿಗತತದ್ವಾರ್ತಃ ಮದನಶರಶರವ್ಯತಾಮುಪಯಾತಃ ಕೃಚ್ಛ್ರಾತ್ ಸ್ವಪುರಾಭಿಮುಖಂ ಪ್ರಾಸ್ಥಿತ | ತತಃ ಪ್ರಾಸಾದಮೇತ್ಯ ಪ್ರಬಲಾನಂಗವೇದನಾಜರ್ಜರಿತಾವಯವಃ ಕಥಂಕಥಮಪಿತಾಂ ನಿಶಾಂ ಗಮಯಿತ್ವಾಪ್ರತ್ಯೂಷಸಿ ತದೇವ ಲೀಲೋದ್ಯಾನಂ ಗತ್ವಾ ಡೋಲಾವಿಹಾರದೇಶಮುಪೇತ್ಯ ತರುಗುಲ್ಮೇಷು, ಕಮಲಸರಸ್ತೀರೇಷು ಚ ವಿಚರ್ರ ಕಸ್ಯಚಿತ್ ಕಮನೀಯಸ್ಯ ಲತಾಮಂಡಪಸ್ಯಮಧ್ಯಭಾಗೇ ಮದನಪರವಶಾಯಾಃ ಕಸ್ಯಾಶ್ಚಿತ್ ದುಃಸಹದೇಹಸಂತಾಪಮನಕ್ಷರಮಾವಿಷ್ಕುರ್ವತಃ ಶಯನೀಯಸ್ಯ ಸವಿಧೇ ಆತ್ಮನಃ ಪ್ರತಿಕೃತ್ಯಾಸಮಲಂಕೃತಂ ಕಿಮಪಿ ಚಿತ್ರಫಲಕಮಾಲೋಕಿಷ್ಟ | ತದವಲೋಕ್ಯಾತಿಭೂಮಿಂ ಗತೇನ ಕಂದರ್ಪಜ್ವರೇಣಾಸ್ತಮಿತಧೃತಿಃ ಅನುಚರೇಣ ವಿದೂಷಕೇಣ ಸಮಾಶ್ವಾಸ್ಯಮಾನಃ ಇತಿಕರ್ತ್ತವ್ಯತಾಮೂಢಃ ದಿಷ್ಟ್ಯಾ ತತ್ರ ಯದೃಚ್ಛಾಗತಪೂ ಪರಿಚಾರಿಕಾದ್ವಿತೀಯಯಾ ತಸ್ಯಾಃ ಸಖ್ಯಾ ನಿವೇದಿತಸರ್ವವೃತ್ತಾಂತಃ ಆತ್ಮನೋ ನಿಮಿತ್ತೇ ಅನುಭೂತಾನಂಗವೇದನಾಸಹಸ್ರಾಯಾಸ್ತಸ್ಯಾಃ ವರವರ್ಣಿನ್ಯಾಃ ಶೋಚನೀಯಾಂ ದಶಾಂ ಶ್ರೋತು ಮಪ್ಯಶಕ್ನುರ್ವ 'ಅಯಿ ! ಭದ್ರೇ ! ಅವಿಲಂಬಿತಮೇವ ಕನ್ಯಾಗುರುಸಮೀಪಮಹಂ ಜನಂ ಪ್ರೇಷಯಾಮಿ ಪರಿಣಯನಪ್ರಸಂಗಾಯ' ಇತಿ ತಾಂ ವಿಸಜ್ಯ್ರ ಸಹವಿದೂಷಕೇಣ ಸ್ವನಗರಮೇವ ಪ್ರಾವಿಕ್ಷತ್ ||

ಅನಂತರಂ ದಕ್ಷಿಣಾಪಥೇ ವಿಕ್ರಮಸಿಂಹನಗರೀಪಾಲಕಸ್ಯ ತುಕ್ಕಾರಘಟ್ಟಸ್ಯ ಭೂಪತೇಸ್ತನಯಾಂ ತಾಂ ಪರಿಣೇತುಂ ತ್ವರಮಾಣಃ ಆಪ್ತೈಸ್ತಸ್ಯಾನುಮತಿಮುಪಲಭ್ಯ ತಾಮೇವ ಪುರೀಮುಪೇತ್ಯಶುಭೇ ಮುಹೂರ್ತೇ ಅನಂತಾನಾಮ್ನ್ಯಾಸ್ತಸ್ಯಾಃ ಪಾಣಿಂ ಗೃಹೀತ್ವಾ ಅನಂತಾಂ ಮುದಮಲಬ್ಧ | ತಯೋರನ್ಯೋನ್ಯವಿಭ್ರಮವಿಲಾಸಾವರ್ಜಿತಸ್ವಾಂತಯೋರುದಭರ್ವ ಮಾಚ, ವೇಮ, ದೋಡ್ಡ, ಅನ್ನ, ಮಲ್ಲಾಭಿಧಾನಾ ವಿಖ್ಯಾತಯಶಸಃ ಪಂಚ ಕುಮಾರಾಃ | ತೇಷುಜ್ಯೇಷ್ಠಾನ್ಮಾಚನರೇಂದ್ರಾತ್ ರೇಡ್ಡಿಪ್ರೋತಭೂಪ ಇತಿ ಪೆದ್ದಕೋಮಟೇಂದ್ರಇತಿ ನಾಗೇಂದ್ರಇತಿ ತ್ರಿದಶಸದೃಶಾ

ಸ್ತ್ರಯಃ ಕುಮಾರಾ ಅಜನಿಷತ | ತೇಷು ಗುಣಜ್ಯೇಷ್ಠಃ ಪೆದ್ದ ಕೋಮ
ಟೀಂದ್ರ ಏವರಾಜರಾಜಪ್ರಭಾವೋಭೂತ್ವಾ ಅರ್ಣವಮೇಖಲಾಮಿಮಾಮಾಂ
ಮೇದಿನೀಮಶಿಷತ್ | ಸ ಹಿ ಸೌಭಾಗ್ಯತಪಃಸಿದ್ಧಿಮಿವ ಸ್ಥಿತಾಮನಂತಾಂ
ಬಾಮುಪಾಯಂಸ್ತ| ಅನಂತರಮನಧಿಗತಸುತಮುಖಾವಲೋಕನಸುಖಃ
ಅಮರಪತಿಮರ್ಚಯಿತ್ವಾ ವೇಮಭೂಪಂ ನಾಮವಸೂಪಮಂ ಜ್ಯೇಷ್ಠಂ
ಸುತಂ ಗುಣೈಸ್ತಮನುಕುರ್ವಂತಂ ಚತುರ್ಭುಜಪ್ರಭಾವಂ ಮಾಚಭೂ
ಪಾಲಂ ನಾಮ ದ್ವಿತೀಯಂ ತನಯಂ ಚ ಪ್ರಾಪ್ಯಾನಂದತುಂದಿಲ
ಹೃದಯೋಽಭೂತ್ | ಕ್ರಮೇಣ ಕೃಷ್ಣೇತರಪಕ್ಷ ಶಶಲಾಂಛನ ಇವ
ವರ್ಧಮಾನಃ ಕಲಾಭಿಃ ಪೂರ್ಣಃ ಪಿತ್ರ್ಯಂ ಸಿಂಹಾಸನಮಾರುಕ್ಷದ್ವೇಮ
ಭೂಪಾಲಃ | ಅನಂತರಮಾಗತಾಯಾಂ ಶರದಿ ದಿಗ್ವಿಜಯಯಾತ್ರಾಂ
ಚಿಕೀರ್ಷನ್ನಮಿತರಥಗಜತುರಗಪಾದಾತ್ಯೈರತಿಮಹತೀಂ ಸೇನಾಂ ಕರ್ಷ
ನ್ನುದಚಲತ್ ||

ಪ್ರಥಮಮಸೌ ಸಾಗರತೀರಮುಪೇತ್ಯ ತತಃ ಕಲಿಂಗೋತ್ಕಲಾಂಗವಂಗ
ಭಂಗಾಲಾನ್ ವಿಜಿತ್ಯ ಭಾಗೀರಥೀತೀರೇ ಕೃತಸೇನಾನಿವೇಶಃ ವೇಲಾತಟೇ
ನೈವ ದಕ್ಷಿಣಾಂ ದಿಶಾಂ ಪ್ರಸ್ಥಾಯ ದ್ರವಿಡಾನಾಕ್ರಮ್ಯ ಕಾಂಚೀ
ಮಾಸಾದ್ಯ ಪಾಂಡ್ಯಾನ್ಪರಾಜಿತ್ಯ ಸೇತುಂ ಸಾಕ್ಷಾತ್ಕೃತ್ಯ ತಾಮ್ರಪರ್ಣೀ
ಮವಗಾಹ್ಯ ಕೇರಲಾನುದ್ವೀಕ್ಷ್ಯ ಮುರಚೀಂ ನದೀಮತಿಕ್ರಮ್ಯ, ಮಲ
ಯಾದ್ರೇರುಪತ್ಯಕಾಸು ಸುಖಮವಾತ್ಸೀತ್. ಕತಿಚನ ವಾಸರಾಣಿ | ಅಥ
ಪ್ರತೀಚೀಂ ದಿಶಾಮಾಲಂಬ್ಯ ಘೂರ್ಜರಸೌರಾಷ್ಟ್ರಾನಾತ್ಮನೋ ವಂಶಂ
ನೀತ್ವಾ ದೇವಂ ಸೋಮನಾಥಮಭ್ಯರ್ಚ್ಯ ಚರಮಾರ್ಣವರೋಧಸಾ
ಪಾರಸೀಕಾಭಿಮುಖಂ ಗತ್ವಾ ಯವನಾನಾಂ ಶಿರಾಂಸಿನಿಕೃತ್ಯ ಅಪರಾಂತ
ಮಹೀತಲಮಾಕ್ರಮ್ಯ ಸಿಂಧುರಾಜಂ ಸಮರಾಂಗಣೇ ಪರಿಭೂಯ
ಹೂಣಾನ್ ಕಾಂಭೋಜಾನ್ ಕಾಶ್ಮೀರಾನವನಮಯ್ಯ ಗ್ರೀಷ್ಮಸಮಯೇ
ಗೌರೀಗುರುಂಶೈಲಮಗಾತ್ | ಅನಂತರಮನುಭೂತ ಹಿಮಾಲಯೋ
ಪಾಂತವನರಾಜಿಸಂಚರಣಾನಂದಃ ಸಹ ಸೈನಿಕೈಸ್ತಸ್ಮಾದವರುಹ್ಯ ವಿಂಧ್ಯಾ
ಟವೀಮವಗಾಹ್ಯ ಚಂಡಿಕಾಲಯೇ ಭಗವತೀಮಾದಿಭೈರವೀಂ ತಾಂತ್ರಿ
ಕೇನವಿಧಿನಾ ಸಂಪೂಜ್ಯ ದ್ರಾಕ್ಷಾರಾಮಪುರೀಮಾಸಾದ್ಯ ಭೀಮೇಶ್ವರಂ
ಪ್ರಣಮ್ಯ ವೇಶವಾಟೀಂ ಕೇವಲಮವಲೋಕನದಾನೇನಾನುಗೃಹ್ಯ ವಸಿಷ್ಠ
ಗೌತಮನಿಷೇವಿತಾಂ ಭಗವತೀಂ ಗೋದಾವರೀಮುಪಾಸ್ಯ ನಿಜಪುರೀ
ಮಭ್ಯೇತ್ಯ ಐಶ್ವರ್ಯ ಸಂಪೂರ್ಣಮಾತ್ಮಭಾವನಮಾಸಾದ್ಯಾನಿತರಸು
ಲಭಾನ್ ಭೋಗಾನನುಶೇವಮಾನಃ ಸರಸಕವಿಕಾವ್ಯಶ್ರವಣಭೂಷಣೇನ

ಕರ್ಣಾವನುದಿನಮಲಂಕುರ್ವ೯ ಪರಾಂ ಕೋಟಿಮಾನಂದ ಸ್ಯಾಧ್ಯ ಗಚ್ಛತ್ ||

ಇವನ ಗದ್ಯದವಾದರಿಗೆ ಕೊಂಚಬರೆಯುವೆವು:—

"ತತಃ ಪ್ರಬಲೋತ್ಕಂಠಃ ಕ್ಷಣದಾಕರರಶ್ಮಿಭಿರಿವಾಕೃಷ್ಯಮಾಣಃ ಸೌಧಶಿಖರ ಮಾರುರೋಹ| ತತ್ರ ಚಂದನಜಲಸಿಕ್ತಮಣಿಕುಟ್ಟಿಮತಲೇ ತಾರಕಪ್ರತಿ ಬಿಂಬಮೇದುರೋಪಹಾರಕುಸುಮೇ ಬಹುಲವಿಕೀರ್ಣಕರ್ಪೂರಧೂಲೀ ಪರಿಮಲಮಿಳದಳಿಕುಲಝಂಕಾರಮುಖರೇ ದಕ್ಷಿಣಪವನವಿಕೀರ್ಯಮಾಣ ಪರಿಸರಾರಾಮಕುಸುಮಪರಾಗಸುರಭೌ ಪರಿತೋ ಲಂಬಮಾನಮುಕ್ತಾ ಸರಕಿರಣಪುನರುಕ್ತಚಂದ್ರಿಕಾ ಧವಲಿಮ್ನಿ ಸೌಧತಲೇ, ಮಣಿಪರ್ಯಂಕಿ ಕಾಶಯ್ಯಾಮಧಿಶಿಶ್ಯೇ.............ದ್ವಿತೀಯೋಚ್ಛ್ವಾಸಃ ಪುಟ ೫೭.

## (೨) ಪಾರ್ವತೀಪರಿಣಯನಾಟಕ.

ಇದರ ಕರ್ತನಾರೆಂಬ ವಿಚಾರದಲ್ಲಿ ವತ್ಸಕುಲಜಾತ ಅಭಿನವಬಾಣಾಭಿದಾನದ ಬೇರೊಬ್ಬನೆಂದೂ (ಸಂಸ್ಕೃತ ಕವಿಚರಿತೆ, ಪ್ರಥಮಸಂಪುಟ ೧೪೪ನೆಯ ಪುಟದಲ್ಲಿ ಸೂಚಿಸಿರುವೆವು.) ನಾಮಸಾಮ್ಯದ, ಕಾದಂಬರೀಕಾರ ಬಾಣಭಟ್ಟನಲ್ಲವೆಂದೂ ಹೇಳಿರುವೆವು. ಇದನ್ನು ಬರೆದವನು ವೇಮಭೂಪಾಲಚರಿತಕಾರನಾದ ವಾಮನಭಟ್ಟ ಬಾಣನು. ಈತನಹೆಸರು ಈಕಡೆ ಪ್ರಸಿದ್ಧವಿಲ್ಲದುದರಿಂದಲೂ, ಹೆಸರಿನ ಮೊದಲಿನಲ್ಲಿ ಕಂಡುಬರುವ 'ವಾಮನ'ಎಂಬ ಶಬ್ದವು ಬಳಿಕೆಯಲ್ಲಿಲ್ಲದೆ ಬಿಟ್ಟುಹೋಗಿ ಭಟ್ಟಬಾಣ ನೆಂದು ಹೆಸರುಗೊಂಡುದರಿಂದ ಇಂತಹಸಂದೇಹಕ್ಕೆ ಅವಕಾಶಕೊಟ್ಟಿದೆ. ಮುಂಬಯಿ (Bombay) ಯಲ್ಲಿ ಅಚ್ಚಾಗಿರುವ ನಿರ್ಣಯಸಾಗರಪ್ರತಿಯಲ್ಲಿ " ಮಹಾಕವಿ ಶ್ರೀ ಬಾಣಭಟ್ಟಪ್ರಣೀತಂ ಪಾರ್ವತೀಪರಿಣಯಂ " ಎಂಬದು ತಪ್ಪಾಗಿಅಚ್ಚಾಗಿದೆ. ಹೆಸರಿಗೆತಕ್ಕಂತೆ ಶಿವನೊಡನೆ ಪಾರ್ವತಿಯ ವಿವಾಹಕಥೆಯು ಇದರ ಕಥಾವಸ್ತು. ಶಿವಪುರಾಣದೊಳಗಿನ ಪಾರ್ವತಿಯ ವಿವಾಹಕಥೆಯು ಇದರ ಆಧಾರ. ಇದರಲ್ಲಿ ೫ ಅಂಕಗಳಿರುವುವು. ಇದರಲ್ಲಿ ಕಲ್ಪನಾಚತುರತೆಯಾಗಲಿ ವರ್ಣನಾ ವೈಖರಿಯಾಗಲಿ ಇಲ್ಲದಿದ್ದರೂ ಕೆಲವು ಗದ್ಯಪದ್ಯ ಭಾಗಗಳು ಬಹೂತ್ಕೃಷ್ಟರೀತಿಯಿಂದ ಹೇಳಿದೆ.

ಇದರ ಕೆಲವು ಶ್ಲೋಕಗಳು:—

ಮಹೇಂದ್ರನಹೇಳಿಕೆ:—

ಮುಗ್ಧೈರಪ್ಸರಸಾಂ ವಿಲಾಸಸಹಿತೈರ್ವಾಕ್ಯೈರ್ಮನೋಹಾರಿಭಿಃ
ಕರ್ಣಾಂತಸ್ಖಲಿತೈರಪಾಂಗವಲಿತೈರಾರೇಚಿತಭ್ರೂಲತೈಃ|
ಬಾಹೋಃ ಸ್ರಸ್ತಕುಚೋತ್ತರೀಯಘಟನಾಮಂಜುಕ್ವಣತ್ಕಂಕಣೈ
ರ್ವ್ಯಾಪಾರೈರಪಿ ಯೋ ವಿಕಾರಪದವೀಂ ನ ಪ್ರಾಪಿತಃ ಸಂಯಮೀ|| ೨—೫

ಅಪ್ಸರೆಯರ ಹಾವಭಾವವಿಲಾಸ ಸಂಪೂರ್ಣವಾದ ಮನೋಹರ ವಾಕ್ಯಗಳಿಂದಲೂ, ವಿಶಾಲನೇತ್ರಗಳ ಅಪಾಂಗವೀಕ್ಷಣದಿಂದಲೂ, ಹುಬ್ಬುಗಳನ್ನು ತಿರುಗಿಸುವುದರಿಂದಲೂ, ಭುಜದ ಮೇಲಿನಿಂದ ಜಾರಿಹೋಗುತ್ತಿರುವ ಸೆರಗನ್ನು ಸರಿಮಾಡಿಕೊಂಡು ಮೇಲಕ್ಕೆಳೆದು ಕೊಳ್ಳುವಾಗ ಉಂಟಾಗುವ ಬಳೆಗಳ ಮಂಜುಳ ಧ್ವನಿಗಳಿಂದಲೂ ಇವೇ ಮೊದಲಾದ ಅನೇಕ ವ್ಯಾಪಾರಂಗಳಿಂದ ಎಷ್ಟುವಿಧವಾಗಿ ಅವನ ತಪಸ್ಸಿಗೆ ವಿಘ್ನವನ್ನುಂಟು ಮಾಡಿದರೂ ಆ ತಪಸ್ವಿಯು ಕೊಂಚವಾದರೂ ಮನೋವಿಕಾರವನ್ನು ಹೊಂದಲಿಲ್ಲ.

ಸ್ತ್ರೀಯರ ಚೇತನ ಪ್ರಕೃತಿಕಾಠಿನ್ಯ ವಿಚಾರದಲ್ಲಿ:—

ಶೇತೇ ಯಾ ಕಿಲ ಹಂಸತೂಲಶಯನೇ ನಿದ್ರಾತಿ ಸಾ ಸ್ಥಂಡಿಲೇ
ವಸ್ತೇ ಯಾ ಮೃದುಲಂ ದುಕೂಲಮಬಲಾ ಗೃಹ್ಣಾತಿ ಸಾ ವಲ್ಕಲಂ
ಯಾ ವಾ ಚಂದನಪಂಕಲೇಪಶಿಶಿರೇ ಧಾರಾಗೃಹೇವರ್ತತೇ
ಪಂಚಾನಾಮುದಿತೋಷ್ಮಣಾಂ ಹುತಭುಜಾಂ ಸಾ ಮಧ್ಯಮಾಸೇವತೇ|| ೪-೨.

ಆಹಾ ! ಯಾವ ಪಾರ್ವತಿಯು ಪೂರ್ವದಲ್ಲಿ ಹಂಸತೂಲಿಕಾತಲ್ಪದ ಮೇಲೆ ಮಲಗುತ್ತಿದ್ದಳೋ ಅವಳು ಈಗ ಸ್ಥಂಡಿಲದಲ್ಲಿ (ನೆಲದಮೇಲೆ) ಶಯನಮಾಡುತ್ತಾಳೆ. ಯಾವಳು ಅತಿಮೃದುವಾದ ದುಕೂಲ (ವಸ್ತ್ರ)ಗಳನ್ನು ಧರಿಸುತ್ತಿದ್ದಳೋ ಅಂಥವಳು ಈಗ ನಾರುಬಟ್ಟೆಗಳನ್ನು ಧರಿಸುತ್ತಾಳೆ. ಯಾವಳು ಅತ್ಯಂತ ಶೀತಲಚಂದನಾದಿಗಳನ್ನು ಲೇಪಿಸಿಕೊಂಡು ಧಾರಾಗೃಹದಲ್ಲಿ(ನೀರಿನಮನೆ)ವಾಸಿಸುತ್ತಿದ್ದಳೋ ಅವಳು ಈಗ ಪಂಚಾಗ್ನಿಗಳ ಮಧ್ಯದಲ್ಲಿ ತಪಸ್ಸನ್ನು ಮಾಡುತ್ತಿರುವಳು.

ಪಾರ್ವತಿಯ ಸತ್ವಪರಿಕ್ಷೆಗಾಗಿ ವೇಷಾಂತರದಿಂದ ಬಂದ ಈಶ್ವರನು ಪಾರ್ವತಿಯನ್ನುಕುರಿತು, ಎಲೌ ಮುಗುದೆ ! ನೀನು ಅಪೇಕ್ಷಿಸುವ ವರನ ಇರವನ್ನು ಕೇಳು:—

ಆಲೇಪೋ ಭಸಿತಂ ವಿಭೂಷಿತಮಹಿರ್ವಾಸಃ ಪಿತೃಣಾಂ ವನೇ
ವೇತಾಲಾಃ ಪರಿಚಾರಕಾಃ ಪ್ರತಿದಿನಂ ವೃತ್ತಿಶ್ಚ ಭಿಕ್ಷಾಮಯೀ
ಇತ್ಥಂ ಯಸ್ಯ ಶುಭೇತರಾಣಿ ಚರಿತಾನ್ಯಾಖ್ಯಾಂತಿ ಸರ್ವೇಜನಾ
ಸ್ತಸ್ಮಿನ್ಮೌಗ್ಧ್ಯವಶಾನ್ಮತಿಸ್ತವ ರುಚಿಂ ಬಧ್ನಾತಿ ಕಿಂ ಬ್ರೂಮಹೇ ೪-೧೨

ಅವನು (ಮೈಗೆ) ಬಳಿದುಕೊಳ್ಳುವುದು ಬೂದಿ. ಅವನ ಆಭರಣಗಳೋ ಸರ್ಪಗಳು, ವಾಸಸ್ಥಳವು ಶ್ಮಶಾನ. ಭೂತವೇತಾಲಾದಿಗಳು ಪರಿಚಾರಕರು. ಜೀವನವು ಪ್ರತಿದಿನದ ಭಿಕ್ಷಾಟನದಿಂದ. ಇಂತಹ ಅಮಂಗಳಕರನಾದ ಆ ಶಂಕರನಲ್ಲಿ ಮೂಢಳಾಗಿ ಹೇಗೆ ತಾನೇ ನೀನು ಮನಸ್ಸನ್ನಿಟ್ಟಿರುವೆ! ಈ ವಿಚಾರದಲ್ಲಿ ನಾನೇನು ತಾನೇ ಹೇಳಲಿ !

**ನಳಾಭ್ಯುದಯ:**—ಇದರಲ್ಲಿ ೮ ಸರ್ಗಗಳೂ ೯ನೆಯದರಲ್ಲಿ ಮೂರು ಶ್ಲೋಕಗಳು ಮಾತ್ರ ಇರುವುದರಿಂದ ಕಾವ್ಯವು ಪೂರ್ತಿಯಾದಂತೆ ಕಾಣಬರುವುದಿಲ್ಲ. ೯ನೆಯ ಸರ್ಗದ ಈ ಕೆಳಗಣ ಮೂರು ಶ್ಲೋಕಗಳು ಗ್ರಂಥದ ಭೂಮಿಕೆಯ ಕೊನೆಯಲ್ಲಿ ಬರೆಯಲ್ಪಟ್ಟಿರುವುವು. ಇದು ಹೆಸರಿಗೆತಕ್ಕಂತೆ ಪುರಾಣಪ್ರಸಿದ್ಧನಾದ ನಳನ ಕಥೆಯನ್ನು ಹೇಳುವುದಾಗಿದೆ.

ಗತೇಬಹುತಿಥೇಕಾಲೇ ಪರ್ಣಾದೋ ನಾಮಬಾಡವಃ
ಪ್ರತ್ಯೇತ್ಯ ಕುಂಡಿನಂ ಭೈಮೀಂರಹಸ್ಯೇತದಭಾಷತ ‖ ೧ ‖
ಅಥಗ್ರಾಮೇಷುದೇಶೇಷುವನೇಷುಪವನೇಷುಚ
ನಲಮನ್ವೇಷಮಾಣಾಸ್ತೇನಾಧಿಜಗ್ಮುರ್ದ್ವಿಜಾತಯಃ ‖ ೨ ‖
ದಮಯಂತ್ಯುದಿತಾಂವಾಚಂ ಜಗದುಸ್ತತ್ರತತ್ರತೇ
ನಕಶ್ಚದಪಿಸರ್ವಸ್ಯಾಂ ಪೃಥಿವ್ಯಾಮುತ್ತರಂದದೌ ‖ ೩ ‖

ಎಂಟನೆಯ ಸರ್ಗದ ಕೊನೆಯಲ್ಲಿ "ಇತಿ ಶ್ರೀವಾಮನಭಟ್ಟಬಾಣಕೃತೌ ನಲಾಭ್ಯುದಯೇ ಅಷ್ಟಮಸ್ಸರ್ಗಃ" ಎಂದಿರುವುದು.

**ಶೃಂಗಾರಭೂಷಣ**:—ಇದು ರೂಪಕ ಭೇದವಾದ ಭಾಣ ಜಾತಿಗೆ ಸೇರಿದುದು. ಇದರಲ್ಲಿ ಒಂದಂಕವಿರುವುದು. ೮೬ ಶ್ಲೋಕಗಳಿರುವುವು. ಕಥಾನಾಯಕನು ವಿಲಾಸ ಶೇಖರನು. ಇವನ ಗದ್ಯ ಶೈಲಿಯು ಬಾಣನ ಶೈಲಿಯನು ಹೋಲುವುದಾದರೂ ಪದ್ಯ ರಚನಾಕ್ರಮದಲ್ಲಿ ಬಾಣನನ್ನು ಮೀರಿಸಿರುವನೆಂದರೆ ಅಚ್ಚರಿಯಾಗದು. ಇವನ ಶ್ಲೋಕಗಳು ಸುಂದರವೂ ಸರಳವೂ ಆಗಿರುವುವು.



## ಶ್ರೀ ವ ರ ಪಂ ಡಿ ತ

ಇವನು ಬ್ರಾಹ್ಮಣನು. ಇವನ ಮಾತಾಪಿತೃಗಳಾರೆಂಬುದು ತಿಳಿಯದು. ಇವನು ಯಾವಾಗ ಎಲ್ಲಿದ್ದನೆಂಬುದು ಸ್ಪಷ್ಟವಾಗಿ ತಿಳಿಯದಾದರೂ ಕೆಳಗೆ ಹೇಳುವ ಶ್ಲೋಕಗಳಿಂದ ಕೊಂಚಮಟ್ಟಿಗೆ ಇವನ ಕಾಲವನ್ನು ತಿಳಿಯಬಹುದಾಗಿದೆ. ಹೇಗೆಂದರೆ:—

ಪ್ರಾಜ್ಯೇಜಾಗ್ರತಿ ರಾಜ್ಯೇಽಸ್ಯ ಪೃಥಿವ್ಯಾಂ ಪೃಥಿವೀಪತೇಃ
ಶಾಕೇಮುನಿದ್ವಿವೇದೇಂದು (೧೪೨೭) ಗತೇವಿಕ್ರಮೋಸ್ಮಗೋಃ ।
ಸ್ಥಿತೇಽಪಿಲೌಕಿಕೇವರ್ಷೇಚಂದ್ರಾಷ್ಟ (೮೧) ಪರಿಪೂರಿತೇ
ಮಾಧವೇಮಾಸಿರಾಕಾಯಾಂ ರವೌಮೇಷಮುಪಾಗತೇ ‖
(ಕಥಾಕೌತುಕ ೩೭—೩೮)

ಎಂಬ ಶ್ಲೋಕಗಳಿಂದ ಗೊತ್ತಾಗುವುದು. ೧೪೨೭ನೆಯ ಮಿತೀಬ್ದೇ ಲಗ ಎಂಬ ಅಂಕಯೋಜನದಿಂದ ವಿಕ್ರಮ ಸಂ. ೧೫೦೮ ಅಥವಾ ಕ್ರಿ. ಶ. ೧೪೫೧ ಎಂದಾಗುವುದು. "ವೈಕ್ರಮೇಶರದಿ ವೈಶಾಖಮಾಸಿ ಪೂರ್ಣಿಮಾಯಾಮಸ್ಯ ಗ್ರಂಥಸ್ಯ ನಿರ್ಮಾಣಸಮಯೋಲ್ಲೇಖೋಪಲಾಭಾತ್ಕವಿವರಸ್ಯಾವ್ಯಯಮೇವ ಸತ್ತಾಸಮಯಃ" ಎಂದೂ, ಇದಲ್ಲದೆ ಕವಿಯೇ ಕ್ರಿ. ಶ. ೧೪೭೭ರಲ್ಲಿ ಎರಡನೆಯ ರಾಜತರಂಗಿಣಿಯನ್ನು ಬರೆದಿದ್ದ ಜೋನರಾಜನ ಅನಂತರ ಮೂರನೆಯ ಜೈನ ರಾಜತರಂಗಿಣಿಯನ್ನು ಬರೆದುದಾಗಿ:—

ತಸ್ಮಿನ್ಮಯಾಪಂಡಿತಜೋನಕಾಖ್ಯಂ
ನತ್ವಾಗುರುಂಪಂಡಿತ ಶ್ರೀವರೇಣ।
ಭೂಪಾಲತುಷ್ಟ್ಯೈಸ್ಸುರಲೋಕವಾಣ್ಯಾ
ರಂಭೋಽಧ್ವನಾಕಾಂಕ್ಷ ಮನೋಹರೋಯಂ ॥ ೪೦ ॥

ಈ ಶ್ಲೋಕದಿಂದ ತಿಳಿಯಬರುವುದಲ್ಲದೆ:—

ಶ್ರೀಜೋನರಾಜವಿಬುಧಃ ಕುರ್ವನ್ ರಾಜತರಂಗಿಣೀಂ।
ಸಾಯಕಾಗ್ನಿ (೩೪) ಮಿತೇವರ್ಷೇ ಶಿವಸಾಯುಜ್ಯಮಾಸದತ್ ॥ ೬ ॥
ಶಿಷ್ಯೋಽಸ್ಯ ಜೋನರಾಜಸ್ಯ ಸೋಹಂ ಶ್ರೀವರಪಂಡಿತಃ
ರಾಜಾವಳೀಗ್ರಂಥಶೇಷಾಪೂರಣಂ ಕರ್ತುಮುದ್ಯತಃ ॥ ೭ ॥

ಎಂಬ ಜೈನರಾಜತರಂಗಿಣಿಯ ಪ್ರಥಮತರಂಗ ಶ್ಲೋಕಗಳಿಂದ ಗೊತ್ತಾಗುವುದು.

ಆದುದರಿಂದ ಶ್ರೀವರಪಂಡಿತನ ಸಮಯವು ಜೋನರಾಜನ ಕಾಲವಾಗಿರಬೇಕು. ಜೈನಲಾಬ್ದೀನನು ಕಾಶ್ಮೀರವನ್ನಾಳಿದುದು ಕ್ರಿ. ಶ. ೧೪೧೭—೧೪೬೭ ರ ವರೆಗೆಂದು ಜೋನರಾಜನು ಸ್ಪಷ್ಟಪಡಿಸಿರುವುದರಿಂದ, ಜೈನಲಾಬ್ದೀನ, ಜೋನರಾಜ ಮತ್ತು ಶ್ರೀವರಪಂಡಿತ ಈ ಮೂವರೂ ಸಮಕಾಲೀನರೆಂದೂ ಶ್ರೀವರಪಂಡಿತ ವಿರಚಿತವಾದ ರಾಜತರಂಗಿಣಿಯಿಂದ ನಿಶ್ಚಯಿಸಬಹುದಾಗಿದೆ. ಎಂದರೆ ಈ ಶ್ರೀ ವರಪಂಡಿತನ ಕಾಲವು ಸುಮಾರು ಕ್ರಿ. ಶ. ೧೫ನೆಯ ಶತಮಾನದ ಉತ್ತರಾರ್ಧದಲ್ಲಿರಬೇಕೆಂದು ನಿರ್ಧರವಾದುದು.

ಇವನು ಯವನ ಶಾಸ್ತ್ರಪಾರಂಗತನಾಗಿದ್ದನೆಂದು ಪ್ರತಿಕೌತುಕಾಂತ್ಯದಲ್ಲಿ ಹೇಳಲ್ಪಟ್ಟಿರುವ "ಇತಿಯವನ ಶಾಸ್ತ್ರಪಾರಂಗಮ ಪಂಡಿತ ಶ್ರೀಧ(ವ)ರ ವಿರಚಿತೇ ಕಥಾಕೌತುಕೇ" ಎಂಬುದರಿಂದ ತಿಳಿಯಬರುತ್ತದೆ.

ಕೆಲವರು ಶ್ರೀವರಪಂಡಿತನೆಂಬ ಹೆಸರಲ್ಲವೆಂದೂ ಇವನ ಕಥಾಕೌತುಕದ ೧೪—೧೫ನೆಯ ಕಥಾಂತ್ಯದಲ್ಲಿ "ಇತಿ..........................ಕೌತುಕೇ" ಎಂದಿರುವುದರಿಂದ ಕವಿಯ ಹೆಸರು ಸಂದಿಗ್ಧವಾಗಿರುವುದೆಂದೂ, ಮತ್ತೆ ಕೆಲವರು ಈ ಕಥಾ

ಕೌತುಕದ ಕೊನೆಯ ೧೪—೧೫ನೆಯ ಎರಡು ಕೌತುಕಗಳಲ್ಲಿ ಮಾತ್ರ ಅಕ್ಷರ ಸ್ಖಾಲಿತ್ಯವು ಕಂಡುಬರುವುದರಿಂದ ಇವರಿರ್ವರೂ ಏಕವ್ಯಕ್ತಿಯೆಂದೂ, ಅವನೇ ಶ್ರೀವರಪಂಡಿತನೆಂದೂ, ಕೆಲವರು ಶ್ರೀವರಪಂಡಿತನಕಾಲದ ಜೋನರಾಜನೇ ಬೇರೆ, ಶ್ರೀಧರಪಂಡಿತನ ಕಾಲದ ಜೋನರಾಜನೇ ಬೇರೆ ಇವರಿಗೆ ಪರಸ್ಪರ ಸಂಬಂಧ ವಿಲ್ಲವೆನ್ನುವರು. ಮತ್ತೆ ಕೆಲವರು ಶ್ರೀಧರನೋ ಅಥವಾ ಶ್ರೀವರಪಂಡಿತನೋ ಜೋನರಾಜನ ಅಂತೇವಾಸಿಯೆಂದೂ, ಗ್ರಂಥ ನಿರ್ಮಾಣವು ೧೫೦೮ರಲ್ಲಿ ಆಗಿರ ಬೇಕೆಂದೂ ಹೇಳುವರು. ಬೇರೆ ಕೆಲವರು ಜೈನರಾಜ ತರಂಗಿಣೀ ಕಾರನು ಶ್ರೀವರ ಪಂಡಿತನೇ ಹೌದು, ಆದರೆ ಕಥಾ ಕೌತುಕವನ್ನು ಬರೆದವನು ಶ್ರೀವರಪಂಡಿತನೋ ಅಥವಾ ಶ್ರೀಧರನೋ ಆಗಿರಬೇಕೆಂದೂ, ಇವನು ರಾಜತರಂಗಿಣಿಯನ್ನು ಬರೆದ ಶ್ರೀವರಪಂಡಿತನಿಗೆ ಭಿನ್ನನೆಂತಲೂ ಶ್ರೀವರ ಅಥವಾ ಶ್ರೀಧರಕವಿಯು ವಿ.ಸ. ೧೪೨೭ ಅಥವಾ ಕ್ರಿ.ಶ. ೧೩೭೦ ಎಂದೂ "ವೈಕ್ರಮಶರದಿ ಚಂದ್ರಾಪ್ಟ (೮೧) ಪರಿಪೂರಿತೇ" ಎಂದು ಹೇಳಿರುವುದರಿಂದಲೂ, "ಸಾಯಕಾಗ್ನಿ (೩೫) ಮಿತೇವರ್ಷೇ" ಎಂದು ಜೈನರಾಜತರಂಗಿಣಿಯಲ್ಲಿ ತಿಳಿಯಬರುವುದೆಂದೂ ಸಾಧಿಸುವರು. ಇವರ ಹೇಳಿಕೆ ಯನ್ನು ಸಮದೃಷ್ಟಿಯಿಂದ ನೋಡುವುದಾದರೆ ಹೀಗೆ ತಿಳಿಯಬರುವುದು.

(೧) ಯುಸೂಫ್ ಜುಲೇಖಾ ಗ್ರಂಥಕಾರನಾದ ಜಾಮಿಯು (ಮುಲ್ಲಾ ಜಾಮಿನೂರುದ್ದೀನ್) ಅಬ್ದುರ್ ರಹಿಮಾನನು ಕ್ರಿ. ಶ. ೧೪೧೪-೧೪೯೨ರ ವರೆಗೆ ಜೀವಿಸಿದ್ದನು.

(೨) ಶ್ರೀವರಪಂಡಿತನು ಜೋನರಾಜನ ಅನಂತರ ಕ್ರಿ. ಶ. ೧೪೭೭ರಲ್ಲಿ ಮೂರನೆಯ ಜೈನರಾಜತರಂಗಿಣಿಯನ್ನು ಬರೆದುದಾಗಿ ಹೇಳಿಕೊಂಡಿರುವನು:—

(೩) " ಶಿಷ್ಯೋಽಸ್ಯಜೋನರಾಜಸ್ಯಸೋಽಹಂ ಶ್ರೀವರಪಂಡಿತಃ "

ಎಂದು ಹೇಳಿರುವುದರಿಂದ ಕವಿಯು ಜೈನರಾಜನ ಶಿಷ್ಯನೆಂದೂ, ಜೈನಲಾ ಬ್ದೀನನು ಕಾಶ್ಮೀರದಲ್ಲಿ ಕ್ರಿ. ಶ. ೧೪೧೭-೧೪೬೭ರ ವರೆಗೆ ಆಳಿದನೆಂದೂ ಹೇಳಿರುವುದ ರಿಂದ ಈ ಮೂವರೂ ಸಮಕಾಲೀನರಾಗಿರಬೇಕೆಂದು ಬೋಧೆಯಾಗುವುದು. ಜೋನರಾಜನ ಮರಣಾನಂತರ ಅಂದರೆ ಕ್ರಿ. ಶ. ೧೪೬೭-೧೪೭೭ರ ಮಧ್ಯಕಾಲ ವಾಗಿರಬೇಕು. ಆ ವೇಳೆಗೆ ಜೈನಲಾಬ್ದೀನನೂ, ಜೋನರಾಜನೂ ಈ ಲೋಕದಿಂದ ಮರೆಯಾಗಿರಬೇಕು. ಅನಂತರ ಎಂದರೆ ಕ್ರಿ. ಶ. ೧೪೭೭ರಲ್ಲಿ ಜೈನರಾಜತರಂಗಿಣಿ ಯನ್ನು ಮುಗಿಸಲು ಯತ್ನಿಸಿರಬೇಕೆಂದು ಬೋಧೆಯಾಗುವುದು. ಜೈನರಾಜ ತರಂಗಿಣಿಯನ್ನು ಮುಗಿಸಿದನಂತರ ಅಥವಾ ಮುಗಿಸುವ ವೇಳೆಗೆ ಜಾಮಿಯು ಬರೆದ ಯುಸೂಫ್ ಜುಲೇಖೆಯರ ಪ್ರಣಯ ಕಥಾತರಂಗ ವಿಚಾರವು ಪ್ರತಿಯೊಬ್ಬ ರಿಂದಲೂ ಮಾನಿಸಲ್ಪಟ್ಟಿರಬೇಕು. ಇಂತಹ ಅಪೂರ್ವ ಕೌತುಕವಾಣಿಯನ್ನು

ನೋಡಿ ಅದನ್ನು ಪರಿವರ್ತಿಸಲು ಕೈಕೊಂಡಿರಬೇಕು. ಎಂದರೆ ಕ್ರಿ. ಶ. ೧೫ನೆಯ ಶತಾಬ್ದದ ಉತ್ತರಾರ್ಧದಲ್ಲಿರಬೇಕು.

(೪) ಶ್ರೀವ (ಧ)ರ ಎಂಬ ಹೆಸರಿನ ವಿಚಾರದಲ್ಲಿ ಅಕ್ಷರಸ್ಖಾಲಿತ್ಯವೇ ಹೊರ್ತು ಮತ್ತಾವುದೂ ಇರದು. ಇದು ಲೇಖಕರ ಪ್ರಮಾದ ಜನಿತವಿರಬಹುದು. ಕಥಾ ಕೌತುಕವು ೧೫ ಕೌತುಕಗಳಿಂದೊಡಗೂಡಿ, ಮೊದಲಿನ ೧೩ ಕೌತುಕಗಳಂತ್ಯದಲ್ಲಿ ಶ್ರೀವರನೆಂದಿದ್ದು, ಮಿಕ್ಕೆರಡರಲ್ಲಿ ಮಾತ್ರ ಶ್ರೀಧ (ವ) ರ ನೆಂದಿರುವುದು. ಶ್ರೀಧರನೇ ಆಗಿದ್ದರೆ ಉಳಿದ ೧೩ ಕೌತುಕಗಳಲ್ಲಿಯೂ ಹೀಗೆಯೇ ಬರೆದಿರಬೇಕಾಗಿದ್ದಿತು. ಹಾಗಿಲ್ಲದುದರಿಂದ ಅಕ್ಷರಸ್ಖಾಲಿತ್ಯವೆಂಬುದನ್ನು ಸಹಜರೀತಿಯೆಂದೊಪ್ಪಬೇಕು. ಉಳಿದ ಸಂದೇಹಗಳು ನಿರಾಧಾರವೆನ್ನಬೇಕಾಗುವುದು. ಕವಿಯನ್ನು ಕ್ರಿ. ಶ. ೧೫ನೆಯ ಶತಮಾನಾನಂತರದವನೆಂದು ಹೇಳುವುದು ಅಸಂಬದ್ಧವಾಗಿ ತೋರುವುದರಿಂದಲೂ, ಕವಿಯು ತನ್ನ ಕಾಲವನ್ನು ತಾನೇ ಸ್ಪಷ್ಟಪಡಿಸಿಕೊಂಡಿರುವುದರಿಂದಲೂ ಕ್ರಿ. ಶ. ೧೫ ನೆಯ ಶತಮಾನದ ಉತ್ತರಾರ್ಧದವನೆನ್ನುವುದರಲ್ಲಿ ಯಾವ ಅಭ್ಯಂತರವೂ ತೋರದು.

(೧) **ಗ್ರಂಥಗಳು**:--**ಮೂರನೆಯ ರಾಜತರಂಗಿಣೀ**-ಇದರಲ್ಲಿ ಕಲ್ಹಣನ ರಾಜತರಂಗಿಣಿಯಂತೆ ವಿವಿಧರಾಜರ ಜೀವನಚರಿತೆಯು ಸಂಗ್ರಹಿಸಲ್ಪಟ್ಟಿರುವುದು.

(೨) **ಕಥಾಕೌತುಕ**:-ಮೋಹ, ರೂಪ, ವಿರಹಸಮಾಗಮ, ಆನಂದಾದಿಗಳು ಪ್ರತಿಯೊಬ್ಬರೂ ತಲೆದೂಗುವಂತೆ, ಪ್ರಣಯವೆಂತಹುದೆಂಬುದು ಸ್ಪಷ್ಟವಾಗಿ ತಿಳಿಯುವಂತೆ, ವಿರಹದ ದುರ್ಧರ ಪ್ರಸಂಗವು ಕಣ್ಣೀರಿಡುವಂತೆ, ಅನಂತರೂಪವು ಉನ್ಮಾದಕರವೆಂಬಂತೆ, ಮೋಹವು ವ್ಯಾಮೋಹಗೊಳಿಸುವಂತೆ, ಸಮಾಗಮವು ಆನಂದ ಪ್ರದವಾಗಿರುವಂತೆ, ಸುಲಭರೀತಿಯಲ್ಲಿ ವರ್ಣಿತವಾಗಿರುವುದು. ನೀತಿ, ಕೌಶಲ, ಪ್ರಣಯ ವ್ಯಾಪಾರಗಳು ಮೂರ್ತಿಮತ್ತಾಗಿರುವುವು. ಇವನೇ ಯುಸೂಫ್ ಜುಲೇಖೆಯರ ಚರಿತವನ್ನು ಗೀರ್ವಾಣಭಾಷೆಗೆ ಪರಿವರ್ತಿಸಿ ಪದ್ಯರೂಪವಾಗಿ ಬರೆದನೆಂಬುದಕ್ಕೆ:—

ಮಲಾಜ್ಯಾಮೀನ ಯೇ ಸೋಹ ಜೋಲೇಖಾನಾಮವಿಶ್ರುತಃ ।
ರಚಿತೋಽಪ್ಯದ್ಭುತಃ ಪೂರ್ವಂಗ್ರಂಥೋದೇವಮುಖೋದ್ಗತಃ ॥ ೧—೩೯

ತಸ್ಮಿನ್ಮಯಾಪಂಡಿತಜೋನ ಕಾವ್ಯಂ
ನತ್ವಾಗುರುಂಪಂಡಿತಶ್ರೀವರೇಣ ।
ಭೂಪಾಲತುಷ್ಟ್ಯೈಸ್ಸುರಲೋಕವಾಣ್ಯಾ
ರಂಭೋಽಧ್ವನಾಕಾಂಶ್ಚಮನೋಹರೋಽಯಂ ॥ ೧—೪೦

“ಆಫ್ರಿಕಾರಾಜನಾದ ತಾಯಮಸ್‌ನ ಮಗಳಾದ ಜುಲೇಖೆಯು ಯಾವನೋ ಓರ್ವ ಅಪರಿಚಿತ ಸುಂದರವ್ಯಕ್ತಿಯನ್ನು ಸ್ವಪ್ನದಲ್ಲಿನೋಡಿ ಅವನ ಸೌಂದ

ರ್ಯಕ್ಕೆ ಲುಬ್ಧಳಾಗಿ ಅವನನ್ನೇ ನೋಡುತ್ತ ಅವನೇ ಸಾಕ್ಷಾತ್ತಾಗಿ ಬಂದಂತೆಯೂ, ಅವನು ಈಜಿಪ್ಟಿನ ವಜೀರನೆಂದೂ ಹೇಳಿದಂತೆ ಸುಖಾನುಭವವನ್ನು ಹೊಂದಿದಳು. ಹೀಗಿರುತ್ತಿರಲು ಫರೋಯರ ಅರಸನಾದ ಪಾತಿಫರನು ಜುಲೇಖೆಯ ರೂಪರೇಖಾ ವಿಲಾಸ ಚತುರತೆಯನ್ನುಕೇಳಿ ಅವಳನ್ನು ಮದುವೆಯಾಗುವನು. ಆದರೆ ಜುಲೇಖೆಗೆ ತನ್ನ ಸ್ವಪ್ನದಲ್ಲಿ ಕಂಡ ಜೋಸೆಫನೇ ಇವನಾಗಿರಬೇಕೆಂದು ತಿಳಿದು ಯಾರ ಮೊಗವನ್ನೂ ನೋಡದಿದ್ದ ಜುಲೇಖೆಯು ಪಾತಿಫರನಿಗೆ ಹೆಂಡತಿಯಾದಳು. ಕಾಲಕ್ರಮದಲ್ಲಿ ಜೋಸೆಫನು ಈಜಿಪ್ಟಿನಲ್ಲಿ ಗುಲಾಮನಾಗಿ ಮಾರಲ್ಪಟ್ಟು ಪಾತಿಫರನು ಅವನನ್ನು ಕೊಂಡು ಕೊಂಡನು. ಜುಲೇಖೆಯು ಅವನನ್ನು ಮೋಹಿಸಿ ತನ್ನ ಹಾವಭಾವವಿಲಾಸಚಾತುರ್ಯದಿಂದ ವಶಪಡಿಸಿಕೊಳ್ಳಲೆತ್ನಿಸುತ್ತಿರುವುದನ್ನು ನೋಡಿ ಅವನನ್ನು ಕಣ್ಮರೆಯಾಗಿ ಸೆರೆಯಲ್ಲಿರಿಸಿದನು. ಕೆಲವು ಕಾಲದ ಅನಂತರ ಜೋಸೆಫನು ಹೇಗೋ ಕಾರಾಗೃಹಮುಕ್ತನಾಗಿ ಮುಖ್ಯಾಮಾತ್ಯ ಪದವಿಯನ್ನು ಹೊಂದಿದನು. ಕಾಲಾನಂತರದಲ್ಲಿ ಪಾತಿಫರನು ರಾಜ್ಯಭ್ರಷ್ಟನಾಗಿ ಅವಮಾನದಿಂದ ಪಾರ್ಥಿವಶರೀರವನ್ನು ನೀಗಿದನು. ಹೆಂಡತಿಯಾದ ಜುಲೇಖೆಯು ಗಂಡನ ಮರಣಾನಂತರ ಕಡುದುಃಖಿತಳಾಗಿ ದಾರಿದ್ರ್ಯದೆಸೆಗೀಡಾಗಿ ಅತ್ತತ್ತು ಕಣ್ಣನ್ನು ಕಳೆದುಕೊಂಡಿರುವುದನ್ನುನೋಡಿ ಜೋಸೆಫನು ಪುನಮರುಗಿ ಅವಳಿಗೆ ಪೂರ್ವದಂತೆ, ಕಡುಸೌಂದರ್ಯವನ್ನೂ ಕಣ್ಣುಗಳನ್ನೂ ಕೊಟ್ಟು ಕಾಪಾಡಬೇಕಾಗಿ ದೇವರನ್ನು ಪ್ರಾರ್ಥಿಸಿದನು. ಭಗವಂತನು ಅಂತಾಗಲೆಂದು ಅನುಗ್ರಹಿಸಿದನು. ಈ ವೇಳೆಗೆ ದಾರಿದ್ರ್ಯದಸೆಯಿಂದ ಕಂಗಾಲಾಗಿರುವ ಜುಲೇಖೆಯು ಇಸ್ಲಾಂಮತವನ್ನು ಕೈಗೊಂಡಿದ್ದಳು. ಜೋಸೆಫನು ಶಾಸ್ತ್ರರೀತ್ಯಾ ಗೇಬ್ರಿಯಲನ ಅಪ್ಪಣೆಯಂತೆ ಅವಳನ್ನು ಮದುವೆಯಾಗಿ ೪೦ ವರ್ಷಗಳ ಕಾಲ ಅವಿಚ್ಛಿನ್ನವಾದ ಭೋಗಭಾಗ್ಯ ಪರಂಪರೆಗಳನ್ನನುಭವಿಸಿ ಮೃತನಾದನು. ಜುಲೇಖೆಯೂ ಬಹುದಿವಸ ಈ ವಿಯೋಗ ದುಃಖವನ್ನನುಭವಿಸದೆ ಸ್ವಲ್ಪಕಾಲದಲ್ಲಿ ಈ ಜಡಕಳೇಬರದಿಂದ ಬೇರೆಯಾದಳು. ” ಇದೇ ಕಥಾಸಾರಾಂಶ. ಯುಸೂಫ್ ಅಥವಾ ಜೋಸೆಫ ಮತ್ತು ಜುಲೇಖೆಯರ ಪ್ರಣಯ ಲೀಲಾ ವಿಚಾರವು ಕೌತುಕಕಥಾವಿಶಿಷ್ಟವಾಗಿರುವುದರಿಂದ ಕವಿಯು ಗ್ರಂಥಕ್ಕೆ "ಕಥಾಕೌತುಕ" ಎಂದು ಅನ್ವರ್ಥನಾಮವನ್ನು ಕೊಟ್ಟಿರುವನು.

ಇದನ್ನು ರಾಲ್ಫ ಟಿ. ಹೆಚ್, ಗ್ರಿಫಿತ್‌ರವರು ಕ್ರಿ. ಶ. ೧೮೮೨ರಲ್ಲಿ ಆಂಗ್ಲ ಭಾಷೆಗೆ ಪರಿವರ್ತಿಸಿರುವರು. ಮೂಲಕಥಾಕಾರನಾದ ಜಾಮಿಯ ಜೀವನವನ್ನು ಹೇಳಿದ ಹೊರ್ತು ವಿಷಯವು ಪೂರ್ಣವಾಗದು.

ಜಾಮಿಯು ಕ್ರಿ. ಶ. ೧೪೧೪ರಲ್ಲಿ ಖುರಾಸಾನ್ ಪ್ರಾಂತ್ಯಕ್ಕೆ ಸೇರಿದ ಜಾಂ ಎಂಬ ಊರಿನಲ್ಲಿ ಜನ್ಮವೆತ್ತಿದನು. ಜಾಂ ಎಂಬೂರಿನಲ್ಲಿ ಹುಟ್ಟಿದನಾದುದರಿಂದ ಜಾಮಿ

ಎಂಬ ಹೆಸರಾಯಿತು. ಇವನ ಹೆಸರು ನೂರುದ್ದೀನ್ಅಬ್ದುರ್‌ರಹಿಮ್ಮಾನ್. ಇವನಿಗೆ ೫ ವರ್ಷಗಳಾದನಂತರ ನೂರುದ್ದೀನ್ ಎಂದು ನಾಮಕರಣವಾಗಿದ್ದು ಕಾಲಕ್ರಮದಲ್ಲಿ ಮೌಲಾನಾ ಎಂಬ ಆಚಾರ್ಯಪದವಿಯು ದೊರೆತುದು. ಇವನ ವಿದ್ಯಾಭ್ಯಾಸವು ಹೀರಾತ್ ಮತ್ತು ಸಾಮರ್ಕಂಡ್‌ನಲ್ಲಿ ನಡೆಯಿತು. ಆ ಕಾಲದವಿದ್ಯಾಧಿಕರಲ್ಲಿ ಪ್ರತಿಭಾಸಂಪನ್ನನಾದನು. ಇವನ ವಿದ್ಯಾತಿಶಯಗಳು ಪರ್ಷಿಯಾದೇಶದಲ್ಲೆಲ್ಲೆಲ್ಲಿಯೂ ಹರಡಿದುದಲ್ಲದೆ ಬಹುದೂರದ ಇತರದೇಶಗಳಲ್ಲಿಯೂಹರಡಿ ತೈಮೂರಿನ(ತೈಮೂರಲಂಗ್) ಚಿಕ್ಕಪ್ಪನಾದ ಸುಲ್ತಾನ್ ಅಬೂಸೈಯ್ಯದನು ಕ್ರಿ. ಶ. ೧೪೭೨ರಲ್ಲಿ ಹೀರಾತಿನಲ್ಲಿರುವ ತನ್ನಸಭೆಗೆ ಬರಮಾಡಿಕೊಂಡನು. ಜಾಮಿಯು ಮಕ್ಕಾಯಾತ್ರೆಯನ್ನು ಮಾಡಿ ಬಾಗ್ದಾದಿನಲ್ಲಿ ಕೆಲವುದಿವಸಗಳಿದ್ದು ಮಾರನೆಯವರ್ಷ ಹೀರಾತಿಗೆಬಂದು ಕ್ರಿ. ಶ. ೧೪೯೨ರಲ್ಲಿ ಪರಲೋಕವನ್ನೈದಿದನು.



## ೧೬ನೆಯ ಶತಮಾನ

### ಜ ಯ ದೇ ವ (೨)

ಇವನು ವಿದರ್ಭದೇಶದವನು. ವಂಗದೇಶೀಯನೆಂದು ಕೆಲವರು ಹೇಳುವರು. ಬ್ರಾಹ್ಮಣನು. ಕೌಂಡಿನ್ಯ ಗೋತ್ರದವನು. ಮಹಾದೇವ ಸುಮಿತ್ರೆಯರು ಈತನ ತಂದೆ ತಾಯಿಗಳು ಎಂಬದು:—

ವಿಲಾಸೋಯದ್ವಾಚಾಮಸಮರಸನಿಷ್ಯಂದಮಧುರಃ
ಕುರಂಗಾಕ್ಷೀಬಿಂಬಾಧರಮಧರಭಾವಂಗಮಯತಿ
ಕವೀಂದ್ರಃ **ಕೌಂಡಿನ್ಯ** ಸ್ಸತವ **ಜಯದೇವ**ಶ್ರವಣಯೋ
ರಯಾಸೀದಾತಿಥ್ಯಂನಕಿಮಿಹ**ಮಹಾದೇವ**ತನಯಃ ||

ಅಪಿಚ:—

ಲಕ್ಷ್ಮಣಸ್ಯೇವಯಸ್ಯಾಸ್ಯ
ಸುಮಿತ್ರಾಗರ್ಭಜನ್ಮನಃ ||

ಎಂಬ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ. ಈತನು ಕವಿತ್ವ ಪ್ರಿಯನೆಂಬದನ್ನು:—

ನಬ್ರಹ್ಮವಿದ್ಯಾನಚರಾಜ್ಯಲಕ್ಷ್ಮೀ
ಸ್ತಥಾಯಥೇಯಂಕವಿತಾಕವೀನಾಂ
ಲೋಕೋತ್ತರೇಪುಂಸಿನಿವೇಶ್ಯಮಾನಾ
ಪುತ್ರೀವಹರ್ಷಂಹೃದಯೇಕರೋತಿ ||

ಎಂಬ ಶ್ಲೋಕವು ಪುಷ್ಟೀಕರಿಸುತ್ತದೆ. ಇವನು ವಿದರ್ಭದಲ್ಲಿದ್ದು ಹರಿಮಿಶ್ರನ ಬಳಿ ವಿದ್ಯೆಯನ್ನು ಕಲಿತನು. ಇವನಿಗೆ ಪಿಯುಷ್ಯವರ್ಷ, ಪಕ್ಷಧರನೆಂಬ ಬಿರುದುಗಳಿದ್ದವು.*

ಕಾಲ:—ಇವನು ಕ್ರಿ. ಶ. ೧೬ನೆಯ ಶತಮಾನದವನು, ಅಪ್ಪಯ್ಯದೀಕ್ಷಿತನ ಸಮಕಾಲೀನನು.

ಗ್ರಂಥಗಳು:—(೧) ಪ್ರಸನ್ನರಾಘವ
(೨) ಚಂದ್ರಾಲೋಕ
(೩) ಪಕ್ಷಧರೀಯ
(೪) ರತಿಮಂಜರೀ

**ಪ್ರಸನ್ನರಾಘವ**:-ಇದು ಏಳು ಅಂಕಗಳುಳ್ಳ ನಾಟಕ. ಇವನು ರಾಮಾಯಣ ಕಥಾಭಾಗವನ್ನು ತೆಗೆದುಕೊಂಡು, ಮುರಾರಿಯ ಅನರ್ಘರಾಘವದ ಪಡಿನೆಳಲನ್ನನುಸರಿಸಿ ಈ ನಾಟಕವನ್ನು ಬರೆದನಾದುದರಿಂದ ಆಂಧ್ರದೇಶೀಯರು ಇವನನ್ನು 'ಬಿಲ್ಲಮುರಾರಿ'ಎಂದು ಕರೆಯುವವಾಡಿಕೆ. ಮೊದಲನೆಯ ಅಂಕದಲ್ಲಿ ಬಾಣ ಮತ್ತು ರಾವಣಾಸುರರ ವಿಚಾರವೂ ಅವರು ಅವಮಾನ ಪಟ್ಟುದೂ ಬಹು ಸೊಗಸಾಗಿ ಚಿತ್ರಿತವಾಗಿದೆ. ಸೀತಾರಾಮರ ಪ್ರಣಯವಿಚಾರ, ರಾಮನಿಗೂ ಜಾಮದಗ್ನ್ಯನಿಗೂ ನಡೆದ ಸಂಭಾಷಣೆ ಇವೇ ಮೊದಲಾದವು ಅತಿಮನೋಜ್ಞವಾಗಿವೆ. ಏಳನೆಯ ಅಂಕದಲ್ಲಿ ರಾಮರಾವಣರ ಯುದ್ಧ, ರಾವಣನ ಮೃತಿ, ಅಗ್ನಿಪೂತಳಾದ ಸೀತೆಯನ್ನು ಹೊಂದುವಿಕೆ ಇವನ್ನು ವಿದ್ಯಾಧರದಂಪತಿಗಳು ಹೇಳುವಂತೆ ಯೋಚಿಸಿ ಕೊನೆಯಲ್ಲಿ ಶ್ರೀರಾಮನು ಸೀತಾಲಕ್ಷ್ಮಣರೊಡನೆ ಪುಷ್ಪಕವಿಮಾನವನ್ನೇರಿ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದ ವಿಚಾರದೊಡನೆ ಕೊನೆಗೊಂಡಿದೆ. ಇವನು ಕವಿತಾಚತುರನು ಹೇಗೋ ಹಾಗೆ ಕಲ್ಪನಾಚತುರನೆಂದೂ ಹೇಳುವುದಕ್ಕೆ ಅಡ್ಡಿ ಇರದು. ಉದಾಹರಣೆಗೆ ಈ ನಾಟಕವು ಸಾಕು. ಶೈಲಿಯು ಹೃದಯಂಗಮ. ವರ್ಣನೆಗಳು ಕೇವಲ ಸ್ವಾಭಾವಿಕವಾದವು. ಮನೋಹರವಾದ ಕವಿತೆಗಳಿಂದಕೂಡಿ ಹೇಳುವುದಕ್ಕೂ, ಕೇಳುವುದಕ್ಕೂ, ಇಂಪಾಗಿಯೂ ಸೊಂಪಾಗಿಯೂ ಇರುವುದು.

**ಚಂದ್ರಾಲೋಕ**:—ಇದು ಲಕ್ಷಣಗ್ರಂಥ ಬಾಲಕರ ಅವಗಾಹನೆಗೆ ಸುಲಭವಾಗಿ ಬರದಿರುವುದಾಗಿ:—

ಅಲಂಕಾರೇಷುಬಾಲಾನಾಂ ಅವಗಾಹನ ಸಿದ್ಧಯೇ
ಲಲಿತಃ ಕ್ರಿಯತೇತೇಷಾಂ ಲಕ್ಷ್ಯಲಕ್ಷಣಸಂಗ್ರಹಃ

ಎಂಬ ಗ್ರಂಥಾರಂಭ ಶ್ಲೋಕದಿಂದ ವ್ಯಕ್ತಪಡುತ್ತದೆ.

* History cf Classical Sanskrit Literature P. 108-109

ಇದರಲ್ಲಿ ಲಕ್ಷ್ಯ ಲಕ್ಷಣ ಸಮನ್ವಿತವಾದ ಒಂದು ನೂರು ಅಲಂಕಾರಗಳಿರುವುವಾಗಿ:—

ಇತ್ಥಂಶತಮಲಂಕಾರಾ ಲಕ್ಷ್ಯಯಿತ್ವಾನಿದರ್ಶಿತಾಃ
ಪ್ರಾಚಾಮಾಧುನಿಕಾನಾಂಚ ಮತಾನ್ಯಾಲೋಚ್ಯ ಸರ್ವಶಃ ||

ಎಂದು ಹೇಳಿದೆ. ಇದಕ್ಕೆ 'ಬುಧರಂಜನ' ಎಂಬ ವ್ಯಾಖ್ಯಾನವಿರುವುದು. ಗ್ರಂಥಾಂತ್ಯದಲ್ಲಿ "ಇತಿ ಶ್ರೀಜಯದೇವ ಕವಿವಿರಚಿತೇ ಚಂದ್ರಾಲೋಕೇ........ ಎಂದು ಮುಗಿಸಲ್ಪಟ್ಟಿರುವುದು. ಮಹಾ ಕವಿಯಾದ ಅಪ್ಪಯ್ಯ ದೀಕ್ಷಿತನು ವ್ಯಾಖ್ಯಾನ ರೂಪವಾಗಿ ಕುವಲಯಾನಂದ ವೆಂಬ ವ್ಯಾಖ್ಯಾನವನ್ನು ಬರೆದಿರುವನು. ಚಂದ್ರಾಲೋಕಕಾರನು 'ಸೀತಾವಿಹಾರ' ಎಂಬ ಕಾವ್ಯವನ್ನು ಬರೆದಿರುವುದಾಗಿ ಹೇಳಿದೆ. ಗ್ರಂಥವುದೊರೆಯದು.

**ಪಕ್ಷಧರೀಯು:**—ಇದು ನ್ಯಾಯಶಾಸ್ತ್ರ. ಇದನ್ನು ಬರೆದನಾದುದರಿಂದ ಲೋಕವು ಇವನನ್ನು ಪಕ್ಷಧರನೆಂದು ಕರೆದಿರಬಹುದಾಗಿ ತೋರುತ್ತದೆ.

**ರತಿಮಂಜರೀ:**—ಇದು ನಾಯಿಕಾನಾಯಕ ಲಕ್ಷಣಗಳನ್ನು ತಿಳಿಯ ಹೇಳುವ ಶೃಂಗಾರ ಗ್ರಂಥ:

ಪ್ರಸನ್ನರಾಘವ ನಾಟಕದಲ್ಲಿ ಶ್ರೀರಾಮ ಮತ್ತು ಜಾಮದಗ್ನ್ಯರ ಭಾಷಣವು ಕಡುಚೆಲುವಾಗಿರುವುದು:—

ಇದರ ಕೆಲವು ಶ್ಲೋಕಗಳು:—

ದಶಕಂಠ (ರಾವಣ) ನ ಆತ್ಮ ಶ್ಲಾಘನೆಯು ಹೀಗಿರುವುದು!—

ಮಂಡೋದರೀಕುಟಿಲಕೋಮಲಕೇಶಭಾರ
ಮಂದಾರದಾಮಮಕರಂದರಸಂಪಿಬಂತಃ
ವೀಣಾನಿನಾದಮಧುರಧ್ವನಿ ಮುದ್ಗಿರಂತೋ
ಮದ್ವಿಕ್ರಮಂ ಮಧುಕರಾ ಅಪಿಕೀರ್ತಯಂತಿ || ೧—೬೧

ಮಂಡೋದರಿಯ ಕುಟಿಲ ಮತ್ತು ಕೋಮಲಗಳಾದ ಕೇಶಪಾಶಗಳಲ್ಲಿರತಕ್ಕ ಮಂದಾರ ಪುಷ್ಪಂಗಳಲ್ಲಿನ ಮಕರಂದವನ್ನು ಪಾನಮಾಡಿ ವೀಣೆಯ ಶಬ್ದದಂತೆ ಮಧುರಧ್ವನಿಯನ್ನು ಮಾಡುತ್ತಿರುವ ದುಂಬಿಗಳೂ ಸಹ ನನ್ನ ಪರಾಕ್ರಮವನ್ನು ಹೊಗಳುತ್ತವೆ.

ವಾರ್ತಾಚಕೌತುಕಕರೀವಿಮಲಾಚ ವಿದ್ಯಾ
ಲೋಕೋತ್ತರಃ ಪರಿಮಳಶ್ಚ ಕುರಂಗನಾಭೇಃ
ತೈಲಸ್ಯ ಬಿಂದುರಿವವಾರಿಣಿದುರ್ನಿವಾರ
ಮೇತತ್ತ್ರಯ ಪ್ರಸರತಿಸ್ವಯಮೇವಲೋಕೇ || ೨—೨

ಆಶ್ಚರ್ಯದಾಯಕವಾದ ವಾರ್ತೆಯೂ, ನಿಷ್ಕೃಷ್ಟಜ್ಞಾನವನ್ನು ಹೊಂದಿದ ವಿದ್ಯೆಯೂ, ಲೋಕೋತ್ತರವಾದ ಪರಿಮಳವನ್ನು ಬೀರುವ ಕಸ್ತೂರಿಯೂ ಸಹ ನೀರಿನಲ್ಲಿ ಎಣ್ಣೆಯನ್ನು ಹಾಕಿದರೆ ಅದು ಹೇಗೆ ಒಂದರಲ್ಲೊಂದು ಸೇರದೆ ಬೇರೆ ಬೇರೆಯಾಗುವುದೋ ಹಾಗೆ ಈ ಮೂರೂ ಸ್ವಯಮೇವಲೋಕದಲ್ಲಿ ಹರಡಿಕೊಳ್ಳು ತ್ತದೆ.

ಕ್ರೀಡಾಭಗ್ನಗಿರೀಶಚಾಪವಲಯಂ ಸೀತಾರ್ಪಿತಾಂವಕ್ಷಸಾ
ಬಿಭ್ರಾಣಾಂಕಮಲಸ್ರಜಂಜನಿಗ್ರಹಂಶೃಂಗಾರವೀರಶ್ರಿಯೋಃ
ರಾಮಂವ್ರೀಡವಶಾದವಾಂಛಿತಮುಖಂಭೂಮಿಭುಜಾಂಪಶ್ಯತಾಂ
ಚೇತಃಕ್ರೋಧವಿಷಾದವಿಸ್ಮಯಮುದಾಮೂರ್ತಿಸ್ಸಮಾಲಿಂಗತಿ ॥ ೩-೪೮

ಲೀಲಾಮಾತ್ರದಿಂದ ಹರಧನುವನ್ನು ಭಂಗಿಸಿ ಸೀತಾದೇವಿಯಿಂದ ಪ್ರೀತಿ ಪುರಸ್ಸರವಾಗಿ ಅರ್ಪಿಸಲ್ಪಟ್ಟ ಕಮಲಪುಷ್ಪಗಳ ಹಾರದಿಂದ ಕೂಡಿದ ವಕ್ಷಸ್ಸುಳ್ಳ ಶ್ರೀರಾಮಚಂದ್ರನನ್ನು ನೋಡಿ ಸಭೆಯಲ್ಲಿ ನೆರೆದಿದ್ದ ರಾಜಮಂಡಲಿಯ ಮನಸ್ಸಿನಲ್ಲಿ ಕೋಪ, ವಿಷಾದ, ವಿಸ್ಮಯ, ಸಂತೋಷಂಗಳ ತರಂಗಗಳು ಒಂದೊಂದಾಗಿ ಏಳುತ್ತಿದ್ದವು.

ಸಭೆಯಲ್ಲಿ ನೆರೆದಿದ್ದ ಇತರರು:—

ಹಾರಃಕಂಠಂವಿಶತುಯದಿವಾತೀಕ್ಷ್ಣಧಾರಃಕುಠಾರಃ
ಸ್ತ್ರೀಣಾಂನೇತ್ರಾಣ್ಯಧಿವಸತುನಃಕಜ್ಜಲಂವಾಜಲಂವಾ
ಸಂಪಶ್ಯಾಮೋದ್ಯತಮಿಹಸುಖಂಪ್ರೇತಭರ್ತುರ್ಮುಖಂವಾ
ಯದ್ವಾತದ್ವಾಭವತುನವಯಂ ಬ್ರಾಹಣೇಷುಪ್ರವೀರಾಃ ॥ ೪-೨೨

ಜಯಿಸಿದ ಪಕ್ಷದಲ್ಲಿ ಹಾರವಾಗಲಿ ಸೋತರೆ ಕೊಡಲಿಯಾಗಲಿ ಕಂಠವನ್ನು ಪ್ರವೇಶಿಸಲಿ, ಗೆದ್ದರೆ ಸ್ತ್ರೀಯರು ಉಪಯೋಗಿಸುವ ಕಜ್ಜಲ (ಅಲಂಕಾರಕ್ಕಾಗಿ ಉಪಯೋಗಿಸುವ) ಕಪ್ಪಾಗಲಿ ಸೋತರೆ ಕಣ್ಣೀರಾಗಲಿ, ಗೆದ್ದರೆ ಸುಖವನ್ನು ಹೊಂದೋಣ, ಇಲ್ಲದಿದ್ದರೆ ಯಮನ ಮುಖವನ್ನಾದರೂ ನೋಡೋಣ ನಾವೇನು ಬ್ರಾಹ್ಮಣಶ್ರೇಷ್ಠರೂ ಅಲ್ಲ. ಅಥವಾ ವೀರರೂ ಅಲ್ಲ, ಆದುದರಿಂದ ಹಾಗೋ ಹೀಗೋ ಹೇಗಾದರೂ ಆಗಿಹೋಗಲಿ.



## ಅಪ್ಪಯ್ಯದೀಕ್ಷಿತ

ಕಾಂಚೀನಗರದ ಸಮೀಪದಲ್ಲಿರುವ ಅಡಯಪಲಂ[೧] ಎಂಬ ಗ್ರಾಮವು ಈತನ ಜನ್ಮಭೂಮಿ. ಭರದ್ವಾಜಗೋತ್ರದವನು. ಇವನ ಪಿತಾಮಹನ ಹೆಸರು ಆಚಾರ್ಯದೀಕ್ಷಿತರೆಂದು. ಇವರಿಗೆ ವಕ್ಷಸ್ಥಲಾಚಾರ್ಯದೀಕ್ಷಿತರೆಂಬ ಹೆಸರೂ ಇದ್ದಿತು.

೧ ಈ ಗ್ರಾಮವು ಆರಣಿಯಿಂದ ೫ ಮೈಲಿ ಕಾಂಚೀಪುರಕ್ಕೆ ೨೫ ಮೈಲಿ ದೂರದಲ್ಲಿರುವುದು.

ಈ ಹೆಸರು ಬಂದುದರ ಕಥೆಯೊಂದಿರುವುದು. ವಿಜಯನಗರದ ಪ್ರಖ್ಯಾತರಾಜನಾದ ಕೃಷ್ಣದೇವರಾಯನು ಸಂಸಾರದೊಂದಿಗೆ ಕಾಂಚಿಗೆ ಹೋಗಿ ವರದರಾಜನನ್ನು ಸೇವಿಸುತ್ತಿರುವಲ್ಲಿ ಆಚಾರ್ಯದೀಕ್ಷಿತರು:—

ಕಾಚಿತ್ ಕಾಂಚನಗೌರಾಂಗೀಂ ವೀಕ್ಷ್ಯ ಸಾಕ್ಷಾದಿವ ಶ್ರಿಯಮ್
ವರದಃ ಸಂಶಯಾಪನ್ನೋ ವಕ್ಷಃಸ್ಥಲಮವೈಕ್ಷತ ||

ಸಾಕ್ಷಾತ್ ಲಕ್ಷ್ಮಿಯಂತೆ ಹೇಮಾಂಗಿಯಂತಿರುವ ಸ್ತ್ರೀಯನ್ನು (ಕೃಷ್ಣರಾಯನ ಹೆಂಡತಿ) ಕಂಡು ವರದನು ಸಂಶಯಗ್ರಸ್ತನಾಗಿ ತನ್ನ ವಕ್ಷದಲ್ಲಿ ವಾಸಿಸುತ್ತಿದ್ದ ಲಕ್ಷ್ಮಿಯು ಇರುವಳೋ ಇಲ್ಲವೋ ಎಂದು ನೋಡಿಕೊಂಡನಂತೆ) ಎಂದು ವರ್ಣಿಸಿದುದನ್ನು ಕೇಳಿ ಕೃಷ್ಣದೇವರಾಯನು ಸಂತೋಷಿಸಿ, ಆಚಾರ್ಯದೀಕ್ಷಿತರನ್ನು ವಕ್ಷಸ್ಥಲಾಚಾರ್ಯದೀಕ್ಷಿತರೆಂದು ಬಹುಮಾನಿಸಿ ಕರೆದನಂತೆ. ಈ ಶ್ಲೋಕವನ್ನು ಅಪ್ಪಯದೀಕ್ಷಿತನು ಬರೆದಿರುವ ಚಿತ್ರಮೀಮಾಂಸಾ ಗ್ರಂಥದಲ್ಲಿ ಸಂದೇಹಾಲಂಕಾರಧ್ವನಿಗೆ ಉದಾಹರಿಸಿಕೊಂಡಿರುವನು. ಆಚಾರ್ಯದೀಕ್ಷಿತರು ಕೃಷ್ಣದೇವರಾಯನ ಮೆಚ್ಚುಗೆಯನ್ನು ಹೊಂದಿ ಅವನ ಆಶ್ರಯದಲ್ಲಿದ್ದರು. ನೀಲಕಂಠದೀಕ್ಷಿತನು ತಾನು ಬರೆದಿರುವ ನಳಚರಿತನಾಟಕದಲ್ಲಿ ಆಚಾರ್ಯದೀಕ್ಷಿತರನ್ನು ಅಚ್ಚಾನ್‌ದೀಕ್ಷಿತನೆಂದು ಹೇಳಿಕೊಂಡಿರುವನು. ತಮಿಳುಭಾಷೆಯಲ್ಲಿ ಅಚ್ಚಾನ್ ಎಂದರೆ ಆಚಾರ್ಯನೆಂದರ್ಥ. ಇವರು ಅಸೀಮವಿದ್ಯಾವಂತರೂ, ಪರಮ ಭಕ್ತಾಗ್ರೇಸರರೂ ಆಗಿದ್ದರು. ಇವರಿಗೆ ಇಬ್ಬರು ಪತ್ನಿಯರು. ಮೊದಲನೆಯ ಹೆಂಡತಿಯ ಮನೆತನದವರು ಶೈವಮತಾನುಯಾಯಿಗಳಾಗಿದ್ದರು. ಎರಡನೆಯ ಹೆಂಡತಿಯ ಹೆಸರು ತೋತಾರಂಬಾ. ಶ್ರೀವೈಷ್ಣವಮತದವರಾದ ಇವರು ಮಹಾ ಪ್ರಸಿದ್ಧರಾದ ವೈಕುಂಠಾಚಾರ್ಯರ ವಂಶಸಂಭೂತರಾದ ಶ್ರೀರಂಗರಾಜಾಚಾರ್ಯರ ಮಕ್ಕಳು. ಕಾಲಕ್ರಮದಲ್ಲಿ ಇವರಿಗೆ ನಾಲ್ವರು ಗಂಡುಮಕ್ಕಳಾದರು. ಇವರಲ್ಲಿ ಹಿರಿಯವನೇ ಶ್ರೀರಂಗರಾಜಾಧ್ವರೀ ಅಥವಾ ಶ್ರೀರಂಗರಾಜಮಖಿ. 'ಮಖಿ' ಎಂದರೆ ಯಜ್ಞಮಾಡಿದವರೆಂದು ಅರ್ಥ. ಇವನು ತಂದೆಯಾದ ಆಚಾರ್ಯದೀಕ್ಷಿತರಲ್ಲಿ ಶಿಕ್ಷೆಯನ್ನು ಹೊಂದಿ ಮಹಾ ವಿದ್ವಾಂಸನಾಗಿದ್ದು ಅದ್ವೈತವಿದ್ಯಾಮುಕುರ, ವಿವರಣದರ್ಪಣ ಮೊದಲಾದ ಗ್ರಂಥಗಳನ್ನು ಬರೆದನು. ಇವನಿಗೆ ಇಬ್ಬರು ಗಂಡುಮಕ್ಕಳು. ಇವರಲ್ಲಿ ಹಿರಿಯವನೇ ಅಪ್ಪಯ್ಯದೀಕ್ಷಿತನು. ಎರಡನೆಯವನು ಆಚ್ಚಾನ್‌ದೀಕ್ಷಿತ. ಈ ಅಚ್ಚಾನ್‌ದೀಕ್ಷಿತನು ನೀಲಕಂಠವಿಜಯಚಂಪೂಕಾರನಾದ ದೀಕ್ಷಿತ ನೀಲಕಂಠನ ಮಾತಾಮಹನು. ಅಪ್ಪಾದೀಕ್ಷಿತನೆಂಬದು ಮೊದಲಿನ ಹೆಸರಾದರೂ ಕಾಲಕ್ರಮದಲ್ಲಿ ಅಪ್ಪಯ್ಯದೀಕ್ಷಿತನೆಂದು ಕರೆಯುವುದೇ ರೂಢಿಯಾದುದು.

**ಕಾಲ:**—ದೀಕ್ಷಿತನ ಜೀವನ ಚರಿತೆಯನ್ನೂ ಕಾಲವನ್ನೂ ತಿಳಿಯಹೇಳುವ "ಅಪ್ಪಯ್ಯದೀಕ್ಷಿತೇಂದ್ರವಿಜಯ"ಎಂಬ ಗ್ರಂಥವನ್ನು ಶಿವಾನಂದ*ಯೋಗೀಂದ್ರನು

* ಪೂರ್ವಾಶ್ರಮದ ಹೆಸರು ಶೇಷದೀಕ್ಷಿತನೆಂದು.

ಬರೆದಿರುವನು. ಅದರಲ್ಲಿ ದೀಕ್ಷಿತನ ಕಾಲವನ್ನು ಸೂಚಿಸುವುವಾದ ಎರಡು ಶ್ಲೋಕಗಳಿರುವುವು.

೧) ವೀಣಾತತ್ತ್ವಜ್ಞಸಂಖ್ಯಾ (೪೬೫೪) ಲಸಿತಕಲಿಸಮಾಭಾಕ್ಪ್ರಮಾತೀಚವರ್ಷೇ
ಕನ್ಯಾಮಾಸೇಽಥಕೃಷ್ಣಾಪ್ರಥಮತಿಥಿಯುತೇಽಶ್ವ್ಯುತ್ತರಪ್ರೋಷ್ಠವಾದ್ಭೇ
ಕನ್ಯಾಲಗ್ನೇಽದ್ರಿಕನ್ಯಾಪತಿರಮಿತದಯಾಶೇವಧಿರ್ವೈದಿಕೇಷು
$ ೨) ಶ್ರೀದೇವ್ಯಾಪ್ರಾಗ್ಯಘೋಕ್ತಂ ಸಮಜನಿ ಹಿ ಸಮೀಪೇಽತ್ರಕಾಂಚೀನಗರ್ಯಾಃ

ಮತ್ತೊಂದು ಶ್ಲೋಕದಲ್ಲಿ:—

ಲಗ್ನೇ ರವೀಂದುಸುತಯೋರ್ಮಕರೇ ಚ ಮಾಂದೌ
ಮೀನೇ ಶಶಿನ್ಯಥ ವೃಷೇ ರವಿಜೇ ಚ ರಾಹೌ
ಚಾಪೇ ಗುರೌಕ್ಷಿತಿಸುತೇ ಮಿಥುನೇ ತುಲಾಯಾಂ
ಶುಕ್ರೇ ಶಿಖಿನ್ಯಲಿಗತೇ ಶುಭಲಗ್ನ ಏವಂ ||

ಎಂದು ಹೇಳಿ ರಾಶಿಕುಂಡಲಿಯನ್ನು ಕೊಟ್ಟಿರುವುದು.—

ಮೊದಲನೆಯ ಶ್ಲೋಕದಂತೆ ಕಲಿ ೪೬೫೪ ಶಕ. ೧೪೭೫ ವಿಕ್ರಮಶಕೆ. ೧೬೧೦ ಕೊಲ್ಲಂ ೭೨೯ ಆಗುತ್ತದೆ. ಇದರ ಜತೆಗೆ ಕ್ರಿಸ್ತಶಕವನ್ನು ಸೇರಿಸಿದರೆ ಸುಮಾರು ೧೮ನೆಯ ಸೆಪ್ಟಂಬರು ೧೫೫೩ ಆಗುತ್ತದೆ. ಎರಡನೆಯ ಶ್ಲೋಕದಂತೆ ರಾಶಿಕುಂಡಲಿಯು ಹೀಗಿರುವುದು:—

| | | | |
|---|---|---|---|
| ಚಂದ್ರ | | ಶನಿ ಮತ್ತು ರಾಹು | ಕುಜ |
| | ರಾಶಿ ಕುಂಡಲಿ | | ಗುರು |
| ಮಾಂದ | | | |
| | ಕೇತು | ಶುಕ್ರ | ಲಗ್ನ ರವಿ ಬುಧ |

ಕೆಲವುಕಡೆ ಕ್ರಿ. ಶ. ೧೫೫೦ ಎಂದೂ ಅದು ಕಲಿ ೪೬೫೪ಕ್ಕೆ ಸರಿಹೋಗುವುದಾಗಿ ಹೇಳಿದೆ. (ಯಾದವಾಭ್ಯುದಯದ ಮುನ್ನುಡಿ ಪುಟ ೩೦)

ಇದೇ ಗ್ರಂಥದ ಮತ್ತೊಂದೆಡೆ ಕ್ರಿ. ಶ. ೧೫೫೨ ಎಂದು ಹೇಳಿದೆ.

$ ಇದು ದೀಕ್ಷಿತನನಿಜವಾದ ಕಾಲವಲ್ಲ. ಈ ಕಾಲವೂ ಮತ್ತು ರಾಶಿಕುಂಡಲಿಯೂ ಜನಜನಿತ ಕಥಾಧಾರಗಳಿಂದ ಸ್ಫುಟೀಕರಿಸಿ ಬರೆದುದಾಗಿ ನಮಗೆ ತೋರುತ್ತದೆ.

ದೀಕ್ಷಿತನಿಂದ ಬರೆಯಲ್ಪಟ್ಟುದಾದ "ಆತ್ಮಾರ್ಪಣಸ್ತುತಿ"ಗೆ ಶಿವಾನಂದ ವಿರಚಿತ ವ್ಯಾಖ್ಯಾನದಲ್ಲಿಯೂ ಮೇಲಣ ಶ್ಲೋಕಗಳು ಕಂಡುಬರುತ್ತವೆ. ದೀಕ್ಷಿತನ "ಸಿದ್ಧಾಂತ ಲೇಶಸಂಗ್ರಹ"ಕ್ಕೆ ಮುನ್ನುಡಿಯನ್ನು ಬರೆದಿರುವ ಭಟ್ಟ ಶ್ರೀನಾರಾಯಣ ಶಾಸ್ತ್ರಿಗಳು ದೀಕ್ಷಿತನ ಕಾಲವನ್ನು ಕ್ರಿ. ಶ. ೧೫೮೭—೧೬೬೦ ಎಂದು ಹೇಳಿರುವರು.

"ನೀಲಕಂಠವಿಜಯ" ಚಂಪೂ ಕಾರನಾದ ದೀಕ್ಷಿತ ನೀಲಕಂಠನು ಕ್ರಿ. ಶ. ೧೬೩೬ರಲ್ಲಿ ಗ್ರಂಥವನ್ನು ಬರೆದು ಮುಗಿಸಿದುದಾಗಿ ಹೇಳಿರುವನು. ಇವೆರಡನ್ನೂ ಹೆಗ್ಗುರುತಾಗಿಟ್ಟುಕೊಂಡು ಜನಜನಿತ ಕಥಾಧಾರಗಳನ್ನು ಬಿಡಲೊಪ್ಪದೆ ದೀಕ್ಷಿತನಕಾಲವು ಕ್ರಿ. ಶ. ೧೫೬೪—೧೬೩೬ ಎಂದು ಕೆಲವರೂ, ಉಳಿದವರು ಕ್ರಿ. ಶ. ೧೫೫೦, ೧೬೨೩ ರವರೆಗೆಂದೂ ಹೇಳುವರು.

ಶ್ರೀರಂಗನಿಂದ ಕೊಡಲ್ಪಟ್ಟುದಾದ 'ಅರಿವೀಲಿಮಂಗಳಂ' ಶಾಸನಗಳ (Plates) ನ್ನು ಪ್ರಸಿದ್ಧಿಗೊಳಿಸಿದ ಸಂಪಾದಕರು ದೀಕ್ಷಿತನ ಕಾಲವು ಕ್ರಿ. ಶ. ೧೫೫೪—೧೬೨೬ ಎಂದು ಒಕ್ಕಣಿಸಿರುವರು.*

"ಕುವಲಯಾನಂದ"ಕ್ಕೆ ಕ್ರಿ. ಶ. ೧೮೯೨ರಲ್ಲಿ ಮುನ್ನುಡಿಯನ್ನು ಬರೆದಿರುವ ಪಂಡಿತಹಾಲಾಸ್ಯಶಾಸ್ತ್ರಿಗಳು ದೀಕ್ಷಿತನ ಕಾಲವು ಕ್ರಿ. ಶ. ೧೫೫೨ ಎಂದು ಹೇಳಿಕೊಂಡಿರುವರು. ಹೇಗೂ ದೀಕ್ಷಿತನ ಕಾಲವು ಕ್ರಿ. ಶ. ೧೫೫೩ರ ಮೊದಲು ೧೬೨೬ ರ ವರೆಗೆಂದು ಹೇಳಿದಂತಾಗುತ್ತದೆ. ಆದರೆ ಇತ್ತೀಚಿನ ವಿಚಾರಶೋಧನದಿಂದ, ಚರಿತ್ರೆ ಶಾಸನ ಮೊದಲಾದ ಆಧಾರಗಳಿಂದ ದೀಕ್ಷಿತನಕಾಲವು ಕ್ರಿ. ಶ. ೧೫೨೦—೧೫೯೩ರವರೆಗೆಂದು ಸ್ಪಷ್ಟಪಡುತ್ತದೆಯಾದರೂ ಅಚ್ಚಾಗಿರುವ ದೀಕ್ಷಿತನ ಗ್ರಂಥಗಳನೇಕಗಳಲ್ಲಿ ಕ್ರಿ. ಶ. ೧೫೫೩—೧೬೨೬ ಎಂದು ಹೇಳಿರುವದು ಕಂಡುಬರುತ್ತದೆ.

ದೀಕ್ಷಿತನ ಕಾಲನಿರ್ಣಯಕ್ಕೆ ಬಹುದೂರ ಪರಿಶ್ರಮಿಸಬೇಕಾದುದಿಲ್ಲ. ತಾನು ಯಾವ ಯಾವ ರಾಜಾಶ್ರಯದಲ್ಲಿದ್ದನೋ ಆಯಾ ರಾಜರ ಹೆಸರನ್ನೂ ಅವರ ಆಶ್ರಯದಲ್ಲಿ ಬರೆದ ಗ್ರಂಥಗಳನ್ನೂ ದೀಕ್ಷಿತನೇ ಹೇಳಿ ಸ್ಪಷ್ಟಪಡಿಸಿರುವನು.

ಈ ರಾಜರು ಯಾರು ಯಾರೆಂಬುದನ್ನು ತಿಳಿಯಹೇಳುವ ಮೊದಲು ಕ್ರಿ. ಶ. ೧೬ನೆಯ ಶತಮಾನದಲ್ಲಿ ದಕ್ಷಿಣ ಇಂಡಿಯಾದೇಶದ ಪರಿಸ್ಥಿತಿಯು ಹೇಗೆ ಇದ್ದಿತೆಂಬುದನ್ನು ಬರೆಯಬೇಕಾಗಿದೆ.

ವಿಜಯನಗರದ ಸರ್ವಾಧಿಕಾರವು ತುಂಗಭದ್ರೆಯಿಂದ ತಾಮ್ರಪರ್ಣಿಯವರೆಗೆ ವಿಸ್ತರಿಸಿದ್ದುದಲ್ಲದೆ ಜಿಂಜಿ, ವೆಲ್ಲೂರು, ಮೈಸೂರು, ತಂಜಾವೂರು ತಿರುವಾಂಕೂರು

*Epigraphica Indica Vol 12

ರಾಜ್ಯಗಳು ವಿಜಯನಗರದ ಅರಸರ ಆಜ್ಞಾಬದ್ಧವಾಗಿದ್ದವು. ತುಂಗಭದ್ರೆಯ ಉತ್ತರಕ್ಕೆ ತುರುಕರ ಏಳಿಗೆಗೆ ಅವಕಾಶ ಕೊಡವಂತೆ ಹಿಮ್ಮೆಟ್ಟಿಸಲ್ಪಟ್ಟದ್ದಿತು. ಇಂತಹ ಅಗಾಧ ಸಾಮ್ರಾಜ್ಯಶಾಸನ ಮತ್ತು ಶಾಂತಿಗಾಗಿ ಪದೇಪದೇ ಯುದ್ಧಗಳು ಜರುಗುತ್ತಿದ್ದುದು ಅಚ್ಚರಿಯಲ್ಲ. ಹೊರಗಣ ರಾಜರ ಉಪಟಳವು ಇಲ್ಲದೇ ಇದ್ದರೂ ವಿಜಯನಗರಕ್ಕೆಸೇರಿದ ಸಾಮಂತರಾಜರಲ್ಲಿ ಪರಸ್ಪರ ವೈಶಮ್ಯವೂ ಕಲಹವೂ ಆಂಗಿದಾಗ್ಯೆ ನಡೆಯುತ್ತಲಿದ್ದವು. ಕ್ರಿ. ಶ. ೧೬ನೆಯ ಶತಮಾನಾರಂಭದಲ್ಲಿ ತುಳುವ ವಂಶವು ಉಚ್ಛ್ರಾಯಗೊಂಡಿತು. ನರಸನಾಯಕನ ಮಗ ನರಸಿಂಹನು ಸಾಳ್ವ ವಂಶದ ವೀರನರಸಿಂಹನನ್ನು ಪದಚ್ಯುತನನ್ನಾಗಿ ಮಾಡಿ ಕ್ರಿ.ಶ. ೧೫೦೫ರಲ್ಲಿ ವಿಜಯನಗರದ ಸಿಂಹಾಸನವನ್ನೇರಿದನು. ಅನಂತರ ಇವನ ತಮ್ಮ ಕೃಷ್ಣದೇವರಾಯನು ಕ್ರಿ. ಶ. ೧೫೦೯ರಲ್ಲಿ ಸಿಂಹಾಸನಕ್ಕೆ ಬಂದನು. ಇವನು ಕ್ರಿ. ಶ. ೧೫೩೦ರ ವರೆಗೂ ಆಳಿ ಮುಕ್ತನಾದನು. ಕ್ರಿ. ಶ. ೧೫೦೯—೧೫೩೦ರ ಮಧ್ಯಕಾಲದಲ್ಲಿ ವಿಜಯನಗರವು ಅತ್ಯಂತೋಚ್ಛ್ರಾಯ ದೆಸೆಯಲ್ಲಿದ್ದಿತು. ಈ ಕಾಲದಲ್ಲಿಯೇ ಸಂಸ್ಕೃತಾಂಧ್ರ ಗ್ರಂಥಗಳು ಉತ್ತೇಜನಗೊಂಡವು. ಅನಂತರ ಇವನ ತಮ್ಮ ಅಚ್ಯುತರಾಯನು ಕ್ರಿ. ಶ. ೧೫೩೦ರಿಂದ ೧೫೪೨ರವರೆಗೆ ಆಳಿದನು. ಅನಂತರ ಇವನ ಅಣ್ಣನ ಮಗನಾದ ಸದಾಶಿವರಾಯನು ಕ್ರಿ. ಶ. ೧೫೪೨—೧೫೭೭ರವರೆಗೆ ರಾಜನೆನಿಸಿಕೊಂಡಿದ್ದನು. ಸದಾಶಿವರಾಯನಿಗೆ ಸಿಂಹಾಸನವು ದೊರೆತಾಗ ಇನ್ನೂ ಸಣ್ಣ ಹುಡುಗನಾಗಿದ್ದನು. ಕರ್ಣಾಟಕರಾಜರಲ್ಲಿ ರಾಮರಾಜನೆಂಬುವನು ಗತಿಸಿದಕೃಷ್ಣದೇವರಾಯನ ಅಳಿಯನಾಗಿದ್ದು ವಿಜಯನಗರದ ಸಿಂಹಾಸನವನ್ನು ಸದಾಶಿವನಿಗೆ ದೊರೆಕಿಸಿ ಕೊಡುವುದರಲ್ಲಿ ಮುಖ್ಯಪಾತ್ರವನ್ನು ವಹಿಸಿಕೊಂಡಿದ್ದನು. ಸದಾಶಿವನ ಚಿಕ್ಕತನದಲ್ಲಿ ರಾಜನಿಗೆ ಪ್ರತಿನಿಧಿಯಾಗಿ (Regent) ರಾಜ್ಯಭಾರವನ್ನು ಮಾಡುತ್ತಿದ್ದನು. ಕಾಲ ಕ್ರಮದಲ್ಲಿ ಸದಾಶಿವನು ದೊಡ್ಡವನಾದರೂ ರಾಜ್ಯಸೂತ್ರವನ್ನು ನಡೆಯಿಸಲು ಅಶಕ್ತನಾಗಿದ್ದುದರಿಂದ ರಾಜ್ಯಭಾರವೆಲ್ಲವೂ ರಾಮರಾಜನ ಕೈಸೇರಿದುದು. ಕ್ರಿ. ಶ. ೧೫೬೫ರಲ್ಲಿನ ನಡೆದ ತಾಳೀಕೋಟೆ ಅಥವಾ ಪ್ರೊ|| ಹೀರಾಸರು ಕರೆಯುವ 'ರಾಕ್ಷಸತಗಡಿ' ಕಾಳಗದಲ್ಲಿ ರಾಮರಾಜನು ಬಲಿಯಾದನು. ಈ ಕಾಳಗವು ವಿಜಯನಗರದ ಅವನತಿಗೆ ಕಾರಣವಾದುದು. ಸಮಯವನ್ನು ಕಾಯುತ್ತಿದ್ದ ತುರುಕರಿಂದ ವಿಜಯನಗರವು ಕ್ಷಣಾರ್ಧದಲ್ಲಿ ಮಣ್ಣು ಪಾಲಾದುದು. ಸದಾಶಿವನು ಕ್ರಿ. ಶ. ೧೫೭೭ರಲ್ಲಿ ಮೃತನಾದಕೂಡಲೇ ರಾಮರಾಜನ ತಮ್ಮನಾದ ತಿರುಮಲರಾಯನು ತಾನೇ ಧೊರೆಯೆಂದು ಹೇಳಿ ಸಿಂಹಾಸನವನ್ನು ಹತ್ತಿದನು. ಇಲ್ಲಿಂದಮುಂದೆ ಪೆನಗೊಂಡೆ ಅಥವಾ ಚಂದ್ರಗಿರಿಯು ರಾಜಧಾನಿಯಾದುದು. ತಿರುಮಲರಾಯನ ಸಿಂಹಾಸನಾರೋಹಣವು ತುಳುವ ಸಂತಾನದಿಂದ ಆರವೀಡು ವಂಶಕ್ಕೆ ಮೂಲವಾದುದು. ಕ್ರಿ. ಶ. ೧೫೭೪ರಲ್ಲಿ ತಿರುಮಲರಾಯನಮಗ ಶ್ರೀರಂಗ

ರಾಜನು ಸಿಂಹಾಸನಕ್ಕೆ ಬಂದನು. ಅನಂತರ ಇವನ ತಮ್ಮನಾದ ವೆಂಕಟಪತಿಯು ಕ್ರಿ. ಶ. ೧೫೮೫ರಲ್ಲಿ ಸಿಂಹಾಸನವನ್ನು ಹತ್ತಿ ಕ್ರಿ. ಶ. ೧೬೧೪ರವರೆಗೆ ಆಳಿದನು. ಈ ರಾಜರೇ ವಿಜಯನಗರದ ಕೀರ್ತಿಯನ್ನು ಇನ್ನೂಗಳಿಸಿಕೊಂಡಿದ್ದರು.

ಜಿಂಜಿ ಎಂಬದು ವಿಜಯನಗರಕ್ಕೆ ಸೇರಿದ ಒಂದು ಜಹಗೀರಿ ಅಥವಾ ಪಾಳ್ಯಪಟ್ಟು. ಇದನ್ನು ಸೂರಪ್ಪನಾಯಕನೆಂಬುವನು ಕ್ರಿ. ಶ. ೧೫೫೦ ರಿಂದ ೧೫೭೫ ರವರಿಗೆ ಆಳುತ್ತಿದ್ದನು. ಸುಮಾರು ಕ್ರಿ. ಶ. ೧೫೭೮ ರಿಂದ ೧೬೧೦ ರವರೆಗೆ ಕೃಷ್ಣಪ್ಪನಾಯಕನೆಂಬುವನು ಆಳಿದನು. ಜಿಂಜಿಯ ವಿಚಾರವಾಗಿ ನಮಗೆ ದೊರೆಯುವ ಚರಿತ್ರಾಧಾರಗಳು ಇಷ್ಟುಮಾತ್ರ.

ವೆಲ್ಲೂರಿನ ವಿಚಾರಗಳು ಹೆಚ್ಚಾಗಿ ಶಾಸನಾದಿಗಳಿಂದ (Epigraphical Records) ತಿಳಿಯ ಬರುತ್ತವೆ. ಕ್ರಿ. ಶ. ಸುಮಾರು ೧೬ ನೆಯ ಶತಮಾನಾರ್ಧದವರೆಗೆ ಎಂದರೆ ಕ್ರಿ. ಶ. ೧೫೪೯ ರವರೆಗೆ ಚಿನ್ನವೀರಪ್ಪನಾಯಕನೆಂಬುವನು ಆಳುತ್ತಿದ್ದುದಾಗಿಯೂ, ಸುಮಾರು ಕ್ರಿ. ಶ. ೧೫೪೯ ರಿಂದ ಇವನ ಮಗ ಚಿನ್ನಬೊಮ್ಮನಾಯಕನು ಕ್ರಿ. ಶ. ೧೫೭೮ ರವರೆಗೆ ಆಳುತ್ತಿದ್ದುದಾಗಿಯೂ ತಿಳಿಯ ಬರುತ್ತದೆ. ಅನಂತರ ಇವನ ಮಗ ಲಿಂಗನಾಯಕನು ಕ್ರಿ. ಶ. ೧೬೧೪ ರವರೆಗೆ ಆಳಿದನು.

ಕೃಷ್ಣ ದೇವರಾಯನು ವಿಜಯನಗರದಲ್ಲಿ ಆಳುತ್ತಿದ್ದಾಗ ತಂಜಾವೂರಿನಲ್ಲಿ ವೀರಶೇಖರಚೋಳನೆಂಬುವನು ರಾಜನಾಗಿದ್ದನು. ಕೃಷ್ಣದೇವರಾಯನು ಮುಖ್ಯ ಮುಖ್ಯವಾದ ಗಡಿಗಳಲ್ಲಿ ತನ್ನ ಕಡೆಯವರನ್ನು ನೇಮಿಸುವುದಾದರೆ ತನ್ನ ರಾಜ್ಯಕ್ಕೆ ಯಾವ ತೊಂದರೆಯೂ ಬಾರದೆಂದು ಯೋಚಿಸಿ ಸಾಳ್ವನಾಯಕ (ವೀರನರಸಿಂಹ, ಚೆಲ್ಲಪ್ಪ) ನೆಂಬವನನ್ನು ಚೋಳದೇಶಗಳಿಗೆ ಸರ್ವಾಧಿಕಾರಿಯಾಗಿ ನಿಯಮಿಸಿದ್ದನು. ಸಾಳ್ವನಾಯಕನು ಮಹಾಮೇಧಾವಿಯಾಗಿದ್ದು ರಾಜ್ಯಶಾಸನ ಧುರೀಣನಾಗಿದ್ದನು. ಕೃಷ್ಣದೇವರಾಯನು ಮೃತನಾದಕೂಡಲೇ ಇವನು ದಂಗೆ ಎದ್ದನು. ಅಚ್ಯುತರಾಯನು ಇದನ್ನು ತಿಳಿದು ಸಸೈನ್ಯನಾಗಿ ಇವನ ಮೇಲೆ ದಂಡೆತ್ತಿಬಂದು ಕ್ರಿ. ಶ. ೧೫೩೫ರಲ್ಲಿ ಇವನನ್ನು ಸೋಲಿಸಿ ಕೈಸೆರೆಹಿಡಿದನು. ಇವನು ಬಿಡುಗಡೆ ಹೊಂದಿದನೇ ಇಲ್ಲವೇ ರಾಜ್ಯವಾಳಿದನೇ ಹೇಗೆಂಬ ವಿಚಾರದಲ್ಲಿ ಚರಿತ್ರೆಯು ಸ್ತಬ್ಧವಾಗಿದೆಯಾದರೂ ಸುಮಾರು ೮-೧೦ ವರ್ಷಗಳವರೆಗೆ ಪುನಃ ರಾಜ್ಯವನ್ನಾಳಿರಬೇಕೆಂದು ಊಹಿಸಲು ಅವಕಾಶವಿದೆ. ಕೆಲವುಜನ ಪಂಡಿತರು ಸಾಳ್ವನಾಯಕ, ವೀರನರಸಿಂಹ, ಚೆಲ್ಲಪ್ಪನೆಂಬ ಇವನನ್ನು ತುಳುವ ವಂಶದ ಮೂಲಪುರುಷನಿಂದ, ಪದಭ್ರಷ್ಟನಾಗಿ ಮಾಡಲ್ಪಟ್ಟ ವಿಜಯನಗರದ ಸಾಳ್ವರಾಜನಾಗಿರಬೇಕೆಂದು ಅಭಿಪ್ರಾಯ ಪಡುವರು. ಇದು ನಿಜವಾಗಿದ್ದರೆ ಅಚ್ಯುತನು ದಂಗೆ ಎದ್ದಿದ್ದ ಚೆಲ್ಲಪ್ಪನನ್ನು ಅಡಗಿಸಿ,

ಅವನ ಪ್ರಾರ್ಥನೆಯನ್ನು ಮನ್ನಿಸಿ, ರಾಜ್ಯವನ್ನು ಹಿಂದಕ್ಕೆ ಕೊಟ್ಟಿದ್ದರೂ ಇರಬಹುದು. ಹೇಗಾದರೂ ಇರಲಿ! ಕ್ರಿ. ಶ. ೧೫೪೯ ಕ್ಕೆ ಮುಂಚೆಯೇ ತಂಜಾವೂರು ನಾಯಕರ ನೂತನ ವಂಶಾವಳಿಯು ಸ್ಥಾಪಿತವಾಗಿದ್ದುದಾಗಿ ಹೇಳಬಹುದಾಗಿದೆ.

ಸೆವ್ವಪ್ಪನಾಯಕನೂ ಮತ್ತು ಅಚ್ಯುತರಾಯನೂ ಇಬ್ಬರೂ ಷಡ್ಡಕರು. (ಅಕ್ಕತಂಗಿಯರನ್ನು ಮದುವೆ ಮಾಡಿಕೊಂಡವರು) ಅಚ್ಯುತನು ಚೋಳ ರಾಜ್ಯವನ್ನು ಸ್ತ್ರೀಧನವಾಗಿ ಸೆವ್ವಪ್ಪನಿಗೆಕೊಟ್ಟಿದ್ದನು. ಸೆವ್ವಪ್ಪನು ತಂಜಾವೂರಿನಲ್ಲಿ ಕ್ರಿ. ಶ. ೧೫೭೭ ರವರೆಗೆ ಆಳಿದನಂತರ ಇವನ ಮಗ ಅಚ್ಯುತಪ್ಪನು ಕ್ರಿ. ಶ. ೧೬೧೭ರ ವರೆಗೂ ಆಳಿದುದಾಗಿ ಗೊತ್ತಾಗುತ್ತದೆ.

ಕೃಷ್ಣದೇವರಾಯನು ವಿಜಯನಗರವನ್ನಾಳುತ್ತಿದ್ದಾಗ ಮಧುರೆಯಲ್ಲಿ ಶ್ರೀವಲ್ಲಭದೇವಪಾಂಡ್ಯನೆಂಬವನು ಆಳುತ್ತಿದ್ದನು. ಅನಂತರ ಚಂದ್ರಶೇಖರ ಪಾಂಡ್ಯನೆಂಬುವನು ಸಿಂಹಾಸನಕ್ಕೆ ಬಂದನು. ಇವನು ಅಚ್ಯುತದೇವರಾಯನ ಸಮಕಾಲೀನನು. ಚಂದ್ರಶೇಖರಪಾಂಡ್ಯನು ರಾಜ್ಯನಿರ್ವಹಣ ಮಾಡಲು ಅಸಮರ್ಥನಾಗಿರುವುದನ್ನು ತಿಳಿದು ತಂಜಾವೂರಿನ ವೀರಶೇಖರಚೋಳನು ಕ್ರಿ. ಶ. ೧೫೩೭ ರಲ್ಲಿ ಪದಚ್ಯುತನನ್ನಾಗಿ ಮಾಡಿ ಓಡಿಸಿಬಿಟ್ಟನು. ಚಂದ್ರಶೇಖರಪಾಂಡ್ಯನು ರಾಜ್ಯವನ್ನು ಬಿಟ್ಟೋಡಿ ಅಚ್ಯುತದೇವರಾಯನ ಬಳಿಗೆ ಬಂದು ರಕ್ಷಣೆಯನ್ನು ಪ್ರಾರ್ಥಿಸಿದನು. ಅಚ್ಯುತದೇವರಾಯನು ವೀರಶೇಖರನನ್ನು ಮೂದಲಿಸಿ ಚಂದ್ರಶೇಖರಪಾಂಡ್ಯನಿಗೆ ರಾಜ್ಯವನ್ನು ಕೊಡಿಸುವಂತೆ ನಾಗಮನಾಯಕನನ್ನು ಕಳುಹಿಸಿದನು. ಯುದ್ಧದಲ್ಲಿ ವೀರಶೇಖರನು ವೀರಸ್ವರ್ಗವನ್ನು ಹೊಂದಲು ಚಂದ್ರಶೇಖರ ಪಾಂಡ್ಯನಿಗೆ ಪುನಃ ಮಧುರೆರಾಜ್ಯವು ದೊರೆಯಿತು. ಸಂತಾನಹೀನನಾದ ಚಂದ್ರಶೇಖರಪಾಂಡ್ಯನು ರಾಜ್ಯವನ್ನು ನಾಗಮನಾಯಕನ ಮಗ ವಿಶ್ವನಾಥ ನಾಯಕನಿಗೆ ಕೊಟ್ಟು ಸುಮಾರು ಕ್ರಿ. ಶ. ೧೫೪೩ರಲ್ಲಿ ಪರಲೋಕವಾಸಿಯಾದನು. ಈ ರೀತಿ ಮಧುರೆಯ ನಾಯಕವಂಶವು ಸ್ಥಾಪಿತವಾದುದು. ಕಾಲಕ್ರಮದಲ್ಲಿ ಸದಾಶಿವನಿಗೆ ಪ್ರತಿಯಾಗಿ ರಾಜ್ಯಸೂತ್ರವನ್ನು ನಡೆಯಿಸುತ್ತಿದ್ದ ರಾಮರಾಜನ ದಾಯಾದಿ (cousins) ವಿಠ್ಠಲ ಮತ್ತು ಚಿನ್ನತಿಮ್ಮ ಇವರು ದಕ್ಷಿಣದಿಕ್ಕಿನ ಸರ್ವಸ್ವಾಮಿತ್ವವನ್ನು ಹೊಂದಿದ್ದರಾದುದರಿಂದ ವಿಶ್ವನಾಥನ ಅಧಿಕಾರವು ಕೇವಲ ನಾಮಮಾತ್ರವಾಗಿದ್ದಿತು. ಮೇಲಣ ಹೇಳಿಕೆಯ ಸಮರ್ಥನಕ್ಕಾಗಿ ವಂಶಾವಳಿಯನ್ನು ಬರೆದು ತೋರುವೆವು.




ಈ ರೀತಿ ಕ್ರಿ. ಶ. ೧೬ನೆಯ ಶತಮಾನದ ರಾಜಕೀಯ ಪರಿಸ್ಥಿತಿಯನ್ನು ಸಂಗ್ರಹವಾಗಿ ಹೇಳಿದ ಅನಂತರ ದೀಕ್ಷಿತನ ಕಾಲನಿರ್ಣಯಕ್ಕೆ ಈ ವಂಶಾವಳಿಯು ಎಷ್ಟು ಸಹಕಾರಿಯಾಗುವುದೆಂಬುದನ್ನು ಹೇಳುವೆವು.

ದೀಕ್ಷಿತನಪ್ರಥಮಾಶ್ರಯದಾತನು ಚಿನ್ನತಿಮ್ಮ. ಇವನು ವೇದಾಂತದೇಶಿಕನ ಯಾದವಾಭ್ಯುದಯಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆಯಬೇಕೆಂದು ಕೇಳಿಕೊಂಡ ಮೇರೆ ದೀಕ್ಷಿತನು ಬರೆದುದಾಗಿ ಈ ಕೆಳಗಣ ಶ್ಲೋಕಗಳಿಂದ ವ್ಯಕ್ತವಾಗುತ್ತದೆ.

ವಂಶೇ ಮಹತಿ ಸುಧಾಂಶೋಃ ಪಾಂಡುಸುತಪ್ರವರಚರಿತಪರಿಪೂತೇ
ಆಸೀದಪಾರಮಹಿಮಾ ಮಹೀಶ್ವರೋ **ರಾಮರಾಜ** ಇತಿ ||

ಉದಪಾದಿ ತಿಮ್ಮರಾಜಃ ತತೋಽಂಬುಧೇರಿವ ಸುಧಾಮಯಾನ್ಮೃಗರಾಜಃ
ಹೃದಯಂಗಮಂ ಮುರಾರೇರ್ಯಮಲಂಚಕ್ರೇ ಪ್ರಭೇವ ಗೋಪೀದೇವೀ ||

ರಾಜರ್ಷಿರೇವ ಸುಚಿರಂ ಧುರಿ ಸ್ಥಿತಃ ಸತ್ಯಸಂಧಾನಾಂ
ಆರಾಧ್ಯ ವೇಂಕಟೇಶ್ವರಮಲಭತ ಲೋಕೋತ್ತರಾನ್ ಪುತ್ರಾನ್ ||

ತೇಷು ಮಹಿತೇಷು ಜಯತಿ ತ್ರಿದಿವಾಧೀಶೇಷು ಪದ್ಮಬಂಧುರಿವ
ಶ್ರೀ ಚಿನ್ನತಿಮ್ಮರಾಜಃ ಪ್ರತಾಪನೀರಾಜಿತಕ್ಷ್ಮಾವಲಯಃ

ಪ್ಲವಮಾನಸ್ಯ ಸಮುದ್ರೇ ಸೇತೋಃ ಶೈಥಿಲ್ಯಶಂಕಯಾ ನಿಹಿತಾಃ
ಕೀಲಾ ಇವ ಭಾಸಂತೇ ತತ್ರ್ಯಾ ಯಸ್ಯ ಪೃಥುಜಯಸ್ತಂಭಾಃ

ಮಲಯಾದ್ರಿಕಟಕನಿಕಟೇ ವಿಂಧ್ಯ ಇವಾಭಾತಿ ಯಜ್ಜಯಸ್ತಂಭಃ
ಅದ್ಯಾಪಿ ನಾಗತೋಽಸೀ ಶ್ಯಗಸ್ತ್ಯಮನುಯೋಕ್ತುಮಂತಿಕೋನ್ಮಗ್ನಃ

ಅಭಿಭವತಿ ಕಲಮೇಘಂ ರವಿಕರನಿಕರಂ ತಿರಸ್ಕುರತೇ
ಯದ್ದಾನವಾರಿಸಾಗರಜನ್ಮಾ ಜಗದದ್ಭುತೋ ಯಶಶ್ಚಂದ್ರಃ

ಸೂಕ್ತಿಮಯ್ಯೈಃ ಸ್ವಪ್ರಭವೈರಷ್ಟೈಶ್ಚೋಪಾಖ್ಯಯರ್ಥ್ಯ ಸದಾ ವಿಬುಧಾರ್
ಕುಲಕೂಟಸ್ಥಸ್ಯೇಂದೋರಾಚಾರಂ ಯೋಽನುವರ್ತತೇಧೀರಃ
ಸಾಹಿತ್ಯಗೋಷ್ಠ್ಯಾಂ ಸರಸಮಾತಿಷ್ಠನ್ನಯಮೇಕದಾ
ಯಾದವಾಭ್ಯುದಯಂ ಕಾವ್ಯ ಮಶ್ರೌಷೀದ್ವಿದುಷಾಂ ಮುಖಾತ್
ಆವ್ಯಾಖ್ಯಾತತಯಾ ಪೂರ್ವೈರನಭಿವ್ಯಕ್ತಭಾವಕಂ
ಅಧೃಷ್ಟಮಿವಶಿಲ್ಪಜ್ಞೈರಭಿಜಾತಂ ಹಿರಣ್ಮಣಿಂ
ತದಾಕರ್ಣನತಃ ಸದ್ಯ ಸ್ಸಮುದಂಚತ್ಕುತೂಹಲಃ
ವಿದುಷಾಂ ಪುರತಸ್ತಸ್ಯ ವಿವೃತೌ ಮಾಂ ನ್ಯಯೋಜಯತ್
ಕವಿತಾರ್ಕಿಕಸಿಂಹಸ್ಯ ಕಾವ್ಯಮೇತದ್ಯಥಾಮತಿ
ವಿವೃಣೋಮಿ ಮಹೀಪಾಲನಿಯೋಗಬಹುಮಾನತಃ ॥

ಚಿನ್ನ ತಿಮ್ಮನು ಕ್ರಿ. ಶ. ೧೫೪೨ರಿಂದ ಸುಮಾರು ೧೫೫೦ರವರೆಗೆ ದಕ್ಷಿಣದಲ್ಲಿ ಸರ್ವಾಧಿಕಾರಿಯಾಗಿದ್ದುದಾಗಿ ಹೇಳಿದೆ. ಸದಾಶಿವನಿಗೆ ವಿಜಯನಗರದಸಿಂಹಾಸನವು ದೊರೆತಕೂಡಲೇ ವಿಜಯನಗರಕ್ಕೆ ಕಪ್ಪಕೊಡದೆ ದಂಗೆಯೆದ್ದ ತಿರುವಾಂಕೋಡು ಮೊದಲಾದ ದಕ್ಷಿಣದಲ್ಲಿನ ಜಹಗೀರುದಾರರುಗಳನ್ನು ಅಡಗಿಸುವುದಕ್ಕಾಗಿ ವಿಠ್ಠಲ ನೊಡನೆ ಸಸೈನ್ಯನಾಗಿ ಚಿನ್ನ ತಿಮ್ಮನನ್ನು ಕಳುಹಿಸಿದನು. ಚಿನ್ನ ತಿಮ್ಮನು ದಂಗೆಯುವರನ್ನು ಸದೆಬಡಿದು ಚೋಳ, ಕೇರಳ ಮತ್ತು ಪಾಂಡ್ಯರಾಜರನ್ನುಜಯಿಸಿ ತಿರುವಾಂಕೋಡು ಮತ್ತು ಕೋರಮಾಂಡಲ ತೀರವನ್ನು ವಶಪಡಿಸಿಕೊಂಡನು. ಇವನು ತಿರುಚನಾಪಳ್ಳಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ಹತ್ತುವರ್ಷಗಳವರೆಗೆ ಮಧುರೆಯನ್ನು ಸುಸ್ಥಿತಿಗೊಳಿಸುವುದರಲ್ಲಿಯೇ ಕಳೆದನು. ಆಗ ವಿಶ್ವನಾಥನಾಯಕನು ಮಧುರೆಯ ಸರ್ವಾಧಿಕಾರಿಯಾಗಿದ್ದು ಚಿನ್ನ ತಿಮ್ಮನಿಗೆ ಸಾಮಂತನಾಗಿದ್ದನು. ಚಿನ್ನ ತಿಮ್ಮನ ವಿಜಯಗಳನ್ನು ಕುರಿತು ಹೇಳುವ ದೀಕ್ಷಿತನ ವರ್ಣನೆಯು ಸಾಧುವಾದುದಾಗಿದೆ. ಕ್ರಿ. ಶ. ೧೫೫೦ರಲ್ಲಿ ಚಿನ್ನ ತಿಮ್ಮನು ದಕ್ಷಿಣ ದಿಂದ ವಿಜಯಿಯಾಗಿ ಹಿಂತಿರುಗಿದನಂತರ ಪ್ರಾಯಃ ಇದರ ಜ್ಞಾಪಕಾರ್ಥವಾಗಿ ಯಾದವಾಭ್ಯುದಯ ವ್ಯಾಖ್ಯಾನವನ್ನುಬರೆದಿರಬೇಕು.

ದೀಕ್ಷಿತನ ಎರಡನೆಯ ಆಶ್ರಯದಾತನು ವೆಲ್ಲೂರಿನ ಚಿನ್ನ ಬೊಮ್ಮನಾಯ ಕನು. ಕ್ರಿ. ಶ. ೧೫೪೯—೧೫೭೮ ರವರೆಗೆ ಬರೆಯಲ್ಪಟ್ಟಿರುವ ಶಾಸನಗಳಲ್ಲಿ ಇವನ ವಿಚಾರವಾಗಿ ಹೆಚ್ಚಾಗಿ ಹೇಳಿರುವುದು ಕಂಡುಬರುತ್ತದೆ. ಕ್ರಿ. ಶ. ೧೫೮೨ ರಲ್ಲಿ ಬರೆಯಲ್ಪಟ್ಟುದಾದ 'ಅಡಿಯಾಪಲಂ' ಶಾಸನದಲ್ಲಿ ಚಿನ್ನ ಬೊಮ್ಮನ ವಿಚಾರವಾಗಿ ಹೇಳುವಾಗ ಭೂತಕಾಲ ಪ್ರಯೋಗವಿರುವುದರಿಂದ ಚಿನ್ನ ಬೊಮ್ಮನಾಯಕನು ಕ್ರಿ ಶ ೧೫೭೮ ಮತ್ತು ೧೫೮೨ ರ ಮಧ್ಯಕಾಲದಲ್ಲಿ ಮೃತಪಟ್ಟಿರಬೇಕಾಗಿ ತೋರು ತ್ತದೆ. ಇವನ ಕಾಲದಲ್ಲಿ ದೀಕ್ಷಿತನು ಶೈವಸಂಬಂಧವಾದ ಅನೇಕ ಗ್ರಂಥಗಳನ್ನು

ಬರೆದನು. ಶಿವಾರ್ಕಮಣಿದೀಪಿಕಾ ಮೊದಲಾದ ಶಿವಾಚಾರ ಚರಿತ್ರೆಗಳಲ್ಲಿ ಚಿನ್ನಬೊಮ್ಮನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿರುವನು. ಶಿವಾಚಾರಚಂದ್ರಿಕೆಯು ಮುಖ್ಯವಾಗಿ ಚಿನ್ನಬೊಮ್ಮನನ್ನು ಶೈವಾರಾಧಕನನ್ನಾಗಿ ಮಾಡುವುದಕ್ಕಾಗಿ ಬರೆಯಲ್ಪಟ್ಟುದಾಗಿದೆ. ಶಿವಾರ್ಕಮಣಿದೀಪಿಕೆಯನ್ನು ಬರೆದು ಮುಗಿಸಿದ ಸಂತೋಷಕ್ಕಾಗಿ ಚಿನ್ನಬೊಮ್ಮನು ದೀಕ್ಷಿತನಿಗೆ ಕನಕಾಭಿಷೇಕವನ್ನು ಮಾಡಿದುದಾಗಿ ಹೇಳಿದೆ. ' ಇದು ಸುಮಾರು ಕ್ರಿ. ಶ. ೧೫೮೨ ರಲ್ಲಿ ನಡೆದಿರಬೇಕಾಗಿ ತೋರುತ್ತದೆ. ಈ ಕೆಳಗೆ ಹೇಳುವ ಪ್ರಮಾಣಗಳಿಂದ ಚಿನ್ನ ಬೊಮ್ಮನ ಬಳಿ ದೀಕ್ಷಿತನ ಸಂಬಂಧವು ಸ್ಪಷ್ಟಪಡುತ್ತದೆ

(೧) " ಶಿವಾರ್ಕಮಣಿದೀಪಿಕಾವಸಾನಲಬ್ಧಕನಕಸ್ನಾನಃ ಪ್ರಶಂಸಿತಸ್ಸಮರ ಪುಂಗವಯಜ್ವನಾ " ಯಥಾ:—

ಹೇಮಾಭಿಷೇಕಸಮಯೇ ಪರಿತೋ ನಿಷಣ್ಣಾ
ಸೌವರ್ಣಸಂಹತಿ ಮಿಷಾಚ್ಚಿನಬೋಮ್ಮಭೂಪಃ ।
ಅಪ್ಪಯ್ಯದೀಕ್ಷಿತ ಮಣೇರನವದ್ಯವಿದ್ಯಾ
ಕಲ್ಪದ್ರುಮಸ್ಯ ಕುರುತೇ ಕನಕಾಲವಾಲಂ ॥

ಎಂದೂ,

(೨) ನೀಲಕಂಠನ ನಳಚರಿತ'ನಾಟಕದಲ್ಲಿ:—

ನಾನಾದೇಶನರೇಂದ್ರಮಂಡಲಮಹಾಯತ್ನಾತಿದೂರೀಭವ
ತ್ಕಾದಾಚಿತ್ಕಪದಾರವಿಂದವಿನತೇ **ರಪ್ಪಯ್ಯಯಜ್ವ**ಪ್ರಭೋಃ
ಶೈವೋತ್ಕರ್ಷಪರಿಷ್ಕೃತೈರಹರಹಸ್ಸೂಕ್ತೈಸ್ಸುಧಾಲಾಲಿತೈಃ
ಫುಲ್ಲತ್ಕರ್ಣಪುಟಸ್ಯ ಬೋಮ್ಮನೃಪತೇಃ ಪುಣ್ಯಾನಿ ಗಣ್ಯಾನಿಕಿಂ ॥

ಎಂದೂ,

(೩) ಬೇರೊಬ್ಬನಿಂದ:—

ಯೇನ ಶ್ರೀಚಿನ್ನಬೋಮ್ಮಕ್ಷಿತಿಪವಲಭಿದಃ ಕೀರ್ತಿರವ್ಯಾಹತಾಽಽಸೀತ್ ॥
—ಕ್ರಿ. ಶ. ೧೫೮೨ರ ಅಡಿಯಾಪಲಂ ಶಾಸನ.

ಎಂದೂ ಹೇಳಿರುವುದು ಕಂಡುಬರುತ್ತದೆ.

ಈ ಅಡಿಯಾಪಲಂ ಶಾಸನದ ಮುಖ್ಯಾಭಿಪ್ರಾಯವು ಅಪ್ಪಯ್ಯದೀಕ್ಷಿತನು ಕ್ರಿ. ಶ. ೧೫೮೨ರಲ್ಲಿ ಸ್ವಗ್ರಾಮವಾದ ಅಡಿಯಾಪಲಂನಲ್ಲಿ ಕಾಲಕಂಠೇಶ್ವರನ ದೇವಾಲಯವನ್ನು ಕಟ್ಟಿಸಿದನೆಂದು ಹೇಳಿರುವುದನ್ನು ನೋಡಿದರೆ, ದೀಕ್ಷಿತನು ಕನಕಾಭಿಷೇಕಾನಂತರ ಈ ಸುವರ್ಣಗಳನ್ನು ತೆಗೆದುಕೊಂಡುಹೋಗಿ ಈ ದೇವಾಲಯವನ್ನು ಕಟ್ಟಿಸಿರಬೇಕಾಗಿ ಬೋಧೆಯಾಗುತ್ತದೆ.

ಅಪ್ಪಯ್ಯ ದೀಕ್ಷಿತನ ಮೂರನೆಯ ಆಶ್ರಯದಾತನು ಪೆನಗೊಂಡೆಯ ವೇಂಕಟಪತಿ ದೇವರಾಯ. ಇವನು ಕ್ರಿ. ಶ. ೧೫೮೬ರಲ್ಲಿ ಸಿಂಹಾಸನಕ್ಕೆ ಬಂದನು.

ದೀಕ್ಷಿತಕೃತ **ಕುವಲಯಾನಂದದ** ಕೊನೆಯಲ್ಲಿ:—

ಅಮುಂ ಕುವಲಯಾನಂದಮಕರೋದಪ್ಪದೀಕ್ಷಿತಃ
ನಿಯೋಗಾದ್**ವೇಂಕಟಪತೇ**ರ್ನಿರೂಪಾಧಿಕೃಪಾನಿಧೇಃ ||

ಎಂಬ ಶ್ಲೋಕವೂ.

ವಿಧಿರಸಾಯನವೆಂಬ ಗ್ರಂಥದಲ್ಲಿ ವೆಂಕಟಪತಿರಾಜನ ವಿಚಾರವಾಗಿಹೇಳುವ:-

ಪ್ರಾಪ್ತಂ ಶಕ್ತ್ಯಾಪರ್ನೇಯಂ ಕಿಲ ಯದಿಹ ಕಿಯಾರ್ಪೂರ್ಣೇಯೋsಸ್ತಿ ನಾಂಶೋ
ನಾನಿಷ್ಟಂ ವಾನಿವರ್ತ್ಯಂ ನಿಜವಿಷಯತಯಾ ದೃಶ್ಯತೇ ಕಿಂಚಿದತ್ರ||
ಕಿಂ ತು ವ್ಯಾಪಾರಮೇಷ ಪ್ರಥಯತಿ ಫಲಸಂಯೋಜನಾರ್ಥಂಪರೇಷಾಂ
ಪ್ರಾಪ್ತಃ ಪುಣ್ಯೈರಗಣ್ಯೈರಿವ ವಿಬುಧ ಗಣೋ **ವೇಂಕಟಕ್ಷೋಣಿಪಾಲಂ**||

ಎಂಬ ಶ್ಲೋಕವು ಕಂಡುಬರುತ್ತದೆ.

ಹೀಗೆ ಅಪ್ಪಯ್ಯ ದೀಕ್ಷಿತನು ಕೆಲವುಕಾಲದವರೆಗೆ ವೆಂಕಟಪತಿರಾಜನ ಆಶ್ರಯದಲ್ಲಿದ್ದು ಆತನಿಗೆ ಉತ್ತರದೇಶದಿಂದ ತನ್ನ ಬಳಿಗೆ ಬಂದ ಮಹಾವೈಯ್ಯಾಕರಣ ಭಟ್ಟೋಜೀ ದೀಕ್ಷಿತನ ಪರಿಚಯವನ್ನು ಮಾಡಿಕೊಟ್ಟಹಾಗೂ, ಇವನು ಶಾಸ್ತ್ರಾಧ್ಯಯನಕ್ಕಾಗಿ ಕಾಶಿಯನ್ನು ಬಿಟ್ಟು ದೀಕ್ಷಿತನಬಳಿಗೆ ಬಂದಹಾಗೂ ತಿಳಿಯಬರುತ್ತದೆ. ಭಟ್ಟೋಜಿಯು ಕಾಶಿಯನ್ನುಬಿಟ್ಟು ಬರುವ ಮೊದಲೇ ಪ್ರಸಿದ್ಧವಾದ 'ಸಿದ್ಧಾಂತ ಕೌಮುದಿ' ಯನ್ನು ಬರೆದು ಮುಗಿಸಿದ್ದುದಾಗಿಯೂ ಈ ವೇಳೆಗೆ ದೀಕ್ಷಿತನ ವಿದ್ಯಾವೈದುಷ್ಯವಿಚಾರವು ಉತ್ತರದೇಶದಲ್ಲಿ ಎಲ್ಲೆಲ್ಲಿಯೂ ಹರಡಿಕೊಂಡಿದ್ದಿತೆಂದೂ ವೆಂಕಟಪತಿ ರಾಜನು ಕೇಳಿಕೊಂಡಮೇರೆ ಭಟ್ಟೋಜಿಯು ತತ್ತ್ವಕೌಸ್ತುಭವೆಂಬುದನ್ನು ಬರೆದುದಾಗಿಯೂ ಹೇಳಿದೆ. ಭಟ್ಟೋಜಿಯು ಆಚಾರ್ಯ ದೀಕ್ಷಿತನ ವಿಚಾರವಾಗಿ ತಂತ್ರ ಸಿದ್ಧಾಂತದೀಪಿಕೆಯಲ್ಲಿ:—

ಅಪ್ಪಯ್ಯದೀಕ್ಷಿತೇಂದ್ರಾನಶೇಷವಿದ್ಯಾಗುರೂನಹಂ ವಂದೇ
ಯತ್ಕೃತಿಬೋಧಾಬೋಧೌ ವಿದ್ವದವಿದ್ವದ್ವಿಭಾಜಕೋಪಾಧೀ ||

ಎಂದು ಕೊಂಡಾಡಿರುವುದು ಕಂಡುಬರುತ್ತದೆ.‡

ಹೀಗೆ ದೀಕ್ಷಿತನ ಕಾಲವು ಚಿನ್ನತಿಮ್ಮನ ಮೊದಲು ಎಂದರೆ ಕ್ರಿ. ಶ. ೧೫೪೨ ರಿಂದ ವೆಂಕಟಪತಿರಾಜನ ವರೆಗಿನ ಸುಮಾರು ೫೦ ವರ್ಷಗಳ ಕಾಲವು ರಾಜಾಶ್ರಯದಲ್ಲಿ ಕಳೆದುಹೋಗಿದೆ. ಇವನ ಆದ್ಯಂತ ಜೀವಮಾನವು ೭೨ ವತ್ಸರಗಳಿಂದು ಪರಿಗಣಿತವಾಗಿದೆ. ಆದುದರಿಂದ ಉಳಿದ ೨೨ ವರ್ಷಗಳು ದೀಕ್ಷಿತನ ಬಾಲ್ಯವೆಂದು ಹೇಳಲಾಗುತ್ತದೆ. ದೀಕ್ಷಿತನ ವಿದ್ವತ್ಪ್ರಭೆಯು ಪ್ರಸರಣದ ಕಾಲಕ್ಕೆ

‡ ತಂತ್ರಸಿದ್ಧಾಂತದೀಪಿಕಾ, ತತ್ವಕೌಸ್ತುಭಕಾರನು ಭಟ್ಟೋಜೀದೀಕ್ಷಿತನಲ್ಲ.
See Bhattojee's Life

ಶೈಶವವುಕಳೆದು ಯೌವನವು ತಲೆದೋರಿರಬೇಕು. ಮಹಾರಾಜನಾದ ಚಿನ್ನತಿಮ್ಮನು ಅಷ್ಟೊಂದು ಸಭಾಪಂಡಿತರ ಮಧ್ಯದಲ್ಲಿ ದೀಕ್ಷಿತನ ವಿದ್ಯಾಕೌಶಲ್ಯಕ್ಕೆ ಮೆಚ್ಚಿ ಆಶ್ರಯವನ್ನು ಕೊಟ್ಟು 'ಯಾದವಾಭ್ಯುದಯ' ಕಾವ್ಯಕ್ಕೆ ವ್ಯಾಖ್ಯಾನವನ್ನು ಬರೆಯಬೇಕೆಂದು ಪ್ರಾರ್ಥಿಸಬೇಕಾದರೆ ಆ ಕಾಲಕ್ಕೆ ದೀಕ್ಷಿತನಿಗೆ ಸುಮಾರು ೨೦-೨೫ ವರ್ಷಗಳಿಗೆ ಕಡಿಮೆಯಾಗಿರದಾಗಿ ಹೇಳಬಹುದಾಗಿದೆ. ಆದುದರಿಂದ ಬಾಲ್ಯಕಾಲದ ೨೨ ವತ್ಸರಗಳನ್ನು ರಾಜಾಶ್ರಯದಲ್ಲಿ ಕಳೆದ ೫೦ ವರ್ಷಗಳೊಂದಿಗೆ ಕೂಡಿಸಿ ದೀಕ್ಷಿತನ ಕಾಲವನ್ನು ಗೊತ್ತುಮಾಡಿ ಹೇಳಬಹುದಾಗಿದೆ. ಆದುದರಿಂದ ದೀಕ್ಷಿತನ ಜನ್ಮಕಾಲವು ಕ್ರಿ. ಶ. ೧೫೨೦ಕ್ಕೆ ಮುಂಚೆ ಆಗಿರಲಾರದಾಗಿ ಊಹಿಸಬಹುದಾಗಿದೆ. ಈ ಕಾಲವನ್ನು ಮತ್ತೊಂದುವಿಧವಾಗಿ ಗೊತ್ತುಮಾಡಿ ಹೇಳಬಹುದು. ಹೇಗೆಂದರೆ ಶಿವಾನಂದ ಯತೀಂದ್ರನು ದೀಕ್ಷಿತನಿಗೆ ನರಸಿಂಹ ಮತ್ತು ಚಿನ್ನಬೊಮ್ಮ ಈರಾಜರ ಆಶ್ರಯವನ್ನು ಹೇಳಿ ಚಂದ್ರಶೇಖರನೆಂಬ ಸಮಕಾಲೀನ ರಾಜನೊಬ್ಬನನ್ನು ಹೇಳಿರುವನು. ಚಿನ್ನಬೊಮ್ಮನ ವಿಚಾರವಾಗಿ ಮೊದಲೇ ಸಾಕಾದಷ್ಟು ಹೇಳಿರುವೆವು. ಉಳಿದ ಇಬ್ಬರ ವಿಚಾರವಾಗಿ ಪ್ರಕೃತಹೇಳಬೇಕಾಗಿರುವುದು.

ನರಸಿಂಹನು ಕ್ರಿ. ಶ. ೧೫೩೨ ರಿಂದ ಕ್ರಿ. ಶ. ೧೬೨೮ರ ವರೆಗೆ ತಂಜಾವೂರಿನಲ್ಲಿ ಆಳಿದುದಾಗಿ, ಶಿವಾನಂದಯತೀಂದ್ರನು ತಪ್ಪಾಗಿ ಬರೆದುಕೊಂಡಿರುವನಾದರೂ, ಆ ನರಸಿಂಹನೇ ಕ್ರಿ. ಶ. ೧೫೦೯—೧೫೩೦ ರವರೆಗೆ ಚೋಳರಾಜ್ಯದ ಸರ್ವಾಧಿಕಾರಿಯಾಗಿದ್ದ ತಂಜಾವೂರಿನ ವೀರನರಸಿಂಹನು ಹೊರತು ಮತ್ತಾವನೂ ಅಲ್ಲ. ಕೊನೆಗೆ ಇವನು ರಾಜದ್ರೋಹಿಯಾಗಿ ತಿರುಗಿಬಿದ್ದುದರಿಂದ ಕ್ರಿ. ಶ. ೧೫೩೫ ರಲ್ಲಿ ಅಚ್ಯುತ ದೇವರಾಯನಿಂದ ಪರಾಜಯವನ್ನು ಹೊಂದಿದನು. ಈ ನರಸಿಂಹನಿಗೆ ಚೆಲ್ಲಪ್ಪನೆಂಬ ಹೆಸರೂ ಇದ್ದಿತು. ಶಿವಾನಂದಯತೀಂದ್ರನ ಹೇಳಿಕೆಯಂತೆ ದೀಕ್ಷಿತನ ಆಶ್ರಯದಾತನು ವೀರನರಸಿಂಹನೆಂದು ಚಾರಿತ್ರಕ ದೃಷ್ಟಿಯಿಂದ ಸಿದ್ಧಾಂತವಾಗುವುದಾದರೆ ನಿಜವಾಗಿ ದೀಕ್ಷಿತನಿಗೆ ಚಿನ್ನ ತಿಮ್ಮನಿಗಿಂತಲೂ ಪೂರ್ವಭಾವಿಯಾಗಿ ರಾಜಾಶ್ರಯವುದೊರೆತಿದ್ದಿತೆಂದು ಹೇಳಬೇಕಾಗುತ್ತದೆ.

ದೀಕ್ಷಿತನ ಅಲಂಕಾರ ಗ್ರಂಥದಲ್ಲಿ ಒಬ್ಬ ನರಸಿಂಹನ ವಿಚಾರವಾಗಿ ಹೇಳಿರುವುದು ಕಂಡುಬರುತ್ತದೆ. ಆ ಶ್ಲೋಕಗಳು ದೀಕ್ಷಿತನಿಂದ ಬರೆಯಲ್ಪಟ್ಟುವುಗಳೆಂದು ಹೇಳುವ ಜನಜನಿತಕಥೆಗಳೂ ಹೇರಳವಾಗಿವೆ.

ದ್ವಿರ್ಭಾವಃ ಪುಷ್ಪಕೇತೋರ್ವಿಬುಧ ವಿಟಪಿನಾಂ ಪೌನರುಕ್ತ್ಯಂ ವಿಕಲ್ಪ
ಶ್ಚಿಂತಾರತ್ನಸ್ಯ ವೀಪ್ಸಾ ತಪನತನುಭುವೋ ವಾಸವಸ್ಯ ದ್ವಿರುಕ್ತಿಃ ||
ದ್ವೈತಂದೇವಸ್ಯ ದೈತ್ಯಾಧಿಪಮಥನಕಲಾಕೇಳಿಕಾರಸ್ಯ ಕುರ್ವ
ನ್ನಾನಂದಂ ಕೋವಿದಾನಾಂಜಗತಿ ವಿಜಯತೇ **ಶ್ರೀನೃಸಿಂಹ**ಕ್ಷಿತೀಂದ್ರಃ||

**ನರಸಿಂಹ** ಧರಾನಾಥ ಕೇ ವಯಂ ತವ ವರ್ಣನೇ
ಅಪಿ ರಾಜಾನಮಾಕ್ರಮ್ಯ ಯಶೋ ಯಸ್ಯ ವಿಜೃಂಭತೇ ||
**ನರಸಿಂಹ** ಮಹೀ ಪಾಲ ವಿದುಸ್ತ್ವಾಂ ಮಕರಧ್ವಜಂ
ಮಾರ್ಗಣಾಸ್ತವ ಸಂಜಾತಾಃ ಕಥಂ ಸುಮನಸೋಽನ್ಯಥಾ ||

ಈ ಶ್ಲೋಕಗಳು ವಿದ್ಯಾಧರನ ಏಕಾವಳಿಯಲ್ಲಿಯೂ ದೊರೆಯುತ್ತವೆ. ಕಟ್ಟು ಕಥೆಗಳ ಆಧಾರದಿಂದ ದೀಕ್ಷಿತನದೆಂದು ಹೇಳುವ ಮೇಲಣ ಶ್ಲೋಕಗಳು ಪ್ರಮಾಣ ವನ್ನಾಗಿ ಅಂಗೀಕರಿಸಲಾಗುವುದಿಲ್ಲ. ಏಕೆಂದರೆ, ವಿದ್ಯಾಧರನು ಆಗಿಹೋದ ಎಷ್ಟೋ ಕಾಲಗಳ ಅನಂತರ ದೀಕ್ಷಿತನ ಜನ್ಮಾವತರಣವಾಗಿರುವುದು.

ಚಿದಂಬರದಲ್ಲಿ ದೀಕ್ಷಿತನು ಪ್ರಥಮ ಯಜ್ಞವನ್ನು ಮಾಡುವಾಗ ನರಸಿಂ ಹನು ಅವಭೃತದ ದಿವಸಬಂದುದಾಗೂ, ಯಜ್ಞಪಶುಗಳು ಪ್ರತ್ಯಕ್ಷವಾಗಿ ಸ್ವರ್ಗಕ್ಕೆ ಹೋಗುತ್ತಿದ್ದಹಾಗೂ ಜನರು ಹೇಳಿಕೊಳ್ಳುವುದನ್ನು ಕೇಳಿ ಅವಭೃತಕ್ಕೆ ಬಂದಂತೆ ಶಿವಾನಂದನು ಹೇಳಿರುವನು ದೀಕ್ಷಿತನ ಗೌರವವನ್ನು ಹೆಚ್ಚಿಸುವುದಕ್ಕಾಗಿ ತನ್ನ ಗ್ರಂಥದಲ್ಲಿ ಕೊನೆಯವರೆಗೂ ನರಸಿಂಹನ ಸಂಬಂಧವನ್ನೇ ಹೇಳಿಕೊಂಡಿರುವನು. ಇದು ಅಸಂಗತವೆಂದು ನಮಗೆತೋರುವುದು. ಏಕೆಂದರೆ ದೀಕ್ಷಿತನು ಕೊನೆಕೊನೆಗೆ ಉತ್ತರ ದೇಶಯಾತ್ರೆಯಲ್ಲಿ ಶೇಷಾಯುಷ್ಯವನ್ನು ಕಳೆದುದಾಗಿದೆ. ಆಗ ಈ ನರ ಸಿಂಹನ ಸಂಬಂಧವೇ ಇಲ್ಲ, ಅಲ್ಲದೆ ಈ ವೀರನರಸಿಂಹನೇ ಪದಭ್ರಷ್ಟನಾದ ಸಾಳ್ವ ರಾಜನೆನ್ನುವುದಾದರೆ ಅವನು ಕ್ರಿ. ಶ. ೧೫೪೫ಕ್ಕಿಂತಲೂ ಹೆಚ್ಚಾಗಿ ಬದುಕಿರನು. ಆ ವೇಳೆಗೆ ಅವನು ಅತ್ಯಂತ ಗಳಿತವಯಸ್ಕನಾಗಿರಬೇಕು.

ಇನ್ನು ಚಂದ್ರಶೇಖರನ ವಿಚಾರ:—

ಈತನು ಆರ್ಯಾವರ್ತ, ಪೂನಾ ಒರಿಸ್ಸಾ ಮೊದಲಾದ ಪ್ರಾಂತ್ಯಗಳಿಗೆ ಅರಸನಾ ಗಿದ್ದನೆಂದೂ, ರತ್ನಖೇಟಶ್ರೀನಿವಾಸದೀಕ್ಷಿತನ ಆಶ್ರಯದಾತನೆಂದೂ ಶಿವಾನಂ ದನು ಹೇಳಿರುವನು. ಇವನು ಹೇಳುವಕಾಲವು ಮೊಗಲರಸರಾದ ಬಾಬರ ಮತ್ತು ಹುಮಾಯೂನನ ಕಾಲವಾದುದರಿಂದ ಸರಿಹೋಗದು. ಆದರೆ ಚಂದ್ರಶೇಖರ ನೆಂಬ ಪಾಂಡ್ಯರಾಜನೊಬ್ಬನಿದ್ದುದಾಗಿ ಮೊದಲು ಹೇಳಿದೆ. ಚಂದ್ರಶೇಖರನು ಸುಮಾರು ಕ್ರಿ. ಶ. ೧೫೪೭ರಲ್ಲಿ ಮೃತನಾದನು.

ಶಿವಾನಂದನು ಹೇಳುವಕಥೆ:—ಚಂದ್ರಶೇಖರರಾಜನು, ದೀಕ್ಷಿತನ ವಿದ್ವತ್ಪ್ರತಿ ಭೆಯನ್ನುಕೇಳಿ ತನ್ನಾಸ್ಥಾನದ ಪಂಡಿತರನ್ನು ಕುರಿತು ದೀಕ್ಷಿತನೊಡನೆ ವಾದ ಮಾಡುವ ಪಂಡಿತರು ಆರಾದರೂ ನಮ್ಮ ಸಭೆಯಲ್ಲಿರುವರೇ ಎಂದು ಬೆಸಗೊಂ ಡುದಕ್ಕೆ ರತ್ನಖೇಟನು ವಾದಕ್ಕೆ ಒಪ್ಪಿ ದೀಕ್ಷಿತನೊಡನೆವಾದವನ್ನು ಹೂಡಿ ಪರಾಜಿ ತನಾಗಿ ತನ್ನ ಮಗಳಾದ ಮಂಗಳನಾಯಕಿಯನ್ನು ದೀಕ್ಷಿತನಿಗೆ ಮದುವೆಮಾಡಿ

ಕೊಟ್ಟನು. ಹೀಗಾಗಿ ಚಂದ್ರಶೇಖರನು ಅಪ್ಪಯ್ಯದೀಕ್ಷಿತನ ವಿವಾಹ ಕಾರಣನಾದನು. ಇಪ್ಪತ್ತುವರ್ಷಗಳ ವೇಳೆಗೆ ದೀಕ್ಷಿತನವಿದ್ಯಾಸಂಪತ್ತಿಯು ಎಲ್ಲೆಲ್ಲಿಯೂ ಹರಡಿಕೊಂಡಿದ್ದಿತು. ಈ ಮೇಲೆ ಹೇಳಿದ ಕಾರಣಗಳಲ್ಲೆಲ್ಲದರ ಪರಿಶೀಲನದಿಂದ ದೀಕ್ಷಿತನ ಕಾಲವು ಕ್ರಿ. ಶ. ೧೫೨೦-೧೫೯೩ರವರೆಗೆಂದೂ ಹೇಳುವುದುತಪ್ಪಾಗದು. ಇದಲ್ಲದೆ ಚತುಶ್ಲೋಕೀಭಾಷ್ಯದಲ್ಲಿ ಕಂಡುಬರುವ ಈತನ ವಿಷಯಕವಾದ:—

"ವಿಕ್ರಮೇಭೂತಲಂಪ್ರಾಪ್ಯ ವಿಜಯೇಸ್ವರ್ಗಮಾಯಯೌ" ||

ಎಂಬದು ಮೇಲೆ ಹೇಳಿದ ಕಾಲಕ್ಕೆ ಸರಿಹೋಗುತ್ತದೆ. ಆದುದರಿಂದ ಈ ಕಾಲವು ದೀಕ್ಷಿತನ ಕಾಲವೆಂದು ಚಾರಿತ್ರಕ ಮತ್ತು ಶಾಸನಗಳಿಂದ ಸಿದ್ಧವಾಗುತ್ತದೆ.* ದೀಕ್ಷಿತನು ಅವಸಾನಕಾಲದಲ್ಲಿ ಹೇಳಿದುದೆನ್ನುವ ಶ್ಲೋಕದಿಂದ ಅವನಿಗೆ ೭೦ ವರ್ಷಗಳಿಗಿಂತಲೂ ಹೆಚ್ಚಾಗಿದ್ದಿತೆಂದು ಹೇಳಿರುವನು. ಚಿದಂಬರವು ಆವನ ಸ್ವೈಸರ್ಗಿಕಸಾಮ್ರಾಜ್ಯ. ತರುಣೇಂದು ಶೇಖರನು ಅವನ ಪರಾಪರವಸ್ತು. ಅವನ ಹೇಳಿಕೆಯು ಹೀಗಿರುವುದು:—

ಚಿದಂಬರಮಿದಂ ಪುರಂ ಪ್ರಥಿತಮೇವ ಪುಣ್ಯಸ್ಥಲಂ
ಸುತಾಶ್ಚ ವಿನಯೋಜ್ಜ್ವಲಾಃ ಸುಕೃತಯಶ್ಚ ಕಾಶ್ಚಿತ್ಕೃತಾಃ।
ವಯಾಂಸಿ ಮಮ ಸಪ್ತತೇರುಪರಿ ನೈವ ಭೋಗೇ ಸ್ಪೃಹಾ
ನಕಿಂಚಿದಹಮರ್ಥಯೇ ಶಿವಪದಂ ದಿದೃಕ್ಷೇಪರಂ॥
ಆಭಾತಿ ಹಾಟಕಸಭಾನಟಪಾದಪದ್ಮ
ಜ್ಯೋತಿರ್ಮಯೋ ಮನಸಿ ಮೇ ತರುಣಾರುಣೋಽಯಂ ॥

ಅಹೋ ! ಈ ಚಿದಂಬರವು ಪುಣ್ಯಕ್ಷೇತ್ರ. ವಿನೀತ ಪುತ್ರಸಂತಾನನಾದೆ. ಅನೇಕಾಮೂಲ್ಯ ಗ್ರಂಥರಚನೆಯೂ ಆದುದು. ನನ್ನ ವಯಸ್ಸಾದರೋ ೭೦ವರ್ಷಗಳಮೇಲಾದುದು. ನಾನು ಆಶಿಸುವ ಐಹಿಕ ವಸ್ತುವು ಯಾವುದೂ ಇಲ್ಲ. ನನಗಾವುದೂ ಬೇಡ. ಶಿವಪದವಂ (ಹೊಂದಬೇಕೆಂಬ) ನೋಡಬೇಕೆಂಬ ಇಛ್ಛೆ. ಅಗೋ ! ನನ್ನ ಮನಸ್ಸಿನಲ್ಲಿ ಆ ನಟರಾಜನ ಪ್ರಭೆಯು ಬಾಲಸೂರ್ಯಜ್ಯೋತಿಯು ಕಾಣುತ್ತಿದೆ.

ಮೇಲಣ ಅರ್ಧ ಶ್ಲೋಕವನ್ನು ಹೇಳುತ್ತಿದ್ದ ಹಾಗೆ ಅಪ್ಪಯ್ಯದೀಕ್ಷಿತನ ಜೀವನ ವಿಸರ್ಜನವಾದುದು. ಉಳಿದ ಅರ್ಧ ಶ್ಲೋಕವನ್ನು ಅವನ ಮಕ್ಕಳು ಹೇಳಿ ಮುಗಿಸಿದರೆಂದು ಹೇಳಿದೆ:—

ನೂನಂ ಜರಾಮರಣಘೋರಪಿಶಾಚಕೀರ್ಣಾ
ಸಂಸಾರಮೋಹರಜನೀ ವಿರತಿಂ ಪ್ರಯಾತಾ ॥

* The Journal of oriental Research. Madras Vol 2 P. 225-237.

ನಿಜವಾಗಿ ಜನನ ಮರಣಗಳೆಂಬ ಅತಿಕ್ರೂರ ಪಿಶಾಚಯುಕ್ತವಾದ ಈ ಸಂಸಾರವೆಂಬ ಕರಾಳರಾತ್ರಿಯು ಕೊನೆಗಂಡಿತು.

ಗ್ರಂಥಗಳು:—

ಶ್ರೀವೀರವೇಂಕಟಪತಿಕ್ಷೋಣಿಪಾಲಸ್ಯ ಸಾಹ್ಯತಃ
ಕೃತಃ **ಕುವಲಯಾನಂದಶ್ಚಿತ್ರಮೀಮಾಂಸಯಾ** ಸಹ
ಅಭಿಧಾಲಕ್ಷಣವೃತ್ತಿರ್ವಿವೃತ್ತಿರ್ವೃತ್ತಿವಾರ್ತಿಕಂ
ಯಾದವಾಭ್ಯುದಯಾಖ್ಯಾಯಾ ವ್ಯಾಖ್ಯಾನಂ ಚ ಕೃತಂ ಕೃತೇಃ ||

ನಾಮಸಂಗ್ರಹಮಾಲಾ ಚ ವ್ಯಾಖ್ಯಾ ತಸ್ಯಾಶ್ಚ ವಿಸ್ತೃತಾ
ಕಾಂಚೀವರದರಾಜಸ್ಯ ದಿವ್ಯವಿಗ್ರಹವರ್ಣನಂ
ವ್ಯಾಖ್ಯಾ ತಸ್ಯ ಚ ಸಂಕ್ಲೃಪ್ತಾ ನಾತಿಸಂಕ್ಷೇಪವಿಸ್ತರಾ
ಸರ್ವಪಾಪಪ್ರಶಮನೀ ಶ್ರೀಕೃಷ್ಣಧ್ಯಾನಪದ್ಧತಿಃ ||

ಸರ್ವದುರ್ಗಾತಿತರಣೀ ದುರ್ಗಾಚಂದ್ರಕಲಾಸ್ತುತಿಃ
ಆದಿತ್ಯಸ್ತೋತ್ರರತ್ನಂ ಚ ತದ್ವ್ಯಾಖ್ಯಾನಂ ಚ ವಿಸ್ತೃತಂ
ನಾನಾಪದ್ಯಾತ್ಮಕಚತುರ್ಮತಸಾರಾರ್ಥಸಂಗ್ರಹಃ
ನ್ಯಾಯಮುಕ್ತಾವಲೀ ತದ್ವನ್ಮಧ್ವಾಚಾರ್ಯಮತಾನುಗಾ ||

ಮಯೂಖಮಾಲಿಕಾ ಹೃದ್ಯಾ ಲಕ್ಷ್ಮಣಾಚಾರ್ಯವರ್ತ್ಮನಾ
ಶ್ರೀಕಂಠಾಚಾರ್ಯಪದ್ಧತ್ಯಾ ನಿರ್ಮಿತಾ ಮಣಿಮಾಲಿಕಾ
ಶಂಕರಾಚಾರ್ಯದೃಷ್ಟ್ಯಾ ಚ ಪ್ರಕ್ಲೃಪ್ತಾ ನಯಮಂಜರೀ
ನ್ಯಾಯಮುಕ್ತಾವಳೀವ್ಯಾಖ್ಯಾ ನಾತಿವಿಸ್ತರಸಂಗ್ರಹಾ ||

ಅದ್ವೈತಶಾಸ್ತ್ರಸಿದ್ಧಾಂತಲೇಶಸಂಗ್ರಹನಾಮಕಃ
ನ್ಯಾಯರಕ್ಷಾಮಣಿಃ ಸರ್ವಸೂತ್ರತಾತ್ಪರ್ಯವರ್ಣಕಃ
ಶ್ರೀಕಂಠಭಾಷ್ಯವ್ಯಾಖ್ಯಾ ಚ ಶಿವಾರ್ಕಮಣಿದೀಪಿಕಾ
ಶ್ರೀಶಿವಾನಂದಲಹರೀ ಶಿವಾದ್ವೈತವಿನಿರ್ಣಯಃ ||

ರತ್ನತ್ರಯಪರೀಕ್ಷಾ ಚ ಪಂಚರತ್ನಸ್ತವಸ್ತಥಾ
ತಥಾಶಿಖರಿಣೀಮಾಲಾ ಬ್ರಹ್ಮತರ್ಕಸ್ತವಾದಯಃ
ಶಿವತತ್ತ್ವವಿವೇಕಶ್ಚ ಶಿವಕರ್ಣಾಮೃತಂತಥಾ
ಶಿವಾರ್ಚನಪ್ರಕಾಶಾರ್ಥಚಂದ್ರಿಕಾ ಬಾಲಚಂದ್ರಿಕಾ ||

ಮೀಮಾಂಸಾಯಾಶ್ಚಿತ್ರಪುಟಸ್ತಥಾ ವಿಧಿರಸಾಯನಂ
ಮೀಮಾಂಸಾನ್ಯಾಯನಿರ್ಗೂಢ ಉಪಕ್ರಮಪರಾಕ್ರಮಃ
ಏತೇ ಚಾನ್ಯೇ ಚ ಬಹವಃ ಪ್ರಬಂಧಾಃ ಪ್ರಾಗ್ವಿನಿರ್ಮಿತಾ ||

ಅಪ್ಪಯ್ಯದೀಕ್ಷಿತನು ೧೦೪ ಗ್ರಂಥಗಳನ್ನು ಬರೆದುದಾಗಿ ಹೇಳುವನು. ಇವನು ಬರೆದಿರುವ ಗ್ರಂಥಗಳೆಲ್ಲವೂ ಬಹುತರ ಮತಗ್ರಂಥಗಳು. ಕೆಲವು ವೇದಾಂತಗ್ರಂಥ

ಗಳು. ಕುವಲಯಾನಂದ, ಚಿತ್ರಮೀಮಾಂಸಾ, ವೃತ್ತಿವಾರ್ತಿಕಾ ಇವುಮೂರೂ ಅಲಂಕಾರಗ್ರಂಥಗಳು. ವೇದಾಂತದೇಶಿಕನ ಯಾದವಾಭ್ಯುದಯಕ್ಕೆ ವ್ಯಾಖ್ಯಾನವನ್ನು ಬರೆದಿರುವುದಲ್ಲದೆ, ಪಾದುಕಾಸಹಸ್ರಕ್ಕೂ ವ್ಯಾಖ್ಯಾನವನ್ನು ಬರೆದಿರುವುದಾಗಿ ತ್ಯಾಗರಾಜವಿಜಯವು ಹೇಳುತ್ತದೆ. ಆದರೆ ವ್ಯಾಖ್ಯಾನವವು ಉಪಲಬ್ಧವಿಲ್ಲ.*

ದೀಕ್ಷಿತನು ಯಾದವಾಭ್ಯುದಯದ:—

ಅತಿಯಜೇನ ನಿಜಾಂ ಯದಿ ದೇವತಾ
ಮುಭಯತಶ್ಚ್ಯವತೇ ಜುಷತೇsಪ್ಯಘಂ
ಕ್ಷಿತಿಭೃತ್ಸ್ವವ ಸದೈವತಕಾ ವಯಂ
ವನವತಾನವತಾ ಕಿಮಹಿದ್ರುಹಾ|| ೬-೪.

ಎಂಬ ಶ್ಲೋಕವನ್ನು ಕುವಲಯಾನಂದದಲ್ಲಿ ಪರಿಕರಾಲಂಕಾರಕ್ಕೆ ಉದಾಹರಿಸಿಕೊಂಡಿರುವನು. ‡

§ ಲಕ್ಷಣರತ್ನಾವಳಿ ಎಂಬುದು ಇವನು ಬರೆದಿರುವ ಮೂರನೆಯಲಕ್ಷಣಗ್ರಂಥ. ಇದು ರೂಪಕಲಕ್ಷಣಾದಿಗಳನ್ನು ತಿಳಿಸುವುದು. ವಿಧಿರಸಾಯನವು ವಿವಿಧ ವಿಧಿಗಳನ್ನು ಹೇಳುವುದು. ನಕ್ಷತ್ರವಾದಾವಳಿಯು ವ್ಯಾಕರಣಗ್ರಂಥ. ರಾಮಾಯಣ ತಾತ್ಪರ್ಯಸಂಗ್ರಹ ಮತ್ತುಮಹಾಭಾರತ ತಾತ್ಪರ್ಯಸಂಗ್ರಹ ಇವೆರಡೂಇತಿಹಾಸಗಳು. ಶಿವಸರ್ವೋತ್ಕರ್ಷಮನೆಂದು ಹೇಳುವುವಾಗಿವೆ.



## ಭಟ್ಟೋಜೀದೀಕ್ಷಿತ

ಇವನು ಮಹಾರಾಷ್ಟ್ರ ದೇಶದ ಬ್ರಾಹ್ಮಣನು ಎಂಬುದು ಹೆಸರಿನಿಂದ ಗೊತ್ತುಮಾಡಬಹುದಾಗಿದೆ. ಇವನ ಮಾತಾಪಿತೃಗಳಾರೆಂಬುದು ತಿಳಿಯದು. ಇವನು ಅರ್ಚಕರ ಮನೆತನಕ್ಕೆ ಸೇರಿದವನು. ವಿದ್ಯಾಭ್ಯಾಸದ ಸಲುವಾಗಿ ತನ್ನ ಊರನ್ನು ಬಿಟ್ಟು ಕಾಶಿಗೆಹೋಗಿ ವೇದಾಂತಶಾಸ್ತ್ರವನ್ನೋದಿದನು.

**ಕಾಲ:**—ಈತನು ಜನ್ಮ ಸಮಯವು ಕ್ರಿ ಶ ೧೫೭೫ ಎಂದು ತ್ರ್ಯಂಬಕ ಗುರುನಾಥ ಕಾಳೆಯವರು ಹೇಳುವರು† ಇದು ನಿಜವೆನ್ನುವುದಾದರೆಭಟ್ಟೋಜೀ

* Preface to ಯಾದವಾಭ್ಯುದಯ by A. V. Gopalacharya P. 29 2nd Vol Vanivilas Edition.

‡ ಕುವಲಯಾನಂದ P. 73 Nirnaya sagar Edition.

§ Descriptive Catalogue of the Sanskrit Manuscripts in Saraswathi Mahal Library Tanjore Vol. IX Introduction P. 35.

† ಸಂಸ್ಕೃತ ಕವಿಚರಿತೆ. P 40.

ದೀಕ್ಷಿತನಕಾಲವು ೧೪೭೫ + ೫೬ = ೧೫೩೧ ಎಂದರೆ ಕ್ರಿ. ಶ. ೧೬ನೆಯ ಶತಮಾನದ ವನೆಂಬದು ಖಂಡಿತವಾಗುತ್ತದೆ. ಪ್ರೊ|| ವ್ಯಾಕಡಾನಲ್ಲರು ಭಟ್ಟೋಜೀ ದೀಕ್ಷಿತನ ಕಾಲ ಅಥವಾ ಸಿದ್ಧಾಂ ತಕೌಮುದಿಯನ್ನು ಬರೆದುದು ಕ್ರಿ. ಶ. ೧೭ನೆಯ ಶತಮಾನ ವೆಂದಿರುವುದು ಹೊತರ್ು ಹೇಗೇಬುದನ್ನು ಸಾಧಿಸಿರುವುದಿಲ್ಲ $

**ಗ್ರಂಥ:**—ಇವನು ಕಾಲಕ್ರಮದಲ್ಲಿ೧೨೦೦೦ ಶ್ಲೋಕ ಪರಿಮಿತಿಯುಳ್ಳ ಒಂದು ವ್ಯಾಕರಣ ಗ್ರಂಥವನ್ನು ಬರೆದು ಅದನ್ನು 'ಸಿದ್ಧಾಂತ ಕೌಮುದೀ' ಎಂದು ಕರೆದನು. ಕೊನೆಗೆ ಕಾಶಿಯಲ್ಲಿ ವೇದಾಂತಕಾಲಕ್ಷೇಪವನ್ನು, ಮಾಡುತ್ತಿದ್ದು ತನ್ನ ೫೬ ನೆಯ ವಯಸ್ಸಿನಲ್ಲಿ. ಗತಾಯುವಾದನು *

ವರದ ರಾಜನೆಂಬವನು ಸಿದ್ಧಾಂತ ಕೌಮುದಿಯನ್ನು ಸಂಕ್ಷೇಪಿಸಿ ಬರೆದು ಅದನ್ನು ಲಘುಕೌಮುದೀ ಎಂದು ಕರೆದಿರುವನು

ಪಂಡಿತರನೇಕರು ಪೂರ್ವಮೀಮಾಂಸಾ ಶಾಸ್ತ್ರದ ಮೇಲೆ ಬರೆಯಲ್ಪಟ್ಟಿರುವ ತಂತ್ರಸಿದ್ಧಾಂತದೀಪಿಕಾ ಎಂಬ ಗ್ರಂಥವನ್ನು ಮಹಾವೈಯ್ಯಾಕರಣನಾದ ಭಟ್ಟೋಜೀದೀಕ್ಷಿತನು ಬರೆದುದಾಗಿ ಹೇಳುವರು. ಹಾಗೆ ಹೇಳುವುದಕ್ಕೆ ಜನಜನಿತ ಕಥೆಯೊಂದಿರುವುದು.

ನೂರಾರು ಗ್ರಂಥಗಳನ್ನು ಬರೆದು ಮಹಾಪ್ರಸಿದ್ಧನಾದ ಅಪ್ಪಯ್ಯದೀಕ್ಷಿತನು ಚಿದಂಬರದ ಬಳಿಯಲ್ಲಿದ್ದಾಗ ದಕ್ಷಿಣ ಇಂಡಿಯಾಕ್ಕೆ ಯಾತ್ರಾರ್ಥಿಯಾಗಿ ಬಂದ ಭಟ್ಟೋಜೀದೀಕ್ಷಿತನು ಅಪ್ಪಯ್ಯದೀಕ್ಷಿತರ ಬಳಿಗೆ ಬಂದು ಪೂರ್ವಮೀಮಾಂಸಾ ಉತ್ತರಮೀಮಾಂಸಾ ಶಾಸ್ತ್ರಗಳನ್ನು ಹೇಳಿಕೊಡಬೇಕೆಂದು ಪ್ರಾರ್ಥಿಸಲು ದೀಕ್ಷಿತನು ಹಾಗೆ ಪಾಠಹೇಳಿ ಭಟ್ಟೋಜಿಯು ಹೊರಡುವಾಗ ಪೂರ್ವ ಮತ್ತು ಉತ್ತರ ಮೀಮಾಂಸಾ ಶಾಸ್ತ್ರಗಳ ಮೇಲೆ ಯಾವುದಾದರೊಂದು ಗ್ರಂಥವನ್ನು ಬರೆಯಬೇಕೆಂದು ಹೇಳಿದುದಕ್ಕೆ ಸಮ್ಮತಿಸಿ ಭಟ್ಟೋಜಿಯು ಪೂರ್ವಮೀಮಾಂಸಾಶಾಸ್ತ್ರದ ಮೇಲೆ ತಂತ್ರಸಿದ್ಧಾಂತದೀಪಿಕಾ ಎಂಬುದನ್ನೂ ಉತ್ತರಮೀಮಾಂಸಾಶಾಸ್ತ್ರದಮೇಲೆ ತತ್ತ್ವಕೌಸ್ತುಭವೆಂಬುದನ್ನೂ ಬರೆದುದಾಗಿಯೂ ಹೇಳಿದೆ.¦ ತಂತ್ರಸಿದ್ಧಾಂತದೀಪಿಕಾರಂಭದಲ್ಲಿ ಅಪ್ಪಯ್ಯದೀಕ್ಷಿತೇಂದ್ರನನ್ನು ಕೊಂಡಾಡಿರುವುದು ಕಂಡುಬರುತ್ತದೆ.

ಅಪ್ಪಯ್ಯದೀಕ್ಷಿತೇಂದ್ರಾನಶೇಷವಿದ್ಯಾಗುರೂನಹಂ ವಂದೇ
ಯತ್ಕೃತಿಬೋಧಾಬೋಧೌ ವಿದ್ವದವಿದ್ವದ್ವಿಭಾಜತೋಪಾಧೀ ||

---

$ History of sanskrit Literature P 432.
* DekkanPoets P. 27-28.
¦ Introduction to ಶಿವಲೀಲಾರ್ಣವ P. 5—7.

ಈ ಕಥೆಯ ಆಧಾರದಿಂದ ತಂತ್ರಸಿದ್ಧಾಂತದೀಪಿಕಾಕಾರನು ಭಟ್ಟೋಜೀ ದೀಕ್ಷಿತನೆಂದು ಹೇಳಿರುವುದು ಸಾಧುವಾಗಿ ತೋರುವುದಿಲ್ಲ. ಗ್ರಂಥವನ್ನು ಸಮ್ಯಕ್ಪರಿಶೀಲನದಿಂದ ನೋಡುವರಿಗೆ ಇದರ ಗ್ರಂಥಕಾರನು ಭಟ್ಟೋಜಿದೀಕ್ಷಿತನು ಅಲ್ಲವೆಂಬುದು ಸ್ಪಷ್ಟಪಡುವುದು.

ತಂತ್ರಸಿದ್ಧಾಂತದೀಪಿಕಾಕಾರನು ತನ್ನ ಪಿತಾಮಹನನ್ನು ಹೀಗೆಂದು ಹೇಳಿಕೊಂಡಿರುವನು:—

"ಯತ್ತ್ವಸ್ಮತ್ಪಿತಾಮಹಚರಣಾನಾಂ ದರ್ಶನಂ ಸಂಸ್ಕಾರವಾಕ್ಯಸ್ಥವ್ರೀಹ್ಯಾದಿ ಪದೇ ಲಕ್ಷಣೈವನಾಸ್ತಿ" । ಅನರ್ಥಕ್ಯಶಂಕಾ ತ್ವರ್ಥಲಭ್ಯಾಪೂರ್ವೀಯತ್ವೇನೈವೇತಿ, ಯವಸಾಧಾರಣ್ಯಂತು ಧರ್ಮಾಣಾಮಪೇಕ್ಷಾಸಾಮರ್ಥ್ಯರೂಪಾಲ್ಲಿಂಗಾದಿತಿ|| †

ಅಲ್ಲದೆ "ಸಂಸ್ಕಾರವಿಧಿ"ಯ ವಿಚಾರವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಿ, ತಾನು ಸೂಚಿಸುವ ಎರಡು ಸ್ಥಳಗಳಲ್ಲಿ:—

(೧) "ದೀಕ್ಷಿತಮತೇನಾಪೂರ್ವೀಯಲಕ್ಷಣಾನಂಗೀಕಾರಾತ್ ಸಮ್ಮಾರ್ಗಸ್ಯೆನ ಚಮಸೇಷು ಪ್ರಸಕ್ತಿರಿತಿ ಸ್ಫುಟತರಮೇವ (೨) ದೀಕ್ಷಿತಮತೇ ಭವದಭಿಮತಾಪೂರ್ವೀಯಲಕ್ಷಣಯಾ ನಾಮಾಸವಿಧ್ಯೇ ಪ್ರಾಪ್ತೇ ತದಭಾವಾದಸಮಾನವಿಧಾನಮಿತ್ಯೇವ ಸಿದ್ಧಾಂತ ಇತಿಶುದ್ಧಃಪಂಥಾಃ§ ಎಂದು ಹೇಳಿ ಅದನ್ನು ದೀಕ್ಷಿತ ಮತವೆಂದು ಹೇಳಿರುವನು. ಇದಲ್ಲದೆ ತಂತ್ರಸಿದ್ಧಾಂತದೀಪಿಕೆಯ ಪುಟ. ೪೫೧ ರಲ್ಲಿ "ಯದ್ವಾ ಪ್ರಾಚೀನ ಸಿದ್ಧಾಂತಪ್ರಾಪ್ತಾಪೂರ್ವೀಯತ್ವಾವಚ್ಛೇದೇ ದೋಷತ್ವಪ್ರಸಕ್ತೌ ವಿಧಿರಸಾಯನಾದಿದರ್ಶಿತರೀತ್ಯೈವಲಕ್ಷಣಂ ಪ್ರತಿಕ್ಷಿಪ್ಯ ವ್ರೀಹಿತ್ವೇನೈವ ಶೇಷತ್ವಂ.........|| ಎಂದು ಹೇಳಿರುವುದರಿಂದ ಅದೇ ಅಭಿಪ್ರಾಯವು ವಿಧಿರಸಾಯನದಲ್ಲಿಯೂ ಕಂಡುಬರುವುದೆಂಬುದು ಸ್ಪಷ್ಟವಾಗುವುದು. ದೀಕ್ಷಿತರೆಂದರೆ ಪೂರ್ವೋತ್ತರಮೀಮಾಂಸಾಶಾಸ್ತ್ರಗಳಲ್ಲಿ ಪ್ರಖ್ಯಾತನಾದ ಅಪ್ಪಯ್ಯದೀಕ್ಷಿತನೆಂಬುದು ಸಿದ್ಧಾಂತವಾಗಿದೆ. ಇವುಗಳೆಲ್ಲವನ್ನೂ ನೋಡಿದರೆ ಸಂಸ್ಕಾರ ವಿಧಿವಿಚಾರದಲ್ಲ ಅಪೂರ್ವಸಾಧನತ್ವವು ಅಪ್ರ

† Manuscripts of the Tantrasiddhantadeepika in the Adyar Library. P. 451.

* Ibid P 484 5.

§ Ibid P, 8-18.

ಧಾನಾರ್ಥಸೂಚಕವೆಂದು ಪ್ರತಿಪಾದಿಸಿರುವ * ಪ್ರಸಿದ್ಧನಾದ ಅಪ್ಪಯ್ಯ ದೀಕ್ಷಿತನೆಂದೂ, ಅವನೇ ತಂತ್ರಸಿದ್ಧಾಂತದೀಪಿಕಾಕಾರನ ಪಿತಾಮಹ ನೆಂದೂ ಸ್ಪಷ್ಟವಾಗುತ್ತದೆ. ಇದಲ್ಲದೆ ಈ ಗ್ರಂಥದ ಪ್ರತ್ಯಧಿಕರಣದ ಕೊನೆಯಲ್ಲಿ ಎಲ್ಲದರಲ್ಲಿಯೂ ಒಂದೇ ವಿಧವಾದ:—

"ಇತಿ ಶ್ರೀಭರದ್ವಾಜಜಲಧಿಕೌಸ್ತುಭ ಶ್ರೀಕಂಠಮತಪ್ರತಿಷ್ಠಾಪನಾಚಾರ್ಯ ಚತುರಧಿಕ ಶತಪ್ರಬಂಧನಿರ್ಮಾಣ ಧುರಂಧರ ಶ್ರೀಮದಪ್ಪಯ್ಯ ದೀಕ್ಷಿತ ಸೋದರ್ಯ ಶ್ರೀಮದಾಚ್ಚಾ ದೀಕ್ಷಿತಪೌತ್ರೇಣ ಅಲಂಕಾರತಿಲಕರುಕ್ಮಿಣೀ ಪರಿಣಯಾದ್ಯನೇಕ ಪ್ರಬಂಧನಿರ್ಮಾತುರಪ್ಪಯ್ಯದೀಕ್ಷಿತಸ್ಯ ಪುತ್ರೇಣ ದುರೂಹಶಿಕ್ಷಾಕೃತಾ ಭೂಮಿದೇವೀನಂದನೇನ ಅಪ್ಪಯ್ಯದೀಕ್ಷಿತೇನ ವಿರಚಿತಾಯಾಂ............' ಎಂಬ ಗದ್ಯವಿರುವುದರಿಂದ ತಂತ್ರಸಿದ್ಧಾಂತ ದೀಪಿಕಾಕಾರನು ಭರದ್ವಾಜಕುಲೋತ್ಪನ್ನನಾದ ಅಪ್ಪಯ್ಯದೀಕ್ಷಿತನ ಸಹೋದರಅಚ್ಚಾದೀಕ್ಷಿತನಮುಮ್ಮಗ ಅಲಂಕಾರತಿಲಕ, ರುಕ್ಮಿಣೀಪರಿಣ ಯಾದಿ ಗ್ರಂಥಕಾರನಾದ ಅಪ್ಪಯ್ಯದೀಕ್ಷಿತನಮಗ 'ದುರೂಹಶಿಕ್ಷಾ'$ ಗ್ರಂಥಕಾರ ಭೂಮಿದೇವಿಯಮಗನಾದ ಅಪ್ಪಯ್ಯದೀಕ್ಷಿತನಿಂದ ವಿರಚಿತ ವಾದ............ಎಂದಿರುವುದರಿಂದ ತಂತ್ರಸಿದ್ಧಾಂತ ದೀಪಿಕಾಕಾರನು ಮೂರನೆಯ ಅಪ್ಪಯ್ಯದೀಕ್ಷಿತನೆಂಬುದು ಸಿದ್ಧವಾಗುತ್ತದೆ.

ತಂತ್ರಸಿದ್ಧಾಂತ ದೀಪಿಕಾಕಾರನ ನಿಜವಾದ ಹೆಸರು ಚಿನ್ನಪ್ಪಯ್ಯನೆಂದೂ ಯೋ ನಾರಾಯಣದೀಕ್ಷಿತಾನುಜವರಾ ಯೋಽಪ್ಪಯ್ಯನಾಮ್ನೋಽ ಭವದ್ದತ್ತೋಽಪ್ಪಾ (ಯ್ಯಾ) ಮಖಿನೋಽನುಜಃ ಕವಿವರಶ್ಚಿನ್ನಪ್ಪಯ್ಯಾಖ್ಯಃ ಸುಧೀಃ§

ಎಂದಿರುವುದರಿಂದ ಇವನು ಆಚ್ಚಾದೀಕ್ಷಿತನ ಜ್ಯೇಷ್ಠಪುತ್ರ ನಾರಾಯಣ ದೀಕ್ಷಿತನ ಮೂರನೆಯ ಮಗನೆಂದೂ, ಆಚ್ಚಾದೀಕ್ಷಿತನ ಎರಡನೆಯ ಮಗ ಅಪ್ಪ ಯ್ಯದೀಕ್ಷಿತನದತ್ತು ಮಗನೆಂದೂ ವೀರರಾಘವ ಕವಿಯು ಒಕ್ಕಣಿಸಿರುವನು.† ಗ್ರಂಥಕಾರ ಮೂರನೆಯ ಅಪ್ಪಯ್ಯದೀಕ್ಷಿತನ ದತ್ತುತಂದೆಯಾದ ಎರಡನೆಯ ಅಪ್ಪಯ್ಯದೀಕ್ಷಿತನು ರುಕ್ಮಿಣೀಪರಿಣಯವನ್ನು ಬರೆದಿರುವುದಾಗಿ ಮಹಾಕವಿದೀಕ್ಷಿತ

* Vide P. P 148, 167 ವಿಧಿರಸಾಯನ Chowkamba Edition Benares.

$ ಪೂರ್ವಮೀಮಾಂಸಾಶಾಸ್ತ್ರದ ಮೇಲೆ ಬರೆದಿರುವ ಮೀಮಾಂಸಾಶಾಸ್ತ್ರಗ್ರಂಥ. ಇದನ್ನು ಕವಿಯು ಚಿತ್ರಾಧಿಕರಣದಲ್ಲಿ ಹೇಳಿಕೊಂಡಿರುವನು.

§ ವೀರರಾಘವಕೃತ ಅಚ್ಚಾದೀಕ್ಷಿತವಂಶಾವಳೀಶ್ಲೋಕ ೧೧೯

† Journal of Oriental research Vol 2 P. 247-250

ನೀಲಕಂಠನು ಬರೆದುದಾದ ನಳಚರಿತನಾಟಕದ$ಪ್ರಸ್ತಾವನೆಯಿಂದ ನಿರ್ಧರಿಸ ಬಹುದಾಗಿದೆ:—

ಸೂತ್ರಧಾರಃ:—ನವನಿರ್ವರ್ತ್ತಿತಂ ನಲಚರಿತ್ರಂನಾಮ ನಾಟಕಂ, ಕವಿರಪಿ ತಸ್ಯಜಗದ್ವಿದಿತಏವ,

ಪಾರಿಪಾರ್ಶ್ವಕಃ:—ಆಃ ಸರುಕ್ಮಿಣೀಪರಿಣಯಸ್ಯಾಪಿ ಪ್ರಣೇತಾ !

ಸೂತ್ರಧಾರಃ—(ವಿಹಸ್ಯ)ನ ಹಿ ನಹಿ ಅಸ್ಯ ಖಲು ಪಿತೃವ್ಯೋಽಯಮಪ್ಪಯ ದೀಕ್ಷಿತೋ ನಾಮಸರಸಕವಿತಾಸಾಮ್ರಾಜ್ಯಸಾರ್ವಭೌಮಸ್ತತ್ಪ್ರಣೇತಾ ಅಯಂ ತು ಮುಕುಂದವಿಲಾಸಸ್ಯಕಾವ್ಯಸ್ಯ ನಿಬಂಧಾ ಎಂದಿದೆ.

ತಂತ್ರಸಿದ್ಧಾಂತದೀಪಿಕೆಯು ಪ್ರಾಯಃ ಒಂದನೆಯ ಅಪ್ಪಯ್ಯದೀಕ್ಷಿತನ ಮತ ವನ್ನು ಖಂಡಿಸಿ ಹೇಳುವ ನೂತನ ಮೀಮಾಂಸಾಶಾಸ್ತ್ರಕಾರರ ಮತವನ್ನು ಖಂಡಿಸಿ ಹೇಳುವುದಕ್ಕಾಗಿ ಬರೆದಿರಬೇಕಾಗಿ ತೋರುತ್ತದೆ.

ತಂತ್ರಸಿದ್ಧಾಂತದೀಪಿಕಾಕಾರನ ವಂಶಾವಳಿಯು ಹೀಗಿರುವುದು. (ಪಕ್ಕದ ಪುಟವನ್ನು ನೋಡಿ.)

ತಂತ್ರಸಿದ್ಧಾಂತದೀಪಿಕಾಕಾರನಾದ ಮೂರನೆಯ ಅಪ್ಪಯ್ಯದೀಕ್ಷಿತನು ಗ್ರಂಥಾರಂಭದಲ್ಲಿ:—

"ಅಪ್ಪಯ್ಯದೀಕ್ಷಿತೇಂದ್ರಾನಶೇಷ ವಿದ್ಯಾಗುರೂನಹಂವಂದೇ"

ಎಂದು ತನ್ನ ಪಿತಾಮಹನನ್ನು ಸ್ತುತಿಸಿರುವುದು ಯೋಗ್ಯವಾಗಿದೆ. ಇದನ್ನು ಬಿಟ್ಟು ಭಟ್ಟೋಜಿಯು ಬರೆದುದೆಂದು ಹೇಳುವುದು ಸರ್ವಥಾ ಸರ್ವಸಮ್ಮತ ವಾಗದು.



$ Nalacharitanataka, Balamanorama Press Edition P. 3.

"ತಂತ್ರಸಿದ್ಧಾಂತದೀಪಿಕಾ" ಕಾರನು ಒಂದನೆಯ ಅಪ್ಪಯ್ಯದೀಕ್ಷಿತನ ಮುಮ್ಮಗನೆಂಬುದು ಈ ವಂಶಾವಳಿಯಿಂದ ಗೊತ್ತುಮಾಡಬಹುದಾಗಿದೆ. §




(*ಇವನೇ ಮೇಲೆ ಹೇಳಿದ ೨ನೆಯ ಅಪ್ಪಯ್ಯದೀಕ್ಷಿತನ ದತ್ತುಪುತ್ರ. ಇವನೇ ತಂತ್ರಸಿದ್ಧಾಂತದೀಪಿಕೆಯ ಗ್ರಂಥಕಾರ.)

§ Journal of oriental Research Madras Vol. II P. 249.

## ರಾ ಜ ನಾ ಥ

ಇವನು ಅರುಣಗಿರಿನಾಥನ ಮಗನು. ಬ್ರಾಹ್ಮಣನು ಎಂಬದು ಹೊರ್ತು ಇತರ ವಿಚಾರಗಳು ತಿಳಿಯವು.

**ಕಾಲ:**—ಇವನು ಕ್ರಿ. ಶ. ೧೫೩೦-೧೫೪೨ ರವರೆಗೆ ವಿಜಯನಗರದಲ್ಲಿ ಆಳಿದ ಅಚ್ಯುತರಾಯನ ಆಶ್ರಯದಲ್ಲಿದ್ದವನೆನ್ನಬಹುದಾದುದರಿಂದ ಇವನು ಕ್ರಿ. ಶ. ೧೬ನೆಯ ಶತಮಾನದವನು.

**ಗ್ರಂಥ:**—ಇವನು ೧೨ ಸರ್ಗಗಳಲ್ಲಿ ಬರೆದಿರುವುದಾಗಿ ಹೇಳುವ "ಅಚ್ಯುತ ರಾಯಾಭ್ಯುದಯು" ಎಂಬ ಕಾವ್ಯದ ಆರುಸರ್ಗಗಳು ಪ್ರಕೃತ ಅಚ್ಚಾಗಿ ದೊರೆಯು ವುವು. ಗ್ರಂಥವು ಅಚ್ಯುತರಾಯನ ವಂಶಾವಳಿಯನ್ನು ಮೊದಲು ಮಾಡಿಕೊಂಡು ಅವನ ದಿಗ್ವಿಜಯವಿಚಾರಗಳನ್ನು ಹೇಳುವುದಾಗಿದೆ. ಅದು ಹೀಗಿರುವುದು:—

ವಿಜಯನಗರವನ್ನಾಳಿದ ತುಳುವ ಅರಸರಲ್ಲಿ 'ತಿಮ್ಮ' ಎಂಬವನು ಮುಖ್ಯನು. ಇವನು 'ದೇವಕಿ' ಎಂಬವಳಲ್ಲಿ ಈಶ್ವರನೆಂಬ ಮಗನನ್ನು ಪಡೆದನು. ಈಶ್ವರನು ಕಾಲ ಕ್ರಮದಲ್ಲಿ ವಿವಾಹಿತನಾಗಿ ಬುಕ್ಕಮ್ಮ ಎಂಬವಳಲ್ಲಿ ನರಸಿಂಹ ಮತ್ತು ತಿಮ್ಮನೆಂಬ ರಾಜಕುಮಾರರನ್ನು ಪಡೆದನು. ಮೊದಲನೆಯವನಾದ ನರಸಿಂಹನು ಚಕ್ರವರ್ತಿ ಯೆನಿಸಿಕೊಂಡು ಮಾನವದುರ್ಗದ ಕೋಟೆಯನ್ನು ಹಿಡಿದು ಅಲ್ಲಿದ್ದ ನಿಜಾಮ ನನ್ನು ಪರಾಜಿತನನ್ನಾಗಿ ಮಾಡಿ, ಶರಣುಬಂದ ಅವನಿಗೆ ಪುನಃ ಕೋಟೆಯನ್ನು ಬಿಟ್ಟುಕೊಟ್ಟು ಶ್ರೀರಂಗಪಟ್ಟಣವನ್ನು ಜೈಸಿ ಮಾರವರನ್ನು ಸ್ವಾಧೀನಪಡಿಸಿಕೊಂಡು ಮಧುರೆಯ ಕೋನೇಟಿ ರಾಜನನ್ನು ನಿರ್ನಾಮಮಾಡಿ ಕೊನೆಗೆ ವಿಜಯನಗರವನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಇವನಿಗೆ ಮೂವರು ರಾಣಿಯರು. ಮೂವರು ರಾಣಿಯರಿಗೂ ಮೂರುಜನ ಮಕ್ಕಳು. ಕ್ರಮಶಃ ಈ ಮೂವರೂ ರಾಜ ರಾಗಿ ರಾಜ್ಯವಾಳಿದರು. ಇವರಲ್ಲಿ ಕೊನೆಯವನು. ಅಚ್ಯುತರಾಯ. 'ವರದಾಂಬಾ' ಎಂಬವಳೇ ಈತನ ಗೃಹಿಣಿ. ಅಚ್ಯುತರಾಯನು ರಾಜನಾಗಿ ತನ್ನ ಮಗನಾದ ಚಿನ್ನ ವೆಂಕಟಾದ್ರಿಗೆ ಯುವರಾಜ ಪದವಿಯನಿತ್ತನು. ಇವನ ವಂಶಾವಳಿಯನ್ನು ಹೀಗೆ ಹೇಳಬಹುದು:—

ತಿಮ್ಮ + ದೇವಕಿ
|
ಈಶ್ವರ + ಬುಕ್ಕಮ್ಮ
|
ನರಸ ಅಥವಾ ನರಸಿಂಹ + ತಿಪ್ಪಾಂಬಾ, ನಾಗಾಂಬಾ, ಓಬಮಾಂಬಾ.
(ಸುಮಾರು ಕ್ರಿ. ಶ. ೧೪೯೮ರಲ್ಲಿ ಸಿಂಹಾಸನವನ್ನು ತೆಗೆದುಕೊಂಡನು.)

| ತಿಪ್ಪಾಂಬಾಗರ್ಭಸಂಭೂತ | ನಾಗಾಂಬಾಗರ್ಭಸಂಭೂತ | ಓಬಮಾಂಬಾಗರ್ಭಸಂಭೂತ |
|---|---|---|
| ವೀರನೃಸಿಂಹರಾಯ | ಕೃಷ್ಣರಾಯ | ಅಚ್ಯುತರಾಯ<br>+ ವರದಾಂಬಾ<br>(ಕ್ರಿ. ಶ. ೧೫೩೦—೧೫೪೨)<br>\|<br>ಚಿನ್ನವೆಂಕಟ (ವೆಂಕಟಾದ್ರಿ) |

ಅಚ್ಯುತರಾಯನು ಸಕಲಸಾಮಂತ ಪರಿವೃತನಾಗಿ ಒಡ್ಡೋಲಗವನ್ನು ಕೊಡುತ್ತಿರುವಾಗ ಮುಖ್ಯಾಮಾತ್ಯನು ಎದ್ದುಬಂದು ಪರಾಕು ! ಜೀಯಾ! ಚೋಳ ರಾಜನು ಯಾವುದೋ ಸಂಧಿಕಾರ್ಯಕ್ಕಾಗಿ ತನ್ನ ರಾಜ್ಯವನ್ನು ಬಿಟ್ಟು ನ್ಯಾಯ ವಿಹೀನನಾಗಿ ಪಾಂಡ್ಯರಾಜನ ರಾಜ್ಯವನ್ನು ಕಸಿದುಕೊಂಡ ಚೇರರಾಜನ ಆಶ್ರಯ ವನ್ನು ಹೊಂದಿರುವುದಾಗಿ ಬಿನ್ನವಿಸಿದುದನ್ನು ಕೇಳಿ ಒಂದಾನೊಂದು ಶುಭ ಮುಹೂರ್ತದಲ್ಲಿ ಸಸೈನ್ಯನಾಗಿ ಹೊರಟು ದಕ್ಷಿಣಾಭಿಮುಖವಾಗಿ ಪ್ರಯಾಣಮಾಡಿ ಚಂದ್ರಗಿರಿಯನ್ನು ಸೇರಿ ಅಲ್ಲಿಂದ ತಿರುಪತಿಯನ್ನು ಹೊಕ್ಕು ಅಲ್ಲಿ ಕೆಲವುದಿವಸ ಗಳಿದ್ದು ಶ್ರೀನಿವಾಸನಂ ಸೇವಿಸಿ ಅನಂತರ ಕಾಳಹಸ್ತಿ, ವಿಷ್ಣುಕಂಚಿ, ತಿರುವಣ್ಣಾ ಮಲೆಯ ಮೂಲಕ ಶ್ರೀರಂಗಕ್ಕೆ ಬಂದು ಅಲ್ಲಿ ತನ್ನ ಪಾಳಯವನ್ನು ಹೊಡಿ ಚೇರ ರಾಜನನ್ನು ದಂಡಿಸುವುದಕ್ಕೆ ಸಾಕಾದಷ್ಟು ಸೈನ್ಯವನ್ನು ಕೊಟ್ಟು ತನ್ನ ಮೈದುನ ನನ್ನು ಕಳುಹಿಸಿದನು. ಅದರಂತೆ ಸಲಗರಾಜನ ಕುವರನು ರಾಜಾಜ್ಞೆಯಂ ಶಿರಸಾ ವಹಿಸಿ ಮಧುರೆಯುಮೂಲಕ ತಾಮ್ರ ಪರ್ಣೀನದಿಯ ದಡದಲ್ಲಿಳಿದುಕೊಂಡು ಚೇರರಾಜನಮೇಲೆ ದಂಡೆತ್ತಿ ಹೋಗಲು ತನ್ನ ಸೈನ್ಯಾಧಿಕಾರಿಯನ್ನು ಕಳುಹಿಸಿದನು. ಇದನ್ನು ಚಾರರಮುಖದಿಂದ ಕೇಳಿದ ತಿರುವಾಂಕೋಡು ರಾಜನು (ಇವನಿಗೆ ತಿರುವಡಿಯೆಂಬ ಬಿರುದು) ವಿಜಯನಗರದ ಸೈನ್ಯವನ್ನೆದುರಿಸಲು ಸೈನ್ಯದೊಡನೆ ಸುಸಜ್ಜಿತನಾಗಿ ತಾಮ್ರ ಪರ್ಣೀನದಿಯ ದಡದಲ್ಲಿ ಬಂದುನಿಂತನು. ಯುದ್ಧವು ನಡೆದುದು. ವಿಜಯನಗರದ ಸೈನ್ಯವು ಗೆದ್ದುದು. ಇದನ್ನು ತಿಳಿದಕೂಡಲೇ ಚೇರರಾಜನು ಪರಾಜಯವನ್ನು ಒಪ್ಪಿಕೊಂಡು ಕೂಡಲೆ ತನ್ನ ಬಳಿಯಲ್ಲಿದ್ದ ಚೋಳರಾಜನನ್ನು ಸಲಗರಾಜ ಕುಮಾರನಿಗೆ ಒಪ್ಪಿಸಿ ಶರಣಾಗತನಾಗಲು, ಸಲಗ ರಾಜಕುಮಾರನು ಅವನನ್ನು ಮನ್ನಿಸಿ ಅವನಿಂದ ಕಿತ್ತುಕೊಂಡ ರಾಜ್ಯಗಳನ್ನು ಪುನಃ ಅವನಿಗೆ ಕೊಟ್ಟು ಅನಂತರ ಪದ್ಮನಾಭನ ದರ್ಶನೋತ್ಸುಕನಾಗಿ ಮಲಯ ಪರ್ವತದ ಸಾನುಪ್ರದೇಶವನ್ನು ಸೇರಿದನು ಎಂಬುದು ಪ್ರಕೃತ ದೊರೆತಿರುವ ಅಚ್ಯುತರಾಯಾಭ್ಯುದಯದ ಆರುಸರ್ಗದ ಕಥೆಯ ತಿರುಳು, ಚಾರಿತ್ರಕ ದೃಷ್ಟಿಯಿಂದ ಈ ಗ್ರಂಥವು ಹೆಚ್ಚಿನದೆಂದು ಹೇಳಬಹುದಾದರೂ ಇತರ ವಿಚಾರಗಳಲ್ಲಿ ಸಾಧಾರಣ ವಾಗಿರುವುದೆಂದು ಹೇಳುವುದರಿಂದ ಕೊರತೆಯಾಗದು. ವಿಜಯನಗರದ ಅರಸ ಮುಖ್ಯನಾದ ಕೃಷ್ಣರಾಯನ ವೈಭವ ಪರಾಕ್ರಮಾತಿಶಯಗಳನ್ನು ಹೇಳಿಕೇಳಿ ಬಹು ತರ ಬರೆದಿಟ್ಟಿರುವ ಕಾವ್ಯ ಕಥೆಗಳನ್ನೋದಿ ಈಗಣ ಪರಿಸ್ಥಿತಿಯಂ ನೆನಿಸಿಕೊಂಡು ಕಣ್ಣೀರಿಡದ ಕನ್ನಡಿಗರಿಲ್ಲ. ಅವನ ವೈಭವಕ್ಕೆ ತಲೆದೂಗದ ಅನ್ಯದೇಶೀಯರಿಲ್ಲ. ಸರ್ವಭಾಷಾಶ್ರಯನಾಗಿದ್ದ ಅವನ ಕಲಾಪೂರ್ಣತೆಯನ್ನು ಮೆಚ್ಚಿನೆಚ್ಚಿ ನಲಿ ದಾಡದ ಭಾರತೀಯರಿಲ್ಲವಾದರೂ, ಅಚ್ಯುತರಾಯನ ವಿಚಾರವಾಗಿ ಹೇಳುವ ಕಾವ್ಯ

ಗಳೂ ಕಥೆಗಳೂ ಅತಿವಿರಳ ಅಥವಾ ಇಲ್ಲವೆಂದರೂ ಸಲ್ಲುವುದು. ಈ ದೃಷ್ಟಿಯಲ್ಲಿ ಅಚ್ಯುತರಾಯಾಭ್ಯುದಯವು ಮುಖ್ಯವೆನ್ನಬಹುದು. ರಾಜನಾಥಕವಿಯ ಶೈಲಿಯು ಮಧುರ ಮತ್ತು ಅತಿಸರಳ. ಆದುದರಿಂದಾಗಿ ಕೆಲವು ಶ್ಲೋಕಗಳನ್ನಿತ್ತು ಬರೆಯುವೆವು.

ಅಭಿಶಂಕ್ಯ ಪಂಕಜಮಮುಷ್ಯ ಮುಖಂ
ಗರುತೋ ವಿತತ್ಯ ಗಗನೇ ವಲತಃ
ವಿಜಹಾಸ ಹಂಸಮಿಥುನಸ್ಯ ವಿಭಾಂ
ವಿಶದಾತಪತ್ರಯುಗಲೀ ನೃಪತೇಃ ‖ ೫-೭

ಅಚ್ಯುತರಾಯನು ನಗರದಿಂದ ಹೊರಟ ಸಮಯದಲ್ಲಿ ಅವನಿಗೆ ಇರ್ಕಡೆಗಳಲ್ಲಿ ಹಿಡಿದಿದ್ದ ಶ್ವೇತಚ್ಛತ್ರವನ್ನು ನೋಡಿ ಆಕಾಶದಲ್ಲಿ ಸಂಚರಿಸತಕ್ಕ ಹಂಸಮಿಥುನವು ಅಚ್ಯುತರಾಯನ ಮುಖವನ್ನು ಪಂಕಜವೆಂದು ಭ್ರಾಂತಿಪಟ್ಟು ತಮ್ಮ ರೆಕ್ಕೆಗಳನ್ನು ಹರಡಿಕೊಂಡಿರುವಂತೆ ಕಾಣುತ್ತಿರುವುದು.

ಶ್ರವಣೇ ಕಥಾಸ್ಯ ನಯನಂ ಚ ಮನ
ಶ್ಚರಣೇ ಶಿರಃ ಸ್ವಯಮಲಂಕುರುತಃ
ಇತಿ ಕುಂಡಲಂ ಪದಕಮೇಷ ಹರೇಃ
ಕಿಮಿಹಾರ್ಪಯನ್ಮಣಿಕಿರೀಟಮಪಿ ‖ ೫-೪೨

ಹರಿಯ (ವಿಷ್ಣುವಿನ) ಪುಣ್ಯಚರಿತೆಯ ಶ್ರವಣವು ಕರ್ಣಗಳನ್ನೂ, ಧ್ಯಾನವು ವಕ್ಷಸ್ಥಲ (ಹೃದಯ) ವನ್ನೂ, ಚರಣವು ತನ್ನ (ಅಚ್ಯುತರಾಯನ) ಶಿರಸ್ಸನ್ನೂ ಅಲಂಕರಿಸುವುದಾಗಿ ತಿಳಿದು ವಿಷ್ಣುವಿಗೆ ಕರ್ಣಾಭರಣವಾದ ಕುಂಡಲವನ್ನೂ, ಕಂಠ ಭೂಷಣವಾದ ಪದಕವನ್ನೂ, ರತ್ನಖಚಿತವಾದ ಕಿರೀಟವನ್ನೂ ಅರ್ಪಿಸಿದನು.

ಆವಾಸಭೂಸ್ತುಲಕದಗ್ಧಮಹಾಂಬುರಾಶೇ
ಕಂದರ್ಪಮುಖ್ಯಹಯರತ್ನಖನಿಃ ಸುಮೇಷೋಃ
ಸಾಮ್ರಾಜ್ಯಭೂರಗರುಚಂದನವಾಟಿಕಾಯಾ
ಮಾರ್ಗೇಽಜನಿಷ್ಟ ಮಲಯಾದ್ರಿರಮುಷ್ಯ ದೃಷ್ಟ್ಯೋಃ ‖ ೬-೩೩

ಅಚ್ಯುತರಾಯನು, ಸಮುದ್ರವನ್ನು ಚುಲಕ (ಬೊಗಸೆಯ) ದಲ್ಲಿ ಪಾನ ಮಾಡಿದ ಅಗಸ್ತ್ಯಮುನಿಯ ವಾಸಸ್ಥಾನವಾಗಿಯೂ, ಕಬ್ಬುವಿಲ್ಲನ (ಕಾಮನ) ಹಯ (ಮಲಯಾನಿಲಕ್ಕೆ ಜನ್ಮಭೂಮಿಯಾಗಿ) ನಿಧಿಪ್ರಾಯವಾಗಿಯೂ, ಅಗರು ಚಂದನ ಮುಂತಾದವುಗಳಿಗೆ ಉತ್ಪತ್ತಿಸ್ಥಾನವಾಗಿಯೂ ಇರುವ ಮಲಯಪರ್ವತ ವನ್ನು ನೋಡಿದನು

# ಗೋ ಕು ಲ ನಾ ಥ

ಇವನು 'ಫಣದಹನ' ಎಂಬ ಮೈಥಿಲೀಯ ಬ್ರಾಹ್ಮಣನು. 'ಮಂಗರೌನಿಗ್ರಾ' ಎಂಬುದು ಇವನ ಗ್ರಾಮ. ತಂದೆಯ ಹೆಸರು ಪೀತಾಂಬರ. ತಾಯಿಯ ಹೆಸರು ಉಮಾ ಎಂದು. ಇವನಿಗೆ ತಾರ್ಕಿಕಶಿರೋಮಣಿ, ಉಪಾಧ್ಯಾಯ ಎಂಬಾ ಪರನಾಮಗಳಿದ್ದುವಲ್ಲದೆ, ಮಹಾಮಹೋಪಾಧ್ಯಾಯನೆಂಬ ಬಿರುದು ಇದ್ದುದಾಗಿ "ತಾರ್ಕಿಕಶಿರೋಮಣಿರುಪಾಧ್ಯಾಯಾಪರನಾಮಕೋ ಮಹಾಮಹೋಪಾಧ್ಯಾಯ ಪದಭೂಷಿತಃ ಶ್ರೀಮದ್ಗೋಕುಲನಾಥಶರ್ಮಾ ಫಣದಹನಾಮಕೇ ಮೈಥಿಲ ಬ್ರಾಹ್ಮಣ ವಂಶೇ ಪ್ರಸಿದ್ಧತಮೇ ಮಂಗರೌನೀತ್ಯಾಖ್ಯಗ್ರಾಮೇ..........ಅಸೀಮ ವಿದ್ಯಾನಿಧಿ ಮಹಾಮಹೋಪಾಧ್ಯಾಯ ಶ್ರೀಮತ್ಪೀತಾಂಬರಶರ್ಮಣ ಉಮಾದೇವ್ಯಾ ಲಂಬಿ" ಎಂಬುದರಿಂದ ಗೊತ್ತಾಗುತ್ತದೆ. *

**ಕಾಲ:**—ಇವನ ಕಾಲದಲ್ಲಿ ರಾಘವಸಿಂಹದೇವನು ಮಿಥಿಲಾಧಿಪತಿಯಾಗಿದ್ದನು. ಇವನು ಕ್ರಿ. ಶ. ೧೭ನೆಯ ಶತಮಾನದವನು ಅಲ್ಲದೆ:—

"ಸಚಾಯಂ ವಿದ್ವದಗ್ರಣೀಃ ಶ್ರೀನಗರೇ ಚಂದ್ರಶೇಖರ ಸುಂದರೀಚರಣಾರವಿಂದಮಕರಂದೇಂದಿರಾ ವಿಲಾಸಮಂದಿರಾಣಾಮರಿವಾರಿಧಿಮಥನಮಂದರಾಣಾಂ, ಫತ್ತೇಸಾಹಾಭಿಧನೃಪವರಾಣಾಂ ರಾಜಧಾನ್ಯಾಂ ಗುರುರಿವ ನಿವಸನ್ವಾದಿವೃಂದೈರಸಮಾಧೇಯಾನ್ ಬಹುವಿಧಾನ್ ಗ್ರಂಥಾನ್ ಕೃತವಾನ್ ದರ್ಶನೇ ಸ್ಮೃತೌ ಸಾಹಿತ್ಯೇ ಚ ಯಾನದ್ಯಾಪಿ ಮೈಥಿಲಾಃ ಸ್ವರ್ಗೈರವಂ ಪಠಂತಿ ಪಾಠಯಂತಿಚ ||

ಎಂದು ಹೇಳಲ್ಪಟ್ಟಿರುವುದರಿಂದ ಇವನು ಕಾಶ್ಮೀರದಲ್ಲ ಆಳಿದ ಫತ್ತೇಷಪನೆಂಬ ರಾಜನ ರಾಜಧಾನಿಯಲ್ಲಿ ಗುರುವಾಗಿದ್ದು, ಸ್ಮೃತಿ, ಸಾಹಿತ್ಯದಲ್ಲಿ ಗ್ರಂಥಗಳನ್ನು ಬರೆದಿರುವುದಾಗಿಯೂ, ಗ್ರಂಥಕಾರನು ಕೀರ್ತಿಶೇಷನಾಗಿ ಎಷ್ಟೋ ಶತಮಾನಗಳು ಕಳೆದು ಹೋಗಿರುವುದಾದರೂ ಈ ಹೊತ್ತಿಗೂ ಗೋಕುಲನಾಥಕೃತ ಗ್ರಂಥಗಳನೇಕಗಳ ಪಾಠಪ್ರವಚನಗಳು ಮಿಥಿಲೆಯಲ್ಲಿ ನಡೆಯುತ್ತಿರುವುವಾಗಿ ಹೇಳಿರುವುದರಿಂದಲೂ, ಫತ್ತೇಷಹರಾಜನು ಕ್ರಿ. ಶ. ೧೭ನೆಯ ಶತಮಾನದಲ್ಲಿದ್ದವನೆಂದು ತಿಳಿಯಬರುವುದರಿಂದಲೂ ಗ್ರಂಥಕಾರನು ಕ್ರಿ. ಶ. ೧೭ನೆಯ ಶತಮಾನದವನು ಎಂದು ನಿರ್ಧರಿಸಬಹುದಾಗಿದೆ.

**ಗ್ರಂಥಗಳು:**—

೧. ಚಕ್ರರಶ್ಮಿಃ ತತ್ತ್ವಚಿಂತಾಮಣಿ ಟೀಕಾ
೨. ಪದವಾಕ್ಯರತ್ನಾಕರಃ

* ಅಮೃತೋದಯಭೂಮಿಕಾ ಪುಟ. ೧

೩. ದಿಕ್ಕಾಲನಿರೂಪಣಂ
೪. ಮಿಥ್ಯಾತ್ವನಿರ್ವಚನಂ
೫. ಕುಸುಮಾಂಜಲಿ ಟಿಪ್ಪಣಿ
೬. ಕಾವ್ಯಪ್ರಕಾಶ ಟೀಕಾ
೭. ಕುಂಡಕಾದಂಬರೀ
೮. ದ್ವೈತನಿರ್ಣಯಟೀಕಾ ಕಾದಂಬರೀನಾಮ್ನಾ
೯. ಕಾದಂಬರೀ ಪ್ರಶ್ನೋತ್ತರಾಣಿ
೧೦. ಏಕಾವಳೀ
೧೧. ಕಾದಂಬರೀ ಕೀರ್ತಿಶ್ಲೋಕಾಃ
೧೨. ಶಿವಸ್ತುತಿ
೧೩. ಅಮೃತೋದಯ

ಇವನು ಬರೆದುದಾದ ಏಕಾವಳಿಯಲ್ಲಿ:—

ವೃತ್ತಸಾಗರರತ್ನಾನಾಂ ಸಾರಮುದ್ಧೃತ್ಯ ನಿರ್ಮಿತಾ
ಏಕಾವಳೀಫತೇಸಾಹ ತವ ಕಂಠೇಲುರತ್ವಸೌ ||
ವಿದ್ಯಾನಿಧಿಕ್ಷೀರಧಿಪಾರಿಜಾತಮುಮಾಸುತಂಗೋಕುಲನಾಥಧೀರಂ
ಏಕಾವಳೀಸಂಘಟನಾ ನಿವೇಶೀನ್ಯಯುಂಗ್ತ ಫತ್ತೇಪತಿಸಾಹಭೂಪಃ ||

ಎಂದು ಹೇಳಿಕೊಂಡಿರುವನು.

ಇವನಿಗೆ ಕಾದಂಬರೀ ಎಂಬ ಮಗಳೊಬ್ಬಳು ಇದ್ದುದಾಗಿಯೂ, ಚಿಕ್ಕತನದಲ್ಲಿಯೇ ಗಂಗಾಸಮಾಧಿಯನ್ನು ಹೊಂದಿದಳಾದುದರಿಂದ ಅವಳ ಮೇಲಣ ವಾತ್ಸಲ್ಯಾತಿಶಯದಿಂದ ಅವಳ ಹೆಸರಿನಲ್ಲಿ ಅನೇಕ ಗ್ರಂಥಗಳನ್ನು ಬರೆದಿರುವುದಾಗಿ "ಅಸ್ಯ ಚ ಕಾದಂಬರೀ ನಾಮ್ನ್ಯೇಕಾ ದುಹಿತಾಸೀತ್ | ಸಾ ಚ ದೈವವಶಾದ್ಬಾಲ್ಯ ಏವ ಜಾಹ್ನವೀ ಜಲೇನಿಮಗ್ನಾ ಸತೀ ವಿಗತಾಸುರ್ಬಭೂವ | ತದ್ವಾತ್ಸಲ್ಯೇನ ತನ್ನಾಮ್ನಾ ಕತಿಪಯಗ್ರಂಥಾ ಅನೇನಿರ್ಮಿತಾಃ ಎಂದು ಹೇಳಿದೆ.

ಕುಂಡಕಾದಂಬರೀ ಭೂಮಿಕೆಯಲ್ಲಿ: —

ಆರಾಂಬಾವ ಪ್ರಕೃತಿಕೃಪಣಾ ಬಾಧಿಭಿರ್ನ್ಯಮಾನ್ಯೈ
ರ್ನಿಕ್ರೋಶಾರಃ ಕರುಣವಚನಂ ಪುತ್ರಿ ಕಾದಂಬರೀತಿ
ಕೋಽಯಂಲೋಕಃ ಕ ಇವವಿಷಯಃ ಕಿಂ ಪುರಂ ಕೋ ನಿವಾಸೋ
ಯಸ್ಮಿನ್ನಸ್ಮದ್ಧ್ವಿಮುಖಿಹೃದಯಾ ತ್ವಂ ನಿಲೀಯ ಸ್ಥಿತಾಸಿ ||
ಕುಂಡಕಾದಂಬರೀನಾಮಾ ಗ್ರಂಥೋಽಯಂ ತವ ಕೀರ್ತಯೇ
ಮಯಾ ಗೋಕುಲನಾಥೇನ ಸೋಪಪತ್ತಿರ್ನಿಬಧ್ಯತೇ ||

ಎಂದು ಹೇಳಲ್ಪಟ್ಟಿದೆ.

**ಅಮೃತೋದಯ:**—ಇದು ೫ ಅಂಕಗಳುಳ್ಳ ನಾಟಕ. ಕೃಷ್ಣಮಿಶ್ರನ ಪ್ರಬೋಧಚಂದ್ರೋದಯದ, ಶ್ರೀವೇಂಕಟನಾಥನ ಸಂಕಲ್ಪಸೂರ್ಯೋದಯದ ವರ್ಗಕ್ಕೆ ಸೇರಿದುದು. ಅದ್ವೈತವು ನಾಟಕಕಥಾವಸ್ತು. ಸಂಸಾರವೆಂಬ ನಾಟಕಕ್ಕೆ ಸೃಷ್ಟಿವ್ಯಾಪಾರವೇ ಅಂಗ, ಪ್ರಳಯವೇ ಅದರ ಉಪರಮ, ಜೀವನೇ ನಟನು, ಈ ಪ್ರಪಂಚವೇ ರಂಗಸ್ಥಳ, ಪ್ರಳಯಾನಂತರ ಜೀವವೆಂಬ ನಟನಿಗೆ ವೃತ್ತಿನಿರೋಧದ ಮೂಲಕ ನಿಷ್ಕಾಮವು ಉಂಟಾಗುವುದು, ಇವೇ ಮೊದಲಾದವನ್ನು ಹೇಳಿ ಸಮಾಧಿಯಲ್ಲಿ ಈಶ್ವರನ ಸಾಕ್ಷಾತ್ಕಾರವನ್ನು ಹೇಗೆ ಹೊಂದಬಹುದೆಂಬ ವಿಚಾರವನ್ನು ರೂಪಕದಲ್ಲಿ ಬರೆದು ತೋರಿಸಿರುವನು. ಗ್ರಂಥಾಂತ್ಯದಲ್ಲಿ ಭರತವಾಕ್ಯರೂಪವಾದ ಅಭವರ್ಗನ ಹೇಳಿಕೆಯು ಹೀಗಿರುವುದು:—

ಸಂಸಾರಾತ್ಪ್ರಾಪ್ಯ ನಿರ್ವೇದಂ ಸರ್ವೇ ನಿರ್ವಾಣಲಿಪ್ಸಯಾ
ಶ್ರವಣಾನ್ಮನನಾಧ್ಯಾನಾತ್ಪಶ್ಯಂತು ಪುರುಷೋತ್ತಮಂ ||

ಅತ್ಯಂತ ದುರವಗಾಹವಾದ ವಿಷಯವನ್ನು ಸಕಲರಿಗೂ ತಿಳಿಯುವಂತೆ ಬರೆಯುವ ದಕ್ಷತೆಯು ಸುಲಭಸಾಧ್ಯವಾದುದಲ್ಲ. ಈ ಗ್ರಂಥದ ವಿಚಾರವಾಗಿ ಕವಿಯು:—

ಲಲಿತಪದನಿಬದ್ಧಂ ಭಾವಗಾಂಭೀರ್ಯಗೂಢಂ
ಚರಮಚರಪದಾರ್ಥಾನ್ನಿರ್ಣಯಂತಂ ಮನೋಜ್ಞಂ
ಬಹುವಿಧಪರತತ್ತ್ವಂ ನಾಟ್ಯಕಾವ್ಯೋಪಬದ್ಧಂ
ಕಠಿನಮಪಿ ಸುಬೋಧಂ ಸಜ್ಜನಾ ವೀಕ್ಷಯಂತು

ಎಂದು ಹೇಳಿಕೊಂಡಿರುವುದು ಕಂಡುಬರುವುದು.

ಮಾದರಿಗಾಗಿ ಕೆಲವು ಶ್ಲೋಕಗಳು:—

ಕನ್ಯಾರತ್ನಂ ಹಯಪರಿವೃಢಂ ನಾಗರಾಜಂ ಮಣೀನಾಂ
ಶ್ರೇಷ್ಠಂ ದತ್ವಾ ವಿಬುಧಪರಿಷತ್ತೋಷಿತಾ ಸಾಗರೇಣ
ಧಿಗ್ದಾರಿದ್ರ್ಯಂ ಪರಿಭವಪದಂ ಯಸ್ಯ ದೋಷಾತ್ಪುರಾರೇ
ರ್ಮೂರ್ಧ್ನಿ ಕ್ಷಿಪ್ತೋ ವಿಬುಧವಿಘಸಗ್ರಾಸಪಿಂಡಸ್ಯ ಖಂಡಃ ೨೨.

(ಸಮುದ್ರಮಥನಕಾಲದಲ್ಲಿ) ಸಮುದ್ರರಾಜನಿಂದ ದೇವತೆಗಳು ಲಕ್ಷ್ಮಿ, ಉಚ್ಚೈಶ್ರವಸ್ಸು, ನಾಗರಾಜ, ಚಿಂತಾಮಣಿ (ಅವರವರಿಗೆ ಬೇಕಾದವು) ಗಳನ್ನು ಹೊಂದಿ ಸಂತೋಷಪಡಿಸಲ್ಪಟ್ಟರಾದರೂ, ಈಶ್ವರನ ದೋಷದಿಂದ ಚಂದ್ರಖಂಡವು (ಚಂದ್ರನ ಒಂದುಚೂರು ಮಾತ್ರವೇ) ಈಶ್ವರನ ತಲೆಯಲ್ಲಿಡಲ್ಪಟ್ಟಿತೋ ಅಂತಹ ದಾರಿದ್ರ್ಯಕ್ಕೆ ಧಿಕ್ಕಾರವಿರಲಿ.

ಜಾತಿಂ ವಿಹಾಯ ಕೆನಕೇ ರಸಕೇ ಪ್ರಸೂನಾಂ
ಭರ್ತಾ ಭಿಭರ್ತಿ ಶಿರಸಾ ಕೃಪಣಃ ಕಪರ್ದಂ
ರಜೇತಿ ವಕ್ರಶಶಿನಂ ತಿಲಕೀಕರೋತಿ
ತಸ್ಮಾದಸೌ ಪರಿಭವಾಸ್ಪದಮಾಶ್ರಿತೋಽಪಿ || ೩—೪.

ಈಶ್ವರನು (ಸುವಾಸನೆಯುಳ್ಳ) ಮಾಲತೀಕುಸುಮವನ್ನು ಬಿಟ್ಟು (ವಾಸನಾಹೀನವಾದ) ಇತರಕುಸುಮಗಳಲ್ಲಿ ಸಂತೋಷಿಸುತ್ತಾನೆ ಅಥವಾ ಜಾತಿವ್ಯವಹಾರವನ್ನು ಅನುಸರಿಸದೆ (ಎಂದರೆ ಇತರರಂತೆ ವಸನಭೂಷಿತನಾಗದೆ) ಸುವರ್ಣಾಜಿನದಲ್ಲಿ ಆಶೆಗೊಳ್ಳುತ್ತಾನೆ. ತಲೆಯಲ್ಲಿ ಜಟೆಯನ್ನೋ ಅಥವಾ ಕವಡೆಯನ್ನೋ ಧರಿಸುತ್ತಾನೆ. ರಾಜನೆಂದು ವಕ್ರಚಂದ್ರನನ್ನು ತಿಲಕವನ್ನಾಗಿ ಮಾಡಿಕೊಂಡಿರುತ್ತಾನಾದುದರಿಂದಲೇ ಈಶ್ವರನು ಲೋಕದಲ್ಲಿ ಪರಿಭವಾಸ್ಪದನಾಗಿರುವನಲ್ಲವೆ !

ಆನಂದೋದಯಮುಖಂಡಸುಂದರವಪುರ್ಮೂರ್ಖಸ್ಯ ಸಂಸಾರಿಣಃ
ಪ್ರಚ್ಛನ್ನೋ ವಸತಿ ಸ್ಮ ಯೇನ ಹಿ ನೃಣಾಂ ನಾಸೀದಸೌ ಗೋಚರಃ
ಸಂನ್ಯಾಸೇನ ಕೃತಾಕೃತೇಃ ಪ್ರಶಮಿತೇ ಜ್ಞಾನೇನ ಮೋಹೇ ಹತೇ
ಧನ್ಯೋಽನನ್ಯಧನೋ ನಿರಂತರಮಮುಂ ಮೋಕ್ಷಂ ಜನೋ ಭೋಕ್ಷ್ಯತೇ || ೫-೧೮

ಮೂರ್ಖನಾದ ಸಂಸಾರಿಯು ಶರೀರವು, ಆನಂದದಾಯಕವೆಂದು ತಿಳಿದು ಅದರಲ್ಲಿ ಗೋಪ್ಯವಾಗಿ ವಾಸಮಾಡುತ್ತಾನಾದುದರಿಂದಲೇ ಇವನು ಜನರಮನಸ್ಸಿಗೆ ಗೋಚರನಾಗುವುದಿಲ್ಲ. ಇದನ್ನು ಬಿಟ್ಟು ಸಂನ್ಯಾಸವನ್ನು ಸ್ವೀಕಾರಮಾಡಿ ಜ್ಞಾನಾರ್ಜನೆಯಿಂದ ಮೋಹವು ನಾಶಗೊಳಿಸಲ್ಪಟ್ಟುದಾದರೆ ಆಗ ಮನುಷ್ಯನು ಮತ್ತಾವ ವಿಧವಾದ ಪ್ರತ್ಯಾಶೆಯೂ ಇಲ್ಲದೆ ಮೋಕ್ಷವನ್ನು ಹೊಂದುತ್ತಾನೆ.

---

## ನಾ ರಾ ಯ ಣ ಭ ಟ್ಟ

ಇವನು ಕೇರಳೀಯ ಬ್ರಾಹ್ಮಣನು. ಮಾತೃದತ್ತನ ಮಗನು. 'ಮೆಪ್ಪತ್ತೂರು ಇಲ್ಲಂ' ಎಂಬ ಗ್ರಾಮದವನು. ಇದು ಉತ್ತರ ಮಲಬಾರಿನಲ್ಲಿ ನೀಲಾನದಿಯ ಉತ್ತರಕ್ಕಿರುವ 'ತಿರುನಾವಾ' ಎಂಬ ಪ್ರಸಿದ್ಧ ದೇವಾಲಯದ ಬಳಿಯಣ ಪೆರುಮನಂ ಎಂಬದಕ್ಕೆ ಸೇರಿದುದು ಇವನು ಆಗ ಪ್ರಸಿದ್ಧನಾಗಿದ್ದ 'ಅಚ್ಯುತ ಪಿಷರೋದಿ' ಎಂಬವನಲ್ಲಿ ವ್ಯಾಕರಣವೇ ಮೊದಲಾದವುಗಳನ್ನು ಕಲಿತನು. ಕಾಲಕ್ರಮದಲ್ಲಿ ಮಹಾಕವಿಯೆಂದು ಸಕಲರಿಂದಲೂ ಗೌರವಿಸಲ್ಪಡುತ್ತಿದ್ದುದನ್ನೂ ಅವನು ಬರೆದ ಗ್ರಂಥೋತ್ಕರ್ಷತೆಯನ್ನೂ ಕೇಳಿ 'ಅಂಬಲಪೂಷ' ಕ್ಕೆ ರಾಜನಾದ ದೇವನಾರಾಯಣನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಅವನಿಗೆ ಆಶ್ರಯ

ವನಿತ್ತನು. ಇವನು ಕೇಳಿಕೊಂಡಂತೆ 'ಪ್ರಕ್ರಿಯಾಸರ್ವಸ್ವ' ಎಂಬ ಮಹತ್ತರ ವ್ಯಾಕರಣಗ್ರಂಥವನ್ನು ಬರೆದುದಾಗಿ ಹೇಳಿದೆ. ಅಲ್ಲದೆ ಭಟ್ಟೋಜೀದೀಕ್ಷಿತನು ಇದನ್ನು ಕೊಂಡಾಡಿರುವುದಾಗಿಯೂ ಹೇಳಿದೆ.

**ಕಾಲ:—**ದೇವನಾರಾಯಣನು ಕ್ರಿ. ಶ. ೧೬ನೆಯ ಶತಮಾನದವನು. 'ನಾರಾಯಣೀಯಂ' ಎಂಬ ಗ್ರಂಥವನ್ನು ಬರೆದು ಮುಗಿಸಿದುದು ಕ್ರಿ. ಶ. ೧೫೯೦ ರಲ್ಲಿ. ಇದರಿಂದ ಇವನು ಕ್ರಿ. ಶ. ೧೬ನೆಯ ಶತಮಾನದ ಉತ್ತರಾರ್ಧದವನೆಂಬುದು ಸ್ಪಷ್ಟವಾಗುತ್ತದೆ.

ಗ್ರಂಥಗಳು:—

೧. ನಾರಾಯಣೀಯಂ
೨. ಮಾನಮೇಯೋದಯಃ
೩. ಪ್ರಕ್ರಿಯಾಸರ್ವಸ್ವಂ
೪. ಧಾತುಕಾವ್ಯಂ
೫. ಅಷ್ಟಮಿಚಂಪೂಕಾವ್ಯಂ
೬. ಕೈಲಾಸಶೈಲವರ್ಣನಾ
೭. ಅಹಲ್ಯಾಶಾಪಮೋಕ್ಷಃ
೮. ಪುಷ್ಪೋದ್ಭೇದಂ, ಇತ್ಯಮರುಕ ಶ್ಲೋಕವ್ಯಾಖ್ಯಾನಂ
೯. ಕೌಂತೇಯಾಷ್ಟಕಂ
೧೦. ಶೂರ್ಪಣಖಾಪ್ರಲಾಪಃ
೧೧. ರಾಮಕಥಾ
೧೨. ದೂತವಾಕ್ಯಪ್ರಬಂಧಃ
೧೩. ಪಾಂಚಾಲೀಚರಿತಂ
೧೪. ನೃಗಮೋಕ್ಷಪ್ರಬಂಧಃ
೧೫. ರಾಜಸೂಯಪ್ರಬಂಧಃ
೧೬. ಸುಭದ್ರಾಹರಣಪ್ರಬಂಧಃ
೧೭. ಸ್ವಾಹಾಸುಧಾಕರಂ
೧೮. ಕೋಟಿಯವಿರಹಃ ಸಂಗೀತಕೇತುಶೃಂಗಾರಲೀಲಾಚರಿತಂ.

**ನಾರಾಯಣೀಯಂ;—**ಇದು ಸ್ತುತಿಪರ ಗ್ರಂಥವೆನ್ನುವುದಾದರೂ ಕಾವ್ಯ ದೃಷ್ಟಿಯಿಂದ ಮಹಾಕಾವ್ಯವೆನ್ನಬೇಕಾಗುತ್ತದೆ. ಮಹಾಕಾವ್ಯಲಕ್ಷಣಗಳೆಲ್ಲವೂ ಇದರಲ್ಲಿ ಸಮಾವೇಶಗೊಂಡಿವೆ. ಶ್ರೀಮದ್ಭಾಗವತ ಕಥೆಯನ್ನು ಸಂಕ್ಷೇಪಿಸಿ ಪ್ರತಿ ಹತ್ತು ಶ್ಲೋಕಗಳಿಗೆ ಒಂದು ದಶಕವೆಂದು ಹೇಳಿ ಅಂತಹ ನೂರು ದಶಕಗಳನ್ನು

ಬರೆದಿರುವನು. ಒಟ್ಟು ೧೦೩೬ ಶ್ಲೋಕಗಳಿರುವುವು. ಇವನಿಗೆ ವಾತರೋಗ ಉಂಟಾಗಲು ಕಡುನೊಂದು ತನ್ನ ಕುಲದೇವನಾದ ನಾರಾಯಣನನ್ನು ಪ್ರಾರ್ಥಿಸಿ ಅದರಂತೆ ಗುಣವಾದನೆಂದೂ ಅದೇ ನೂರು ದಶಕಗಳನುಳ್ಳನಾರಾಯಣೀಯ ಗ್ರಂಥವೆಂದೂ ಕಥೆಯು ಇದೆ. ಈ ಕಡೆ ಭಾಗವತವು ಹೇಗೆ ಸರ್ವಾದರಣೀಯವೋ ಹಾಗೆ, ಈ ನಾರಾಯಣೀಯ ಗ್ರಂಥವು ಕೇರಳೀಯರಿಂದ ಮಾನ್ಯವಾಗಿದೆ. ಇದಕ್ಕೆ ದೇಶಮಂಗಲವಾರ್ಯಕೃತ 'ಭಕ್ತಿಪ್ರಿಯಾ' ಎಂಬ ವ್ಯಾಖ್ಯಾನವು ಇರುವುದು.

ಕಾರುಣ್ಯಾತ್ ಕಾಮಮನ್ಯಂ ದದತಿ ಖಲು ಪರೇ ಸ್ವಾತ್ಮದಸ್ತ್ವಂ ವಿಶೇಷಾ
ದೈಶ್ವರ್ಯಾದೀಶತೇಽನ್ಯೇ ಜಗತಿ ಪರಜನೇ ಸ್ವಾತ್ಮನೋಽಪೀಶ್ವರಸ್ತ್ವಂ
ತ್ವಯ್ಯುಚ್ಚೈರಾರಮಂತಿ ಪ್ರತಿಪದಮಧುರೇ ಚೇತನಾಃ ಸ್ಫೀತಭಾಗ್ಯಾ
ಸ್ತ್ವಂ ಚಾತ್ಮಾರಾಮ ಏವೇತ್ಯತುಲಗುಣಗುಣಾಧಾರ ! ಶೌರೇ ! ನಮಸ್ತೇ॥
ದಶಕ. ೧—೧೯.

ಎಲೈ ! ಕೃಷ್ಣಪರಮಾತ್ಮನೆ ! ಬ್ರಹ್ಮಾದಿ ದೇವತೆಗಳು ಮೋಕ್ಷವನ್ನು ಬಿಟ್ಟು ಬೇರೆ ಯಾವ ವರಗಳನ್ನಾದರೂ ಕೊಡಬಲ್ಲರು. ನೀನು ಮೋಕ್ಷವನ್ನೂ ಕೊಡುವವನಾಗಿರುತ್ತಿ. ಬ್ರಹ್ಮಾದಿಗಳು ಚರಾಚರವಸ್ತುಗಳಲ್ಲಿ ಮಾತ್ರ ನಿಗ್ರಹಾನುಗ್ರಹ ಶಕ್ತಿಯುಳ್ಳವರಾಗಿರುವರು. ನೀನಾದರೋ ಅಂತಹ ಬ್ರಹ್ಮನಿಗೂ ಈಶ್ವರನಾಗಿರುತ್ತೀ ಎಂದರೆ ನಿನ್ನನ್ನು ಜೀವರೂಪದಿಂದ ಸಂಸಾರಾರ್ಣವದಲ್ಲಿಟ್ಟು ನಿಗ್ರಹಿಸುವುದಕ್ಕೂ ತತ್ಸಮಕಾಲದಲ್ಲಿಯೇ ಸ್ವಾನಂದಾನುಭವದಲ್ಲಿಟ್ಟು ಅನುಗ್ರಹಿಸುವುದಕ್ಕೂ ಸಮರ್ಥನಾಗಿರುತ್ತೀ. ಜನ್ಮಜನ್ಮಾಂತರಗಳಲ್ಲಿ ಸಂಪಾದಿಸಲ್ಪಟ್ಟ ಭಕ್ತಿ ಮತ್ತು ಜ್ಞಾನಮಾರ್ಗವುಳ್ಳ ಜೀವರುಗಳು ಕರ್ಮಪರಿಪಾಕದಿಂದ ಕಂಡು ನಿನ್ನನ್ನು ಸಂತೋಷಿಸುತ್ತಾರೆ. ನೀನಾದರೋ ಆತ್ಮಾರಾಮನಾಗಿದ್ದುಕೊಂಡು ನಿನ್ನಲ್ಲಿಯೇ ಆನಂದಗೊಳ್ಳುತ್ತಿ ಎಂದರೆ ನಿನಗೂ ಮತ್ತು ಇತರರಿಗೂ ನೀನೇ ಆನಂದದಾಯಕನಾಗಿರುತ್ತೀ. ಆದುದರಿಂದ ಲೋಕೋತ್ತರ ಗುಣಾಕರನಾಗಿರುವ ಎಲೆ ! ಕೃಷ್ಣ ! ನಿನಗೆ ನಮಸ್ಕಾರಗಳು.

ದೈತ್ಯೇ ದಿಕ್ಷು ವಿಸೃಷ್ಟಚಕ್ಷುಷಿ ಮಹಾಸಂರಂಭಿಣೀ ಸ್ತಂಭತಃ
ಸಂಭೂತಂ ನ ಮೃಗಾತ್ಮಕಂ ನ ಮನುಜಾಕಾರಂ ವಪುಸ್ತೇ ವಿಭೋ !
ಕಿಂ ಕಿಂ ಭೀಷಣಮೇತದದ್ಭುತಮಿತಿ ವ್ಯುದ್ಭ್ರಾಂತ ಚಿತ್ತೇಽಸುರೇ
ವಿಸ್ಫೂರ್ಜದ್ಧವಲೋಗ್ರರೋಮವಿಕಸದ್ವರ್ಷ್ಮಾ ಸಮಾಜೃಂಭಥಾಃ ॥ ೨೫—೩.

ದನುಜವೀರನಾದ ಹಿರಣ್ಯಕಶಿಪು ಬಹಳ ಸಂಭ್ರಮದಿಂದ ಕೂಡಿದವನಾಗಿ ಎಲ್ಲಾ ಕಡೆಯಲ್ಲಿಯೂ ದೃಷ್ಟಿಯನ್ನು ಪ್ರಸರಿಸುತ್ತ (ಬಾಲಕನಾದ ಪ್ರಹ್ಲಾದನನ್ನು ಭಯಪಡಿಸುತ್ತ ನಿನ್ನ ಹರಿಯು ಎಲ್ಲಿ ? ಎಂದು ಗರ್ಜಿಸಿದಾಗ) ರುಂಡವು ಮೃಗಾತ್ಮಕವೂ ಮುಂಡವು ಮನುಷ್ಯಾತ್ಮಕವಾಗಿ ಕಂಬದೊಳಿಮೂಡಿದ ಎಲೈ ! ಪರಮಾತ್ಮನೆ ! ನಿನ್ನನ್ನುನೋಡಿ ಇದೆಂತಹ ಅದ್ಭುತ ಇದೆಂತಹ ಭಯಂಕರವೆಂದು ಭ್ರಾಂತ

ಚೇತನನಾಗಿ ಆ ರಾಕ್ಷಸನು ನಡುಗುತ್ತಿರಲು ಕೋಪದಿಂದ ಘುಡಿಘುಡಿಸುತ್ತ ಶ್ರುಭ್ರುಗಳಾಗಿಯೂ ಉಗ್ರವಾಗಿಯೂ ತೋರುತ್ತಿರುವ ರೋಮರಾಜಿಯಿಂದ ಕೂಡಿದವನಾಗಿ ಹೊರಕ್ಕೆಬಂದು ಉಗ್ರರೂಪನಾಗಲಿಲ್ಲವೆ!

ಭೂಮನ್ ! ಕಾಯೇನ ವಾಚಾ ಮುಹುರಪಿ ಮನಸಾ ತ್ವದ್ಬಲಪ್ರೇರಿತಾತ್ಮಾ
ಯದ್ಯತ್ ಕುರ್ವೇ ಸಮಸ್ತಂ ತದಿಹ ಪರತರೇ ತ್ವಯ್ಯಸಾವರ್ಪಯಾಮಿ
ಜಾತ್ಯಾಪೀಹ ಶ್ವಪಾಕಸ್ತ್ವಯಿ ನಿಹಿತಮನಃ ಕರ್ಮವಾಗಿಂದ್ರಿಯಾರ್ಥ
ಪ್ರಾಣೋ ವಿಶ್ವಂ ಪುನೀತೇ ನ ತು ವಿಮುಖಮನಾಸ್ತ್ವತ್ಪದಾತ್ ವಿಪ್ರವರ್ಯಃ

೯೧—೨

ಎಲೈ! ಸ್ವಾಮಿಯೇ! ಅಂತರ್ಯಾಮಿಯಾಗಿರತಕ್ಕ ನಿನ್ನಿಂದ (ವಾಸನಾರೂಪದಿಂದ) ಪ್ರೇರಿಸಲ್ಪಟ್ಟ ಮನಸ್ಸುಳ್ಳ ನಾನು ತ್ರಿಕರಣ (ಕಾಯಾ ವಾಚಾ ಮನಸಾ) ಪೂರ್ವಕವಾಗಿ ಮಾಡುವ ಸಕಲ ಕರ್ಮಗಳನ್ನೂ ನಿನಿಗೆ ಅರ್ಪಿಸುತ್ತೇನೆ. ಹೇಗೆಂದರೆ ಲೋಕದಲ್ಲಿ ರಾಜನಿಂದ ಪ್ರೇರಿತನಾದ ಮನುಷ್ಯರು ಅಥವಾ ಪುರುಷನು ತದನುಗುಣವಾಗಿ ಮಾಡುವ ಕೆಲಸವನ್ನು ನೋಡಿ, ಹೇಗೆ ಪ್ರೀತನಾಗುವನೋ ಹಾಗೆ ಸರ್ವಾಂತರ್ಯಾಮಿಯಾದ ನಿನ್ನಿಂದ ಪ್ರೇರಿತನಾಗಿ ಆಚರಿಸುವ ನನ್ನ ಸಕಲ ಕರ್ಮಗಳೂ ನಿನಿಗೆ ಪ್ರೀತಿಯನ್ನುಂಟುಮಾಡುತ್ತವೆ. ವಾಙ್ಮನಃ ಕರ್ಮೇಂದ್ರಿಯಾದಿಗಳಲ್ಲಿ ಶುದ್ಧನಾಗಿ ಕಾರ್ಯಗಳನ್ನು ಮಾಡುತ್ತ ನಿಶ್ಚಲಭಕ್ತಿಯುಳ್ಳ ಚಂಡಾಲನಾದರೂ ಪ್ರಪಂಚವನ್ನು ಪಾವನಮಾಡುವನಾಗುತ್ತಾನೆ. ಆದರೆ, ಸಕಲ್ಮಷನಾದವನು ಬ್ರಾಹ್ಮಣೋತ್ತಮನಾದರೂ ತನ್ನನ್ನು ತಾನು ಪರಿಶುದ್ಧನನ್ನಾಗಿ ಮಾಡಿಕೊಳ್ಳಲು ಸಮರ್ಥನಾಗಲಾರನು.



## ದೇವವಿಮಲಗಣಿ

ಯಂ ಪ್ರಸೂತ **ಶಿವಾಹ್ವಸಾಧುಮುಘವಾ ಸೌಭಾಗ್ಯದೇವೀ** ಪುನಃ
ಪುತ್ರಂ ಕೋವಿದಸಿಂಹ **ಸೀಹವಿಮಲಾಂ**ತೇವಾಸಿನಾಮಗ್ರಿಮಂ
ತದ್ಬ್ರಾಹ್ಮೀ ಕ್ರಮಸೇವಿ **ದೇವವಿಮಲ** ವ್ಯಾವರ್ಣಿತೇ ಹೀರಯು
ಕ್ಸೌಭಾಗ್ಯಾಭಿಧಹೀರಸೂರಿಚರಿತೇ..................

"ಇತಿ ಪಂಡಿತಸೀಹವಿಮಲಗಣಿ ಶಿಷ್ಯಪಂಡಿತದೇವವಿಮಲಗಣಿ ವಿರಚಿತಾಯಾಂ" ಎಂದು ಪ್ರತಿಸರ್ಗಾಂತ್ಯದಲ್ಲಿ ಹೇಳಿಕೊಂಡಿರುವುದರಿಂದ ಇವನ ತಂದೆಯು ಶಿವಸಾಧು, ತಾಯಿ ಸೌಭಾಗ್ಯದೇವೀ ಎಂದೂ ಸೀಹವಿಮಲಗಣಿಯು ಅಂತೇವಾಸಿ

ಯೆಂದೂ ಗೊತ್ತಾಗುತ್ತದೆ. ಈತನ ಜನ್ಮಭೂಮಿಯು ಯಾವುದೆಂಬದು ತಿಳಿಯದು. ಗ್ರಂಥ ಪ್ರಶಸ್ತಿಯಿಂದ ಇವನು ಶ್ವೇತಾಂಬರ ಜೈನಸಂಗಡದವನೆಂದು ಹೇಳಲಾಗುತ್ತದೆ.

**ಕಾಲ:**—"ಗ್ರಂಥನಿರ್ಮಾಣ ಸಮಯಸ್ತು ವರ್ಣನೀಯಸ್ಯ ಹೀರವಿಜಯ ಗಣೇರ್ಮರಣಸ್ಯ ೧೬೫೨ ವಿಕ್ರಮಸಂವತ್ಸರೇ (೧೫೯೫. ಕ್ರಿ. ಶ.) ಭಾದ್ರಪದ್ಯ ಶುಕ್ಲೈಕಾದಶ್ಯಾಂ" ಎಂದು ಹೇಳಿರುವುದರಿಂದ ಇವನು ಕ್ರಿ. ಶ. ೧೬ನೆಯ ಶತಮಾನದವನೆಂಬುದು ಸ್ಪಷ್ಟವಾಗಿದೆ.

**ಗ್ರಂಥ:**—ಈತನು 'ಹೀರಸೌಭಾಗ್ಯಂ' ಎಂಬ ೧೭ಸರ್ಗಗಳುಳ್ಳ ಮಹಾ ಕಾವ್ಯವನ್ನು ಬರೆದಿರುವನು. ಇದಕ್ಕೆ 'ಸ್ವೋಪಜ್ಞ' ಎಂಬ ವ್ಯಾಖ್ಯಾನವಿರುವುದು.

ಹೀರಕುಮಾರನು ಶೈಶವಾವಸ್ಥೆಯನ್ನು ಕಳೆದು ಗುರುಗಳಿಂದ ಸದುಪದೇಶಿತನಾಗಿ, ಪ್ರಪಂಚದ ಅಸ್ಥಿರತೆಯನ್ನು ತಿಳಿದು ಆಚಾರ್ಯನಲ್ಲಿ ದೀಕ್ಷೆಯನ್ನು ಹೊಂದಿ ವೈರಾಗ್ಯಚಕ್ರವರ್ತಿಯಾಗಿ, ಜನಧರ್ಮಗಳನ್ನುಪದೇಶಿಸಿ ಮುಕ್ತನಾದನೆಂಬುದೇ ಕಥಾವಸ್ತು. ಈ ಕಾವ್ಯದಲ್ಲಿ ಕವಿಯು ಅನೇಕವಿಧಗಳಾದ ನಗರಸಾಗರೋದ್ಯಾನ ಶೈಲತಟಾಕ ತೀರ್ಥಕ್ಷೇತ್ರ ಧರ್ಮ ಮೊದಲಾದ ವಿಷಯಗಳನ್ನು ಮನಮುಟ್ಟುವಂತೆ ಬಹು ದಕ್ಷತೆಯಿಂದಲೂ ಚತುರತೆಯಿಂದಲೂ ವರ್ಣಿಸಿರುವನು. ಇದನ್ನು ಜೈನ ಧರ್ಮಗ್ರಂಥವೆಂದರೂ ಸಲ್ಲುವುದು. 'ಸಮಾಪ್ತ' ಎಂದು ಹೇಳದೆ ಇರುವುದರಿಂದ ಗ್ರಂಥವು ಅಪೂರ್ಣವೆಂದು ತೋರುತ್ತದೆ. ಇದರಕೆಲವು ಶ್ಲೋಕಗಳು:—

> ಕಾರ್ಯಕಾಲ ಇತರೋಽಪಿ ನರೇಣಾದೀಯತೇ ತದನು ಮುಚ್ಯತ ಏವ
> ವಿಭ್ರಮಾಯ ವಿಧೃತೋ ಹೃದಿ ಹಾರೋ ಹೀಯತೇ ರಹಸಿ ಸೋಮಮುಖೀಭಿಃ ॥ ೫-೨೬

ಪ್ರಪಂಚದಲ್ಲಿ ಜನರು ತಮಗಾವುದಾದರೂ ಕೆಲಸವಾಗಬೇಕಾಗಿದ್ದರೆ ಆ ಸಮಯದಲ್ಲಿ ಇತರರನ್ನು ಆಶ್ರಯಿಸಿ ತಮ್ಮ ತಮ್ಮ ಕೆಲಸವಾದನಂತರ ಅವರನ್ನು ಬಿಟ್ಟು ಬೇರೆಯಾಗುವಂತೆ ಸ್ತ್ರೀಯರು ತಮಗೆ ಬೇಕಾದಾಗ ವಿಲಾಸಕ್ಕಾಗಿಯೋ ಅಥವಾ ಅಲಂಕಾರಕ್ಕಾಗಿಯೋ ಮುಕ್ತಾಹಾರಾದಿಗಳನ್ನು ಕಂಠದಲ್ಲಿ ಧರಿಸುತ್ತಾರೆ. ಆದರೆ ಕ್ರೀಡಾವಿಶೇಷಸಮಯಗಳಲ್ಲಿ ಅವುಗಳನ್ನು ವಕ್ಷಸ್ಥಲದಿಂದ ಬೇರ್ಪಡಿಸುತ್ತಾರೆ. ಎಂದರೆ ಲೋಕಕ್ಕೆ ಸ್ವಾರ್ಥದಲ್ಲಿರುವಷ್ಟು ಅಭಿಲಾಷೆಯು ಪರಾರ್ಥದಲ್ಲಿಲ್ಲವೆಂದು ಭಾವವು.

> ಸ್ಮೇರಕೈರವಶಂಕಯಾ ಕುವಲಯಸ್ಯತ್ತಂಸಯತ್ಯಂಗನಾ
> ಭೃಂಗಾನ್ಮಾಲಿಕ ಬಾಲಿಕಾಃ ಸಮಧಿಯಾ ಗೃಷ್ಣಂತಿ ಕೇಳೀವನೇ
> ಮುಕ್ತಾಭ್ರಾಂತಿಭೃತಃ ಕಿರಾತವನಿತಾಶ್ಛಿನ್ದಂತಿ ಗುಂಜವ್ರಜಾಂ
> ಸ್ಪಂಚಚ್ಚಂದ್ರಮಸೋಭ್ರಮಂ ವಿತನುತೇ ಸೋ ಕಸ್ಯ ಚಂದ್ರೋದಯಃ॥೭—೯೧

ಷೋಡಶ ಕಲಾಪರಿಪೂರ್ಣನಾದ ಚಂದ್ರನ ಕಾಂತಿಯಿಂದ ಮುಗ್ಧರಾದ (ಮನಸೋತ) ಹೆಂಗಳೆಯರು ವಿಕಸಿತವಾದ ಶ್ವೇತಕಮಲಗಳ ಭ್ರಾಂತಿಯಿಂದ ನೀಲೋತ್ಪಲಂಗಳನ್ನು ಮುಡಿದುಕೊಳ್ಳುತ್ತಾರೆ ಅಥವಾ ಕರ್ಣಾಭರಣವನ್ನು ಮಾಡಿಕೊಳ್ಳುತ್ತಾರೆ. ಪುಷ್ಪವನ್ನು ವಿಕ್ರಯಿಸುವ ನಲ್ಲೆಯರು ಹೂಗಳೆಂಬ ಭ್ರಾಂತಿಯಿಂದ ಕೇಳೀ ಗೃಹದಲ್ಲಿ ಭೃಂಗಗಳನ್ನು ಹಿಡಿದುಕೊಳ್ಳುತ್ತಾರೆ. ಕಿರಾತಸ್ತ್ರೀಯರು ಮುಕ್ತಾಫಲ ಭ್ರಾಂತಿಯಿಂದ ಗುಲಗಂಜಿಯನ್ನು ಆರಿಸಿಕೊಳ್ಳುತ್ತಾರೆ. ಆದಕಾರಣ ಪೂರ್ಣಚಂದ್ರನು ಯಾರಿಗೆತಾನೇ ಭ್ರಾಂತಿಯನ್ನುಂಟುಮಾಡುವುದಿಲ್ಲ!

ಪಂಚಾಪಿ ದೇವತರವೋಽಧರಿತಾಃ ಸ್ವದಾನ
ಲೀಲಾಯಿತೈರ್ವಸುಮತೀ ಕುಸುಮಧ್ವಜೇನ
ಸಂಭೂಯ ಕಾಂಚನಶಿಲೋಚ್ಚಯ ಚೂಲಿಕಾಯಾಂ
ಕಿಂ ಮಂತ್ರಯಂತ್ಯವನ್ಯತ್ರ್ಯಹಣಂ ವಿಜೇತುಂ ॥ ೧೧—೫೫.

ಸರ್ವಾತಿಶಯಸೌಂದರ್ಯಮೂರ್ತಿಮತ್ತ್ಯಾಗಿ ಭೂಮನ್ಮಥನಂತಿರುವ ಕೊಡಗೈಯುಳ್ಳ ರಾಜನಿಂದ ತಿರಸ್ಕೃತವಾದ ಕಲ್ಪಪಾರಿಜಾತಾದಿ ದೇವತರುಗಳುಮೇರುಪರ್ವತದಲ್ಲಿ ಸೇರಿ ಈ ರಾಜನನ್ನು ಜಯಿಸಬೇಕೆಂದು ಯೋಚಿಸುತ್ತಿವೆಯೋ ಎಂಬಂತೆ ಕಾಣುತ್ತದೆ.

---

## ದಾ ಮೋ ದ ರ ಮಿ ಶ್ರ *

ದೀರ್ಘದೋಷಕುಲೋದ್ಭೂತ
**ದಾಮೋದರ** ಇತಿಶ್ರುತಃ
ಛಂದಸಾಂಲಕ್ಷಣಂತೇನ
ಸೋದಾಹರಣಮುಚ್ಯತೇ ॥

ಎಂಬ ಗ್ರಂಥಸ್ಥ ಶ್ಲೋಕದಿಂದಲೂ, "ಇತಿ ಮೈಥಿಲೀಯ ದೀರ್ಘದೋಷ ಕುಲೋದ್ಭೂತ **ದಾಮೋದರಮಿಶ್ರ** ವಿರಚಿತೇ" ಎಂದು ಗ್ರಂಥಾಂತ್ಯದಲ್ಲಿ ಹೇಳಲ್ಪಟ್ಟಿರುವುದರಿಂದ ಇವನು ಮೈಥಿಲೀಯ ಬ್ರಾಹ್ಮಣನೆಂದೂ, ದೀರ್ಘದೋಷ ಕುಲ ಸಂಜಾತನೆಂದೂ ತಿಳಿಯಬಹುದು.

**ಕಾಲ:**—ಪ್ರಾಕೃತಪಿಂಗಳ ಸೂತ್ರಕ್ಕೆ ವ್ಯಾಖ್ಯಾನಕಾರನಾದ ಲಕ್ಷ್ಮೀನಾಥನು ಕ್ರಿ. ಶ. ೧೬೫೭ರಲ್ಲಿ ಬರೆದಿರುವ ವ್ಯಾಖ್ಯಾನದಲ್ಲಿ ಈತನನ್ನು ಉದಾಹರಿಸಿಕೊಂಡಿರುವ

* ಹನುಮನಾಟಕವನ್ನು (ಯಾವುದೋ ಸಂಗ್ರಹೀತ) ಮಹಾನಾಟಕವೆಂದು ಹೇಳುವ ದಾಮೋದರಮಿಶ್ರನು ಇವನಲ್ಲ.

ನಾದುದರಿಂದ ಈ ಕವಿಯು ಲಕ್ಷ್ಮೀನಾಥನಿಗಿಂತ ಪ್ರಾಚೀನನೆಂದೂ ಕ್ರಿ. ಶ. ೧೬ನೆಯ ಶತಮಾನದವನೆಂದೂ ತಿಳಿಯಬಹುದು.

**ಗ್ರಂಥ:**—ಇವನು 'ವಾಣೀಭೂಷಣ' ಎಂಬ ವ್ಯಾಕರಣ ಗ್ರಂಥವನ್ನು ಬರೆದಿರುವನು. ಇದರಲ್ಲಿ ಛಂದೋಲಕ್ಷಣಗಳು ಉದಾಹರಣೆಗಳ ಮೂಲಕ ಸಮರ್ಥಿಸಲ್ಪಟ್ಟಿರುವುವು.

---

## ಗಂಗಾನಂದ

ಇವನು ಮೈಥಿಲೀಯ ಬ್ರಾಹ್ಮಣನು. ಕ್ರಿ. ಶ. ೧೫೦೬—೧೫೨೭ರವರೆಗೆ ಬಿಕಾನಿರ್‌ಸಂಸ್ಥಾನದ ದೊರೆಯಾದ ಕರ್ಣರಾಜನು ಕೇಳಿಕೊಂಡ ಮೇರೆ 'ಕರ್ಣಭೂಷಣ' ಎಂಬ ಅಲಂಕಾರ ಗ್ರಂಥವನ್ನು ಬರೆದುದಾಗಿ:—

ಆಜ್ಞಯಾತಸ್ಯ ಭೂಮೀಂದ್ರೋ
ರ್ನ್ಯಾಯಕಾವ್ಯಕಲಾವಿದಃ
**ಗಂಗಾನಂದ** ಕವೀಂದ್ರೇಣ
ಕ್ರಿಯತೇ **ಕರ್ಣಭೂಷಣಂ.**

ಎಂಬುದರಿಂದ ಗೊತ್ತಾಗುತ್ತದೆ.

---

## ರಾಮಚಂದ್ರ

ಶೃಂಗಾರವೈರಾಗ್ಯಶತಂಸಪಂಚ
ವಿಂಶತ್ಯಯೋಧ್ಯಾನಗರೇವ್ಯಧತ್ತ
ಅಬ್ದೇವಿಯದ್ವಾರಣಬಾಣಚಂದ್ರೇ
ಶ್ರೀರಾಮಚಂದ್ರೋನುಚತಸ್ಯ ಟೀಕಾಂ ||

ಶ್ರೀರಾಮಚಂದ್ರಕವಿನಾಕಾವ್ಯಮಿದಂವ್ಯರಚಿ ವಿರತಿಬೀಜತಯಾ
ರಸಿಕಾನಾಮಪಿರತಯೇ ಶೃಂಗಾರಾರ್ಥೋಪಿಸಂಗ್ರಹೀತೋತ್ರ ||

"ಇತಿಶ್ರೀಲಕ್ಷ್ಮಣಭಟ್ಟಸೂನು ಶ್ರೀರಾಮಚಂದ್ರಕವಿಕೃತಂ ಸಟೀಕಂರಸಿಕರಂಜನಂ ನಾಮಶೃಂಗಾರವೈರಾಗ್ಯಾರ್ಥಸಮಾನಂ ಕಾವ್ಯಂ ಸಂಪೂರ್ಣಂ" ಎಂಬಿವುಗಳಿಂದ ಇವನು ಅಯೋಧ್ಯಾನಗರವಾಸಿಯಾದ ಲಕ್ಷ್ಮಣಭಟ್ಟನ ಮಗನೆಂದೂ ಬ್ರಾಹ್ಮಣನೆಂದೂ ಕ್ರಿ. ಶ. ೧೫೨೪ರಲ್ಲಿ ಶೃಂಗಾರವೈರಾಗ್ಯ ಸಮಾರ್ಥಬೋಧಕವಾದ 'ರಸಿಕರಂಜನ' ಎಂಬ ಗ್ರಂಥವನ್ನು ಬರೆದುದಾಗಿ ತಿಳಿಯಬರುತ್ತದೆ. ರೋಮಾವಳೀ ಶತಕವೆಂಬ ಮತ್ತೊಂದು ಗ್ರಂಥವನ್ನು ಬರೆದುದಾಗಿ ಹೇಳಿದೆ. ಗ್ರಂಥವು ಉಪಲಬ್ಧವಿಲ್ಲ.

# ಹ ರ ದ ತ್ತ ಸೂ ರಿ

ಗರ್ಗರ್ಷಿವಂಶತಿಲಕೋ ಜಯಶಂಕರಾಖ್ಯೋ
ಜ್ಯೋತಿರ್ವಿದಾಂ ಪ್ರಣಯಕೃತ್ಸುಕವೀಂದ್ರಮಾನ್ಯಃ
ಅಧ್ಯಾತ್ಮಕಾವಗತಿಶಾಂತಿಪರಾಯಣೋಽಭೂ
ದ್ಧರ್ಮೋಪದೇಶನಪಟುರ್ನಯಬೋಧ ಆಸೀತ್ ೨-೨೧
ತತ್ಸೂನುರ್ಹರದತ್ತ ಇತ್ಯಮಲಧೀಃ ಶ್ರೀವತ್ಸಗೋಂದ್ರೋದಿತೇ
ಭಾಷ್ಯೇ ಪಾಠವತಃ ಪೃಥಾಮಧಿಗತಶ್ಛಂದಶ್ಚಿತೀನಾಂ ಬುಧಃ |
ಸಾಹಿತ್ಯಾರ್ಣವಮಂಥನೈಕ.............................೨-೨೨

ಎಂಬುದರಿಂದಲೂ ಇವನು ಬ್ರಾಹ್ಮಣನೆಂದೂ, ಗಾರ್ಗಕುಲೋತ್ಪನ್ನನೆಂದೂ ಜಯಶಂಕರನ ಮಗನೆಂದೂ ತಿಳಿಯಬರುತ್ತದೆ.

**ಕಾಲ:**—ದೇಶ, ಕಾಲಗಳು ತಿಳಿಯುವಂತಿಲ್ಲ. ಆದರೂ ಮಹಾವೈಯ್ಯಾಕರಣ ಸಿದ್ಧಾಂತಕೌಮುದೀಕಾರ ಭಟ್ಟೋಜಿದೀಕ್ಷಿತನನ್ನು "ದೀಕ್ಷಿತ"ನೆಂದು ಹೇಳಿಕೊಂಡಿರುವುದರಿಂದ ಅವನಿಗಿಂತ ಈಚಿನವನೆಂದು ಹೇಳಬಹುದಾಗಿದೆ. ಈ ಪುಸ್ತಕ ಪ್ರತಿಯೊಂದರಲ್ಲಿ ಕಾಲವನ್ನು 'ಆಕಾಶಾವಮ್ನಾಯಾದ್ರಿ ಚಂದ್ರೇ (೧೭೪೦) ಶಕೇಕೃಷ್ಣತ್ರಯೋದಶೀನ್ಯುತೇ ಭೌಮರ್ಕನಕ್ಷತ್ರೇಹ್ಯಲಿಖತ್ರೀವುವಲ್ಲಭಃ ಎಂದು ಹೇಳಿರುವುದರಿಂದ ಗ್ರಂಥಪ್ರತಿಯು ನಿರ್ಮಾಣವು ಕ್ರಿ. ಶ. ೧೮೬೨ ವರ್ಷಗಳೆಂದು ಸ್ಫುಟವಾಗುತ್ತದೆ. ಆದುದರಿಂದ ಮೂಲಗ್ರಂಥಸಮಯವು ಕ್ರಿ. ಶ. ೧೮ನೆಯ ಶತಮಾದ, ಉತ್ತರಾರ್ಧದಲ್ಲಿರಬಹುದೆಂದು ಊಹಿಸಬಹುದಾಗಿದೆ.

**ಗ್ರಂಥ:**—ಇವನು 'ರಾಘವನೈಷಧೀಯ' ಎಂಬ ಕಾವ್ಯವನ್ನು ಬರೆದಿರುವನು. ಇದರಲ್ಲಿ ಎರಡು ಸರ್ಗಗಳಿದ್ದು ಅಸಮಗ್ರವಾಗಿ ಕೊನೆಯಲ್ಲಿ ಶ್ರೀ ಹರದತ್ತಸೂರಿ ಕೃತೇಮಹಾಕಾವ್ಯೇ ರಾಘವನೈಷಧೀಯೇ ದ್ವಿತೀಯಸ್ಸರ್ಗಃ ಎಂದೂ 'ಸಮಾಪ್ತ ಮಿದಂಮಹಾಕಾವ್ಯಂ' ಎಂದಿದೆ. ಕಾವ್ಯಪರಿಶೀಲನದಿಂದ ಗ್ರಂಥವು ಪೂರ್ತಿಯಾಗಿದೆಯೆಂದು ಹೇಳಲಾಗುವುದಿಲ್ಲ. ಕಾವ್ಯವು ಶ್ಲೇಷೆಯಿಂದ ಪೂರ್ಣವಾಗಿದೆ. ರಸ ರುಚಿಯುಸ್ವೈಸರ್ಗಿಕವಾಗಿಲ್ಲ. ಇದರ ಎರಡು ಶ್ಲೋಕಗಳು :—

ದಶರಥ ಇತಿ ನಾಮ್ನಾ ವೀರಸೇನಃ ಕ್ಷಿತೀಶಃ
ಕ್ಷಿತಿತಲವಿಬುಧಾನಾಂ ವಂದಥುಃ ಪ್ರಾಗ್ಬಭೂವ
ಗುರುಕವಿಬುಧಜೋಷಃ ಸಾಮ್ಯಕೋ ನಾರದಾಢ್ಯಃ
ಸತಿ ನರಪತಿರತ್ನೇ ಮತ್ಯ್ರಲೋಕೋಽಪ್ಯನಾಕೀತ್ || ೧-೧

ರಾಮೋಽಭಿರಾಮಃ ಸನಲಃ ಪ್ರತೀತಃ
ಪುತ್ರೋಭವತ್ತಸ್ಯ ಸುಸತ್ಯಸಂಧಃ
ಸಲಕ್ಷ್ಮಣಃ ಸದ್ಭರತಃಸಶತ್ರುಹಾ
ಚತುರ್ವಿಧತ್ವಂ ಗತವಾನಿವೈಕಃ || ೧-೨

ಇದಕ್ಕೆ 'ಸ್ವೋಪಜ್ಞ' ಎಂಬ ವ್ಯಾಖ್ಯಾನವಿರುವುದು.

# ಕವಿಕರ್ಣಪೂರ

ಇವನ ನಿಜವಾದ ಹೆಸರು ಪರಮಾನಂದಸೇನನೆಂದು. ಚೈತನ್ಯಪ್ರಭುವಿನ ಅನುಗ್ರಹದಿಂದ ಬಾಲ್ಯದಲ್ಲಿ ಕವಿತೆಯನ್ನು ಮಾಡುವ ಪ್ರತಿಭಾಸಂಪನ್ನನಾದಂತೆಯೂ ತನ್ನ ಗ್ರಂಥಾರಂಭದಲ್ಲಿ:—

ಶ್ರವಸೋಃ ಕುವಲಯಮಕ್ಷ್ಣೋರಂಜನಮುರಸೋ ಮಹೇಂದ್ರಮಣಿದಾಮ
ವೃಂದಾವನರಮಣೀನಾಂ ಮಂಡನಮಖಿಲಂ ಹರಿರ್ಜಯತಿ ||

ಎಂದು ಹೇಳುವಾಗ ಕರ್ಣಾಭರಣಾರ್ಥವಾಚಕ ಕುವಲಯ ವಿಶೇಷಣವನ್ನು ಹೇಳಿಕೊಂಡಿರುವುದರಿಂದ ಇವನನ್ನು 'ಕವಿಕರ್ಣಪೂರ' ಎಂದು ಕರೆದಿರುವುದಾಗಿ ಜನಶ್ರುತಿಯಿರುವುದು. *

"**ಶಿವಾನಂದಸೇನಸ್ಯ** ತನುಜೇನ ನಿರ್ಮಿತಂ **ಪರಮಾನಂದದಾಸ** ಕವಿನಾ"

ಎಂಬ ಸೂತ್ರಧಾರನ ಹೇಳಿಕೆಯಿಂದ ಕವಿಯ ಹೆಸರು 'ಪರಮಾನಂದದಾಸ' ಎಂದು ಸ್ಪಷ್ಟಪಡುತ್ತದೆ. §

ಈ ಗ್ರಂಥದ ಭೂಮಿಕಾರಂಭದಲ್ಲಿ:—

'ಕವಿಕರ್ಣಪೂರಾಪರನಾಮಧೇಯಃ ಪರಮಾನಂದದಾಸಕವಿಃ' ಎಂದು ಹೇಳಿರುವುದರಿಂದ 'ಪರಮಾನಂದದಾಸ' ಕವಿಗೆ 'ಕವಿಕರ್ಣಪೂರ' ಎಂಬ ಮತ್ತೊಂದು ಹೆಸರೆಂದು ಸ್ಪಷ್ಟವಾಗುತ್ತದೆ. 'ಕವಿಕರ್ಣಪೂರ' ಎಂಬ ಹೆಸರಿನ ಚಳುವಳಿಯಲ್ಲಿ 'ಪರಮಾನಂದದಾಸ' ಎಂಬ ನಿಜವಾದ ಹೆಸರು ಲೀನವಾಗಿ ಹೋಗಿದೆ. 'ಮಹಾಕವಿರಯಂ ವಂಗಪ್ರದೇಶೇ ನದಿಯಾಪ್ರಾಂತ್ಯವರ್ತಿನ್ಯಾ ಕಾಂಚನಪಲ್ಲ್ಯಾಂ...... ಜನ್ಮಲೇಭೇ' ಎಂದು ಹೇಳಿರುವುದರಿಂದ ಇವನು ವಂಗದೇಶಕ್ಕೆ ಸೇರಿದ ನದಿಯಾಪ್ರಾಂತ್ಯದ ಬಳಿಯಣ ಒಂದಾನೊಂದು ಗ್ರಾಮದವನೆಂದು ಸ್ಫುಟವಾಗುತ್ತದೆ. $

ವಂಗಸಾಹಿತ್ಯ ಚರಿತೆಕಾರರಾದ, ದಿನೇಶಚಂದ್ರಸೇನರು ಪರಮಾನಂದದಾಸಕವಿಯು 'ಫುಲ್ಲಶ್ರೀ' ಎಂಬ ಊರಿನಲ್ಲಿ ಜನ್ಮಿಸಿದುದಾಗಿ ಸ್ಥಳನಿರ್ದೇಶಮಾಡಿ ಹೇಳಿರುವರು. ಅಲ್ಲದೆ 'ಫುಲ್ಲಶ್ರೀ' ಎಂಬದು ಕವಿಕರ್ಣಪೂರನಿಗೇ ಅಲ್ಲದೆ ವಿಶ್ವವಾಙ್ಮಯದಲ್ಲಿ ಹೆಸರುಗೊಂಡು ಸ್ಮೃತಿಶೇಷರಾಗಿರುವ ಕವೀಂದ್ರತ್ರಿಲೋಚನದಾಸ, ಜಾನಕೀನಾಥಕವಿಕಂಠಹಾರ, ಭವಾನೀನಾಥದಾಸಸರಸ್ವತೀ, ರಘುರಾಮದಾಸಕಂಠಾಭರಣ, ಮುಂತಾದ ಮಹಾ ಮಹಾ ಕವಿಗಳ ಜನ್ಮಸ್ಥಳವಾಗಿದ್ದಿ

* ಚೈತನ್ಯಚಂದ್ರೋದಯದ ಭೂಮಿಕಾ ಪುಟ ೧

§ Ibid P 3

$ Ibid. introduction P. 1

ತೆಂದೂ ಕೊಂಡಾಡಿರುವರು.* ವಿಜಯಗುಪ್ತನು ಈ ಊರನ್ನು 'ಪಂಡಿತನಗರ' ಎಂದು ಕೇವಲ ಅಭಿಮಾನಿಸಿ ಕರೆದಿರುವನು. ಇಂತಹ ಊರಿನ ವಿಚಾರವಾಗಿ ಕೊಂಚಹೇಳುವುದು ಯುಕ್ತವೆಂದು ತೋರುವುದರಿಂದ ವಿಷಯವು ಅಪ್ರಸಕ್ತ ವಾಗದು.

ಶಕ. ೧೪೦೬ ರಲ್ಲಿ ಹುಸೇನ್‌ಷಹಾನು ಗೌಡದೇಶದ ಸಾರ್ವಭೌಮನಾಗಿದ್ದನು. ಅರ್ಜುನರಾಜನು ಫತೇಬಾದ್§ ಎಂಬದನ್ನು ಆಳುತ್ತಿದ್ದನು. ಇದು ಬಂಗ್ರೋರಾವರೆಗೆ ವಿಸ್ತರಿಸಿದ್ದಿತು. ಪಶ್ಚಿಮಕ್ಕೆ ಘಾಗರಾನದಿ ಪೂರ್ವಕ್ಕೆ 'ಘಂಟೇಶ್ವರ'ಎಂಬನದಿ. ಈ ಮಧ್ಯೆ ಪಂಡಿತನಗರ ಅಥವಾ ಫುಲ್ಲಶ್ರೀ ಎಂಬ ಊರಿದ್ದಿತು. ಇದು ಚತುರ್ವೇದ ಸಕಲಶಾಸ್ತ್ರಪಾರಂಗತರಿಂದಲೂ, ಚತುರರಾದ ವೈದ್ಯರಿಂದಲೂ ಲೇಖನ ವಿದ್ಯಾಕುಶಲರಾದ ಕಾಯಸ್ಥರಿಂದಲೂ ಪೂರ್ಣವಾಗಿದ್ದಿತು. ಈ ಊರಿನಲ್ಲಿ ಜನ್ಮಿಸುವುದಾದರೆ ಅಥವಾ ವಾಸಿಸುವುದಾದರೆ ಯಾವುದಾದರೊಂದು ಸುವಿಚಾರದಲ್ಲಿ ಕೀರ್ತಿಯನ್ನು ಗಳಿಸುವುದಾಗಿ ನಂಬುಗೆ. ಈಗ ಘಂಟೇಶ್ವರನದಿಯಾಗಲಿ ಘಾಗ್ರಾನದಿಯಾಗಲಿ ಇರುವುದಿಲ್ಲ. ಎರಡು ನದಿಗಳೂ ಮರಳಿನಿಂದ ಮುಚ್ಚಿ ಹೋಗಿವೆ. ಫುಲ್ಲಶ್ರೀ ಎಂಬ ಊರುನಾಮಾವಶೇಷವಾಗಿ ಹೋಗಿ ಕಾಲಕ್ರಮದಲ್ಲಿ ಅದರ ಒಂದು ಭಾಗವು ಗೈಲಾ ಎಂಬ ಹೆಸರಿನಿಂದ ಈಗ ಕರೆಯಲ್ಪಡುತ್ತಿದೆ. $

**ಕಾಲ:** — ಕ್ರಿಸ್ತಾಬ್ದ ೧೫೨೪ ರಲ್ಲಿ ಕವಿಯು ಜನ್ಮಿಸಿದುದಾಗಿ ಹೇಳಿದೆ. ಆದುದರಿಂದ ಇವನು ಕ್ರಿ. ಶ. ೧೬ನೆಯ ಶತಮಾನದವನು

ಗ್ರಂಥಗಳು:—

೧. ಆರ್ಯಾಶತಕಂ
೨. ಚೈತನ್ಯಚರಿತಾಮೃತಂ
೩, ಆನಂದವೃಂದಾವನಚಂಪೂಃ
೪. ಚಮತ್ಕಾರಚಂದ್ರಿಕಾ
೫. ಅಲಂಕಾರಕೌಸ್ತುಭಃ
೬. ಕೃಷ್ಣಲೀಲೋದ್ದೇಶದೀಪಿಕಾ
೭. ಗೌರಗಣೋದ್ದೇಶದೀಪಿಕಾ
೮. ವರ್ಣಪ್ರಕಾಶಃ ಕೋಶಃ
೯. ಚೈತನ್ಯ ಚಂದ್ರೋದಯನಾಟಕ

* Bengali Language and Literature P. 279.

§ ಈಗಣ ಫರಿದಪುರ ಮತ್ತು ಬಾಕರಗಂಜಿನ ಒಂದುಭಾಗ, ಈ ಪ್ರಾಂತ್ಯಕ್ಕೆ ಫತೇಬಾದ್ ಎಂಬ ಹೆಸರಿದ್ದಿತು.

$ ವಂಗಭಾಷಾ ಸಾಹಿತ್ಯ, ಪುಟ ೨೫೦

**ಚೈತನ್ಯ ಚಂದ್ರೋದಯನಾಟಕ:**—ಇದು ರೂಪಕಭೇದವಾದ ಪ್ರಕರಣ ಜಾತಿಗೆ ಸೇರಿದುದು. ಇದರಲ್ಲಿ ಹತ್ತು ಅಂಕಗಳಿರುವುವು.

ಇದರಲ್ಲಿ ಗೌರಾಂಗ ಅಥವಾ ಚೈತನ್ಯದೇವನ ಧರ್ಮಾಚರಣೆ, ಸದುಪದೇಶಗಳನ್ನು ತಿಳಿಸುವುದಾಗಿ, ಮುಮುಕ್ಷುಗಳಿಗೆ ಮಾರ್ಗದರ್ಶಕವಾಗಿ, ಮೃದು ಮಧುರ ಶೈಲಿಯನುಳ್ಳುದಾಗಿ ಸರ್ವವಿಧದಲ್ಲಿಯೂ ಪ್ರಬೋಧ ಚಂದ್ರೋದಯವನ್ನು ಅನುಸರಿಸಿ ಬರೆಯಲ್ಪಟ್ಟಿರುವುದು. ಇದರಲ್ಲಿ ಶಾಂತರಸವು ಪ್ರಧಾನವಾಗಿರುವುದು. ಇದನ್ನು ಕಪಿಲೇಶ್ವರದೇವನ ಮೊಮ್ಮಗನೂ, ಪುರುಷೋತ್ತಮನ ಮಗನೂ ಆದ ನೀಲಗಿರಿಯ ಅಧೀಶ ಗಜಪತಿಪ್ರತಾಪರುದ್ರದೇವನ ಕೋರಿಕೆಯಂತೆ ಬರೆದುದಾಗಿ ತಿಳಿಯಬರುತ್ತದೆ. ಕವಿಯು ಈ ನಾಟಕವನ್ನು ಶಾ. ಸಂ. ೧೫೦೧ ಅಥವಾ ಕ್ರಿ. ಶ. ೧೫೭೯ರಲ್ಲಿ ತನ್ನ ೫೫ನೆಯ ವರ್ಷದಲ್ಲಿ ಬರೆದುದಾಗಿ ಹೇಳಿಕೊಂಡಿರುವನು. ಮೇಲೆ ಹೇಳಿದ ಗ್ರಂಥಗಳಲ್ಲಿ ಆರ್ಯಾಶತಕವು ಉಪಲಬ್ಧವಿಲ್ಲ. ಚೈತನ್ಯಚರಿತಾಮೃತವು ಹೆಸರಿಗೆ ತಕ್ಕಂತೆ ಚೈತನ್ಯನ ಚರಿತೆಯು ವರ್ಣಿತವಾಗಿದೆ. ಇದು ಮಹಾಕಾವ್ಯ. ಇದನ್ನು ಕವಿಯು ಕ್ರಿ. ಶ. ೧೫೪೨ರಲ್ಲಿ ತನ್ನ ೧೮ನೆಯ ವಯಸ್ಸಿನಲ್ಲಿ ಬರೆದುದಾಗಿ ಹೇಳಿದೆ. ಆನಂದವೃಂದಾವನ ಚಂಪೂಗ್ರಂಥವು ೨೨ ಸ್ತಬಕಗಳಿಂದ ಕೂಡಿರುವುದು. ಚಮತ್ಕಾರಚಂದ್ರಿಕೆಯು ಕೃಷ್ಣಲೀಲಾವರ್ಣನ ರೂಪವಾದ ಕಾವ್ಯ. ಅಲಂಕಾರಕೌಸ್ತುಭ ಎಂಬುದು ಲಕ್ಷಣಗ್ರಂಥ. ಇದಕ್ಕೆ 'ಕಿರಣ' ಎಂಬ ವ್ಯಾಖ್ಯಾನವಿರುವುದು. ಕೃಷ್ಣಲೀಲೋದ್ದೇಶದೀಪಿಕಾ, ಗೌರಗಣೋದ್ದೇಶದೀಪಿಕಾ ಇವು ಧರ್ಮ ಗ್ರಂಥಗಳು. ವರ್ಣಪ್ರಕಾಶ ಕೋಶವು ಅಮರಮಾಣಿಕ್ಯನ ಮಗ ರಾಜಾಧರನಿಗಾಗಿ ಬರೆದುದಾಗಿದೆ. ರಾಮ ಕೃಷ್ಣಾವತಾರೋತ್ಕರ್ಷತೆಯ ವಿಚಾರದಲ್ಲಿ ಕವಿಯಮತವು ಹೇಗೆಂಬುದನ್ನು ಈ ನಾಟಕದಲ್ಲಿ ರಾಜ ಮತ್ತು ಭಟ್ಟಾಚಾರ್ಯರ ಭಾಷಣದಲ್ಲಿ ಸೂಚಿಸಿರುವನು. ಅದು ಹೀಗಿರುವುದು:—

ಭಟ್ಟಾಚಾರ್ಯ:-ಮಹಾರಾಜ! ಇವೆರಡೂ ಸಮಾನಾರ್ಥದ್ಯೋತಕಗಳಾದರೂ,

ರಮಂತೇ ಯೋಗಿನೋಽನಂತೇ ಸತ್ಯಾನಂದಚಿದಾತ್ಮನಿ
ಇತಿ **ರಾಮ**ಪದೇನಾಸೌ ಪರಂಬ್ರಹ್ಮಾಭಿಧೀಯತೇ ॥ ೭—೨೯

ಕೃಷಿರ್ಭೂವಾಚಕಃ ಶಬ್ದೋ ಣಶ್ಚ ನಿರ್ವೃತಿವಾಚಕಃ
ತಯೋರೈಕ್ಯಂ ಪರಂಬ್ರಹ್ಮ **ಕೃಷ್ಣ** ಇತ್ಯಭಿಧೀಯತೇ ॥ ೭—೨೩

ಸಹಸ್ರನಾಮಭಿಸ್ತುಲ್ಯಂ ರಾಮನಾಮವರಾನನೇ
ಸಹಸ್ರನಾಮ್ನಾಂ ಪುಣ್ಯಾನಾಂ ತ್ರಿರಾವೃತ್ತ್ಯಾ ತು ಯತ್ಫಲಂ
ಏಕಾವೃತ್ತ್ಯಾ ತು ಕೃಷ್ಣಸ್ಯ ನಾಮ್ಯೈಕಂ ತತ್ಪ್ರಯಚ್ಛತಿ ॥

"ಇತಿ ರಾಮನಾಮತಃ ಕೃಷ್ಣನಾಮ ಶ್ರೇಯಃ" ಎಂದು ಕೃಷ್ಣನ ಉತ್ಕರ್ಷತೆಯು ಹೇಳಿರುವುದು. ಕವಿಯು ಕೃಷ್ಣಭಕ್ತನು. ಆದುದರಿಂದ ಕೃಷ್ಣನ ವಿಚಾರೋತ್ಕರ್ಷತೆಯ ಹೇಳಿಕೆಯು ಸಹಜವಾದುದು.

ಚೈತನ್ಯ ಚಂದ್ರೋದಯದ ಕೆಲವು ಶ್ಲೋಕಗಳು:—

ಉಗ್ರೈರುಗ್ರೈಸ್ತಪೋಭಿಃ ಶಮದಮನಿಯಮೈರ್ಧಾರಣಾಧ್ಯಾನಯೋಗೈ
ರ್ಯಃ ಕ್ಷಾತ್ವಾ ಪಾರಮೇಷ್ಠ್ಯಂ ತ್ರಿಭುವನವಿಭವೇಷ್ವಿರ್ಥರ್ದಿತಾನ್ನಾವಬೋಧಾಃ।
ಕಂದರ್ಪಾದೀನಮಿತ್ರಾನಪಿ ಸಹಜತಯಾ ದುರ್ಜಯಾನೇವ ಜಿತ್ವಾ
ಯೇನ ಸ್ಪೃಷ್ಟ್ವಾ ನಿಪೇತುಃ ಕಥಯ ಕಥಮಸೌ ಕೇನ ಕೋಪೋ ವಿಜೇಯಃ ॥ ೧-೩೩

ಅಧರ್ಮನು ಕಲಿಯನ್ನು ಕುರಿತು ಹೇಳುವಿಕೆ :—ಎಲೈ ! ಮಿತ್ರನೆ !

ಕೋಪವನ್ನು ಜಯಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಹೇಗೆಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯಲು ಅತ್ಯುಗ್ರ ತಪಸ್ಸುಗಳಿಂದಲೂ, ಶಮದಮಾದಿ ಗಳಿಂದಲೂ, ಧಾರಣ ಧ್ಯಾನ ಯೋಗಾದ್ಯಷ್ಟಾಂಗಗಳಿಂದಲೂ ಕೂಡಿ ಸಕಲೈಶ್ವರ್ಯ ಭೋಗಗಳನ್ನೂ ಆಹಾರಾದಿಗಳೆಲ್ಲವನ್ನೂ ತ್ಯಜಿಸಿ ಜಯಿಸಲಸಾಧ್ಯರಾದ ಕಾಮಾದಿ ಗಳನ್ನು ಗೆದ್ದರಾದರೂ ಯಾವುದರಿಂದ ಅಧಃಪತನವನ್ನು ಹೊಂದುವರೋ ಅಂತಹ ಕೋಪವನ್ನು ಜಯಿಸಲು ಯಾರಿಂದತಾನೇ ಸಾಧ್ಯವಾದೀತು. ಎಂದರೆ ಯಾರಿಂದಲೂ ಸಾಧ್ಯವಿಲ್ಲವೆಂದು ಭಾವವು.

ಷಷ್ಠೇ ಕರ್ಮಣಿ ಕೇವಲಂ ಕೃತಧಿಯಃ ಸೂತ್ರೈಕಚಿಹ್ನಾ ದ್ವಿಜಾಃ
ಸಂಜ್ಞಾಮಾತ್ರವಿಶೇಷಿತಾ ಭುಜಭುವೋ ವೈಶ್ಯಾಸ್ತು ಬೌದ್ಧಾ ಇವ ।
ಶೂದ್ರಾಃ ಪಂಡಿತಮಾನಿನೋ ಗುರುತಯಾ ಧರ್ಮೋಪದೇಶೋತ್ಸುಕಾಃ
ವರ್ಣಾನಾಂ ಗತಿರೀದೃಗೇವ ಕಲಿನಾ ಹಾ! ಹಂತ! ಸಂಪಾದಿತಾ॥ ೨—೨.

ಬ್ರಾಹ್ಮಣರಿಗೆ ಶಾಸ್ತ್ರೋಕ್ತವಾದ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹವೆಂಬ ಆರು ಕರ್ಮಗಳಲ್ಲಿ ಕೊನೆಯದಾದ ಪ್ರತಿಗ್ರಹ ಕರ್ಮದಲ್ಲಿ ಮಾತ್ರ ಬ್ರಾಹ್ಮಣರು ಆಸಕ್ತರಾಗಿ ಯಜ್ಞೋಪವೀತ ಚಿಹ್ನೆಯಿಂದ ಮಾತ್ರ ಕೂಡಿದವರಾಗಿರುತ್ತಾರೆ. ರಾಜರು ಕೇವಲ ಸಂಜ್ಞಾಮಾತ್ರ. ವೈಶ್ಯರೋ ಕೇವಲ ಬೌದ್ಧಾಚರಣೆಯುಳ್ಳವರು. ಶೂದ್ರರಾದರೋ ಪಂಡಿತಮಾನನೀಯರಾಗಿ ಗುರುಗಳೆಂದು ಧರ್ಮೋಪದೇಶೋತ್ಸುಕರಾಗಿರುತ್ತಾರೆ. ಈರೀತಿಯಾಗಿ ವರ್ಣವಿಭಾಗವು ಕಲಿಪುರುಷನಿಂದ ಸಂಪಾದಿಸಲ್ಪಟ್ಟವುಗಳಾಗಿರುವುವು. ಅಯ್ಯೋ !

ಜಿಹ್ವಾಗ್ರೇಣ ಲಲಾಟಚಂದ್ರಜಸುಧಾಸ್ಯಂದಾಧ್ವರೋಧೇ ಮಹ
ದ್ದಾಕ್ಷ್ಯಂ ವ್ಯಂಜಯತೋ ನಿಮೀಲ್ಯ ನಯನೇ ಬದ್ಧಾಸನಂ ಧ್ಯಾಯತಃ ।
ಅಸ್ಯೋಪಾತ್ತನದೀತಟಸ್ಯ ಕಿಮಯಂ ಭಂಗಃ ಸಮಾಧೇರಭೂತ್
ಪಾನೀಯಾಹರಣ ಪ್ರವೃತ್ತತರುಣೀ ಶಂಖಸ್ವನಾಕರ್ಣನೈಃ ॥ ೨—೬.

ಅಹಹ ! ಇದೇನು !

ಮನಸ್ಸಿನಲ್ಲಿ ದೃಢತರಭಕ್ತಿ ಇಲ್ಲದೆಯೂ ನಾಲಿಗೆಯ ತುದಿಯಲ್ಲಿ ಪರಮೇಶ್ವರನನ್ನು ಧ್ಯಾನಮಾಡುವ ನೆಪದಿಂದ ಕಣ್ಣುಗಳನ್ನು ಮುಚ್ಚಿ ಆಸನಗಳನ್ನು ಹಾಕಿಕೊಂಡು ನದೀ ತಟದಲ್ಲಿ ಧ್ಯಾನಮಾಡುತ್ತಿರುವ ಈ (ಕಪಟ) ಸಾಧುವಿಗೆ ನದಿಯಲ್ಲಿ ಜಲವನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಬಂದ ಸ್ತ್ರೀಯರ ಕಂಠಧ್ವನಿಗಳ ಆಕರ್ಣನದಿಂದ ಸಮಾಧಿಗೆ ಭಂಗ ಉಂಟಾದುದು! ಇದೇನಾಶ್ಚರ್ಯ! ಎಂದರೆ ನಿಜವಾದ ಸಾಧುವಿಗೆ ಸಮಾಧಿಯಲ್ಲಿ ಸ್ಥಿರಚಿತ್ತತೆಯಿಂದ ಬಹಿರ್ವ್ಯಾಪಾರವು ತೋರದು ಎಂದು ಭಾವವು.

ಭಕ್ತಿದೇವಿಯ ಹೇಳಿಕೆ –

ನಜಾತಿಶೀಲಾಶ್ರಮಧರ್ಮವಿದ್ಯಾಕುಲಾದ್ಯಪೇಕ್ಷೀ ಹಿ ಹರೇಃ ಪ್ರಸಾದಃ।
ಯದೃಚ್ಛಯೋತ್ಸೃಷ್ಟಿಗತ ನಾಸ್ಯ ಪಾತ್ರಾಪಾತ್ರವ್ಯವಸ್ಥಾಪ್ರತಿಪತ್ತಿರಾಸ್ತೇ॥ ೨-೧೯.

ಹರಿಯ ಪ್ರಸಾದವನ್ನು ಪಡೆಯಲು ಜಾತಿ, ಶೀಲ, ಆಶ್ರಮ, ಧರ್ಮ, ವಿದ್ಯಾ, ಕುಲ ಮೊದಲಾದುವು ಯಾವುವೂ ಅವಶ್ಯವಿರುವುದಿಲ್ಲ. ಇಚ್ಛಾಮೂರ್ತಿಯಾದುದರಿಂದ ಇವನಿಗೆ ಪಾತ್ರಾಪಾತ್ರವ್ಯವಸ್ಥೆಯೂ ಇಲ್ಲ. ಆದುದರಿಂದ ಯಾರು ಇವನನ್ನು ಭಕ್ತಿಯಿಂದ ಪೂಜಿಸುವರೋ ಅವರಿಗೆ ಇವನು ಪ್ರಸನ್ನನಾಗುತ್ತಾನೆ.

---

## ಸೋಮನಾಥ *

ಇವನು ಕಾಂಚಿಯ ಬಳಿಯಲ್ಲಿರುವ ತುಂಡೀರಮಂಡಲಕ್ಕೆ ಸೇರಿದ ಗೋವಿಂದತೀರ್ಥಪುರವೆಂಬ ಗ್ರಾಮದವನು. ವತ್ಸಗೋತ್ರದವನು. ಸ್ಮಾರ್ತಬ್ರಾಹ್ಮಣನು. ಯಜ್ವಭಾಸ್ಕರನ ವಂಶೀಯನು. ಭಟ್ಟಿಗಯಮೂರ್ತಿ ಭಾಸ್ಕರನ ಮೊಮ್ಮಗನು. ಚಂಪೂ ಭಾರತಕಾರನಾದ ಅನಂತಭಟ್ಟನ ಸೋದರಿಯ ಮಗನು.

**ಕಾಲ:** –ಇವನು ಕ್ರಿ. ಶ. ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರವನ್ನಾಳಿದ ಅಚ್ಯುತರಾಯನ ಸಮಕಾಲೀನನು. §

**ಗ್ರಂಥ:**—ಇವನು 'ವ್ಯಾಸಯೋಗಿಚರಿತ' ಎಂಬ ಚಂಪೂ ಗ್ರಂಥವನ್ನು ಬರೆದಿರುವನು. ಈ ಚಂಪೂಗ್ರಂಥದಲ್ಲಿ ಆರು ಉಚ್ಛ್ವಾಸಗಳಿರುವುವು. ಅಚ್ಯುತರಾಯನು ವ್ಯಾಸಯೋಗಿಯ ಮಂತ್ರಾಲೋಚನೆಯಿಂದ ರಾಜ್ಯಭಾರವನ್ನು ನಡೆಯಿಸುತ್ತಿದ್ದಾಗ ವಿಜಯನಗರವು ಅತ್ಯಂತ ವೈಭವೋಪೇತವಾಗಿದ್ದುದಲ್ಲದೆ, ವ್ಯಾಸಯೋಗಿಯ ಸಿದ್ಧಾಂತವು 'ಮತ' ಎಂದು ಕರೆಯಲ್ಪಟ್ಟು ಸಾಹಿತ್ಯಾಲಂಕಾರ ವೇದ

---

* ಮೀಮಾಂಸಾಶಾಸ್ತ್ರಕ್ಕೆ ಸೋಮನಾಥೀಯವೆಂಬ ವ್ಯಾಖ್ಯಾನವನ್ನೂ, ಮಯೂಖಮಾಲಿಕೆಗೆ 'ಶಾಸ್ತ್ರದೀಪಿಕಾ' ಎಂಬ ವ್ಯಾಖ್ಯಾನವನ್ನೂ ಬರೆದಿರುವ ಸೋಮನಾಥನು ಇವನಲ್ಲ.

§ Introduction to Vyasayogichrita P. 43.

ವೇದಾಂತ ತರ್ಕಮೀಮಾಂಸಾ ಭೂಗೋಳ ಖಗೋಳಶಾಸ್ತ್ರವೇತ್ತರಿಂದ ಕೂಡಿ ಸರಸ್ವತೀ ಪೀಠವೆನಿಸಿಕೊಂಡಿದ್ದಿತು. ಇಲ್ಲಿ ರಾಜಕುಮಾರರಾದಿಯಾಗಿ ಸಕಲರೂ ಮತಪೈಷಮ್ಯವಿಲ್ಲದೆ ವ್ಯಾಸಂಗಮಾಡುತ್ತಿದ್ದರು. ನಾರಾಯಣಯತಿಯು ವ್ಯಾಸ ಯೋಗಿಗೆ ಸೋಮನಾಥನ ಪರಿಚಯವನ್ನು ಮಾಡಿಕೊಟ್ಟನು. ವ್ಯಾಸಯೋಗಿಯು ಸೋಮನಾಥನ ಕಲಾನೈಪುಣ್ಯಕ್ಕೆ ಮೆಚ್ಚಿ ತನ್ನ ಬಳಿಯಲ್ಲಿರಿಸಿಕೊಂಡನು. ಕಾಲ ಕ್ರಮದಲ್ಲಿ ಸೋಮನಾಥನು ವ್ಯಾಸಯೋಗಿಚರಿತವನ್ನು ಬರೆದು ಕಂಬುಕಂಠ ಮತ್ತು ಕಲಕಂಠರಲ್ಲೋದಿಸಿ ಮೆಚ್ಚುಗೆಯನ್ನು ಹೊಂದಿದನು. ಗ್ರಂಥಾರಂಭದಲ್ಲಿ ದಶಾವ ತಾರ ಸ್ತುತಿ, ಕಾಳಿದಾಸ, ಬಾಣರ ಹೆಸರುಗಳು ಕಂಡುಬಂದಿವೆ.

ವ್ಯಾಸಯೋಗಿಯು ಶ್ರೋತ್ರೀಯ ದಂಪತಿಗಳಲ್ಲಿ ಜನ್ಮಗ್ರಹಣಮಾಡಿ ಕಾಲ ಕ್ರಮದಲ್ಲಿ ದೇಶಾಟನವನ್ನು ಮಾಡುತ್ತ ಪನಗೊಂಡೆ (ಮಹಾಚಲ) ಗೆ ಬಂದು ಆಗ ಅಲ್ಲಿ ಆಳುತ್ತಿದ್ದ ನರಸರಾಜನಿಂದ ಸತ್ಕಾರಗೊಂಡು ಕೃಷ್ಣದೇವರಾಯನ ಪ್ರಾರ್ಥನೆಗೆ ಮನಕೊಟ್ಟು ವಿಜಯನಗರಕ್ಕೆ ಬಂದು ಕನಕಾಭಿಷೇಕವನ್ನು ಮಾಡಿಸಿ ಕೊಂಡು ವ್ಯಾಸಸಮುದ್ರವನ್ನು ಕಟ್ಟಿಸಿದುದೇ ಮೊದಲಾದ ವಿಚಾರಗಳೊಡನೆ ಪೂರ್ಣವಾಗಿರುವುದೆಂಬುದು ಈ ಗ್ರಂಥದ ಕಥಾವಸ್ತು.

ಗದ್ಯಶೈಲಿಯ ಮಾದರಿಗೆ ಕೊಂಚ ಬರೆಯುವೆವು.—

ಒಂದಾನೊಂದು ಉದ್ಯಾನವನವರ್ಣನವು ಹೀಗಿರುವುದು:—

"ಯಾ ವಿಲುಸಕಲಪರಮಹಂಸಜನಾವಗಾಹಸಲಿಲಾ ಪರಿಣತಪೃಥುಫಲ ಭರಾನಮ್ರೈರಾಮ್ರೈರ್ಗಗನಕುಹರವಿಸ್ತೃಮರಸೌರಭ ಕುಸುಮವಾಲಾ ಗುರುಭಿರಗುರುಭಿರ್ವಿಟಪಜನಿತತರಣಿಕಿರಣಾವತರಣನಿರೋಧೈಃ ನ್ಯ ಗ್ರೋಧೈರಾಮೂಲಕಲಿತ ಫಲಸ್ತಬಕನಿರಾಡಂಬರೈಃ ಔದುಂಬರೈಃ ಶಾಖಾಭುಜಾಲಿಂಗಿತಲತಾವಧೂಕೈರ್ಮಧೂಕೈಃ ಜಲಧರಪಟಲಲಂಘ ನಾಕಲಹೋದಾರೈಃ ಕೋವಿದಾರೈಃ ವಿಯೋಗಿಜನಮಾನಸವಿತೀರ್ಣ ಗಾಢವರಶೋಕೈರಶೋಕೈಃ ನಿಸ್ಸೀಮಮಧುರಿಮ ಪ್ರಚುರೀ ಮಂಡಿತಫ ಲೈಃಕಂಟಕಿಫಲೈಃ ಮದನವಿಜಯವಿಶುನಬಹಲಮುಕುಲೈರ್ಬಕುಲೈಃ ತಾಂ ಬೂಲಿಕಾಪರಿರಂಭಸಂಪಾದಿತಕುತುಕೈಃ ಕ್ರಮುಕೈಃ ಧವಲಿತದಿಗಂತ ರಾಲಫಲಭಾರೈರ್ನಾರಿಕೇಳೈಃ ಘಟಿತವಿಶಂಕಟತಟಪ್ರದೇಶಾ ಕ್ವಚಿದ್ವಿಕ ಚಕುವಲಯಚಯಶತಭರಿತ ಮಧುರಿಮಧುರೀಣಮಧುರಸಸಪೀತಿಕಕ ರಂಬಿತ ಬಿಬ್ಬೋಕಾಡಂಬರಲೋಲಲೋಲಂಬ ಕದಂಬಮೇಚಕಿತಾಪ ದೇಶೇನ ನಿರಂತರಕಾಳಿಂದೀಸನ್ನಿಧಾನಮಿವಸಂದರ್ಶಯಂತೀ ‡

‡ ವ್ಯಾಸಯೋಗಿಚರಿತಂ ಪುಟ. ೧೯.

## ರು ದ್ರ ಕ ವಿ

ಇತಿ ಶ್ರೀಮದಖಿಲ ಭೂಪಾಲಮೌಳಿಮುಕುಟಲಲಾಮಮಾಲಾಮರೀಚಿ ವೀಚೀಚುಂಬಿತಚರಣಸರೋಜ ಮಯೂರಗಿರಿಕೇಸರಿ ಶ್ರೀಮಹಾರಾಜಾಧಿರಾಜ ಶ್ರೀ ನಾರಾಯಣಶಾಹೋದ್ಯೋಜಿತದಾಕ್ಷಿಣಾತ್ಯರುದ್ರಕವೀಂದ್ರವಿರಚಿತೇ..............' ಎಂಬುದರಿಂದ ಇವನು ದಕ್ಷಿಣದೇಶದವನೆಂದೂ ಮಯೂರಗಿರಿಯ ರಾಜನಾದ ನಾರಾಯಣಶಾಹನಿನ ಆಶ್ರಿತನೆಂಬುದೂ ಗೊತ್ತಾಗುತ್ತದೆ. *

ಇವನ ತಂದೆಯ ಹೆಸರು ಅನಂತ. ತಾತನ ಹೆಸರು ಕೇಶವ.† ಕಾವ್ಯವಿಷಯುವನ್ನು ಲಕ್ಷ್ಮಣಪಂಡಿತನಿಂದ ಕೇಳಿ ಬರೆದುದಾಗಿ ಹೇಳಿದೆ. ಈತನಾರೆಂಬುದು ತಿಳಿಯದು.

**ಕಾಲ:**—ಶಾಕೇ ಭೋಗಿಶಶೀಷುಭೂ (೧೫೧೮) ಪರಿಮಿತೇ ಸಂವತ್ಸರೇ ದುರ್ಮುಖೇ
ಮಾಸೇಚಾಶ್ವಯುಜೇ ಸಿತಪ್ರತಿಪದಿಸ್ಥಾನೇಮಯೂರಾಚಲೇ |
ಶ್ರೀಮಲ್ಲಕ್ಷ್ಮಣಪಂಡಿತೋದಿತಕಥಾಮಾಕರ್ಣ್ಯರುದ್ರಃಕವಿಃ
ಶ್ರೀನಾರಾಯಣಶಾಹಕೀರ್ತಿರಸಿಕಂ ಕಾವ್ಯಂ ವ್ಯಧಾನ್ನಿರ್ಮಲಂ || ೧೦೦ ||

ಶ್ರೀಮದ್ಬಾಗುಲಭೂಮಿಪಾಲತಿಲಕ ಶ್ರೀಶಾಹನಾರಾಯಣ
ಸ್ಫೂರ್ಜತ್ಕೀರ್ತಿಚರಿತ್ರಚಿತ್ರಿತಪದೇ ರಾಷ್ಟ್ರೌಢವಂಶಾಭಿಧೇ
ಥವ್ಯೇ ದಕ್ಷಿಣದಿಗ್ಭವೇನ ಕವಿನಾ ರುದ್ರೇಣ ಸೃಷ್ಟೇ ಮಹಾ
ಕಾವ್ಯೇಸ್ಮಿನ್ ಕೃತವೈರಿವೀರವಿಜಯಃಸರ್ಗಸ್ತು ವಿಂಶೋಽಗಮತ್ ||೧೦೧|| $

ಎಂದು ಹೇಳಲ್ಪಟ್ಟಿರುವುದರಿಂದ ರಾಷ್ಟ್ರೌಢ ‡ ಕಾವ್ಯವು ಶಕ. ಸಂ. ೧೫೧೮ ಅಥವಾ ಕ್ರಿ. ಶ. ೧೫೯೬ರಲ್ಲಿ ಬರೆಯಲ್ಪಟ್ಟಿದಾಗಿ ಹೇಳಿರುವುದರಿಂದ ಇವನು ಕ್ರಿ. ಶ. ೧೬ನೆಯ ಶತಮಾನದವನೆಂಬುದು ಖಂಡಿತವಾಗುತ್ತದೆ.

**ಗ್ರಂಥಗಳು:**—೧) ರಾಷ್ಟ್ರೌಢವಂಶಮಹಾಕಾವ್ಯ
೨) ಜಹಾಂಗೀರಶಹಚರಿತಕಾವ್ಯ

**ರಾಷ್ಟ್ರೌಢವಂಶ ಮಹಾಕಾವ್ಯ:**—ಇದರಲ್ಲಿ ೨೦ ಸರ್ಗಗಳಿರುವುವು. ಇದು ಚಾರಿತ್ರಿಕ ವಿಷಯವಾದುದು. ಕನೋಜಿನ ರಾಜರಲ್ಲಿ ರಾಷ್ಟ್ರೌಢರಾಜರ ಮೂಲಪುರುಷನನ್ನು ಮೊದಲು ಮಾಡಿಕೊಂಡು ತನಗಾಶ್ರಯನಾದ ಮಯೂರ ಗಿರಿಯರಾಜನಾದ ನಾರಾಯಣಶಾಹವರೆಗಿನ ವಂಶಚರಿತೆಯನ್ನು ಬರೆದು

* ರಾಷ್ಟ್ರೌಢವಂಶಮಹಾಕಾವ್ಯದ ಪ್ರತಿಸರ್ಗಾಂತ್ಯಗದ್ಯ

† Ibid Introduction P. 1

$ Ibid ೨೦ನೆಯ ಸರ್ಗ

‡ ರಾಜಪುತ್ರರಲ್ಲಿ 'ರಾಥೋಡ ಎಂಬ ಜಾತಿಯೊಂದಿರುವುದು. ರಾಥೋಡ ಎಂಬುದರ ಸಂಸ್ಕೃತರೂಪವು' 'ರಾಷ್ಟ್ರೌಢ' ಎಂದಾಗಿದೆ.

ಮುಗಿಸಿರುವನು. ನಾರಾಯಣಶಾಹನಿನ ಪೂರ್ವಜರು ಕೊಂಕಣಕ್ಕೂ ಗುಜರಾತಿಗೂ ಮಧ್ಯದಲ್ಲಿದ್ದ ಬಾಗುಲಾಸ್ ಎಂಬ ದೇಶದಿಂದ ಬಂದವರಾದುದರಿಂದ ಈ ರಾಜರಿಗೆ ಮಯೂರಗಿರಿಯ ಬಾಗುಲರೆಂದೂ, ಇವರ ಚರಿತೆಗೆ ಬಾಗುಲಚರಿತವೆಂದೂ ಹೇಳಿದೆ.

ಇದರ ೧೪-೧೭ ಸರ್ಗಗಳು ಋತುವರ್ಣನೆ, ಜಲಕ್ರೀಡಾ, ಮಧ್ಯಾಹ್ನ, ಸಂಧ್ಯಾ' ಸುರತಾದಿವರ್ಣನೆಗಳಿಂದ ಕೂಡಿವೆ. ಯಜ್ಞವರ್ಣನಾವಸರದ ಅಧ್ಯಾಯವು ಪೂರ್ವಮೀಮಾಂಸಾಬದ್ಧವಾಗಿದೆ. ವರ್ಣನೆಗಳು ಸ್ವೈಜವಾದವುಗಳಾಗಿ ಶೈಲಿಯು ಮೃದುವಾಗಿ ವಿಷಯವು ಸೊಗಸಾಗಿ ಸಾಧಿಸಲ್ಪಟ್ಟಿದೆ. ಚಾರಿತ್ರಕದೃಷ್ಟಿಯಿಂದ ಪ್ರಮಾಣಗ್ರಂಥವೆನ್ನಬಹುದು. ಜಹಾಂಗೀರಶಹಚರಿತ ಗ್ರಂಥವು ಉಪಲಬ್ಧವಿಲ್ಲ. ಇದರ ಕೆಲವು ಶ್ಲೋಕಗಳು ರಾಷ್ಟ್ರೌಢವಂಶಮಹಾಕಾವ್ಯದಲ್ಲಿ ಕಂಡುಬರುವುದೆಂದೂ ಗ್ರಂಥಪರಿಶೀಲನದಿಂದ ನಾರಾಯಣಶಾಹನಿನ ಮಗ ಪ್ರತಾಪಶಾಹನೂ ಮತ್ತು ಜಹಾಂಗೀರನೂ ಪರಸ್ಪರಗೆಳೆಯರಾಗಿದ್ದು ರಾಜ್ಯಭಾರ ಮಾಡಿದುದಾಗಿ ಹೇಳಿದೆ.* ರಾಷ್ಟ್ರೌಢವಂಶಮಹಾಕಾವ್ಯದ ಕೆಲವು ಶ್ಲೋಕಗಳು;—

ಧರ್ಮಾಂಭೋ ನಕುಲಸ್ಯ ಲೇಢಿ ರಸನಾಪ್ರಾಂತೇನ ಚಕ್ಷುಃ ಶ್ರವಾಃ
ಸ್ವೈರಂ ಕೇಸರಿಣೋಽಪಿ ಬಾಲಹರಿಣಃ ಶ್ವಾಸಾನಿಲಂ ಜಿಘ್ರತಿ
ಕಿಂ ಬ್ರೂಮೋಽಂಬರಮಧ್ಯಚುಂಬತಿ (ಬಿಸಿ) ಪರಂ ಭಾನೌ ತೃಷಾತಾಕಿಮು
ಚ್ಛಾಯಾಪ್ಯಲ್ಲಸದಾಲವಾಲಸಲಿಲೇ ಮೂಲೇಃ ತರೋರ್ಲೀಯತೇ ॥ ೧೬—೨೨

ಬಿಸಿಲಿನಲ್ಲಿ ದಾರಿ ನಡೆಯುವರ ವಿಚಾರವಾಗಿ:—

ಮಧ್ಯಾಹ್ನೇ ಜಲಕಾಲವೃಂತಮನಿಲಃ ಸರ್ವಾತ್ಮನಾ ಸೇವತೇ
ವಾರಿ ಸ್ವೇದಮಿಷೇಣ ಶೀತಲವಧೂವಕ್ಷೋಜಮಾಲಂಬತೇ
ನಿದ್ರಾ ನೇತ್ರಮುಪೈತಿಪಕ್ಷ್ಮಪಟಲಚ್ಛಾಯಾಶ್ರಯಾದೇವ ಕಿಂ
ಪಾಂಥಾನಾಮಪಿ ಪಾದಯೋರ್ನಪತತಿ ಛಾಯಾಽಪಿಮಾಯಾತ್ವಿತಿ॥ ೧೬ ೨೧

ವಾಯುವು (ಗಾಳಿಯು) ಮಧ್ಯಾಹ್ನದ ಬಿಸಿಲಿನಲ್ಲಿ ಮಾರ್ಗ ನಡೆಯುವರನ್ನು ಜಲಯುಕ್ತವಾದ ಬೀಸಣಿಗೆಗಳ ನೆಪದಿಂದ ಸೇವಿಸುತ್ತಾನೆ. ನೀರು ಬೆವರಿನ ನೆಪದಿಂದ ವಧುವಿನ ಶೀತಲವಕ್ಷೋಜದಂತೆ ಕೃತ್ಯವನ್ನುಂಟುಮಾಡುತ್ತದೆ. ರೆಪ್ಪೆಗಳ ಛಾಯಾನೆಪದಿಂದ ನಿದ್ರೆಯು ಕಣ್ಣನ್ನು ಆಶ್ರಯಿಸುತ್ತದೆ. ನೆರಳಾದರೋ ಬಿಸಲಿನಲ್ಲಿ ಪಾಂಥರು ಮುಂದಕ್ಕೆ ಅಡಿಯಿಡಕೂಡದೆಂದು (ಹೇಳುವಂತೆ) ನೆರಳನ್ನುಂಟುಮಾಡುತ್ತಿದೆ.

* ರಾಷ್ಟ್ರೌಢ ಕಾವ್ಯದ ಮುನ್ನುಡಿ.

# ಕೃ ಷ್ಣ ಕ ವಿ

ಇವನು ಕೇರಳೀಯನು. ನಂಬೂದ್ರಿ ಬ್ರಾಹ್ಮಣನು. ಗ್ರಂಥಾರಂಭದಲ್ಲಿ 'ನಾರಾಯಣಸೂನು ಶ್ರೀಕೃಷ್ಣಪ್ರಣೀತಂ' ಎಂದೂ, ಗ್ರಂಥಾಂತ್ಯದಲ್ಲಿ 'ಇತಿ ಭಾಗವತ ನಾರಾಯಣಸೂನು ಶ್ರೀಕೃಷ್ಣಪ್ರಣೀತಂ' ಎಂದೂ ಇರುವುದರಿಂದ ಭಾಗವತವನ್ನು ನೂರುದಶಕಗಳಾಗಿ ಬರೆದಿರುವ ನಾರಾಯಣಭಟ್ಟನ ಮಗನೆಂದು ತೋರುತ್ತದೆ.

ಮಹಾಮಹೋಪಾಧ್ಯಾಯ ಪಂಡಿತ ದುರ್ಗಾಪ್ರಸಾದರವರು 'ನಾರಾಯಣಸೂನು ಶ್ರೀಕೃಷ್ಣಕವಿ' ಎಂಬ ವಿಚಾರವಾಗಿ "ಸ್ವಾಹಾಸುಧಾಕರ ಪ್ರಬಂಧಕರ್ತುರೇವನಾರಾಯಣಸ್ಯಾಯಂ ಸೂನುರಿತಿಭಾತಿ" ಎಂದು ಹೇಳಿರುವರು.$ ಅಲ್ಲದೆ ಗ್ರಂಥಾಂತ್ಯದಲ್ಲಿ:—

ಶ್ರೀಕೃಷ್ಣರಾಜ ಕರಣೈಕನಿಕೇತನೇನ
ಕೃಷ್ಣೇನ ಭಾಗವತ ಇತ್ಯಭಿಶಬ್ದಿತಸ್ಯ
ನಾರಾಯಣಸ್ಯ ತನಯೇನ ಸಮೀರಿತೇಯಂ
ತಾರಾಸುಧಾಕರಕಥಾ ವಿದುಷಾಂ ಮುದೇಸ್ತು ‖ ೨೦೬

ಎಂಬುದರಿಂದಲೂ ಸ್ಪಷ್ಟಪಡುವುದು.

**ಕಾಲ**:—ಇದು ನಿಜವೆನ್ನುವುದಾದರೆ ಕವಿಯು ಕ್ರಿ. ಶ. ೧೭ನೆಯ ಶತಮಾನದವನೆನಬೇಕಾಗುವುದು.

**ಗ್ರಂಥ**:—ಇವನು 'ತಾರಾಶಶಾಂಕಂ' ಎಂಬ ಕಾವ್ಯವನ್ನು ಬರೆದಿರುವನು. ಇದಕ್ಕೆ 'ತಾರಾಸುಧಾಕರ' ಎಂಬ ಮತ್ತೊಂದು ಹೆಸರಿರುವುದಾಗಿ ಮೇಲಣ ಶ್ಲೋಕದಿಂದ ವ್ಯಕ್ತವಾಗುತ್ತದೆ. ಇದರಲ್ಲಿ ೨೦೬ ಶ್ಲೋಕಗಳಿರುವುವು. ಇದರ ಕೆಲವು ಶ್ಲೋಕಗಳು ಎಂದರೆ ೯೯ನೆಯ ಶ್ಲೋಕಮೊದಲು ೧೧೪ನೆಯ ಶ್ಲೋಕಪೂರ್ತಿಯಾಗಿ ಪ್ರತಿಶ್ಲೋಕಾರಂಭದಲ್ಲಿ ಕಂಡುಬರುವ 'ತಚ್ಚಿಂತಯಾಮಿ ತಚ್ಚಿಂತಯಾಮಿ' ಎಂಬದು ಚೌರಪಂಚಾಶಿಕೆಯ ೫೦ ಶ್ಲೋಕಗಳ ಆರಂಭದಲ್ಲಿ ಕಂಡುಬರುವ 'ಅದ್ಯಾಪಿತಾಂ ಅದ್ಯಾಪಿತಾಂ' ಎಂಬದನ್ನು ಜ್ಞಾಪಕಕ್ಕೆ ತರುವುದಲ್ಲದೆ ಅಲ್ಲಿನ ಸಂದರ್ಭವೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ರೀತಿಯದೆಂದು ತೋರುವುದರಿಂದ ಚೌರಪಂಚಾಶಿಕೆಯನ್ನು ನೋಡಿ ಬರೆದಿರಬಹುದಾಗಿ ಭಾಸವಾಗುತ್ತದೆ.

ಇದರ ಶ್ಲೋಕಗಳು:—

ತಚ್ಚಿಂತಯಾಮಿ ಪರಿಷತ್ಸು ಪರಾಂಗನಾನಾಂ
ಸಭ್ರೂವಿಲಾಸಮಲಸೈರ್ವಲಿತೈರಪಾಂಗೈಃ ।
ಕಂದರ್ಪಕಾರ್ಮುಕಲತೋತ್ಪತಿತೈರಪಾಸ್ತೈಃ
ಧೈರ್ಯಂ ಮಮಾಪಚಿನುತೇ ಸ್ಮ ಹಸನ್ಮುಖೀ ಸಾ ‖ ೯೯

$ ಕಾವ್ಯಮಾಲಾ ೪ನೆಯ ಗುಚ್ಛ ಪುಟ ೫೮.

ತಚ್ಚಿಂತಯಾಮಿ ಚಿಬುಕಾಕಲಿತಾಂಗುಲಿಭ್ರೂ
ಭಂಗಾಭಿರಾಮುದರವಕ್ರಿತವಕ್ತ್ರಮಕ್ಷ್ಣ |
ಸಂಭಾವ್ಯ ಮಾಂ ಮನಸಿ ಪೂರ್ಣಮನೋರಥಾ ಸಾ
ಚಿತ್ರಾರ್ಪಿತೇವ ಯದಭಾತ್ಪುಲಕಾಚಿತಾಂಗೀ|| ೧೦೦

## ರೂ ಪ ಗೋ ಸ್ವಾ ಮಿ

ಇವನು ವಂಗೀಯನು. ಇವನ ಮಾತಾಪಿತೃಗಳಾರೆಂಬದು ತಿಳಿಯದು. ಇವನು ಕ್ರಿ. ಶ. ೧೪೯೦ರಲ್ಲಿ ಜನ್ಮಗ್ರಹಣಮಾಡಿ ಕ್ರಿ. ಶ. ೧೫೫೦ರ ವರೆಗೆ ಜೀವಿಸಿದ್ದು ಹುಸೇನಶಹನ ಆಸ್ಥಾನ ಮಂತ್ರಿಯಾಗಿದ್ದನು. ಇವನ ಸೋದರನಾದ ಸನಾತನೂ ರೂಪಗೋಸ್ವಾಮಿಯಂತೆ ಹುಸೇನಶಹನ ಬಳಿ ಮಂತ್ರಿಪದವಿಯಲ್ಲಿದ್ದನು. ಇವರು ಮಹದೈಶ್ವರ್ಯವಂತರಾಗಿಯೂ, ಮಹಾಮೇಧಾವಿಗಳಾಗಿಯೂ ರಾಜತಂತ್ರಪಟುಗಳಾಗಿಯೂ ಇದ್ದರು. ಕಾಲಕ್ರಮದಲ್ಲಿ ಚೈತನ್ಯ ಧರ್ಮವನ್ನವಲಂಬಿಸಿ ಸನ್ಯಾಸಗ್ರಹಣಮಾಡಿದರು.*

**ಕಾಲ:** —ಮೇಲೆ ಹೇಳಿರುವ ಕಾಲದಿಂದ ಇವನು ಕ್ರಿ. ಶ. ೧೬ನೆಯ ಶತಮಾನದವನೆಂದು ಸ್ಪಷ್ಟವಾಗಿರುವುದಲ್ಲದೆ.—

ನಂದಸಿಂಧುರಬಾಣೇಂದು (೧೫೮೯) ಸಂಖ್ಯೇಸಂವತ್ಸರೇಗತೇ
ವಿದಗ್ಧಮಾಧವಂನಾಮ ನಾಟಕಂಗೋಕುಲೇಕೃತಂ ||†

ಎಂಬ ಶ್ಲೋಕದಿಂದಲೂ ಖಂಡಿತವಾಗುವುದು.

**ಗ್ರಂಥಗಳು**§:—(೧) ಹಂಸದೂತ (೨) ಉದ್ಧವಸಂದೇಶ (೩) ಕೃಷ್ಣಜನ್ಮತಿಥಿ (೪) ಗಾನೋದ್ದೇಶದೀಪಿಕಾ (೫) ಸ್ತವಮಾಲಾ (೬) ವಿದಗ್ಧಮಾಧವ (೭) ಲಲಿತಮಾಧವ (೮) ದಾನಕೇಳಿಕೌಮುದೀ; (೯) ಆನಂದಮಹೋದಧಿ (೧೦) ಭಕ್ತಿರಸಾಮೃತಸಿಂಧು (೧೧) ಉಜ್ಜ್ವಲನೀಲಮಣಿ (೧೨) ಪ್ರಯುಕ್ತಖ್ಯಾತಚಂದ್ರಿಕಾ (೧೩) ಮಧುರಾಮಹಿಮಾ (೧೪) ಪದ್ಯಾವಳಿ (೧೫) ರಘುಭಾಗವತಾಮೃತ (೧೬) ಗೋವಿಂದ ಬಿರುದಾವಳಿ.

ಇವುಗಳಲ್ಲಿ '**ಉಜ್ಜ್ವಲನೀಲಮಣಿ**' ಎಂಬದು ಅಲಂಕಾರ ಗ್ರಂಥ. ಇದಕ್ಕೆ ವಿಶ್ವನಾಥ ಚಕ್ರವರ್ತಿ ಎಂಬವನು 'ಆನಂದಚಂದ್ರಿಕಾ' ಎಂಬ ವ್ಯಾಖ್ಯಾನವನ್ನೂ,

* Bengali Language and Literature P. 504
† ವಿದಗ್ಧಮಾಧವ ಪುಟ ೨೧೯.
§ ವಂಗಭಾಷಾ ಸಾಹಿತ್ಯ ಪುಟ ೫೦೪. Foot Note.

ಜೀವಗೋಸ್ವಾಮಿ ಎಂಬವನು 'ಲೋಚನರೋಚನೀ' ಎಂಬ ವ್ಯಾಖ್ಯಾನವನ್ನೂ ಬರೆದಿರುವರು. 'ಉಜ್ಜ್ವಲನೀಲಮಣಿ' ಎಂಬದಕ್ಕೆ ಆನಂದಚಂದ್ರಿಕಾ ಎಂಬ ವ್ಯಾಖ್ಯಾನ ಕಾಲವು ೧೬೧೮ ಎಂದು.—

ಆಶ್ವಿನೇ ಶುಕ್ಲಪಂಚಮ್ಯಾಂ ವಸುಚಂದ್ರಕಲಾಮಿತೇ (೧೬೧೮)
ಶಾಕೇವೃಂದಾವನೇ ಪೂರ್ಣಭವದಾ**ನಂದಚಂದ್ರಿಕಾ** ||

ಎಂಬ ಶ್ಲೋಕದಿಂದ ಗೊತ್ತಾಗುತ್ತದೆ.$

**ವಿದಗ್ಧಮಾಧವ:**—ಇದು ೭ ಅಂಕಗಳುಳ್ಳ ನಾಟಕ. ರಾಧಾಕೃಷ್ಣರ ವಿನೋದ, ವಿಲಾಸವರ್ಣನೆಗಳಿರುವುವು. ಇದರ ಕೆಲವು ಶ್ಲೋಕಗಳು:—

ಕೃಷ್ಣನು ಮುಂದೆನೋಡಿ—

ಆಸಂಗಃ ಕುಮುದಾಕರೇಷು ಶಿಥಿಲೋ ಭೃಂಗಾವಲೀನಾಮಭೂ
ದ್ವೀಕ್ಷ್ಯಂತೇ ನಿಜಕೋಟರಾಂಕಿತಮುಖಾ ಕ್ರೋಣೇರುಹಂ ಕೌಶಿಕಾಃ
ಸಂಕೋಚೋನ್ಮುಖತಾಂ ಪ್ರಯಾತಿ ಶನಕೈಃ ರೌತ್ತಾನಪಾದೇರ್ದ್ಯುತಿಃ
ಕಿಂ ಭಾನುರ್ನನು ಪೂರ್ವಪರ್ವತತಟೀಮಾರೋಢುಮುತ್ಕಂಠತೇ || ೪—೩'

ಕಪಟೀ ಸ ಲತಾಕುಟೀಮಿಮಾಂ ಸಖಿ ನಾಗಾದಧುನಾಪಿ ಮಾಧವಃ
ಇತಿ ಜಲ್ಪಪರೀತಯಾತಯಾ ಕ್ಲಮದೀರ್ಘಾ ಗಮಿತಾ ಕಥಂ ತಮಿಾ || ೪—೨೭

ತಾಂಬೂಲಂ ಘನಸಾರಸಂಸ್ಕೃತಮದಃ ಕ್ಲಿಪ್ತಂ ಪುರೋ ರಾಧಯಾ
ಹಾರೀಹಂತ ಹರಿನ್ಮಣಿಸ್ತಬಕಿತೋ ಹಾರೋಽಯಮುತ್ತಾರಿತಃ
ಪಾರ್ಷ್ಣೀ ಚೇಯಮುದಾರಸೌರಭಮಯೀ ಚೂಡಾ ನಖೈಃ ಖಂಡಿತಾ
ತಸ್ಯಾಃ ಶಂಸತಿ ವಿಪ್ರಲಂಭಜನಿತಂ ಕುಂಜೋಽಯಮಂತಃ ಕ್ಲಮಂ || ೪—೨೮.

ಲಲಿತೆಯು ಕೃಷ್ಣನನ್ನು ಕುರಿತು:—

ಜಲತಿ ಸಖೀ ಮಮ ರಾಧಾ ಮಂದಾಯದ್ಭವತಿ ನೀಲಿನೀರಾಗಾ
ಕೃಷ್ಣ ತ್ವಂ ನಂದಸಿ ಯದ್ಧರ್ಸ್ಯೋಹರಿದ್ರರಾಗೋಽಸಿ || ೬—೨೮

---

## ರತ್ನಖೇಟ ಶ್ರೀನಿವಾಸದೀಕ್ಷಿತ

ಇವನ ವಂಶಾವಳಿಯು ಹೀಗಿರುವುದು:—

ಯಃ ಷಷ್ಠೋ ಭಾಸ್ಕರಸ್ಯ ಕ್ರತುವರಮಹಿತ**ಶ್ರೀಭವಸ್ವಾಮಿ**ಯಜ್ವಾ
**ಶ್ರೀಕೃಷ್ಣಾರ್ಯಸ್ಯ** ದೈನಂದಿನಕೃತಿಕೃತಿನಃ ಸೋಮಪಃ ಪಂಚಮೋ ಯಃ
ನಪ್ತಾ ಯೋಽದ್ವೈತಚಿಂತಾಮಣಿವಿರಚಯಿತುಃ ಪೌಂಡರೀಕಾದಿಯಜ್ವಾ
ಸರ್ವಜ್ಞಾತುಃ **ಕುಮಾರಾಹ್ವಯಮಿಳಿತಭವಸ್ವಾಮಿ**ಯಜ್ವಾಭಿಧಸ್ಯ||

$ ಉಜ್ಜ್ವಲನೀಲಮಣಿ ಪುಟ ೪೯೮.

ಶ್ರೀಕೃಷ್ಣಾರ್ಯಸ್ಯ ಪೌತ್ರಃ ಪ್ರತಿದಿವಸಮವಿಶ್ರಾಂತಮನ್ನಪ್ರದಾತು
ರ್ಜ್ಯೋತಿಷ್ಟೋಮಾದಿಯಷ್ಟುರ್ವಿವಿಧಕೃತಿಕೃತಃ ಸರ್ವವಿದ್ಯಾಧಿಕಸ್ಯ
ಯಃ ಶ್ರೀವೈಕುಂಠಘಂಟಾಮಣಿರಿತಿ ಮಹಿತಶ್ರೀಭವಸ್ವಾಮಿಭಟ್ಟ
ಸ್ಯಾದ್ವೈತಜ್ಞಾನಧೂತಾಖಿಲಕಲುಷಗಣಸ್ಯಾತ್ಮಜಃ ಸ್ವಾತ್ಮವೇತ್ತಾ ||

ಎಂಬುದನ್ನು ಸಂಗ್ರಹಿಸಿದರೆ:—

ಶ್ರೀಭವಸ್ವಾಮೀ (ಭಾಷ್ಯಕಾರ)
|
ಶ್ರೀಕೃಷ್ಣಾರ್ಯಃ (ಆಹ್ನಿಕಪ್ರಣೇತಾ)
|
ಕುಮಾರಭವಸ್ವಾಮೀ (ಅದ್ವೈತಚಿಂತಾಮಣಿಕಾರ)
|
ಶ್ರೀಕೃಷ್ಣಾರ್ಯಃ
|
ಶ್ರೀಭವಸ್ವಾಮಿಭಟ್ಟ.
|
ಶ್ರೀರತ್ನಖೇಟ ಶ್ರೀನಿವಾಸಾಧ್ವರೀ

ಎಂದಾಗುವುದು.

ಇವನ ತಂದೆಯು ಇಟ್ಟಹೆಸರು ಶ್ರೀನಿವಾಸ ದೀಕ್ಷಿತನೆಂದು. ರತ್ನಖೇಟ ಶ್ರೀನಿವಾಸ ದೀಕ್ಷಿತನೆಂಬುದು ಇವನ ವ್ಯವಹಾರನಾಮು. ಇವನು:—

ಸಂಧ್ಯಾಸಂಧುಕ್ಷಿತಾಂಭೋಧರನಲಿಕೆಗಣಾದುದ್ಗತಾನ್ಸೀಸಖಂಡಾಂ
ಸ್ತಾರಾಕಾರಾನಿರೋದ್ಧುಂ ಶಶಿರವಿಕಪಟಾದ್ವಿಭೃತೋ ರತ್ನಖೇಟೌ |
ಅನ್ಯೋನ್ಯಂ ಯುಧ್ಯಮಾನಾವುದಯಚರಮಭೂಭೃತ್ಪ್ರವೀರಾವಿತಿದ್ರಾ
ಗುಕ್ತ್ಯಾಖ್ಯಾತಾಪರಾಖ್ಯಃ ಕ್ಷಿತಿಪತಿಚವಸಾ ರತ್ನಖೇಟಾಧ್ವರೀತಿ ||

ಎಂದು ಸಂಧ್ಯಾವರ್ಣನಮಂ ಮಾಡಿದುದರ ಚಮತ್ಕಾರಕ್ಕೆ ಮೆಚ್ಚಿ ರಾಜನು ಇವನನ್ನು 'ರತ್ನಖೇಟಾಧ್ವರೀ' ಎಂದು ಕರೆದುದಾಗಿ ಹೇಳಿದೆ.

**ಕಾಲ:**—ಇವನು ಅಪ್ಪಯ್ಯದೀಕ್ಷಿತ, ಭಟ್ಟೋಜೀದೀಕ್ಷಿತನ ಸಮಕಾಲೀನನೆಂದು ಹೇಳಿರುವುದರಿಂದ ಕ್ರಿ. ಶ. ೧೬ ನೆಯ ಶತಮಾನದವನು.

ಗ್ರಂಥಗಳು:—

ಅದ್ವೈತಾಸ್ತ್ರವಕೌಸ್ತುಭಂ ವ್ಯರಚಯದ್ಯೋ ಮುದತಾರಾವಳೀಂ
ಮಧ್ವಧ್ವಂಸನಬೌದ್ಧತಂತ್ರಮಥನೇ ವೇದಾಂತವಾದಾವಳೀಂ
ಪ್ರಖ್ಯಾತಂ ಮಣಿದರ್ಪಣಂ ಸಮಯಸರ್ವಸ್ವಂ ವಿಧೇರ್ನಿರ್ಣಯಂ
ತತ್ತ್ವಾನಾಂ ಪರಿಶುದ್ಧಿ ಬೋಧವಿಮಲಂ ರತ್ನಪ್ರದೀಪಂ ಸ್ಮೃತೇಃ |

ಯೋ ಭಾವನಾಪುರುಷವರ್ಯಮುಖಾನ್ಯಕಾರ್ಷೀತ್
ವಷ್ಟಾದಶಾಪಿ ಚ ದಶಾದ್ಭುತರೂಪಕಾಣಿ
ಭಾಷೋತ್ತರಾಣಿ ಶಿತಕಂಠಜಯಾದಿಮಾನಿ
ಕಾವ್ಯಾನಿ ಷಷ್ಟಿಮನಸೋದವ್ಯತಾಯಿತಾನಿ ||

ಧನ್ಯಷ್ಟನ್ಮಮನೋವಿನೋದನಿಪುಣಾಃ ಸಾಹಿತ್ಯಸಂಜೀವಿನೀ
ಭಾವೋದ್ಭೇದರಸಾಸ್ವಾದಿಕೃತಯಃ ಸಾರೇಶತಂ ಯತ್ಕೃತಾಃ
ಅನ್ಯೇಕಾವ್ಯದ್ರರಸಾರ್ದ್ರಸುಂದರಗಿರಃ ಕ್ಷುದ್ರಪ್ರಬಂಧಾಃ ಶತಂ
ಛಂದೋಜ್ಯೋತಿಷಮಂತ್ರತಂತ್ರವಿಷಯಾ ಭಾಷಾಪ್ರಬಂಧಾಸ್ತಥಾ ||

ಅನ್ಯಾಶ್ಚ ಯಸ್ಯ ಕೃತಯೋ ನಿಖಿಲಾಗಮಾಂತ
ಸಿದ್ಧಾಂತಿತಾಂತರ ನಿರಂತರಸೂಕ್ತಿಗುಂಭಾಃ
ಷಟ್ತ್ರಿಂಸೀಸಕಲ ಮರ್ಮವಿವೇಕ ಕರ್ಮ
ಕರ್ಮಕ್ಷಮಾಃ ಸುಕೃತಿನಾಂ ಮುದಮಾವಹಂತಿ ||



## ೧೭ನೆಯ ಶತಮಾನ

### ಜ ಗ ನ್ನಾ ಥ ಪ ಂ ಡಿ ತ

"ಆಸೀತ್ತ್ರೈಲಂಗಾಭಿಜನೋ ವೇಗಿನಾಡಕುಲೋತ್ಪನ್ನಃ ಪೇರುಭಟ್ಟಾಖ್ಯೋ ಮಹೀಸುರಸತ್ತಮಃ ಯೋ ವಾರಾಣಸ್ಯಾಂ ಜ್ಞಾನೇಂದ್ರಭಿಕ್ಷೋರ್ವೇದಾಂತಶಾಸ್ತ್ರಂ, ಮಹೇಂದ್ರಪಂಡಿತಾನ್ನ್ಯಾಯವೈಶೇಷಿಕದರ್ಶನೇ, ಖಂಡದೇವಾತ್ಪೂರ್ವಮೀಮಾಂಸಾಂ, ಶೇಷೋಪಾಹ್ವವೀರೇಶ್ವರಪಂಡಿತಾಚ್ಚ ಮಹಾಭಾಷ್ಯಮಧೀತವಾನ್. ತಸ್ಮಾಲ್ಲಕ್ಷ್ಮೀನಾಮಿಕಾಯಾಂ ತದ್ಧರ್ಮಪತ್ನ್ಯಾಂ ಜಗನ್ನಾಥೋ ಜನ್ಮಲೇಭೇ ಪಠಿತವಾಂಶ್ಚ ನಿಖಿಲಾನಿ ಶಾಸ್ತ್ರಾಣಿ ಪ್ರಾಯಃ ಸ್ವಪಿತುರೇವ"

ಎಂಬುದರಿಂದ ಇವನು ತ್ರೈಲಂಗದೇಶದಲ್ಲಿನ ವೇಗಿನಾಡಕುಲೋತ್ಪನ್ನನಾದ ಪೇರುಭಟ್ಟನೆಂಬ ಬ್ರಾಹ್ಮಣ ಮತ್ತು ಈತನ ಧರ್ಮಪತ್ನಿಯಾದ ಲಕ್ಷ್ಮೀ ಎಂಬವರಲ್ಲಿ ಜಗನ್ನಾಥನು ಜನ್ಮಗ್ರಹಣ ಮಾಡಿ ಕಾಲಕ್ರಮದಲ್ಲಿ ಸಕಲಶಾಸ್ತ್ರಗಳನ್ನೂ ತಂದೆಯ ಬಳಿಯಲ್ಲಿ ಕಲಿತನು ಎಂಬದು ಸ್ಪಷ್ಟವಾಗುತ್ತದೆ.*

ಗೋದಾವರೀ ಮಂಡಲಕ್ಕೆ ಸೇರಿದ ಅಮಲಾಪುರದ ಬಳಿಯಣ (ಮುಂಗಡ) ಎಂಬ ಗ್ರಾಮವು ಈತನ ಜನ್ಮಭೂಮಿ. ಇವನ ಮನೆಯ ಹೆಸರು ಉಪದ್ರಷ್ಟವಾರ

* Introduction to Rasagangadhara. P 2.

ಎಂದು. ಒಟ್ಟಿನಲ್ಲಿ ಇವನು ಆಂಧ್ರದೇಶದವನೆಂದು ಪುನಃ ಹೇಳಬೇಕಾದುದಿಲ್ಲ.§ ಇವನು ಸಕಲ ಶಾಸ್ತ್ರಾಧೀತಸಂಪನ್ನನಾಗಿ ದೇಶಾಟನಕ್ಕಾಗಿ ಹೊರಟು ಯಾರಾದರೊಬ್ಬ ರಾಜಾಶ್ರಯವನ್ನು ಕೋರಿ ದೆಹಲಿಗೆ ಬಂದು ಆಗ ದೆಹಲಿಯ ಸಾರ್ವಭೌಮನಾಗಿದ್ದ ಷಹಜಹಾನನ ಆಶ್ರಯವನ್ನು ಹೊಂದಿ 'ಪಂಡಿತರಾಜ' ಎಂಬ ಬಿರುದನ್ನುಗಳಿಸಿ ಮಾನ್ಯನಾಗಿದ್ದುದಲ್ಲದೆ ಇವನ ಹಿರಿಯ ಮಗನಾದ ದಾರಾಷಹನ ವಿಶ್ವಾಸಪಾತ್ರನಾಗಿರುತ್ತಿದ್ದನು. ಎಂಬದು:—

ಪ್ರಾಪ್ತಯೌವನಶ್ಚಾಶ್ರುತೀಚ್ಛಯಾ ದಿಲ್ಲೀನಗರೀಂ ಸಮಾಗತ್ಯ ಶಕ್ರೋಪಮವೈಭವಸ್ಯ ಶಾಹಜಹಾನಾಭಿಧಯವನಸಾರ್ವಭೌಮಸ್ಯ ಸಂಸದಿ ಪ್ರವೇಶಂ ಲಬ್ಧವಾನ್ ಅಧಿಗತವಾಂಶ್ಚ ನಿಜವಿದ್ಯಾಚಮತ್ಕಾರ ಪರಿತೋಷಿತಾತ್ತಸ್ಮಾದೇವ ಪಡಿಂತರಾಜಪದವೀಂ ಸ್ಥಿತಶ್ಚ ಮಧ್ಯಮೇವಯಸಿ ಪ್ರಾಯಸ್ತತ್ರೈವ ತತ್ಸವಿಧಾಪೇತತನ್ನೂನೋರ್ದಾರಾಶಿಕೋಹಸ್ಯ ಸವಿಧೇಚ ಎಂಬುದರಿಂದ ಸ್ಫುಟವಾಗುತ್ತದೆ.

**ಕಾಲ:**—ಶಹಾಜಹಾನ ಮಹೀಪತಿಸ್ತು ೧೬೨೮ ಕ್ರಿಸ್ತಾಬ್ದೇ ರಾಜಸಿಂಹಾಸನ ಮಧಿರೂಢಃ ೧೬೫೮ ಕ್ರಿಸ್ತಾಬ್ದೇ ಔರಂಗಜೇಬನಾಮ್ನಾಸ್ವಪುತ್ರೇಣ ಕಾರಾಗಾರೇನಿವೇಶಿತಃ, ೧೬೬೬ ಕ್ರಿಸ್ತಾಬ್ದೇ ಚ ಪಂಚತ್ವಂಗತಃ ದಾರಾಶಾಹಸ್ತು ಪ್ರಾಗೇವ ದುರ್ದಶಾಮನುಭಾವ್ಯ ಔರಂಗಜೇಬೇನಘಾತಿತಃ |

ಎಂಬುದರಿಂದ ಷಹಜಹಾನನು ಕ್ರಿ. ಶ. ೧೬೨೮ರಲ್ಲಿ ಸಿಂಹಾಸನವನ್ನು ಹತ್ತಿ ರಾಜ್ಯವಾಳುತ್ತಿದ್ದು ಕ್ರಿ. ಶ. ೧೬೫೮ರಲ್ಲಿ ಮಗನಾದ ಔರಂಗಜೇಬನಿಂದ ಸೆರೆಗೊಯ್ಯಲ್ಪಟ್ಟು ಕ್ರಿ ಶ. ೧೬೬೬ರಲ್ಲಿ ಪಂಚತ್ವವನೈದಿದನೆಂದೂ, ಇದಕ್ಕೆ ಮೊದಲೇ ದಾರಾಶಹನು ದುರ್ದಶಾಪನ್ನನಾಗಿದ್ದು ಔರಂಗಜೇಬನಿಂದ ಕೊಲ್ಲಲ್ಪಟ್ಟುದಾಗಿ ಖಂಡಿತವಾಗುತ್ತದೆ. ಇದರಿಂದ ಜಗನ್ನಾಥನು ತನ್ನ ಯೌವನ ಮತ್ತು ಮಧ್ಯಕಾಲವೆಲ್ಲವನ್ನೂ ದಿಲ್ಲೀಶ್ವರನ ಸಭೆಯಲ್ಲಿ ಕಳೆದುದಾಗಿ,

" ತ್ರೈಲವಂಗಂಶೋದ್ಭವಃ ಪೇರಮಭಟ್ಟಸೂನುಃ ಅನೇಕಗ್ರಂಥಕರ್ತಾಪಂಡಿತರಾಜೋಜಗನ್ನಾಥೋ ದಿಲ್ಲೀಬಾದಶಹಸ್ಯಶಾಹಜಹಾನಸೂನೋರ್ದಾರಾಶಹಸ್ಯ ಸಭಾಯಾಮಾಸೀತ್ ಯತೋಽನೇನ ಜಗದಾಭರಣಕಾವ್ಯೇದಾರಾಶಾಹಸ್ಯೈವಯಶೋವರ್ಣನಂಕೃತಮಸ್ತಿ " ಎಂದಿರುವುದರಿಂದಲೂ:—

" ದಿಲ್ಲೀವಲ್ಲಭಪಾಣಿಪಲ್ಲವತಲೇನೀತಂ ನವೀನಂವಯಃ " ಇತುಕ್ತಂಸಚದಾರಾಶಹಃ ೧೬೫೯ ಮಿತ ಕ್ರಿಸ್ತ ಸಂವತ್ಸರಪರ್ಯಂತಮಾಸೀತ್ ಎಂದು ಹೇಳಲ್ಪಟ್ಟಿರು

§ ಸಂಸ್ಕೃತ ಕವಿಜೀವಿತವು ಪುಟ.

ವುದರಿಂದ ಖಂಡಿತವಾಗುತ್ತದೆ. ಜಗನ್ನಾಥನು ತನ್ನ ವೃದ್ಧಾಪ್ಯವನ್ನು ಕಾಶಿಯಲ್ಲಿಯೋ ಮಧುರೆಯಲ್ಲಿಯೋ ಕಳೆದುದಾಗಿಯೂ ಇವನು ಕ್ರಿ. ಶ. ೧೭ನೆಯ ಶತಮಾನದಲ್ಲಿದ್ದವನೆಂಬುದು—"ಪಂಡಿತರಾಜೋಽಪಿ ವಾರ್ಧಕೇಕಾಶ್ಯಾಂ ಮಧುರಾಯಾಂ ವಾಗತ್ವಾಪರಮೇಶ್ವರಾರಾಧನೇನ ವಯಃ ಶೇಷಂ ನೀತವಾನ್. ತಸ್ಮಾತ್ ಕ್ರಿಸ್ತಾಬ್ದೀಯ ಸಪ್ತದಶಶತಕ ಮಧ್ಯಭಾಗೇ ಪಂಡಿತರಾಜೋ ಆಸೀದಿತಿಸುವ್ಯಕ್ತಮೇವ" ಎಂಬುದರಿಂದ ಹೇಳಲಾಗುತ್ತದೆ.

ಪಂಡಿತ ರಾಜ ಜಗನ್ನಾಥನ ವಿಚಾರವಾಗಿ ಕಾಲವನ್ನನುಸರಿಸಿ ಹೇಳತ್ತಬಂದಿರುವ ಅನೇಕಕಥೆಗಳ ಸತ್ಯಾಸತ್ಯವಿಚಾರವಿಮರ್ಶನವು ಪ್ರಕೃತ ಆವಶ್ಯಕವೆಂದು ತೋರುವುದು.

ಪಂಡಿತ ಜಗನ್ನಾಥನ ವಿಚಾರವಾಗಿ ಲೋಕವು ಏನನ್ನುವುದು ?

(೧) ಜಗನ್ನಾಥನು ದೇಶಾಟನಕ್ಕಾಗಿ ಹೊರಟು ಜಯಪುರಕ್ಕೆ ಬಂದು ಅಲ್ಲಿ ಒಂದು ಪಾಠಶಾಲೆಯನ್ನು ಸ್ಥಾಪಿಸಿ ಅಲ್ಲಿ ಪಾಠ ಪ್ರವಚನಗಳನ್ನು ನಡೆಯಿಸುತ್ತಿರಲು ಅಲ್ಲಿಗೆ ದಿಲ್ಲಿಯಿಂದ ಬಂದಿದ್ದ ಕಾಜಿಯೊಬ್ಬನು ಹಿಂದೂಮತವು ಪುರಳಿಲ್ಲದುದು. ಮಹಮ್ಮದ ಮತವು ಸರ್ವಮತ ಶ್ರೇಷ್ಠವೆಂದು ಹೇಳುವುದನ್ನು ಕೇಳಿ ಜಗನ್ನಾಥನು ಆ ಮತಕ್ಕೆ ಸಂಬಂಧಿಸಿದ ಸಕಲ ಶಾಸ್ತ್ರಂಗಳನ್ನೂ ಕೆಲವು ಕಾಲದಲ್ಲಿ ಕಲಿತು ಅವರೊಡನೆ ವಾದಿಸಿ ವಿಜಯಿಯಾದುದನ್ನು ತಿಳಿದು ರಾಜನು ಜಗನ್ನಾಥನನ್ನು ಸತ್ಕರಿಸಿ ತನ್ನ ಸಭಾಸದನನ್ನಾಗಿ ಮಾಡಿಕೊಂಡನು.

(೨) 'ಲವಂಗಿ' ಎಂಬ ಯುವನ ಕನ್ಯೆಯು ತನ್ನ ತಂದೆಯ ಆಸ್ಥಾನಕ್ಕೆ ಬಂದ ಪಂಡಿತರಾಜ ಜಗನ್ನಾಥನ ಯೌವನ ಸೌಂದರ್ಯಾತಿಶಯಗಳನ್ನೂ ಅವನ ಪಾಂಡಿತ್ಯವನ್ನೂ ಕೇಳಿ ಅವನನ್ನು ನೋಡಲೆಳಸಿ ಅವನನ್ನು ನೋಡುವ ಸುಸಂಧಿಯನ್ನು ಹೇಗೋ ಕಲ್ಪಿಸಿಕೊಂಡು ಸೌಂದರ್ಯಮುಗ್ಧಳಾಗಿರಲು ಒಂದಾನೊಂದುದಿವಸ ರಾಜನು ಜಗನ್ನಾಥನೊಡನೆ ಚದುರಂಗವನ್ನಾಡುತ್ತಿದ್ದಾಗ ತೃಷಾರ್ತನಾದ ರಾಜನು ಸವಿನೀರನ್ನು ತರುವಂತೆ ಲವಂಗಿಗೆ ಹೇಳಿದನು. ಅದರಂತೆ ಸಣ್ಣ ಕುಂಭದಲ್ಲಿ ನೀರನ್ನು ತರುತ್ತಿರುವ ಲವಂಗಿಯನ್ನು ನೋಡಿಆನಂದಿಸಿ ಪಂಡಿತವರ! ನೀನು ಲವಂಗಿಯನ್ನು ಬಣ್ಣಿಸೆಂದು ಆಜ್ಞಾಪಿಸಲು ಜಗನ್ನಾಥನು ಬಹು ಸಡಗರದಿಂದ.-

ಯವನೀರಮಣೀ ವಿಪದಃ ಶಮನೀ ಕಮನೀಯತಮಾ ನವನೀತಸಮಾ
ಉಹಿಊಹಿವಚೋಽಮೃತಪೂರ್ಣಮುಖೀ ಸ ಸುಖೀ ಜಗತೀಹ ಯದಂಕಗತಾ ||
ಯವನೀನವನೀತಕೋಮಲಾಂಗೀ ಶಯನೀಯೇ ಯದಿ ನೀಯತೇ ಕದಾಚಿತ್
ಅವನೀತಲಮೇವ ಸಾಧು ಮನ್ಯೇ ನವನೀ ಮಾಘವನೀ ವಿನೋದಹೇತುಃ ||

ಎಂದೂ,

ಇಯಂಸುಸ್ತನೀಮಸ್ತಕನ್ಯಸ್ತಕುಂಭಾ
ಕುಸುಂಭಾರುಣಂ ಚಾರುಚೇಲಂದಧಾನಾ
ಸಮಸ್ತಸ್ಯಲೋಕಸ್ಯಚೇತಃ ಪ್ರವೃತ್ತಿಂ
ಗೃಹೀತ್ವಾಘಟೀಸ್ಥಾಪಯಿತ್ವೇವಭಾತಿ ||

ಎಂದು ವರ್ಣಿಸಿದುದನ್ನು ರಾಜನುಕೇಳಿ ಸಂತುಷ್ಟನಾಗಿ ಎಲೈ! ಪಂಡಿತರಾಜ! ನಿನಗೆ ಬೇಕಾದುದನ್ನು ಕೇಳು ತಪ್ಪದೆ ಕೊಡುವೆನೆನಲು ಜಗನ್ನಾಥನು— ಎಲೈ! ರಾಜನೆ!

ನ ಯಾಚೇ ಗಜಾಳಿಂ ನ ವಾ ವಾಜಿರಾಜಂ
ನ ವಿತ್ತೇಷುಚಿತ್ತಂ ಮದೀಯಂ ಕದಾಪಿ
ಇಯಂ ಸುಸ್ತನೀಮಸ್ತಕನ್ಯಸ್ತಹಸ್ತಾ
ಲವಂಗೀಕುರಂಗೀದೃಗಂಗೀಕರೋತು ||

ಎಂದು ಹೇಳಿದುದನ್ನು ಕೇಳಿ ಲವಂಗಿಯನ್ನು ಮದುವೆ ಮಾಡಿಕೊಟ್ಟನು.

(೩) ದಿಲ್ಲೀಶ್ವರನ ಅನುಗ್ರಹಕ್ಕೆ ಪಾತ್ರನಾಗಿ ಸದಾನಂದನಾಗಿರುತ್ತಿದ್ದಾಗ ಮತ್ತೊಬ್ಬರಾಜನು ತನ್ನಲ್ಲಿ ಕೊಂಚಕಾಲವಿರಬೇಕೆಂದು ಪ್ರಾರ್ಥಿಸಿ ಕೇಳಿಕೊಂಡುದಕ್ಕೆ ಜಗನ್ನಾಥನು ಪ್ರತ್ಯುತ್ತರವಾಗಿ:—

ದಿಲ್ಲೀಶ್ವರೋವಾ ಜಗದೀಶ್ವರೋವಾ
ಮನೋರಥಾನ್ಪೂರಯಿತುಂಸಮರ್ಥಃ
ಅನ್ಯೈರ್ನೃಪಾಲೈಃಪರಿದೀಯಮಾನಂ
ಶಾಕಾಯವಾಸ್ಯಾಲ್ಲವಣಾಯವಾಸ್ಯಾತ್ ||

ಎಂದು ಬರೆದು ಕಳುಹಿಸಿದನು.

(೪) ಜಗನ್ನಾಥನು ಕೇವಲ ತಪಸ್ಸಿನಿಂದ ಯಾವುದೋ ದೇವತೆಯನ್ನು ವಶಪಡಿಸಿಕೊಂಡಂತೆಯೂ, ಸಂತುಷ್ಟಳಾದಾದೇವತೆಯು ಎಲೆ! ಜಗನ್ನಾಥ!

ಆಕುರುದೇಶಂವಿಚರೇರ್ಮಾ ಕುರುಪರವಾದಿಸಿರ್ಜಯೇಶಂಕಾಂ
ಸ್ವೀಕುರುವರಮೇಕಂ ಮೇಚ್ಛಾಕುರುಭೋ! ವತ್ಸ! ಶಾಸ್ತ್ರೇ ||

ನೀನು ಈ ಕುರುದೇಶಗಳೆಲ್ಲವನ್ನೂ ಸಂಚರಿಸಿ ಪ್ರತಿವಾದಿಗಳನ್ನು ಗೆದ್ದು. ಶಾಸ್ತ್ರಾರ್ಥಗಳನ್ನುಪದೇಶಿಸುವನಾಗು ಹೆದರಬೇಡ. ಎಂದು ವರವನ್ನುಕೊಟ್ಟಳು.

೫) ಮಹಾವೈಯ್ಯಾಕರಣನಾದ ನಾಗೇಶಭಟ್ಟನಗುರುವಾದ ಹರದೀಕ್ಷಿತನು ಚಕ್ರವರ್ತಿಯಿಂದ ಬಹುಮಾನವನ್ನು ಹೊಂದಿ ಬರಬೇಕೆಂದು ಡಿಲ್ಲಿಗೆ ಬಂದು ಮುಂಚಿತವಾಗಿ ಜಗನ್ನಾಥನ ಬಳಿಗೆ ಬಂದು ವಾದಕ್ಕೆ ಕರೆಯಲು ಅಂತಾಗಲೆಂದು ಜಗನ್ನಾಥನು ಮಾರನೆಯ ದಿವಸ ಒಡ್ಡೋಲಗಕ್ಕೆ ಹೋಗುವ ಸಮಯದಲ್ಲಿ

ಜಯವನ್ನು ಕೊಡುವ ತಾಯಿತಿಯೊಂದನ್ನು ಧರಿಸಿಕೊಂಡು ವಾದದಲ್ಲಿ ಹರದೀಕ್ಷಿತನನ್ನು ಪರಾಜಿತನನ್ನಾಗಿ ಮಾಡಲು ಹರದೀಕ್ಷಿತನು ಖಿನ್ನನಾಗಿ ಮನೆಗೆ ಬಂದು ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸಿ ಅವಳಿಂದ ವರವನ್ನು ಪಡೆದು ಮೂರನೆಯ ದಿನ ರಾಜನ ಒಡ್ಡೋಲಗದಲ್ಲಿ ಪಂಡಿತರಾಜನನ್ನು ಸೋಲಿಸಿದನು.

(೬) ಪಂಡಿತರಾಜನು ತನ್ನ ಕಾಲವೆಲ್ಲವನ್ನೂ ಯವನಿಯೊಡನೆ ಕಳೆದು ಅವಿಚಾರತೆಯಿಂದ ಇದುವರೆಗೆ ನಡೆಯಿಸಿದ ಹಿಂದಣಕೃತ್ಯಗಳಿಗೆ ಪರಿತಾಪಗೊಂಡು ಶೇಷಾಯುಷ್ಯವನ್ನು ಕಾಶಿಯಲ್ಲಿ ಕಳೆಯಲಾಶಿಸಿ ಯವನಿಯೊಡನೆ ಹೋಗಿ ಕಾಲಕ್ಷೇಪ ಮಾಡುತ್ತಿರಲು ಮಹಾಶ್ರೋತ್ರಿಯನಾದ ಅಪ್ಪಯ್ಯದೀಕ್ಷಿತನು ಯಾತ್ರಾರ್ಥಿಯಾಗಿ ಕಾಶಿಗೆ ಬಂದು ಚಂದ್ರಾರ್ಧಚೂಡನಂ ಸೇವಿಸಿ ಪಂಡಿತ ಜಗನ್ನಾಥನು ಇಲ್ಲಿರುವನೆಂಬುದನ್ನು ತಿಳಿದು ಅವನನ್ನು ನೋಡಬೇಕೆಂದು ಹೋದವೇಳೆಯಲ್ಲಿ ಯವನಿಯೊಡನೆ ಏಕಶಯ್ಯಾಗತನಾಗಿರ್ದುದನ್ನು ನೋಡಿ, ಎಲೈ! ಪಂಡಿತರಾಜ!

ಕಿಂನಿಶ್ಶಂಕಂಶೇಷೇಶೇಷೇ ವಯಸಃ ಸಮಾಗತೋಮೃತ್ಯುಃ
ಅಥವ ಸುಖಂ ಶಯೀದಾ ನಿಕಟೇಜಾಗರ್ತಿ ಜಾಹ್ನವೀಜನನೀ ॥

ಎಂದು ಹೇಳಿ ಹೊರಟು ಹೋದನು

(೭) ಕಾಶಿಯ ಭೂಸುರ ವೃಂದವು ಸಭೆಯನ್ನುಮಾಡಿ ಪಂಡಿತ ರಾಜನಿಗೆ ಪ್ರಾಯಶ್ಚಿತ್ತವನ್ನು ಸಮರ್ಥಿಸಿ ಪುನಃ ಹಿಂದೂಮತಕ್ಕೆ ಸೇರಿಸಿಕೊಳ್ಳುವುದಾಗಿ ಜಗನ್ನಾಥನಿಗೆ ಹೇಳಿಕಳುಹಿಸಲು ಜಗನ್ನಾಥನು ಯವನಿಯನ್ನು ಬಿಡಲಾರದೆ ಗಂಗಾತಟವನ್ನಾಶ್ರಯಿಸಿ ೫೨ ಶ್ಲೋಕಗಳಿಂದ ಗಂಗಾಸ್ತೋತ್ರವನ್ನು ಮಾಡಿದಂತೆಯೂ ೫೨ ಮೆಟ್ಟಿಲುಗಳ ಕೆಳಗೆ ಪ್ರವಹಿಸುತ್ತಿದ್ದ ಜಾಹ್ನವಿಯು ಮುದಿತ ಹೃದಯಳಾಗಿ ಪ್ರತಿಯೊಂದು ಶ್ಲೋಕಕ್ಕೆ ಒಂದೊಂದು ಮೆಟ್ಟಲಿನಂತೆ ಮೇಲಕ್ಕೇರಿ ಬಂದು ಪಂಡಿತರಾಜನೊಡನೆ ಯವನಿಯನ್ನು ಕರೆದುಕೊಂಡು ಹೋದಳು. ಇದೇ ಗಂಗಾಲಹರೀ ಎಂಬುದು.

ಮೇಲೆ ಹೇಳಿದ ವಿಚಾರಗಳನ್ನು ಒಂದೊಂದಾಗಿ ತೆಗೆದುಕೊಂಡು ವಿಮರ್ಶೆ ಮಾಡೋಣ!

೧) ಮೊದಲನೆಯ ಕಥೆಯಿಂದ ಜಗನ್ನಾಥನು ಆಂಧ್ರದೇಶದವನಾಗಿದ್ದು ದೆಹಲಿಗೆ ಹೋದಂತೆಯೂ, ಅವನು ಸಂಸ್ಕೃತದಲ್ಲಿ ಹೇಗೆ ಪಂಡಿತನೋ ಹಾಗೆ ಪರ್ಷಿಯನ್ ಭಾಷೆಯಲ್ಲಿಯೂ ಪಂಡಿತನೆಂದೂ, ಇವನದೆಂದು ಅಲ್ಲಲ್ಲಿ ದೊರೆಯುವ ಶ್ಲೋಕಗಳಲ್ಲಿ ಅರ್ಧ ಸಂಸ್ಕೃತ ಮತ್ತು ಅರ್ಧಪರ್ಷಿಯನ್ ಭಾಷೆಯ ಶಬ್ದಗಳು ಪೋಣಿತವಾಗಿರುವುವೆಂದೂ, ಜ್ಯೋತಿಷ ಸಂಬಂಧವಾದ ಯಾವುದೋ ಪರ್ಷಿಯನ್ ಗ್ರಂಥವನ್ನು ಸಂಸ್ಕೃತಕ್ಕೆ ಪರಿವರ್ತಿಸಿದುದಾಗಿಯೂ ಹೇಳಿದೆ.

ಮೊಗಲಚಕ್ರವರ್ತಿಗಳಲ್ಲಿ ದಾರಾಶಿಕೋವನ್ನು ಬಿಟ್ಟರೆ ಭಾಷಾಭೇದಗಳನ್ನೆಣಿಸದ ಒಬ್ಬನು ಮಾತ್ರ ಸಂಸ್ಕೃತಭಾಷಾಪೋಷಕನು ಎಂದು ಹೇಳಲಾಗುತ್ತದೆ. ಆದರೆ ಅವನಾರು? ಅಕ್ಬರನೇ? ಅಕ್ಬರನೆನ್ನುವುದಾದರೆ ಇವನ ಕಾಲವೂ ಜಗನ್ನಾಥನ ಕಾಲವೂ ಸರಿಹೋಗದು. ಕಾಲವ್ಯತ್ಯಾಸವು ಮಿತಿಮೀರಿರುವುದು. ಜಗನ್ನಾಥನು ಫಾರಸೀಭಾಷೆಯಲ್ಲಿ ನಿಪುಣನಾಗಿರಬಹುದು. ಆದರೆ ಅವನು ಫಾರಸೀ ಭಾಷೆಯ ಜ್ಯೋತಿಷಗ್ರಂಥವನ್ನು ಸಂಸ್ಕೃತ ಮಾಡಿದನೆಂಬುದು ಸತ್ಯ ವಿಚಾರವಾಗದು. ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವ ಜ್ಯೋತಿಷಗ್ರಂಥಗಳನೇಕಗಳು ವಿದೇಶಭಾಷೆಗೆ ಎಷ್ಟೋ ಪರಿವರ್ತಿಸಲ್ಪಟ್ಟಿರುವುವಾದರೂ ಪರಿವರ್ತನವಾಗದ ಗ್ರಂಥಗಳ ಸಂಖ್ಯೆಯು ಅನಂತ. ಅಲ್ಲದೆ ಗ್ರಂಥವು ಇಂತಹುದೆಂಬದನ್ನು ಖಂಡಿತ ಮಾಡಿ ಹೇಳದೆ ಇರುವುದರಿಂದ ಹಾಗೆ ಹೇಳಲಾಗದು. ಅಲ್ಲದೆ ಕವಿಯು ಷಹಜಹಾನನ ಕಾಲದವನು.

ಎರಡನೆಯದರಲ್ಲಿ ಹೇಳಿರುವ ಶ್ಲೋಕಗಳಾವುವೂ ಜಗನ್ನಾಥಕೃತ ಯಾವ ಗ್ರಂಥಗಳಲ್ಲಿಯೂ ಇರುವುದಿಲ್ಲ. ಮೊಗಲರ ಅರಸರಿಗೆ ಲವಂಗಿಯೆಂಬ ಕನ್ಯೆಯು ಇದ್ದುದಾಗಿ ಯಾವ ಚರಿತ್ರೆಯೂ ಹೇಳುವುದಿಲ್ಲ. ಯಾರಾದರೊಬ್ಬ ರಾಜಪುತ್ರಸ್ತ್ರೀಯಲ್ಲಿ ಹುಟ್ಟಿದವಳೆಂದು ಹೇಳುವುದಾದರೆ ರಜಪೂತ ರಮಣಿಯರ ಸೌಂದರ್ಯಸದ್ಮದಲ್ಲಿ ಹೆಚ್ಚಾಗಿ ವಾಸಿಸಿದವನು ಅಕ್ಬರನೊಬ್ಬನು. ಮೇಲೆ ಹೇಳಿದಂತೆ ಕಾಲವು ಮೇಳೈಸದಾದುದರಿಂದ ಇವನಾರಾದರೂ ಎರಡನೆಯ ಅಕ್ಬರನಿರಬಹುದೆ? ಹಾಗೆ ಹೇಳುವ ಚರಿತೆಯು ಇನ್ನೂ ಬರೆಯಲ್ಪಟ್ಟಿಲ್ಲ. ಐನಿಅಕ್ಬರಿಯನ್ನು ಬರೆದ ಅಬ್ದುಲ್‌ಫಸಲನು ಈ ವಿಚಾರವನ್ನು ಎಲ್ಲಿಯೂ ಹೇಳಿರುವುದಿಲ್ಲ. ಇದಂತಿರಲಿ. 'ಫರದಾ' ವಿಚಾರವು ಅತ್ಯಂತ ಪ್ರಬಲವಾಗಿದ್ದ ಆ ಕಾಲದಲ್ಲಿ ಅಪರಿಚಿತ ಹಿಂದೂ ತರುಣನ ಎದುರಿನಲ್ಲಿ ಆ ಹುಡುಗಿಯು ಬಂದುದೆಂದು ಹೇಳುವುದಾಗಲಿ ಅಥವಾ ಜಲಕುಂಭವನ್ನು ತಂದಳೆಂಬುದಾಗಲಿ, ರಾಜನು ಹಾಗೆ ಹೇಳಿದನೆಂಬುದಾಗಲಿ ಹೇಳುವುದು ತೃಪ್ತಿಕರವಾಗಿರಲಾರದು. ಹೇಳಿರುವುದು ಕೇವಲ ಮನೋರಂಜಕ ಹೊರ್ತು ಚಾರಿತ್ರಕದೃಷ್ಟಿಯಿಂದಲ್ಲವೆನಬೇಕಾಗುವುದು.

ಮೂರನೆಯ ವಿಚಾರವು ಇದ್ದರೂ ಇರಬಹುದು. ಇರಕೂಡದೇಕೆ? ಅದರ ವಿಚಾರವಾಗಿ ನಮಗೆ ತಿಳಿಯದು. ಪ್ರಾಣಾಭರಣ ಗ್ರಂಥದನಾಯಕನಿರಬಹುದೆ? ಹಾಗೆ ಹೇಳುವ ಚರಿತೆಗಳಾವುವು?

ನಾಲ್ಕು ಮತ್ತು ಐದನೆಯ ವಿಚಾರಗಳ ವಿಚಾರದಲ್ಲಿ ಹರದೀಕ್ಷಿತನು ಜಗನ್ನಾಥನ ಕಾಲದವನೆನಲಾಗುವುದಿಲ್ಲ. ಹೇಳುವುದಾದರೆ ಸಮಂಜಸವಾಗದು.

ಆರನೆಯದರಲ್ಲಿ ಹೇಳಿರುವಂತೆ ತನ್ನ ಶೇಷಾಯುಷ್ಯವನ್ನು ಕಳೆಯುವುದಕ್ಕಾಗಿ ಜಗನ್ನಾಥನು ಕಾಶಿಗೆ ಹೋಗಿರಬಹುದು. ಅಪ್ಪಯ್ಯದೀಕ್ಷಿತನೂ ಆ ವೇಳೆಗೆ

ಯಾತ್ರಾರ್ಥಿಯಾಗಿ ಹೋಗಿರಬಹುದು. ಇವರಿರ್ವರೂ ಸೇರಿ ಮೇಲೆ ಹೇಳಿದಂತೆ ಮಾತು ಕಥೆ ನಡೆಯಿಸಿದರೆಂದು ಸ್ಥಿರೀಕರಿಸುವುದು ಸುಲಭಸಾಧ್ಯದ ಕೆಲಸವಲ್ಲ. ಮೇಲೆ ಹೇಳಿರುವ ಆರ್ಯಾಶ್ಲೋಕವು ಭಾಮಿನೀವಿಲಾಸ ಮತ್ತು ರಸಗಂಗಾಧರ ದಲ್ಲಿ ಜಗನ್ನಾಥನದೆಂದು ಹೇಳಿರುವುದು. ಅಪ್ಪಯ್ಯದೀಕ್ಷಿತನದೆಂದು ಜನಜನಿತ ಕಥೆಯು ಇರುವುದು.

ಏಳನೆಯ ವಿಚಾರವಾದುದು ಗಂಗಾಲಹರೀ. ಇದರಲ್ಲಿ ೫೨ ಶ್ಲೋಕಗಳಿರು ವುದು ನಿಜವಾದರೂ ಕಥೆಯು ನಿಜವಾದುದಲ್ಲ. ಹೇಗೆಂದರೆ ಕಥೆಯಂತೆ ಗಂಗಾಲ ಹರಿಯು ಜಗನ್ನಾಥನ ಕೊನೆಯ ಗ್ರಂಥವಾಗಿರಬೇಕು. ರಸಗಂಗಾಧರದಲ್ಲಿ ಇದರ ಕೆಲವು ಶ್ಲೋಕಗಳು ಉದಾಹೃತವಾಗಿರುವುದರಿಂದ ಗಂಗಾಲಹರಿಯನ್ನು ಬರೆದ ಎಷ್ಟೋ ವರ್ಷಗಳನಂತರ ರಸಗಂಗಾಧರವನ್ನು ಬರೆದಿರಬೇಕೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಮೇಲೆ ಹೇಳಿದವುಗಳೆಲ್ಲವೂ ಮನೋರಂಜಕವಾದುದರಿಂದ ಚಾರಿತ್ರಕ ದೃಷ್ಟಿಯಿಂದ ಕೊಂಚವೂ ಪ್ರಯೋಜನವಾಗದು. ಪಂಡಿತ ಜಗನ್ನಾಥನಿಗೆ ಪಂಡಿತ ರಾಜನೆಂಬ ಬಿರುದೂ, ದಿರಾಂಗ್‌ಖಾನನಿಗೂ, ಲಾಲಖಾನನಿಗೂ ಗುಣಸಮುದ್ರ ನೆಂಬ ಬಿರುದು (Ocean of Excellence) ಕೊಟ್ಟುದಾಗಿ ತಿಳಿಯಬರುತ್ತದೆ ಲಾಲಖಾನನು ಪ್ರಸಿದ್ಧನಾದ, ಟೋಡರ್‌ಮಲ್ಲನ ಮಗ, ವಿಲಾಸನ ಅಳಿಯನಾಗಬೇಕು. ಜಗನ್ನಾಥನೂ, ದಿರಂಗ್‌ಖಾನನೂ ಬೆಳ್ಳಿಯ ನಾಣ್ಯಗಳಲ್ಲಿ ತುಲಾಭಾರವನ್ನು ತೂಗಿಸಿ ಕೊಂಡು ಪ್ರತಿಯೊಬ್ಬರೂ ೪೫೦೦ ರೂಪಾಯಿಗಳನ್ನು ಹೊಂದಿದರೆಂದೂ ತಿಳಿಯ ಬರುತ್ತದೆ. ಷಹಾಜಹಾನನ ಹಿರಿಯ ಮಗನಾದ ದಾರನು ದೆಹಲಿಯಲ್ಲಿದ್ದುಕೊಂಡು ತಂದೆಯ ಆಡಳಿತವನ್ನು ನಡೆಯಿಸುತ್ತಿದ್ದುದಾಗಿ ಹೇಳಿರುವುದರಿಂದ ಸಂಸ್ಕೃತ ವಿದ್ಯಾಭಿಮಾನಿಯೂ ಕವಿಯೂ ಆದ ದಾರಾಷಿಕೋವಿನಲ್ಲಿ ಜಗನ್ನಾಥಪಂಡಿತನು ಎರಕಗೊಂಡುದೇನೂ ಆಶ್ಚರಿಯಲ್ಲ. ಏಕೆಂದರೆ ದಾರನು ಯುವರಾಜನಾಗಿದ್ದು ಪಂಡಿತರನ್ನು ಮನ್ನಿಸುವ ವಾಡಿಕೆಯು ಇದ್ದಿತು.

ಗ್ರಂಥಗಳು:—

೧. ರಸಗಂಗಾಧರ
೨. ಯಮುನಾವರ್ಣನ ಚಂಪೂ
೩. ಆಸಫವಿಲಾಸ
೪. ಚಿತ್ರಮೀಮಾಂಸಾಖಂಡನ
೫. ಭಾಮಿನೀವಿಲಾಸ
೬. ಮನೋರಮಾಕುಚಮರ್ದನ
೭. ಅಮೃತಲಹರೀ

೮. ಕರುಣಾಲಹರೀ
೯. ಪೀಯೂಷಲಹರೀ
೧೦. ಸುಧಾಲಹರೀ
೧೧. ಲಕ್ಷ್ಮೀಲಹರೀ
೧೨. ಪ್ರಾಣಾಭರಣ
೧೩. ಜಗದಾಭರಣ

**ರಸಗಂಗಾಧರ:**—ಇದು ಲಕ್ಷಣಗ್ರಂಥ. ಇದರಲ್ಲಿ ಆಸಫನ ವಿಚಾರವಾಗಿರುವ:—

ಸುಧೇವ ಸ್ವರ್ಗೇ ವಸುಧೇವ ಮೂರ್ತಿಃ
ಸುಧಾಕರಶ್ರೀಸದೃಶೀ ಚಕೀರ್ತಿಃ
ಪಯೋಧಿಕಲ್ಪಾ ಮತಿ**ರಾಸಫೇಂದೋ**
ರ್ಮಹೀತಲೇಽನ್ಯಸ್ಯ ನಹೀತಿ ಮನ್ಯೇ || ಪುಟ ೧೬೬.
ಯುಕ್ತಂ ಯಾತೇ ದಿವ**ಮಾಸಫೇಂದೌ**
ತದಾಶ್ರಿತಾನಾಂ ಯದಭೂದ್ವಿನಾಶಃ
ಇದಂ ತು ಚಿತ್ರಂ ಭುವನಾವಕಾಶೇ
ನಿರಾಶ್ರಯಾ ಖೇಲತಿ ತಸ್ಯ ಕೀರ್ತಿಃ || ಪುಟ ೪೫೭

ಎಂದು ಹೇಳಿರುವುದರಿಂದ ಇದರಲ್ಲಿ ಒಬ್ಬ ಆಸಫನು ಜಗನ್ನಾಥ ಕವಿಯು ಹೇಳಿರುವ ಅನ್ಯಗ್ರಂಥದ ಕಥಾನಾಯಕನಾಗಿರಬೇಕು. ಮತ್ತೊಬ್ಬ ಆಸಫನು ಷಹಜಹಾನನ ಸೈನ್ಯಾಧಿಪತಿಯಾದ ಖ್ವಾಜಕಹಾನನಾಗಿರಬೇಕು. ಮೇಲಣ ಶ್ಲೋಕದಲ್ಲಿ ಆಸಫನ ಮರಣವನ್ನು ಕುರಿತು ಹೇಳಿದುದಾಗಿದೆ. ಹೇಗೆಂದರೆ ಕ್ರಿ. ಶ. ೧೬೪೧ರಲ್ಲಿ ಷಹಜಹಾನನ ಸೈನ್ಯಾಧಿಕಾರಿಯು ಮೃತನಾದುದಾಗಿ ಹೇಳಿದೆ. ಇವನನ್ನು ಕುರಿತು ಹೇಳಿರುವುದು ನಿಜವೆನ್ನುವುದಾದರೆ ಕ್ರಿ. ಶ. ೧೬೪೧ರ ವೇಳೆಗೆ ರಸಗಂಗಾಧರವು ಪೂರ್ತಿಯಾಗಿರಲಿಲ್ಲವಾಗಿ ಕಾಣುತ್ತದೆ. ಅಥವಾ ಹಾಗೆಹೇಳ ಬೇಕಾಗುತ್ತದೆ.

**ಯಮುನಾವರ್ಣನ ಚಂಪೂ:**—ಇದು ಯಮುನಾವರ್ಣನಾರೂಪವಾದ ಚಂಪೂಗ್ರಂಥ. ಇದರಲ್ಲಿನ ಎರಡು ವಾಕ್ಯಗಳು ರಸಗಂಗಾಧರದಲ್ಲಿ ಉದಾಹೃತ ವಾಗಿವೆ.

**ಆಸಫವಿಲಾಸ:**—ಇದರಲ್ಲಿ ನವಾಬ ಆಸಫಖಾನನ ವರ್ಣನವಿರುವುದು. ಇದರ ಎರಡು ಶ್ಲೋಕಗಳು ರಸಗಂಗಾಧರದಲ್ಲಿ ಉದಾಹೃತವಾಗಿವೆ. ಗ್ರಂಥವು ಉಪಲಬ್ಧವಿಲ್ಲ. ಆಸಫವಿಲಾಸದ ಕೆಲವುಭಾಗಗಳು ಅಲ್ಲಲ್ಲಿ ದೊರೆಯುವ ಟಿಪ್ಪಣಿ ಗಳಲ್ಲಿ ಉದಾಹೃತವಾಗಿವೆ. ಅವೂ ಅಪೂರ್ಣವಾಗಿವೆ ಆಸಫವಿಲಾಸಗ್ರಂಥಾ ರಂಭದಲ್ಲಿ:—

‡ Elliott's History of India Vol 7 P. 179.

"ಅಥಸಕಲಲೋಕವಿಸ್ತಾರವಿಸ್ತಾರಿತಮಹೋಪಕಾರಪರಂಪರಾಧೀನ ಮಾನಸೇನ ಪ್ರತಿದಿನಮುದ್ಯದನವದ್ಯಗದ್ಯಪದ್ಯಾದ್ಯನೇಕ ವಿದ್ಯಾವಿದ್ಯೋತಿತಾಂತಃಕರಣೈಃ ಕವಿಭಿರುಪಾಸ್ಯಮಾನೇನ ಕೃತಯುಗೀಕೃತಕಲಿಕಾಲೇನ ಕುಮತಿತೃಣಜಾಲಸಮಾಚ್ಛಾದಿತವೇದವನಮಾರ್ಗವಿಲೋಕನಾಯ ಸಮುದ್ದೀಪಿತಸುತರ್ಕದಹನಜ್ವಾಲಾಜಾಲೇನ ಮೂರ್ತಿಮತೇವ ನವ್ವಾಬಾಸಫಖಾನಮನಃ ಪ್ರಸಾದೇನ ದ್ವಿಜಕುಲಸೇವಾಹೇವಾಕಿವಾಙ್ಮನಃ ಕಾಯೇನ ಮಾಥುರಕುಲಸಮುದ್ರೇಂದುನಾ ರಾಯಮುಕುಂದೇನಾಧಿಷ್ಠಿತೇನ ಸಾರ್ವಭೌಮ ಶ್ರೀಷಾಹಜಹಾಂಪ್ರಸಾದಾದಧಿಗತಪಂಡಿತ ರಾಜಪದವೀವಿರಾಜಿತೇನ ತ್ರೈಲಂಗಕುಲಾವತಂಸೇನ ಪಂಡಿತಜಗನ್ನಾಥೇನಾಸಫವಿಲಾಸಾಖ್ಯೇಯಮಾಖ್ಯಾಯಿಕಾನಿರಮಾಯತ| ಸೇಯಮನುಗ್ರಹೇಣ ಸಹೃದಯಾನಾಮನುದಿನ ಮುಲ್ಲಾಸಿತಾ ಭವತಾತ್ || ಎಂದು ಹೇಳಲ್ಪಟ್ಟಿರುವುದು.

ಈ ಆಸಫಖಾನನೇ ನಾವು ಹಿಂದೆ ಹೇಳಿರುವ ಷಹಜಹಾನನ ಮುಖ್ಯ ದಂಡನಾಯಕನಾದ ಖಾಂಕಹಾನನು ಆಗಿರಬೇಕು. ಇವನ ಪೂರ್ತಿಯಾದ ಹೆಸರು ಅಮಾನುದ್ದೌಲಾ ಆಸಫಖಾನನೆಂದು. ಕ್ರಿ. ಶ. ೧೬೩೪ ರಲ್ಲಿ ಇವನಿಗೆ ಖಾಂಕಹಾನನೆಂಬ ಪದವಿಯು ದೊರೆತು ಕ್ರಿ. ಶ. ೧೬೪೧ ರಲ್ಲಿ ದಿವಂಗತನಾದನು. ಇದನ್ನು ಮಥುರೆಯ ರಾಜವಂಶೀಯನಾದ ರಾಯಮುಕುಂದನ ಹೇಳಿಕೆಯಂತೆ ಬರೆದು ದಾಗಿ ಜಗನ್ನಾಥನು ಒಕ್ಕಣಿಸಿಕೊಂಡಿರುವನು.

**ಚಿತ್ರಮೀಮಾಂಸಾಖಂಡನ** :—ಇದು ಅಪ್ಪಯ್ಯದೀಕ್ಷಿತಕೃತ ಚಿತ್ರಮೀಮಾಂಸಾಗ್ರಂಥದ ಖಂಡನರೂಪವಾಗಿರುವುದು. ಇದಕ್ಕೆ ನಾಗೇಶನೆಂಬವನು ಟಿಪ್ಪಣಿಯನ್ನು ಬರೆದಿರುವನು. ಗ್ರಂಥಾರಂಭದಲ್ಲಿ:--

ನಾಮಂನಾಮಂಘನಶ್ಯಾಮಂ ಧಾಮತಾಮರಸೇಕ್ಷಣಂ
ಪಂಡಿತೇಂದ್ರೋಜಗನ್ನಾಥ ಶರ್ಮಾನಿರ್ಮಾತಿಕೌತುಕಂ
ರಸಗಂಗಾಧರೇ ಚಿತ್ರಮೀಮಾಂಸಾಯಾಮಯೋದಿತಾಃ
ಯೇದೋಷಾಸ್ತೇಽತ್ರ ಸಂಕ್ಷಿಪ್ಯ ಕಥ್ಯಂತೇವಿದುಷಾಂಮುದೇ ||

ಸೂಕ್ಷ್ಮಂವಿಭಾವ್ಯಮಯಕಾ ಸಮುದೀರಿತಾನಾಂ
ಅಪ್ಪಯ್ಯದೀಕ್ಷಿತಕೃತಾವಿಹ ದೂಷಣಾನಾಂ
ನಿರ್ಮತ್ಸರೋಯದಿಸಮುದ್ಧರಣಂ ವಿದಧ್ಯಾ
ದಸ್ಯಾಹಮುಜ್ಜ್ವಲಮತೇಶ್ಚರಣೌವಹಾಮಿ ||

ಎಂಬ ಪ್ರತಿಜ್ಞೆಯಿಂದ ಪ್ರಾರಂಭಿಸಲ್ಪಟ್ಟಿರುವುದು. ಗ್ರಂಥಾಂತ್ಯದಲ್ಲಿ "ಇತಿ ಶ್ರೀಭಟ್ಟಭಟ್ಟಾರಕ ಪೇರುಭಟ್ಟಾತ್ಮಜೇನ ಪಂಡಿತರಾಜಾಪರಾಭಿಧಾನೇನ ಜಗನ್ನಾಥ ಭಟ್ಟೇನ ನಿರ್ಮಿತೇ ಚಿತ್ರಮೀಮಾಂಸಾಖಂಡನೇ ಎಂದು ಮುಗಿಸಲ್ಪಟ್ಟಿರುವುದು.

**ಭಾಮಿನೀವಿಲಾಸ:** —ಇದು ಪದ್ಯಸಂಗ್ರಹರೂಪವಾದ ಶೃಂಗಾರಗ್ರಂಥ.

**ಮನೋರಮಾ ಕುಚಮರ್ದನ**—ಇದು ಭಟ್ಟೋಜಿದೀಕ್ಷಿತ ಪ್ರಣೀತ "ಮನೋರಮಾ" ಎಂಬ ಗ್ರಂಥದ ಖಂಡನರೂಪವಾಗಿರುವುದು. ಪುಸ್ತಕ ಪ್ರಾರಂಭದಲ್ಲಿ:—

ಲಕ್ಷ್ಮೀಕಾಂತಪದಾಂಭೋಜಮಾನಮ್ಯ ಶ್ರೇಯಸಾಂ ಪದಂ
ಪಂಡಿತೇಂದ್ರೋ ಜಗನ್ನಾಥ ಸ್ತನೋತಿ ಗರ್ವಂ ಗುರುದ್ರುಹಾಂ ||

ಇಹಕೇಚಿನ್ನಿಖಿಲವಿದ್ವನ್ಮುಕುಟಮಯೂಖಮಾಲಾಲಾಲಿತಚರಣಕಮಲಾನಾಂ ಗೀರ್ವಾಣಗಣಗೌರವಗ್ರಾಮಮಾಂಸಲಮಹಿಮಮಂಡಿತಾಖಂಡಮಹೀಮಂಡಲಾನಾಂ ಶೇಷವಂಶಾವತಂಸಾನಾಂ ಶ್ರೀಕೃಷ್ಣಪಂಡಿತಾನಾಂ ಚಿರಾಯಾರ್ಚಿತಯೋಃ ಪಾದುಕಯೋಃ ಪ್ರಸಾದಾದಾಸಾದಿತ ಶಬ್ದಾನುಶಾಸನಾಸ್ತೇಷು ಚ ಪಾರಮೇಶ್ವರಂಪದಂ ಪ್ರಯಾತೇಷು ಕಲಿಕಾಲವಶಂವದೀಭವಂತಸ್ತತ್ರಭವದ್ಭಿರುಲ್ಲಾಸಿತಂ ಪ್ರಕ್ರಿಯಾಪ್ರಕಾಶಮಾಶಯಾನವಬೋಧನಿಬಂಧನಿವಂ (ನವಬೋಧನಿಬಂಧನೈ) ದೂಷಣೈಃ ಸ್ವಯಂ ನಿರ್ಮಿತಾಯಾಂ ಮನೋರಮಾಯಾಮಾಕುಲ್ಯಕಾರ್ಷುಃ | ಸಾ ಚ ಪ್ರಕ್ರಿಯಾಪ್ರಕಾಶಕೃತಾಂ ಪೌತ್ರೈರಖಿಲಶಾಸ್ತ್ರಮಹಾರ್ಣವಮಂಥಾಚಲಾಯಮಾನಮಾನಸಾನಾಮಸ್ಮದ್ಗುರುಪಂಡಿತವೀರೇಶ್ವರಾಣಾಂ ತನಯೈರ್ದೂಷಿತಾಪಿ ಸ್ವಮತಿಪರೀಕ್ಷಾರ್ಥಂ ಪುನರಸ್ಮಾಭಿರ್ನಿರೀಕ್ಷ್ಯತೇ | ತತ್ರ ತಾವತ್ಸಾರ್ವಧಾತುಕಮಪಿದಿತಿಸೂತ್ರಗಕೌಸ್ತುಭೇ ... .........ಇತ್ಯಾದಿನಾ ಸಂಖ್ಯಾವದ್ಭಿರುಪಹಸನೀಯಮರ್ಥಂ ನಿರೂಪಯತಾಂ, ತಥಾಣುದಿತ್ಸೂತ್ರಗತಕೌಸ್ತುಭೇ—ಇತ್ಯರ್ಥಸ್ಯನಿರ್ಣಯೇನ ವಿಲಕ್ಷಣಂ ಸ್ವವ್ಯುತ್ಪತ್ತಿಪಾಟವಮುದ್ಗಿರತಾಂ, ಭವತೇರಇತಿ ಸೂತ್ರಗತಮನೋರಮಾಯಾಂ—ಶಪಃ ಪ್ರವೃತ್ತಿಂ ಸಮರ್ಥಯಮಾನಾನಾಂ ಗುರುದ್ವೇಷ ದೂಷಿತಮತೀನಾಂ ಯದ್ಯಪಿ ಪುರುಷಾಯುಷೇಣಾಪಿ ನ ಶಕ್ಯಂತೇ ಗಣಯಿತುಂ ಪ್ರಮಾದಾಸ್ತಥಾಪಿದಿಙ್ಮಾತ್ರೇಣ ಕಾನಪಿ ಕುಶಾಗ್ರೀಯಧಿಷಣೇಷು ನಿರೂಪಯಾಮಃ " ಎಂಬಿವೇ ಮೊದಲಾಗಿ ಹೇಳಿದೆ.

**ಅಮೃತಲಹರೀ:**—ಇದು ಯಮುನಾಸ್ತುತಿರೂಪಗ್ರಂಥ.

**ಕರುಣಾಲಹರೀ:**—ವಿಷ್ಣುಸ್ತುತಿರೂಪಗ್ರಂಥ ಇದಕ್ಕೆ ವಿಷ್ಣುಲಹರೀ ಎಂಬ ಮತ್ತೊಂದು ಹೆಸರು.

**ಪೀಯೂಷಲಹರೀ**—ಇದು ಗಂಗಾಸ್ತುತಿರೂಪಗ್ರಂಥ.

**ಸುಧಾಲಹರೀ**—ಇದು ಸೂರ್ಯಸ್ತುತಿಪರಗ್ರಂಥ.

**ಲಕ್ಷ್ಮೀಲಹರೀ:**—ಇದು ಲಕ್ಷ್ಮೀಸ್ತುತಿಪರಗ್ರಂಥ. ಈ ಐದುಲಹರಿಗಳ ಶ್ಲೋಕಗಳು ರಸಗಂಗಾಧರದಲ್ಲಿ ಉದಾಹೃತಗಳಾಗಿವೆ. ಲಕ್ಷ್ಮೀಲಹರಿಯ ಒಂದು ಶ್ಲೋಕಮಾತ್ರ ರಸಗಂಗಾಧರದಲ್ಲಿ ದೊರೆಯುತ್ತದೆ. ಭಾಮಿನೀ ವಿಲಾಸದಲ್ಲಿ ಆ ಶ್ಲೋಕವು ರೂಪಾಂತರವನ್ನು ಹೊಂದಿದೆ.

**ಪ್ರಾಣಾಭರಣ:**—ಇದು ಕಾಮರೂಪದೇಶಾಧೀಶನಾದ ಪ್ರಾಣನಾರಾಯಣ ರಾಜನಸ್ತುತಿರೂಪಗ್ರಂಥ.

**ಜಗದಾಭರಣ:**—ಇದು ದಾರಾಷಿಕೋರಾಜನ ವಿಚಾರವಾಗಿ ಬರೆದಿರುವ ಗ್ರಂಥ. ಗ್ರಂಥವು ಉಪಲಬ್ಧವಿಲ್ಲ.

'ಜಗನ್ನಾಥ'ಎಂಬ ಹೆಸರುಳ್ಳ ಗ್ರಂಥಕಾರರು ಸಂಸ್ಕೃತ ಸಾಹಿತ್ಯದಲ್ಲಿ ಅನೇಕರು ದೊರೆಯುವರು. ಅವರು ಬರೆದಿರುವ ಗ್ರಂಥಗಳನ್ನು ಪಂಡಿತರಾಜ ಜಗನ್ನಾಥನದೆಂದು ಹೇಳುವವರೂ ಇರುವರು. ಹಾಗೆ ಹೇಳುವುದು ಸರಿಹೋಗದು. ಪ್ರಕೃತದೊರೆಯುವ ಕೆಲವರನ್ನೂ ಅವರ ಗ್ರಂಥಗಳನ್ನೂ ಇಲ್ಲಿ ಹೇಳಿದೆ.

| ಹೆಸರು:— | | ಗ್ರಂಥಗಳು:— |
|---|---|---|
| ೧) ತಂಜಾವೂರುವಾಸಿ ಜಗನ್ನಾಥ | ... | ಅಶ್ವಧಾಟೀಕಾವ್ಯ, ರತಿಮನ್ಮಥ ನಾಟಕ, ವಸುಮತೀಪರಿಣಯ. |
| ೨) ಸಮ್ರಾಟಜಗನ್ನಾಥ | ... | ರೇಖಾಗಣಿತ. |
| ೩) ಜಗನ್ನಾಥತರ್ಕಪಂಚಾನನ | ... | ವಿವಾದಭಂಗಾರ್ಣವ. |
| ೪) ಜಗನ್ನಾಥಮೈಥಿಲ | ... | ಆನಂದಚಂದ್ರಿಕಾನಾಟಕ. |
| ೫) ಶ್ರೀನಿವಾಸಸೂನುಗಜನ್ನಾಥಪಂಡಿತ | .... | ಅನಂಗವಿಜಯಭಾಣ. |
| ೬) ಜಗನ್ನಾಥಮಿಶ್ರ | .... | ಸಭಾತರಂಗ. |
| ೭) ಜಗನ್ನಾಥಸರಸ್ವತೀ | ... | ಅದ್ವೈತಾಮೃತ. |
| ೮) ಜಗನ್ನಾಥಸೂರಿ | ... | ಸಮುದಾಯಪ್ರಕರಣ. |
| ೯) ಜಗನ್ನಾಥ | ... | ಶರಭರಾಜವಿಲಾಸ. |
| ೧೦) ನಾರಾಯಣದ್ವಿಜಸೂನುಜಗನ್ನಾಥ | | ಜ್ಞಾನವಿಲಾಸಕಾವ್ಯ. |
| ೧೧) ಜಗನ್ನಾಥ | ... | ಅನುಭೋಗಕಲ್ಪತರು. |

# ನೀಲಕಂಠದೀಕ್ಷಿತ

ಇವನು ಭಾರದ್ವಾಜಗೋತ್ರದವನು. ಮಹಾಪ್ರಖ್ಯಾತನಾದ ಅಪ್ಪಯ್ಯ ದೀಕ್ಷಿತನ ಸೋದರ ಅಚ್ಚಾದೀಕ್ಷಿತನ ಮುಮ್ಮಗನು. ನಾರಾಯಣದೀಕ್ಷಿತನ ಐವರು ಮಕ್ಕಳಲ್ಲಿ ಎರಡನೆಯವನು. ಇವನ ತಾಯಿಯ ಹೆಸರು ಭೂಮಿದೇವಿ. ಆಚಾರ್ಯನ ಹೆಸರು ವೇಂಕಟೇಶ್ವರಮಖಿ ಎಂದು. ಈ ವಿಚಾರವು ಗಂಗಾವತರಣ ಗ್ರಂಥದಲ್ಲಿ:—

ಮುನಿರಸ್ತಿ ಭರದ್ವಾಜಃ ಖ್ಯಾತಸ್ತ್ರಿಭುವನೇಷ್ವಪಿ
ಅರ್ಕ್ಯೈರ್ಯಸ್ಯ ಜಹೌ ರಾಮೋ ऽಪ್ಯರಣ್ಯಭ್ರಮಣಶ್ರಮಂ ॥ ೩೮
ತಸ್ಯಾನ್ವಯೇ ಮಹತ್ಯಾಸೀತ್ಕ್ಷೀರೋದ ಇವ ಚಂದ್ರಮಾಃ
ಶ್ರೀಕಂಠಚರಣಾಸಕ್ತಃ ಶ್ರೀಮಾನ**ಪ್ಪಯ್ಯದೀಕ್ಷಿತಃ** ॥ ೩೯

ತಸ್ಯ ಮಾನಪ್ರಭಾವಸ್ಯ ತದನಂತರಜನ್ಮನಃ
ಆಸೀದಾ**ಚ್ಚಾದೀಕ್ಷಿತ**ಸ್ಯ ಪುತ್ರೋ **ನಾರಾಯಣಾ**ಧ್ವರೀ ॥ ೪೮

ಜಯಂತಿ ತನಯಾಸ್ತಸ್ಯ ಪಂಚ ಸೌಭ್ರಾತ್ರಶಾಲಿನಃ
ಗರ್ಭದಾಸಾ ಮಹೇಶಸ್ಯ ಕವಯಸ್ಚ ವಿಪಶ್ಚಿತಃ ॥ ೪೯

ತೇಷಾಮಹಂ ದ್ವಿತೀಯೋಽಸ್ಮಿ ಭೂಮಿದೇವಿತನೂಭುವಾಂ
**ನೀಲಕಂಠ** ಇತಿ ಖ್ಯಾತಿಂ ನೀತ ಶಂಭೋಃ ಪ್ರಸಾದತಃ ॥ ೫೦

ವಾರ್ತಿಕಾಭರಣಗ್ರಂಥನಿರ್ಮಾಣವ್ಯಕ್ತನೈಪುಣಃ
**ಶ್ರೀ ವೇಂಕಟೇಶ್ವರಮಖೀ** ಶಿಷ್ಯೇ ಮಯ್ಯನುಕಂಪತೇ ॥ ೫೧

ಎಂದು ಹೇಳಿರುವುದರಿಂದಲೂ ಈತನು ಬರೆದುದಾದ ಪ್ರತಿಯೊಂದು ಗ್ರಂಥದ ಕೊನೆಯಲ್ಲಿ "ಇತಿ ಶ್ರೀಮದ್ಭಾರದ್ವಾಜ ಕುಲಜಲಧಿಕೌಸ್ತುಭ ಶ್ರೀಕಂಠ ಮತಪ್ರತಿಷ್ಠಾಪನಾಚಾರ್ಯಚತುರಧಿಕಶತಪ್ರಬಂಧನಿರ್ವಾಹಕ ಶ್ರೀಮನ್ಮಹಾವ್ರತಯಾಜಿ ಶ್ರೀಮದಪ್ಪಯ್ಯದೀಕ್ಷಿತ ಸೋದರ್ಯ ಶ್ರೀಮದಾಚ್ಚಾದೀಕ್ಷಿತ ಪೌತ್ರೇಣ ನಾರಾಯಣದೀಕ್ಷಿತಾತ್ಮಜೇನ ಭೂಮಿದೇವೀಗರ್ಭಸಂಭವೇನ ಮಹಾಕವಿ ಶ್ರೀ ನೀಲಕಂಠದೀಕ್ಷಿತೇನ....... ...." ಎಂದಿರುವ ಗದ್ಯದಿಂದ ಸ್ಪಷ್ಟಪಡುತ್ತದೆ. ಇವನ ಮಾತಾಪಿತೃಗಳಿಬ್ಬರೂ ಚಿಕ್ಕವನಾಗಿರುವಾಗ ಮೃತರಾಗಿ ಹೋದುದರಿಂದ ಅಪ್ಪಯ್ಯ ದೀಕ್ಷಿತನು ಈ ಹುಡುಗನ ರಕ್ಷಣಾವೇಕ್ಷಣ ಭಾರವೆಲ್ಲವನ್ನೂ ವಹಿಸಿ ತನ್ನಲ್ಲಿಟ್ಟುಕೊಂಡು ವಿದ್ಯಾಭ್ಯಾಸವನ್ನು ಮಾಡಿಸಿದಂತೆಯೂ, ಬಹುಕಾಲದವರೆಗೆ ಮಧುರೆಯಲ್ಲಿದ್ದು ಮೀನಾಕ್ಷಿಯನ್ನಾರಾಧಿಸುತ್ತಿದ್ದಂತೆಯೂ ಹೇಳುವ ವಾಡಿಕೆಯೂ ದಕ್ಷಿಣ ದೇಶದಲ್ಲಿ ಇರುವುದು. ಅಪ್ಪಯ್ಯದೀಕ್ಷಿತನಲ್ಲಿ ವಿದ್ಯಾಭ್ಯಾಸಮಾಡಿದ ವಿಚಾರವು.—

ಲೀಲಾಲೀಢಪುರಾಣಸೂಕ್ತಿಶಕಲಾವಷ್ಟಂಭಸಂಭಾವನಾ
ಪರ್ಯಸ್ತಶ್ರುತಿಸೇತುಭಿಃ ಕತಿಪಯೈರ್ನೀತೇ ಕಲೌ ಸಾಂದ್ರತಾಂ
ಶ್ರೀಕಂಠೋಽವತತಾರ ಯಸ್ಯ ವಪುಷಾ ಕಲ್ಯಾತ್ಮನೇವಾಚ್ಯುತಃ
ಶ್ರೀಮಾನಪ್ಪಯದೀಕ್ಷಿತಸ್ಸ ಜಯತಿ ಶ್ರೀಕಂಠವಿದ್ಯಾಗುರುಃ ॥ ೧—೩.

ಎಂಬ ಈ ಶ್ಲೋಕದಿಂದ ನಿರ್ಧರಿಸಬಹುದಾಗಿದೆ.

ನೀಲಕಂಠದೀಕ್ಷಿತನನ್ನು ಅಯ್ಯಾದೀಕ್ಷಿತನೆಂದೂ ವ್ಯವಹರಿಸುವರು.

**ಕಾಲ:**- ಇವನು ಕ್ರಿ. ಶ. ೧೬-೧೭ನೆಯ ಶತಮಾನದಲ್ಲಿದ್ದ ಅಪ್ಪಯ್ಯದೀಕ್ಷಿತನನ್ನು ಹೇಳಿರುವುದರಿಂದಲೂ 'ನೀಲಕಂಠವಿಜಯ' ಎಂಬ ಚಂಪೂ ಕಾವ್ಯವನ್ನು,

ಅಷ್ಟತ್ರಿಂಶದುಪಸ್ಕೃತಸಪ್ತಶತಾಧಿಕ ಚತುಸ್ಸಹಸ್ರೇಷು।
ಕಲಿವರ್ಷೇಷು ಗತೇಷು ಗ್ರಥಿತಃ ಕಿಲ **ನೀಲಕಂಠವಿಜಯೋ**ಽಯಂ ॥

ನೀಲಕಂಠವಿಜಯಸರ್ಗ ೧—೧೦,

ಎಂದು ಹೇಳಿಕೊಂಡಿರುವನಾದುದರಿಂದಲೂ ಆ ಕಾಲವು ಕ್ರಿ. ಶ. ೧೬೩೭-೩೮ ಎಂದಾಗುವುದರಿಂದ ಇವನು ಕ್ರಿ. ಶ. ೧೭ನೆಯ ಶತಮಾನದವನೆಂಬುದು ನಿರ್ಧಾರವಾದವು.

**ಗ್ರಂಥಗಳು:**—(೧) ಗಂಗಾವತರಣ, (೨) ನೀಲಕಂಠವಿಜಯಚಂಪೂ (೩) ಶಿವಲೀಲಾರ್ಣವ, (೪) ನಳಚರಿತನಾಟಕ, (೫) ಹಾಲಾಸ್ಯಾಭ್ಯುದಯ, (೬) ಕಯ್ಯಟನ ಮಹಾಭಾಷ್ಯ ಪ್ರದೀಪವ್ಯಾಖ್ಯಾನಗಳನ್ನೂ, ಕಲಿವಿಡಂಬನ, ಸಭಾರಂಜನ, ಶಾಂತಿವಿಲಾಸ, ವೈರಾಗ್ಯಶತಕ, ಆನಂದಸಾಗರಸ್ತವ, ಶಿವೋತ್ಕರ್ಷಮಂಜರೀ, ಅನ್ಯಾಪದೇಶಶತಕ, ಉಮಾಮಹೇಶ್ವರ ಸ್ತೋತ್ರ ಮೊದಲಾದ ಸಣ್ಣ ಸಣ್ಣ ಗ್ರಂಥಗಳನ್ನೂ ಬರೆದಿರುವನು. ಇವನ ಶೈಲಿಯ ವಿಚಾರದಲ್ಲಿ, "ಮಂಜುಳಪದ ಸನ್ನಿವೇಶಾವಿಚಿತ್ರೋಲ್ಲೇಖನಸನಿರ್ಭರಾನಿಶಂಕಟಪ್ರಮಾಣಾಚಾರ್ಯಸಾಹಿತ್ಯಸರಣಿಃ" ಎಂದು ಹೇಳಿದೆ.

**ಗಂಗಾವತರಣ:**—ಹೆಸರಿಗೆ ತಕ್ಕಂತೆ ಭಗೀರಥನ ಯತ್ನದಿಂದ ದೇವಗಂಗೆಯು ಭೂಲೋಕಕ್ಕೆ ಬಂದ ಬಗೆ. ಶಿವನು ತನ್ನ ಜಟಾಜೂಟದಲ್ಲಿ ಧರಿಸಿ ಜಗದಾನಂದವನ್ನುಂಟುಮಾಡಿದನೆಂಬ ಕಥೆಯು ವರ್ಣಿತವಾಗಿದೆ.

**ಶಿವಲೀಲಾರ್ಣವ:**—ಇದು ಇಪ್ಪತ್ತೆರಡು ಸರ್ಗಗಳುಳ್ಳ ಮಹಾ ಕಾವ್ಯ. ಮಧುರೆಯಲ್ಲಿನ ಪ್ರಖ್ಯಾತ ಸುಂದರೇಶ್ವರನ ೬೪ ಲೀಲೆಗಳೆಲ್ಲವನ್ನೂ ವರ್ಣಿಸಿ ಈ ಕಾವ್ಯವನ್ನು ಶಿವಲೀಲಾರ್ಣವ ಎಂದು ಕರೆದಿರುವನು. ಈ ೬೪ ಲೀಲೆಗಳ ವರ್ಣನಾ

ವಿಚಾರವು ಸ್ಕಾಂದಪುರಾಣಾಂತರ್ಗತ ಹಾಲಾಸ್ಯ ಮಹಾತ್ಮ್ಯದಲ್ಲಿ ಹೇಳಲ್ಪಟ್ಟಿರುವುದು. ಪ್ರಾಯಃ ಈ ಕಾವ್ಯವನ್ನು ಬರೆಯುವುದಕ್ಕೆ ಇದು ಆಧಾರವಾಗಿದ್ದಿರಬಹುದು. ಈ ಸುಂದರೇಶ್ವರನು ಮಧುರೆಯಲ್ಲಿ ಆಳಿದ ಪಾಂಡ್ಯವಂಶದಲ್ಲಿ ಸುಂದರಪಾಂಡಾಭಿಧಾನದಿಂದ ಹುಟ್ಟಿ ತನ್ನ ಹಲವರು ಭಕ್ತರಿಗೋಸ್ಕರ ೬೪ ಲೀಲೆಗಳನ್ನು ತೋರಿಸಿದನೆಂಬುದು ಕಥಾವಸ್ತು. ಕವಿಯು ಈ ಕಥೆಯನ್ನು ತೆಗೆದುಕೊಂಡು ಸುಂದರವಾದ ಕಾವ್ಯ ಶೈಲಿಯಲ್ಲಿ ಸರಳವಾಗಿ ಬರೆದಿರುವನು.

**ನೀಲಕಂಠವಿಜಯ**:—ಇದು ೫ ಆಶ್ವಾಸಗಳಿರುವ ಚಂಪೂ ಗ್ರಂಥ. ಎರಡನೆಯ ಆಶ್ವಾಸದ ಕೊನೆಯಲ್ಲಿ ದೇವಾಧಿದೇವತೆಗಳು ಹೋಗಿ ಮಾಡಿದ ವೈಕುಂಠ ವರ್ಣನೆ, ಮೂರನೆಯ ಆಶ್ವಾಸದಲ್ಲಿ ಶಕ್ರಶುಕ್ರರೊಡನೆ ಬೃಹಸ್ಪತಿಯ ಸಂಭಾಷಣವೂ ನಾಲ್ಕನೆಯ ಆಶ್ವಾಸದಲ್ಲಿ ವಿಷ್ಣುಕೃತ ಶಿವಸ್ತುತಿಯೂ ಹೃದಯಂಗಮವಾಗಿರುವುವು.

ನೀಲಕಂಠವಿಜಯದ ಒಂದಾನೊಂದುಗದ್ಯದ ಮಾದರಿ:—

ಗರ್ಜಂತಶ್ಚ ತೇ ತದನುಪರ್ಜನ್ಯಾ ಇವಗಣಯಂಕಶ್ಚ ತರಗತಮಿವಕಾರ್ಯಮಶೇಷಂ ಪೂರ್ವತೋದಿಕ್ಪತೀನ್ ದಕ್ಷಿಣತಃ ಪರಾಪಶ್ಚಿಮತೋಬಾಣಂ ಸಹಸ್ರಬಾಹುಮುತ್ತರತೋಮಹಾಸುರಾನಿತರಾನಪಿ ವಿಭಜ್ಯವಿನಿಯುಂಜಾನಾಃ ಖಾತೀಃ ಪರಿತಃ ಪರಿಘಾಪಲಯಇವಮೂಲಗತ್ಯೈತ ರಾಂಚಲಾನಿನಿಧಧಾನಾಃ ಪರಿತ್ಯಜಂತಃ ಪೃಷರಣಾಸಿನರಿಹರಂತೋಂಗುಳೀಯಕಾನ್ಯಾಬಧ್ನಂತಃ ಕಟಿತಟಾಷೂತ್ತರಾಸಂಗಮಾರೋಪಯಂತಃ ಕಂಕಣಾನ್ಯಂಗದಸ್ಥಾನಮುಪನೀತಯಂತೋನಿಪೀತಲಂಬನಿಹಾರಮಂಡನಾನ್ಯುದೊಭಿಧಯಂತಃ ಪರನಟಮನ್ಯಕೃದಪಿಸಮಂನಿಧತ್ತಕರಾಂಚಲಾನಿ ಸಮಮುತ್ತಂಭಯಂತಸಮಂಪಿಸ್ತಂಸಯಂತ ಸಮಮುಚ್ಛ್ವಸಿತಸಮಂನಿಶ್ವಸಿತಸಮಂಕುರುತಬಲಾನಿಪರಥಾನಿಶೀರ್ರ್ಯೇಯುಶ್ಚಿಖರಾಣಿವಿನಮೋದಯಮೇವ ಮಂದರಸ್ಯಾಪಿಚಲೇದಪಿತತೋಭಿದ್ರುಪೀಠಂ ಚಂದ್ರಾಪೀಡಸ್ಯಸಮುದ್ವಿಜೇತದುಪೇತಾಪೈಲರಾಜಸ್ಯ ಕ್ಷುಭ್ಯೇಯುಃ ಪ್ರಮಥಾಃಕುಪ್ಯೇದಪಿಶೈಲಾದಿಶ್ಚತುರಂತಯಾನಗತಇವಭಗವಾನಂಬಿಕಾದಮಣಶ್ಚತುರತಟಮುಸ್ಮಾಭಿರ್ವಾಹಸೀಯ ಇತಿವಾದಯುತ್ಸುವಾದಿತ್ರಾಣಿಗಂಧರ್ವೇಷು ಗಾಯಂತೀಷು ಗಾಥಾಃ ಕಿನ್ನರೀಷುನೃತ್ಯಂತೀಷುನಿರ್ಝರವಾರಕಾಂತಾಸುಶ್ಲಾಘಮಾನೇಷುಚಾರಣೇಷುಪ್ರಯುಂಜಾನೇಷ್ವಾಶಿಷಃ ಪರಮರ್ಷಿಷು ವರ್ಷತ್ಸುದಿವ್ಯವಲಾಹಕೇಷು ಪುಷ್ಪವರ್ಷಾಣಿ ಹರಹರೇತಿತಾರಧ್ವನಿಭಿರಾಪೂರಯಂತಃ ವಿದ್ಯಂಪಮಂಡಲಮುನ್ನಯಾಮಾಸುರುರ್ವೀಧರಮಂದರಂ”

(ತೃತೀಯಾಶ್ವಾಸ ಗದ್ಯ ೫೫.)

ನೀಲಕಂಠವಿಜಯದ ಎರಡು ಶ್ಲೋಕಗಳನ್ನು ಮಾದರಿಗಾಗಿ ಬರೆಯುವೆವು:—

ಶಾರದಾಪ್ರಾರ್ಥನೆಯು ಹೀಗಿರುವುದು—

ದೇವಾನಾಮುಪಿದ್ವೈವತಂ ಗುರುಮಪಿಪ್ರಾಚಾಂಗುರೂಣಾಮಿಹ
ಶ್ರೀಮಂತಂಮದನಾಂತಕಂ ಕಥಮಪಿಸ್ತೋತುಂಕೃತೋನಿಶ್ಚಯಃ
ತೇನತ್ವಾಂತ್ವರಯಾಮಿ ಭಾರತಿಬಲಾತ್ಕೃತ್ವಾಪಿದುಃಸ್ಥೇಪಥಿ
ಪ್ರಾಸೇನೋಪಹತಾಪಿ ಜಾತುಕುಪಿತಾಮಾಸ್ಮಪ್ರಸಾದಂತ್ಯಜಃ ॥ ಆಶ್ವಾಸ ೧—೮

ದೇವತೆಗಳಿಗೆ ಒಡೆಯನಾದ ಆಚಾರ್ಯ ಮುಖ್ಯಾಚಾರ್ಯನಾದ ಶ್ರೀಮಂತನೂ ಕಾಮಾಂತಕನಾಗಿರುವ ತ್ರಿನಯನನ್ನು ಸ್ತುತಿಸಲು ನಿಶ್ಚಯಿಸಿರುವೆನಾದುದರಿಂದ ಎಲೈ! ಸರಸ್ವತಿಯೇ! ನಿನ್ನ (ಅನುಗ್ರಹಕ್ಕಾಗಿ)ನ್ನು ತ್ವರೆಗೊಳಿಸುತ್ತೇನೆ. ಹಾಗೆ ನಿನ್ನನ್ನು ತ್ವರೆಗೊಳಿಸುವ ಸಮಾರಂಭದಲ್ಲಿ (ಆತುರದಿಂದಲೋ ಅಜ್ಞಾನದಿಂದಲೋ ಹೇಗೋ) ನಿನ್ನನ್ನು ದುರ್ಮಾರ್ಗಕ್ಕೆ ಎಂದರೆ ವಿಕಟಾಕ್ಷರಬಂಧ, ಪಾರುಷ್ಯಾದಿ ದೋಷಪೂರ್ಣವಾದ ಮಾರ್ಗಕ್ಕೆ ಎಳೆಯುವುದಾದರೂ, ವೃತ್ಯನುಪ್ರಾಸಾದಿಗಳೆಂಬ ಆಯುಧವಿಶೇಷಗಳಿಂದ ಹೊಡೆಯಲ್ಪಟ್ಟವಳಾದರೂ ನೀನು ಕೋಪಿಸಿಕೊಳ್ಳದೆ ಯಾವಾಗಲೂ ಅನುಗ್ರಹದಿಂದಿರುವಳಾಗು.

ದೇವತೆಗಳ ಮೊರೆಯನ್ನಾಲಿಸಿ ಪ್ರತ್ಯಕ್ಷನಾದ ಪರಶಿವನನ್ನು ಕುರಿತು ದೇವತೆಗಳು ಸ್ತುತಿಸುವ ಶ್ಲೋಕಗಳಲ್ಲಿ ಒಂದು:—

ಅಗಂತವ್ಯಂತರ್ಕೈರನಧಿಕಮಸಿ ಯಂ ಕ್ರತುಶತೈ
ರನಾಸಾದ್ಯಂ ದಾನೈರನುಪಸರಣೀಯಂ ಚ ತಪಸಾ
ಭವಂತಂಪಶ್ಯಂತಸ್ಪ್ರುಚಮಭಿ ಭವಂತಂಪ್ರಣಮತಾಂ
ಕೃತಾರ್ಥಾಜಾತಾಸ್ಮಃ ಪುನರಪಿಕೃತಾರ್ಥಾಃ ಪುನರಪಿ ॥ ಆಶ್ವಾಸ ೨—೧೦.

ಶ್ರುತ್ಯನುಮತಗಳಾದ ತರ್ಕಾದಿಗಳಿಂದಲೂ, ನೂರಾರು ಕ್ರತುಗಳಾಚರಣೆ ದಿಂದಲೂ, ದಾನಧರ್ಮಾದಿಗಳಿಂದಲೂ, ಎಷ್ಟು ತಪಸ್ಸುಮಾಡಿದರೂ ಪಡೆಯಲು ಅಸಾಧ್ಯವಾದ ನಿನ್ನ ದರ್ಶನದಿಂದ ಎಲೈ! ಪರಮೇಶ್ವರನೇ! ನಾವು ಕೃತಾರ್ಥರೂ ಕೃತಕಾರ್ಯರೂ ಆದೆವು.

---

## ಆ ನ ಂ ದ ರಾ ಯ ಮ ಖಿ

ಇವನು ಭಾರದ್ವಾಜ ಗೋತ್ರದವನು. ನೃಸಿಂಹರಾಯಮಖಿಯ ಮಗನು. ಗಂಗಾಧರಮಖಿಯ ಮುಮ್ಮಗನು. ಗಂಗಾಧರಮಖಿಯು ಬಾಬಾಜಿಯಜ್ವನ್ನಿನ ಮಗನಾಗಬೇಕು. ಇವನ ವಂಶಾವಳಿಯು ಹೀಗಿರುವುದು.*

* Dharmakuta Sri Vani Vilas Edition Verses 15, 27, 28 and the Prologue of ವಿದ್ಯಾಪರಿಣಯನಂ.




**ಗಂಗಾಧರಮಖಿ,** ಇವನ ಮಕ್ಕಳು, ಇವನ ಮುಮ್ಮಗ ಆನಂದರಾಯಮಖಿ ಇವರು ಮಹಾರಾಷ್ಟ್ರದ ಅರಸರಾದ ಎಕ್ಕೋಜಿ ಅಥವಾ ವೆಂಕೋಜಿ ಮತ್ತು ಅವನ ಮೂರುಜನ ಮಕ್ಕಳಬಳಿ ಮಂತ್ರಿಪದವಿಯನುಳ್ಳವರಾಗಿದ್ದರು. ಆನಂದರಾಯ ಮಖಿಯು ಆಸ್ಥಾನದಲ್ಲಿ ಧರ್ಮಾಧಿಕಾರಿಯಾಗಿದ್ದುದಲ್ಲದೆ ಯುದ್ಧರಂಗದಲ್ಲಿ ದಳ ವಾಯಿಯೂ ಮಹಾಕವಿಯೂ ಆಗಿದ್ದನು.

**ಕಾಲ:**—ಮಹಾರಾಷ್ಟ್ರ ರಾಜರಾದ ಶಾಹಜಿ ಮತ್ತು ಸರಫೋಜಿಯು ಕ್ರಿ. ಶ. ೧೭ನೆಯ ಶತಮಾನದ (ಉತ್ತರಾರ್ಧ) ಮತ್ತು ೧೮ನೆಯ ಶತಮಾನದ ಪೂರ್ವಾರ್ಧ ದವರು. ಶಾಹಜಿಯು ಕ್ರಿ. ಶ. ೧೬೮೪-೧೭೧೦ರ ವರೆಗೆ ಆಳಿದನು. ಆದುದರಿಂದ ಆನಂದರಾಯಮಖಿಯೂ, ಕ್ರಿ. ಶ. ೧೭ನೆಯ ಶತಮಾನದ ಉತ್ತರಾರ್ಧದವನು.

**ಗ್ರಂಥಗಳು:**—(೧) ವಿದ್ಯಾಪರಿಣಯನಂ
(೨) ಜೀವಾನಂದ
(೩) ಆಶ್ವಲಾಯನ ಗೃಹ್ಯಸೂತ್ರವ್ಯಾಖ್ಯಾ
(೪) ಋಗ್ವೇದ ಗೃಹ್ಯಸೂತ್ರವ್ಯಾಖ್ಯಾ

**'ವಿದ್ಯಾಪರಿಣಯನಂ'** ಎಂಬದು ಕೃಷ್ಣಮಿಶ್ರನ ಪ್ರಬೋಧಚಂದ್ರೋದಯ ನಾಟಕದಂತೆ ಬರೆಯಲ್ಪಟ್ಟಿದೆ. ಇದರಲ್ಲಿ ಅದ್ವೈತವೇವಸ್ತು. ಶೃಂಗಾರರಸಯುಕ್ತ ವಾದುದಾಗಿದೆ. ಜೀವಾನಂದವೂ, ವಿದ್ಯಾಪರಿಣಯನ ನಾಟಕದ ಹಾಗೆ ಬರೆಯಲ್ಪಟ್ಟಿದೆ.

ಈ ಎರಡು ನಾಟಕಗಳನ್ನು ವೇದಕವಿಯೆಂಬವನು ಬರೆದು, ಆನಂದರಾಯಮುಖಿಯ ಹೆಸರಿನಲ್ಲಿ, ಹೇಳಿರುವದಾಗಿ ಪಂಡಿತಮಂಡಲಿಯಲ್ಲಿ ನಂಬುಗೆ ಇರುವದು * ಆದರೆ ವಿದ್ಯಾಪರಿಣಯದ ನಾಟಕದ ಕರ್ತೃನು, ಆನಂದರಾಯಮುಖಿಯೆಂದೂ ಅವನು ಶಾಹಜೀ ಸರಫೋಜಿಯ ಬಳಿ ಮಂತ್ರಿಪದವಿಯಲ್ಲಿದ್ದವನೆಂದೂ ವಿದ್ಯಾಪರಿಣಯದ ನಾಟಕದ ಆ ಮುಖದಿಂದ ತಿಳಿಯುಬರುತ್ತದೆ. ಅದು ಹೀಗಿರುವದು:—

ಸೂತ್ರಧಾರಃ :—ವಿದ್ವತ್ಕಲ್ಪತರುರಾನಂದರಾಯಮುಖೀ | ಯಸ್ಯಕಿಲ:—

**ಕಾಲ**:—ಆನಂದರಾಯಮುಖಿನೋ ವಾಲ್ಮೀಕೇರಿವ ಯೋಗಿನಃ
ಇತರಾಪೇಕ್ಷಣಾತ್ಸಾರಸ್ವತಃ ಸಾರಸ್ವತೋದಯಃ || ೧-೭

ಅಪಿಚ:—

ನಾನಾಪೂರ್ವಮಹಾಕ್ರತುಪ್ರಣಯನೈರಧ್ಯಾತ್ಮತತ್ಸಂಮ್ಮರ್ಶನೈಃ
ಕರ್ಮಬ್ರಹ್ಮಪಥಪ್ರಚಾರಸವಿತಾ ಷಡ್ದರ್ಶನೀವಲ್ಲಭಃ
ತಾತೋ ಯಸ್ಯ ಕಿರ್ಮೀರರಾಜವಸುಧಾಧೌರಂಧರೀ ಗೀಷ್ಪತಿಂ
ಕ್ಷೋಣೀಪಾಲಕಿರೀಟಲುಲಿತಪದಃ ಖ್ಯಾತೋ ನೃಸಿಂಹಾಧ್ವರೀ || ೧-೮
ಕ್ಲಿಷ್ಟಾ ಯದ್ಯಪಿ ಶಾಸ್ತ್ರಪದ್ಧತಿರಸಾವನ್ಯೈಃ ಕವೀಂದ್ರೈರಯಂ
ತ್ವಶ್ಲೀಲಂ ನ ತಿತಿಕ್ಷತೇ ನ ಸಹತೇ ಪಾತ್ರೇಷು ಚಾನೌಚಿತೀಂ
ನೇತುಃ ಶಾಸ್ತ್ರಮತಾಂ ತ್ರಿವರ್ಗಫಲ ಸಂಪತ್ತಿಂ ವಿಮುಚ್ಯಾತ್ಯಯೀ
ಪನ್ಯಾಸಂ ಚ ಜುಗುಪ್ಸತೇ ತದಯಮಾರಂಭೋಽಸ್ಯಸಂ ರಂಭತಃ || ೧-೧೩

ಅದ್ವೈತಂ ವಸ್ತು, ಶೃಂಗಾರೋರಸಃ, ಅಥ ಚ ನಿರ್ದೋಷತಾ ಇತಿ ಸರ್ವಮಿದಮತ್ಯದ್ಭುತಂ ದೃಶ್ಯತೇ | ಅಘನಾವಿಶ್ವಾತಿಶಾಯಿಲೌಕಿಕ................ ಸಕಲರಾಜ್ಯಧುರಂಧರಸ್ಯ ಶರಭಮಹಾರಾಜಮಂತ್ರಿಶಿಖಾಮಣೇರಸ್ಯ ಜನಕಸನಕ..............ಧೌರಂಧರೀಯಮಿತಿ ಮೇ ಮಹದಾಶ್ಚರ್ಯಂ |

ಆಬಾಲ್ಯಾದಪಿ ಪೋಷಿತೋಽಜನಿ ಮಯಾಪ್ರೇಮ್ಣಾ ತಥಾ ಲಾಲಿತ
ಸ್ತೇನಾಸೌ ಸರಸಾಮುಕ್ತೈತು ಕವಿತಾಮಾನಂದರಾಯಾಧ್ವರೀ
ಇತ್ಯೇಕಕ್ಷಿತಿಪಾಲವಂಶಜಲಧೇರ್ದೇವ್ಯಾ ಗಿರಾಂ ಜಾತಯಾ
ಧೀರಶ್ರೀಶರಭಾವನೀಂದ್ರವಪುಷಾ ನೂನಂ ಪ್ರಸಾದಃ ಕೃತಃ || ೧-೧೪‡

ಇದೇ ಜಾತಿಯ, ಹಿಂದೆ ಹೇಳಿರುವ ಪ್ರಬೋಧಚಂದ್ರೋದಯ, ಸಂಕಲ್ಪಸೂರ್ಯೋದಯ, ಚೈತನ್ಯಚಂದ್ರೋದಯ ನಾಟಕಗಳಲ್ಲಿ ಶಾಂತರಸವೆಂಬುದು ಪ್ರಧಾನವಾಗಿ ಹೇಳಿದೆ. ಇದರಲ್ಲಿ ಶೃಂಗಾರ ರಸವು ಪ್ರಧಾನವಾಗಿ ಹೇಳಿರುವುದು. ಕಥಾವಸ್ತು ಅದ್ವೈತವೆಂಬುದನ್ನು ಸೂತ್ರಧಾರನೇ ಹೇಳಿಕೊಂಡಿರುವನು.

* Journal of Oriental Research Vol. III P. 69

‡ ವಿದ್ಯಾಪರಿಣಯನದ ಮುನ್ನುಡಿ.

ಇದರ ಕೆಲವು ಶ್ಲೋಕಗಳು:—

ಅವಿದ್ಯೆಯು ಚಿತ್ತಶರ್ಮನೊಡನೆ ಹೇಳುವುದು:—

ಮಾಮೇವಂ ವಿವಿಧೋಪಭೋಗಲಲಿತಾಮುತ್ಸೃಜ್ಯ ಕಿಂ ಲಪ್ಸ್ಯತೇ
ಭೂಯಃ ಪ್ರಾಗಿವ ಸಾ ದಶಾ ಪರಿಣಮೇದಾತ್ಮಾವಶೇಷೀಕೃತಾ ॥
ವಂಚ್ಯಂತೇ ಕರಣಾನ್ಯಮೂನಿ ಪರಂ ಕಿಂ ತತ್ರ ಪಶ್ಯನ್ ಸ್ಮಿತಂ
ಸಾಕೂತಸ್ಮಿತಕೇಳಿಲೋಲನಯನಂ ಬಿಂಬಾಧರಂ ಪಾಸ್ಯಸಿ ॥ (೫—೩೮)

ಜೀವರಾಜನಹೇಳಿಕೆ:—

ಮಂದಸ್ಮಿತಸ್ನಪಿತಮಂಜುಮುಖಾರವಿಂದಂ
ವಾಮಾಂಕಸಂಗಿವನಿತಾಮುಖಲೋಲನೇತ್ರಂ ॥
ಚಿನ್ಮಾತ್ರಿಕಾವಿಧುತಚಿತ್ತಮಲಾಂಧಕಾರಂ
ಜ್ಯೋತಿರ್ಮನೋ ಬತ ನ ಚಾತುಜಹಾತಿತನ್ಮೇ ॥ (೭—೬)

ಇದರಲ್ಲಿ ಹೇಳಿರುವ ಮಹಾದಂಡಕ:—

ಜಯ ಜಯ ವಿಜಯೀಭವಾಪಾರಸಚ್ಚಿದ್ಘನಾನಂದ ಭೂಮನ್ನವಿದ್ಯಾತಮಃ ಸಿಂಧುನಿರ್ಮಗ್ನದೀನೋದ್ಧೃತಿಃ ಶೃಂಗಾರಸೋಪಾತ್ತಕಲ್ಯಾಣಮೂರ್ತೇ, ಸಮಸ್ತಾಭಿನಂದ್ಯಾದ್ಭುತೋದಾರಚಿತ್ರಪ್ರದಾನಸ್ಫುರಚ್ಚಾರುಕೀರ್ತೇಽಪಿ ಖಂಡಂ ವಿಖಂಡಂ ನಿಜಾನ್ಯೈರರುಂಡಾನಿತದ್ಘೋಮತಃ ಪ್ರೀಣಿತತ್ವದ್ದಯಾಲೇಶಲಬ್ಧಪ್ರಭಾವಾಧಿಕಸ್ತಬ್ಧವಿಶ್ವಗ್ಜಗನ್ಮಂಡಲೀಲುಂಠನಾಕುಂಠನಾಚ್ಚಂಡಿಮೋದ್ದಂಡದೋರ್ದಂ ಡಕಂ ಡೂಲತಾಗೇಂ ಡುಕಕ್ರೀಡಿತಾಂದೋಳಿತತ್ರಸ್ತಚಂಡೀಕಕೈಲಾಸ ತತ್ಕೂಟ ಕಿಂಚಿತ್ಪದಾಂಗುಷ್ಠವಿನ್ಯಾಸಪಾತಾಲನಿರ್ಮಗ್ನತನ್ಮೌಲಿಲಗ್ನಾಖುವಕ್ತ್ರಂ ದದತ್ಯಾರ್ತರಕ್ಷಃ ಕುಲಾಧ್ಯಕ್ಷದಾಕ್ಷಿಣ್ಯಭೂಯಃ ಪ್ರವೃತ್ತಾನುಕಂಪಾರ್ದ್ರವ ಚ್ಚಿತ್ತವೃತ್ತೇಽತಿಮಾದ್ಯದ್ಗಣೋದ್ಯಚ್ಚಪೇಟಾಹತೋಚ್ಚಂಡಪಾತಾರ್ಗಂ ಡಗಂಡತ್ರುಟತ್ಕೀರ್ಣವಂತೌಘನಕ್ಷತ್ರಲೋಕೀಭವದ್ಯಜ್ಞವಾಸ್ತುದ್ರುತಾನುದ್ರುತಾತಿದ್ರುತಾನುದ್ರುತಾಟೋಪಸಂಕ್ಷೋಭಿತ ಸಾಧ್ವಸಧ್ವಸ್ತಧಾವತ್ಪತತ್ಕ್ರಂದದಂಚದ್ಧರಿಬ್ರಹ್ಮಶಕ್ರಾದಿತತ್ತತ್ಸದಸ್ಯಾಮರಶ್ರೇಣಿಕಾಗಾಢಶವ್ಯಾದ್ಧಪದ್ಯೋಪದಂಡಾಹತಿ ಪ್ರತ್ರುಟನ್ನಿಷ್ಠುರಸ್ರುಕ್ಸ್ರವಾದಿಚ್ಛಟಾಪರ್ಪಟಸ್ಫೋಟವಟ್ಪಾಪಟಾಪ್ರೋಷ್ಠಟಂ ಘೋರಠಾಂಕಾರಿಗಂಭೀರಕುಂ ಭೀಸಹಧ್ವಸ್ತಸರ್ಪಿರ್ಘಟೌಘಸ್ರವದ್ಭೂರಿಸರ್ಪಿರ್ಘನೌಘಃ (?) ಸಮಿಂಧಾನವಹ್ನಿರುಂಧಾನವೈತಾನವಹ್ನ್ಯರ್ಚಿರಾಲೀಢ ಶಾಲಾಪಿನಹ್ಯಸ್ಫುಟದ್ವಂಶಠಾತ್ಕಾರಘೋರಾರ್ಭಟೀಭೂಮನಿರ್ವೃತ್ತಸಂವರ್ತವಹ್ನ್ಯದ್ಧತಿಸ್ತಬ್ಧದಕ್ಷಾಧ್ವರಧ್ವಂ ಸಕೃದ್ವೀರಭ

ದ್ರಾವತಾರಾರವಿಂದಾಕ್ಷವೇಧಶ್ಚಿರಾನ್ವಿಷ್ಟನೋದೃಷ್ಟಸಾಂದ್ರಷಿಷ್ಟಿಕವ್ಯಾಧಸ ಶ್ವಾದಿನಿಃಶ್ರೇಯಸೈಶ್ವರ್ಯವಿಶ್ರಾಣನಸ್ಪಷ್ಟದೃಷ್ಟಾಕೃತೇ,

ಸ್ಮರಮದ ತಿಮಿರೋಷ್ಣಧಾಮನ್ನಿಥೋದರ್ಪ ಭೂಯಿಷ್ಠ ದೇವಾಸುರವ್ರಾತ ಸಂಕ್ಷುಭ್ಯಮಾಣಾಬ್ಧಿಗರ್ಭೋದ್ಭವ ವ್ಯಾಪ್ತವಿಧ್ಯಂಡ ಚಂಡಜ್ವಲ ಜ್ವಾಲ ಜಾಲಾವಲೀ ಢಾಖಿಲಾಶಾಮುಖಾಕಾಲಕಾಲಾ ನಲತ್ಕಾಲಹಾಲಾಹಲಾ ರ್ಚಿಃ ಪರಿಪ್ಲುಷ್ಟಸಾಕ್ರಂದಕೋಲಾಹಲೋದ್ಘುಷ್ಟವೇಧೋಹರಿಪ್ರಷ್ಟನಷ್ಟ ತ್ರಿಲೋಕೀಸಮುಜ್ಜೀವನಾಯಾಶುತನ್ನಿಗ್ರಹಾರಬ್ಧನಿರ್ಯತ್ನ ಜಂಬೂಫಲ ಗ್ರಾಸಲೀಲಾಯಿತವ್ಯಂಜಿತಾಪಾರಮಾಹಾತ್ಮ್ಯಭೂಮಾಂ............ ..........................ಭೋನಿಧೇದೇವಸಾಹಂತಮಾವೇಧಸೋ ವಿಷ್ಟ ಪಾದಾ ಚ ಪಾತಾಲತಃ ಕ್ಷಿಪ್ರಮೇತಾಜಗನ್ಮಂಡಲೀಃ ಖಂಡಡಿಂಡೀರಪಿಂ ಡಾನಿವಾವರ್ತಕೋಟ್ಯಾ ಸಮಾಘೂರ್ಣಯೇಯೇ ತ್ರಿದರ್ಪಾದನಲ್ಪಾರ್ಭ ಟೀಘೋರಮಾವಿರ್ಭವಂತ್ಯಭ್ರಕಲ್ಲೋಲಿನೀನಾಥ ಯುಷ್ಮಜ್ಜಟಾಮಂ ಡಲೇ ಕ್ವಾಪಿ ನೀವಾರಶೂಕಾಗ್ರಸಂಸಕ್ತನೀಹಾರಲೇಶಃ ಕಿಲಾಲಕ್ಷ್ಯತೇ ಪಾಮರಾಸ್ವಾಂತಮಮೇಯಪ್ರಭಾವೋಚ್ಛ್ರಿತಂ ಪ್ರಾಕೃತೈರ್ದೈವತೈರೇಕ ವನ್ಮನ್ಯತೇಽಹೋ ಭವಾನ್ನಾವ ವಿಶ್ರಾಣನೇಕೋಽಪಿಚಿಂತಾಮಣಿ ರ್ನಾಮ ಸಂತಾನಕೋನಾಮ ಹಂತಾತಿಫಲ್ಗುಪ್ರಭೋಧಾಮರೂಪಾತಿ ಮೂಢಸ್ತುತಿಪ್ರಕ್ರಿಯಾ ಸೇಯಮತ್ಯದ್ಭುತೇ ವಿಶ್ವವಿದ್ಯೋತನೋದ್ದಾಮ ತೇಜೋನಿಧೌಭಾಸ್ಕರೇ ಕೀಟಖದ್ಯೋತತಾರೋಪವದ್ಭಾತಿ ಮೇ ಕಲ್ಪಕ ಪ್ರಷ್ಠತಾದ್ಯ ಗ್ವಿಭೂತ್ಯುತ್ಕಟಾನೇಕಕೋಟ್ಯಾ ಸಹಾವೇಕ್ಷಣೇನ ಕ್ಷಣೇ ನೈವ ಲೋಕಾನನೇಕಾನ್ವಿಧಾಯ ಪ್ರಣತ್ಯಾ ಪ್ರಣುತ್ಯಾ ಪ್ರಪತ್ತ್ಯಾಪಿ ವಾ ಜಾತು ಯಸ್ಮೇ ಮತಸ್ತಸ್ಯತತ್ಸ್ವಸ್ಯವಿಶ್ರಾಣನಂ ತೇ ಕಿಯಚ್ಚಂದ್ರ ಚೂಡಾಮಣೇ

ಸಕಲ ವಿಬುಧರ್ಜಯ್ಯೈತಜ್ಜಯೋ ಜಾತುಕೇನಾಪಿರೂಪೇಣಕಿಂಚಿದ್ಯಶೋಽಹಂ ಲಭೇಯೇತಿ ಲೋಭಾಚ್ಛತಾಂಗಂ ತದಂಗಂಶರಃ ಸೂತ ಇತ್ಯಾದಿ ಯತ್ಕಿಂ ಚಿದಾಯೋಧನಾಂಗತ್ವಮಾಲಂಬ್ಯಸಂನದ್ಧ ಹೃಷ್ಟೇಷು ವಿಶ್ವಂಭರಾ ಪುಷ ವಚ್ಛೌರಿವೇಧಃ ಪುರೋಗೇಷು ಜಾಗ್ರತ್ಸು ದೇವೇಷುನೈಡಾಲರೋಚೀಃ ಸನಾ ಥೇನ ಮಂದಸ್ಮಿತೇನೈವ ತಿಸ್ರಃ ಪುರೋ ಭಸ್ಮಸಾತ್ಕೃತ್ಯ ದೈತ್ಯಾನ್ವಿಜಿ ತ್ಯ ದೃಪ್ತಾಮನುಷ್ಯಾಪಶೂಕೃತ್ಯ ವಿಷ್ವಕ್ಪಶೂನಾಂ ಪತಿತ್ವೇನ ಶಶ್ವ ನ್ನಮಃ ಸ್ವಾಮ್ಯತಃ ಸಂಭೃತಾಪಾರವಿಶ್ವಾಧಿಪತ್ಯೋನ್ನತೇ ಸಂನಿಕೃಷ್ಟಂನಿಜ ಸ್ಯಾಯುಷೋಂತಂ ವಿದಿತ್ವಾವಿಪದ್ವಿಘ್ನತಃ ಪ್ರಾಜ್ಞಾಟಿತ್ಯೈವ ಪೂಜಾಸಮಾ ಪ್ತ್ಯಾಶಯಾರಬ್ಧಪೂಜೇ ಮೃಕಂಡೋಸ್ತನೂಜೇ ಲುಠತ್ಸ್ವಗ್ರತೋ ದೈನ್ಯ

ಕಾರುಣ್ಯಭೂಯಿಷ್ಠಮಾಕ್ರಂದನ್ನೈರ್ಬಂಧುಷು ಸ್ವಾಧಿಕಾರಾವಲೇಪೇನ ಕಾಲೇಽಥ ಕಾಲೇ ತಮಾಕರ್ಷತಿ ಕ್ರೋಧತೋ ವಾಮಪಾದಾಭಿಹತ್ಯಾ ಸವಿಧ್ವಂಸಿತೋ ಮೇ ಸವಿಧ್ವಂಸಮೇತತ್ಪ್ರಹಾರಪ್ರಣಾದೋದ್ಭವದ್ಭಕ್ತವಾತ್ಸಲ್ಯಕೀರ್ತಿರ್ದಿಗಂತಪ್ರಯಾಣೋಚಿತಪ್ರೋಚ್ಚಲದ್ಧ್ಯಂತ್ರತಾತ್ಕಾರಿತೋ ನಾಮತೇನಾಂತಕಃ ಸರ್ವತೋಽದ್ಯಾಪಿ ಸಾಶಂಕಮಾಹಿಂಡತೇ ತತ್ಸಮೋ ಭಕ್ತವಾತ್ಸಲ್ಯಸಿಂಧುರ್ನ ಕಶ್ಚಿನ್ನ ಭೂತೋ ನ ಭಾವೀ ಚ ಕಿಂ ಭೂಯಸಾ ಜಲ್ಪಿತೇನ ತ್ವಮೇಕೋಽಸಿ ಸತ್ಯಸ್ವರೂಪಃ ಸ್ವತನ್ಯದನ್ಮೃಷೈವಾಖಿಲಂ ಸತ್ವಮುದ್ಯತ್ಕಟಾರ್ಕಾದಿತೇಜಸ್ತ್ರಯೀಕೋಟಿಕೋಟ್ಯಾಪಿ ನೋ ಭಾಸ್ಯಸೇ, ಭಾಸ್ಯತೇ ಭಾಸಸಿಂಧೋ ಭವದ್ಭಾನಲೇಶೇನ ಕೃತ್ಸ್ನಂ ಜಗತ್, ಕಿಂಚಲಿಪ್ಸಾಪದಂ ವಲ್ಲಭಾದ್ವಲ್ಲಭಂ ವಸ್ತು ನ ತ್ವತ್ಪರಂ, ಕಿಂಚಿದಿಷ್ಟಂ ಘನೇಂದಾತ್ಮಕಾವಾಯ ಸರ್ವಂ ಹ್ಯತೋ ವಸ್ತು ಸತ್ಯಂ ತ್ವಮೇವ ಪ್ರಕಾಶ್ಯಸ್ತ್ವಮೇವ ಪ್ರಿಯಂ ಚ ತ್ವಮೇವಾಸಿ ತಾದೃಕ್ ತ್ವಮಾತ್ಮಾ ಪುರಃ ಪೃಷ್ಠತಃ ಪಾರ್ಶ್ವತೋ, ಭೂತಸದ್ಭಾವಿಕಾಲೇಷು ವಾ ಸರ್ವತಃ ಸರ್ವದಾ ವರ್ತಸೇ ಹಂತ ತಿಷ್ಠನ್ನಿಧಾವೇವ ಕಾರ್ಪಣ್ಯಭಾಗ್ಮಂದಭಾಗೀವ ತಂ ತ್ವಾಮಸನ್ಯಾಪರೋಕ್ಷಾತಿನೇದಿಷ್ಠಮಾರಾದಪಶ್ಯನ್ನವಿದ್ಯೇಂದ್ರಜಾಲಪ್ರಸೂತೇ ನಿಮಜ್ಜಾಮಿ ಸಂಸಾರಮಿಥ್ಯಾರ್ಣವೇ—

ನಿಗಮಶಿಖರ ಕೂಟಕೋಟೀಸದೋ ವಿತ್ವರಾಪ್ರಾಕೃತೋದ್ದಾಮತೇಜೋನಿಧೇ ಸಚ್ಚಿದಾನಂದಮೂರ್ತೇ ಜಗತ್ಸರ್ಗರಕ್ಷೋಪಸಂಹಾರಧೌರೇಯ ತಾಲೀದಲಾದಿಸ್ಫುರದ್ಭಾತ ಚಕ್ರಾತಿಸೇಗ ಭ್ರಮದ್ಭೂರಿತೇಜಸ್ತ್ರಯದ್ಯೋತಿನಾನಾನಿಧೃತಜಗನ್ಮಂಡಲೋಽಸ್ಮಿನ್ನನದ್ಯೋತವಿಧ್ವಂಸನಧ್ವಾಂತ ಶಶ್ವತ್ಪರಾವರ್ತನಾಲಾತಚಕ್ರಕ್ರಮಾಲೋಕಲೀಲಾವಿನೋದಿನ್ ಪ್ರಮಾಣೌಘಸಿದ್ಧಸ್ವಸತ್ತಾಸಸತ್ತಾಕಸಾಂಕಲ್ಪಿಕಸ್ವಾಪ್ನಿಕವ್ಯಾವಹಾರಾದಿ ನಾನಾರ್ಥಜಾಲೇಂದ್ರಜಾಲೋದಯಾವಸ್ಥಿತಿಧ್ವಂಸನಾನಾಮಧಿಷ್ಠಾನ, ತತ್ರತತ್ರ ಸರ್ವತ್ರ ಸೂತ್ರಾತ್ಮನಾಧಿಷ್ಠಿತಾ ಪಾರನ್ನೈಕಪ್ರಕಾರೋನ್ಮಿಷತ್ಕ್ಲೇಶಭೂಯಿಷ್ಠಜನ್ಮಾದಿಕೃನ್ಮೋಹಗಾಢಾಂಧಕಾರೌಘನಿಶ್ಶೇಷವಿಧ್ವಂಸನೋಚ್ಚಂಡಮಧ್ಯಾಹ್ನಮಾರ್ತಾಂಡ ಸಂಸಾರರೋಗಪ್ರಸದ್ವನ್ಯಯೋಗೀಂದ್ರ ಸಂಪನ್ನನೋಮಂಥನಿರ್ಮಥ್ಯಮಾನಶ್ರುತಿವ್ರತದುಗ್ಧಾಬ್ಧಿಸಿದ್ಧ್ಯತ್ಸದಾನಂದಚಿಚ್ಚಂದ್ರಿಕಾಸಾಂದ್ರ ತತ್ಪೂರ್ಣಚಂದ್ರೋದಯಾಪ್ಯೈತಸಾಮ್ರಾಜ್ಯಸಿಂಹಾಸನಾಧ್ಯಕ್ಷ ಮನ್ನಾಥ ಕೇನಾಪಿ ಸತ್ಸಂತತಿರ್ಜಾಯತಾತಿಶ್ರೇಯಸಾಂ ಮಾಮಕಪ್ರಾಗ್ಜನುಃಕೋಟಿಕೋಟ್ಯಾರ್ಜಿತೇನಾಪಿ ಪುಣ್ಯೇನ ದೃಷ್ಟೋಽಸಿ ಧಿಷ್ಟ್ಯಾ ನ ಮಾಮುಂಚ ದೀನಂ, ತ್ವದನ್ಯಃ ಶರಣ್ಯೋ ನ ಮೇ ಪಾರಮಸ್ಯಾಧು

ನಾತ್ವಾಮಪಿಪ್ರಾಪ್ಯ ತೀರ್ಣೋ ನಚೇತ್ವಾಮಹಂ ಮೇ ಪರಾ ಕಾ ಗತಿ ರ್ದೀನಬಂಧೋ ದಯಾಪಾರಸಿಂಧೋ ಭವಾಂಭೋಧಿನಿಸ್ತಾರಧೌರಂಧುರೀ ಕರ್ಣಧಾರಾತಿದುರ್ವಾರತಾಪತ್ರಯಪ್ಲುಷ್ಟಸಂಜೀವನೋದಾರ ಧಾರಾಧರಾ ನಾದಿ ಮೋಹಾಂಧ್ಯನಷ್ಟಾಮಿ ತಸ್ವಾರ್ಥವಾದ್ಯಗ್ದ್ಯಗಾನಂದಸಿದ್ಧಾಂಜ ನಾರ್ತ್ಮ, ನಮಸ್ತೇ ನಮಸ್ತೇ ಸಮಸ್ತೇಶ್ವರಾಯಾಪ್ರಧೃಕ್ತ್ವಾಜಸೇ ತೇಜ ಸಾಂ ತೇಜಸೇ ಭೂಯಸಾಂ ಭೂಯಸೇ ಪ್ರೇಯಸಾಂ ಪ್ರೇಯಸೆ"

ಎಂದು ಹೇಳಿದೆ. ಈ ದಂಡಕವು ಅತಿದೀರ್ಘವಾಗಿರುವುದರಿಂದ ರಂಗ ಭೂಮಿಯಲ್ಲಿನ ಪ್ರೇಕ್ಷಕರಿಗೆ ರಸಾಪಕರ್ಷತ್ವವು ತೋರಬಹುದು. ಹೇಳದೆ ಇದ್ದರೆ ವಿಷಯವು ಪೂರ್ಣವಾಗದು.

---

## ಅಪ್ಪಾಧ್ವರಿ (೯)

ಇವನು ಶ್ರೀವತ್ಸಗೋತ್ರದವನು. ತಂಜಾವೂರು ಜಿಲ್ಲೆಯ ಮಾಯಾವರಂ ಬಳಿಯಣ ಕಿಳಯೂರ್, (ಈಗಣ ಕಿಳ್ಳಿಯೂರ್) ಎಂಬ ಗ್ರಾಮದವನು. ಚಿದಂಬರ ಮುಖಿ ಎಂಬವನ ಮಗನು ಎಂಬುದು ಈ ಶ್ಲೋಕದಿಂದ ವ್ಯಕ್ತವಾಗುತ್ತದೆ.

ತಾತೋ ಯಸ್ಯ ಚಿದಂಬರೇಶ್ವರ ಇತಿ ಪ್ರಖ್ಯಾತನಾಮಾ ಮುಖೀ
ಯದ್ಭ್ರಾತ್ರಿಸ್ಥವದತ್ತಹವ್ಯನಿವಹಾದಾನೈಕತೃಪ್ತಾಸ್ಸುರಾಃ
ಶ್ರೀವತ್ಸಾನ್ವಯವಾರಿಧೀಂದುರವಸದ್ಯಃ ಕಿಲ್ಲಿಯೂರ್ನಾಮಕಃ
ಶ್ರೀಮಾನ್ವಿಶ್ರುತಕೀರ್ತಿರುದ್ರಹೃದಯೋ ಪುಣ್ಯೇsಗ್ರಹಾರೇ ಸುಧೀಃ *

ಶ್ರೀಮಚ್ಚಿದಂಬರಮಖೀಂದ್ರಸುತೇನ ವತ್ಸ
ವಂಶಾಂಬುರಾಶಿನಿಧುನಾವಿಧಿಶಾಸ್ತ್ರಮಾರ್ಗೇ
ಸಂಚಾರನಿರ್ಮಲಧಿಯಾ ಸಕಲಾರ್ಥಬೋಧ
ಮಾಚಾರಸಾರನವನೀತಮಿದಂ ಗೃಹೀತಂ || ೱ

ಇವನ ಆಚಾರ್ಯನು ಉದಯಮೂರ್ತಿ. ಪ್ರಾಚಾರ್ಯನ ಹೆಸರು ಮಾಯಾವರಂ ಬಳಿಯಣ ಆಲತ್ತೂರು ಗ್ರಾಮದ ಪಿಳ್ಳೈಶಾಸ್ತ್ರಿಗಳು.

ಆಲತ್ತೂರಧಿವಾಸಸ್ಯ ಪಿಳ್ಳೈಶಾಸ್ತ್ರಿಬುಧೇಶಿತುಃ
ಆಚಾರನವನೀತಾಖ್ಯಂ ನಿಬಧ್ನಾತಿ ಕೃಪಾಬಲಾತ್ ||

ವಂದೇ ಗುರೂನುದಯಮೂರ್ತಿಬುಧಾಭಿಧಾನಾ
ಯದ್ಬೋಧವಿಜೃಂಭಣಮಹೋ ! ಜಗತಸ್ತಮೋನುತ್

---

* ಮದನಭೂಷಣಭಾಣದ ಪ್ರಸ್ತಾವನೆ.

ೱ ಆಚಾರ ನವನೀತ.

ಕಾಂಪಿಳ್ಯಶಾಸ್ತ್ರಭಿದಲೋಕಗುರೋಃ ಪುರಾಣ
ಪುಣ್ಯಾನುಭಾವಕೃತಭೂಮಿತಲಾವತಾರಾನ್ ॥ (ಆಚಾರ ನವನೀತ)

ಇವನು ಶಾಹಜೀರಾಜನ ಆಶ್ರಯದಲ್ಲಿದ್ದುದು ಈ ಶ್ಲೋಕಗಳಿಂದ ವ್ಯಕ್ತ ಪಡುತ್ತದೆ.

ಶ್ರೀ ಶಾಹಕ್ಷಿತಿಪಾಲನಾಯಕ ದಯಾದತ್ತಾನ್ನಭೋಗೋಲ್ಲಸ
ದ್ಬುದ್ಧ್ಯುತ್ಕರ್ಷವಿಭಾವಿತಶ್ರುತಿಬಹುಸ್ಮೃತ್ಯರ್ಥಸಾರೋದಯಃ
ಸಭ್ಯಾನಾಂ ಪ್ರಮುದಾಯ ಸರ್ವವಿಷಯಾಧರ್ಮಾರ್ಥರಹಸ್ಯೋತ್ತರಾನ್
ಸಂಗೃಹ್ಣಾಮಿ ಮಿತೈಃ ಪದ್ಯೈರಧಿವಸಮಾಯೂರಮಪ್ಪಾಧ್ವರೀ

ಏಕಶ್ಚಾಷ್ಟಪತಿಪೂರ್ವಪುಣ್ಯಸುಕೃತೋತ್ಕರ್ಷೇಣ ಲಬ್ಧೋದಯಃ
ದೀಪಾಂಬೋದರ ಗರ್ಭವಾಸಮಹಿಮ ಪ್ರಖ್ಯಾತ ಪುಣ್ಯೋದಯಃ
ಶ್ರೀಶಾಹಕ್ಷಿತಿರಾಟ್ಪ್ರಶಾಸ್ತು ವಸುಧಾಮಾಚಂದ್ರಮಪ್ಪಾಧ್ವರೀ
ಯದ್ದತ್ತಾನ್ನಬಲೇನ ಧರ್ಮವಿಷಯಂ ಶಾಸ್ತ್ರಂ ಸಮಗ್ರಂಥಯತ್ ॥
(ಆಚಾರನವನೀತ)

ಶಾಹಜಿರಾಜನ ಮಂತ್ರಿಯಾದ ತ್ರ್ಯಂಬಕರಾಯಮಖಿಯು ಕ್ರಿ. ಶ. ೧೬೭೬ ನೆಯ ಧಾತೃವರ್ಷದಲ್ಲಿ ನಡೆಸಿದ ಮಹಾಯಜ್ಞಕ್ಕೆ ತನ್ನನ್ನು ಕರೆಸಿಯಿಕೊಂಡ ಹಾಗೂ, ಆ ಯಜ್ಞವು ಕುಂಭಕೋಣದ ಬಳಿಯಲ್ಲಿರುವ ಸ್ವಾಮಿಮಲೈ ಎಂಬಲ್ಲಿ ನಡೆಯಿತೆಂದೂ ತ್ರ್ಯಂಬಕರಾಯ ಮತ್ತು ಮಹಾರಾಷ್ಟ್ರ ರಾಜನು ಇವನನ್ನು ಬಿಡಲಾರದೆ ರಾಜಾಸ್ಥಾನದಲ್ಲಿ ಮೂರು ತಿಂಗಳು ಮಹಾಭಾರತ ಪಾರಾಯಣವನ್ನು ಮಾಡಬೇಕೆಂದು ಪ್ರಾರ್ಥಿಸಿಕೊಂಡ ಮೇರೆ ಪಾರಾಯಣವನ್ನು ಮುಗಿಸಿ ಮಾಯಾವರಕ್ಕೆ ಹಿಂತಿರುಗಿ ಬರುವಾಗ ಶಾಹಜೀ ರಾಜನು ಒಂದು ಧರ್ಮಶಾಸ್ತ್ರವನ್ನು ಬರೆಯಬೇಕೆಂದು ಕೇಳಿಕೊಂಡ ಮೇರೆಗೆ ಹಾಗೆ ಆಗಲಿ ಎಂದೊಪ್ಪಿ ಊರಿಗೆಬಂದು ತನ್ನ ಮಗನೊಡನೆ ೮ ವರ್ಷಗಳಲ್ಲಿ ೧೫೦೦೦ ಗ್ರಂಥ ಪರಿಮಿತಿಯುಳ್ಳ ಒಂದು ಧರ್ಮಶಾಸ್ತ್ರ ಪುಸ್ತಕವನ್ನು ಬರೆದು ಶಾಹಜಿರಾಜನಿಗೆ ಕೊಟ್ಟುದಾಗಿಯೂ ಅದನ್ನು 'ಆಚಾರನವನೀತ' ಎಂದು ಕರೆದುದಾಗಿಯೂ ಕೆಳಗಣ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ:—

ಧಾತೃವರ್ಷೇ ಯದಾ ಯಜ್ಞಸೇವಾರ್ಥಮಹಮಾಗತಃ
ಶ್ರೀಮಹಾರಾಜರಾಜಸ್ಯ ಮಂತ್ರಿಣಸ್ತ್ರ್ಯಂಬಕಪ್ರಭೋಃ ॥
ಮಹಾರಾಜಸ್ತು ಮಾಂ ಪ್ರೀತ್ಯಾ ಸ್ವಸಭಾಯಾಮವಾಸಯತ್
ಭಾರತಶ್ರವಣಾರ್ಥಾಯ ರಾತ್ರಿಂದಿವಮುದಾರಧೀಃ
ಯದಾ ಮಾಸತ್ರಯಾದೂರ್ಧ್ವಂ ಪ್ರಾಪ್ಯಾನುಜ್ಞಾಂ ಮಹೀಪತೇಃ
ಗಂತುಮಿಚ್ಛಾಮಿ ಚ ತದಾ ಧರ್ಮಶಾಸ್ತ್ರನಿಬಂಧನೇ ॥
ಮಹಾರಾಜೇನ ಚಾಜ್ಞಪ್ತೋ ಗತೋಽಹಂ ಮಾಯೂರಮಾಗತಃ
ತಸ್ಮಿನ್ವರ್ಷೇ ನೃಶ್ಚಿಕ-ಕೇ ಧರ್ಮಶಾಸ್ತ್ರಸುಧಾನಿಧೇಃ

ಏಕೇನೈವ ಮಯಾ ಪುತ್ರಯುಕ್ತೇನ ಶನಕೈಃ ಕೃತೇ
ಬುದ್ಧಿ ದಂಡೇನ ಮಥನೇ ರಾತ್ರಿನ್ದಿವಮನೇಕಧಾ ||
ಅಸ್ಮಾಭಿರ್ಲಬ್ಧಮಾನಸ್ಮಿ ವತ್ಸೌರಸ್ತತ್ಫಲಂ ಮಹತ್
**ಆಚಾರನವನೀತಂ** ತನ್ಮೃದು ಸರ್ವಮನೋಹರಂ
ಮಹಾರಾಜಸ್ಯ ದಯಯಾ ಸತ್ಸಂಗಾಹ್ವಾಮಭೂದ್ಭುವಿ
ಸಮಾಪ್ತಃ ಪಂಚದಶಭಿಃ ಸಹಸ್ರೈಗ್ರಂಥಸಂಖ್ಯಯಾ
ಪ್ರಚಾರೋಽಸ್ಯ ಮಹಾರಾಜಾಧೀನ ಏವ ಹಿ ಸರ್ವಥಾ
ಅಹಮಪ್ಪಾಧ್ವರೀನಾಮ್ನಾ ಮಹಾರಾಜೇನ ಸಾದರಂ ||
ದತ್ತಾಂ ಮಹೀ ಸಮಾದಾಯ ತತ್ರ ಕೃಷ್ಯಾದಿವಂಭೃತೈಃ |
ಧಾನ್ಯೈಃ ಪರಂಪರಾಸಿದ್ಧೇ ಗ್ರಾಮೇ ಕೃಷ್ಯಾ ಸಮಾರ್ಜಿತೈಃ |
ಕುರ್ವನ್ಕುಟುಂಬಭರಣಂ ಪುತ್ರಪೌತ್ರೈಸ್ಸಮಾವೃತಃ |
ಶ್ರೇಯಃ ಪ್ರಾರ್ಥಯಮಾನಸ್ಸನ್ಮಹಾರಾಜಸ್ಯ ಸಂತತಂ |
ಆಯುಶ್ಶೇಷಂ ಸುಖಂ ವಸ್ತುಮಿಚ್ಛಾಮ್ಯಗ್ನಿಕಿ (ತ್ರಿ) ಯಾಂತಿಕೇ |
ಮನೋರಥೋ ಮಹಾನೇಷ ಮಹಾರಾಜೇನ ಪೂರ್ಯತಾಂ || (ಆಚಾರ ನವನೀತ)

**ಕಾಲ:**—ರಾಜನಾದ ಶಾಹಜಿಯು ಕ್ರಿ. ಶ. ೧೭ನೆಯ ಶತಮಾನದ ಉತ್ತರಾರ್ಧದವನಾದುದರಿಂದ ಇವನ ಆಶ್ರಿತನಾದ ಅಪ್ಪಾಧ್ವರಿಯು ಕ್ರಿ. ಶ. ೧೭ನೆಯ ಶತಮಾನದ ಉತ್ತರಾರ್ಧದವನೆಂಬುದು ಸ್ಪಷ್ಟವು ಶಾಹಜಿಯು ಕ್ರಿ. ಶ. ೧೬೮೪ ೧೭೧೦ರ ವರೆಗೆ ಆಳಿದನು.

**ಗ್ರಂಥಗಳು:**— (೧) ಮದನಭೂಷಣಭಾಣ.
(೨) ಗೌರೀಮಯೂರ ಮಹಾತ್ಮ್ಯಚಂಪೂ.
(೩) ಆಚಾರನವನೀತ (ಧರ್ಮಶಾಸ್ತ್ರ).

ವೈದ್ಯನಾಥಶಾಸ್ತ್ರಿಯ ಶಿಷ್ಯನಾದ ಅಪ್ಪಾಸೂರಿ ಎಂಬುವನನ್ನು ಅಪ್ಪಾಧ್ವರಿ ಎಂದು ಹೇಳುವುದು ತಪ್ಪಾಗುವುದು. ಇಬ್ಬರೂ ಬೇರೆ ಬೇರೆ *

---

## ೮
## ವೆಂಕಟಾಧ್ವರೀ

ಇವನು ಕಾಂಚೀಪುರ ಸಮೀಪದ 'ಅರ್ಶನಫಲ' ಎಂಬ ಅಗ್ರಹಾರದವನು ಶ್ರೀರಾಮಾನುಜಮತಾನುಯಾಯಿ. 'ವಡಘಲೆ' ಸಂಪ್ರದಾಯದವನು. §

ಇವನ ಪಿತೃಪಿತಾಮಹರ ವಿಚಾರವಾಗಿ:—

---

* The Journal of oriental Research Vol III PP 71-73
§ ವಿಶ್ವಗುಣಾದರ್ಶ, ಮುನ್ನುಡಿ ಪುಟ ೬—೭.

ಕಾಂಚೀಮಂಡಲಮಂಡನಸ್ಯ ಮಖಿನಃ ಕರ್ಣಾಟಭೂಭೃದ್ಗುರೋ
**ಸ್ತಾತಾರ್ಯ**ಸ್ಯ ದಿಗಂತಕಾಂತಯಶಸೋ ಯಂ ಭಾಗಿನೇಯಂ ವಿದುಃ
ಅಸ್ತೋಕಾಧ್ವರಕರ್ತುರ**ಪ್ಪಯಗುರೋ**ರಸ್ಯೈವ ವಿದ್ವನ್ಮಣೇಃ
ಪುತ್ರಃ **ಶ್ರೀರಘುನಾಥದೀಕ್ಷಿತಕವಿಃ** ಪೂರ್ಣೋಗುಣೈರೇಧತೇ ॥ ೨
ತತ್ಸೂತಸ್ತರ್ಕವೇದಾಂತ ತಂತ್ರವ್ಯಾಕೃತಿಚಿಂತಕಃ
ವ್ಯಕ್ತಂವಿಶ್ವಗುಣಾದರ್ಶಂ ವಿಧತ್ತೇ **ವೇಂಕಟಾಧ್ವರೀ** ॥ ೩ §

ಎಂದು ಹೇಳಿಕೊಂಡಿರುವುದರಿಂದ ಕಾಂಚೀಮಂಡಲ ಭೂಷಣರೂ, ಯಾಗಗಳನ್ನು ಮಾಡಿದವರೂ, ಕರ್ಣಾಟಾಧೀಶ ಕೃಷ್ಣರಾಜನ ಗುರುಗಳೂ, ದಿಗಂತವಿಶ್ರಾಂತ ಕೀರ್ತಿಯುತರಾದ ತಾತಾರ್ಯ (ತಾತಾಚಾರ್ಯ) ರೆಂಬವರ ಸೋದರಳಿಯನೂ, (ಸೋದರಿಯಮಗ) ಸಕಲಕಲಾಕೋವಿದನೂ, ಯಾಗಗಳನ್ನು ಮಾಡಿದವನೂ, ಮಹಾಕವಿಯೂ ಆದ ಅಪ್ಪಯ ಗುರುವಿನ ಮಗ ಶ್ರೀರಘುನಾಥ ದೀಕ್ಷಿತನು, ಸುಪ್ರಸಿದ್ಧನು. ಇವನ ಮಗ ತರ್ಕಶಾಸ್ತ್ರಕೋವಿದನೂ, ವೇದಾಂತಶಾಸ್ತ್ರಾದಿ ಪ್ರವೀಣನೂ ಆದ ವೇಂಕಟಾಧ್ವರೀ ಎಂಬವನು. ರಘುನಾಥದೀಕ್ಷಿತನು ಶ್ಲೇಷಯಮಕ ಚಕ್ರವರ್ತಿಯೆಂದೂ ಆತ್ರೇಯಗೋತ್ರದವನೆಂದೂ, ವೇಂಕಟಾಧ್ವರಿಯು ಸೀತಾಂಬಾ ಗರ್ಭಸಂಭೂತನೆಂಬದು:—

"ಇತಿ ಶ್ರೀಪಂಚಮತಭಂಜನನಿಬಂಧನ ವಿಖ್ಯಾತತಾತಯಜ್ವಭಾಗಿನೇಯ ವಾಜಪೇಯ ಸಾರ್ವಪ್ರಷ್ಠಾಪ್ತೋರ್ಯಾಮಾದಿಯಾತ್ರೇಯವಂಶಮೌಕ್ತಿಕೀಭವದಪ್ಪಯ್ಯಾರ್ಯತನೂಭವಶ್ಲೇಷ ಯಮಕಚಕ್ರವರ್ತಿ ರಘುನಾಥಾಚಾರ್ಯತನಯಸ್ಯಶ್ರೀನಿವಾಸಕೃಪಾತಿಶಯಸಂವಿದಿತನಯಸ್ಯ ಸೀತಾಂಬಾಗರ್ಭಸಂಭವಸ್ಯ ಶ್ರೀಮತ್ಕಾಂಚೀನಗರವಾಸ್ತವ್ಯಸ್ಯ ಮಹಾಕವಿಶ್ರೀಮದ್ವೇಂಕಟಾಧ್ವರಿಣಃಕೃತೌ.................." ಎಂಬ ಗ್ರಂಥಾಂತ್ಯ ಗದ್ಯದಿಂದಲೂ† :—

ಅಪ್ಪಯ್ಯಗುರು ಎಂಬವನು (ಅಪ್ಪಯಾಚಾರ್ಯ) ಶ್ರೀನಿವಾಸಚಾರ್ಯನೆಂಬದು
"ಇತಿ ಶ್ರೀಕಾಂಚೀನಗರನಾಯಕ ತಾತಾಚಾರ್ಯಭಾಗಿನೇಯವಾಜಪೇಯ ಸರ್ವಪೃಷ್ಠಾಪ್ತೋರ್ಯಾಮಾದಿಯಾಜಿ ಶ್ರೀ ಶ್ರೀನಿವಾಸಾಚಾರ್ಯತನೂಭವಸ್ಯ ..................ವೇಂಕಟಾರ್ಯಯಜ್ವನಾ‡................" ಎಂಬುದರಿಂದಲೂ ಸ್ಪಷ್ಟಪಡುತ್ತದೆ.

§ ವಿಶ್ವಗುಣಾದರ್ಶ ಆರಂಭ ಶ್ಲೋಕಗಳು.
† Ibid ಕೊನೆಯಲ್ಲಿ ಹೇಳಿರುವ ಗದ್ಯ.
‡ ವರದಾಭ್ಯುದಯಾಂತ್ಯ ಗದ್ಯ.

ಇವನಿಗೆ ವೆಂಕಟಾಧ್ವರೀ ಎಂದೂ, ವೆಂಕಟಾಚಾರ್ಯನೆಂದೂ, ವೇಂಕಟಾರ್ಯ ಯಜ್ವಾ ಎಂದೂ ಉಪನಾಮಗಳಿರುವುವು.

**ಕಾಲ:**—ನೀಲಕಂಠ ವಿಜಯಚಂಪೂಕಾರನಾದ ನೀಲಕಂಠದೀಕ್ಷಿತನೂ ಇವನೂ ಸಹಾಧ್ಯಾಯಿಗಳೆಂದು "ಅಯಂ ..........ವೆಂಕಟಾಧ್ವರಿನಾಮಕವಿಃ ನೀಲಕಂಠದೀಕ್ಷಿತ ಸಮಕಾಲಃ ತತ್ಸಹಾಧ್ಯಾಯೀ ಆಸೀತ್," x ಎಂದು ಹೇಳಲ್ಪಟ್ಟಿರುವುದರಿಂದ ಇವರೀರ್ವರೂ ಸಮಕಾಲೀನರೆಂದೂ ಕ್ರಿ. ಶ. ೧೭ನೆಯ ಶತಮಾನದವರೆಂಬುದು ನಿಶ್ಚಯವಾಗುತ್ತದೆ.

ಗ್ರಂಥಗಳು:—೧. ವಿಶ್ವಗುಣಾದರ್ಶ
೨. ವರದಾಭ್ಯುದಯ
೩. ಪ್ರದ್ಯುಮ್ನಾನಂದ
೪. ಲಕ್ಷ್ಮೀಸಹಸ್ರ

ಇವೇ ಮೊದಲಾದವುಗಳನ್ನು ಬರೆದಿರುವನು. ಇದರಲ್ಲಿ **ವಿಶ್ವಗುಣಾದರ್ಶವು** ಉತ್ತಮವಾದ ಮತ್ತು ವಿಖ್ಯಾತ ಗ್ರಂಥವಾಗಿ ಜಾತಿ, ಮತ, ಶಾಸ್ತ್ರ, ದೇಶ, ಮೊದಲಾದವುಗಳ ಸ್ವಭಾವಸಿದ್ಧವಾದ ಗುಣದೋಷಗಳನ್ನು ವರ್ಣಿಸುವುದಾಗಿದೆ. ಇದು ಚಂಪೂಗ್ರಂಥ. ಗದ್ಯಪದ್ಯಯುಕ್ತವಾದ ಚಂಪೂಗ್ರಂಥವನ್ನೇಕೆ ಬರೆದಿರುವನೆಂಬ ವಿಚಾರವಾಗಿ ಕವಿಯು ಪದ್ಯಕಾವ್ಯಗಳು ಲೋಕದಲ್ಲಿ ಎಷ್ಟೋ ಇರುವುವಾದರೂ ಗದ್ಯದೊಡನೆ ಇಲ್ಲದ ಪದ್ಯವು ರಸಿಕರಿಗೆ ಆಹ್ಲಾದಕರವಾಗಿರದೆಂದೂ, ಪದ್ಯದಿಂದ ಅಗಲಿರುವ ಗದ್ಯವು ಓದುವಜಾಣರಿಗೆ ಇನಿದಾಗದೆಂದೂ ಅಥವಾ ಸವಿಯಾಗದೆಂದೂ ಇವೆರಡರ ಸೇರಾಣಿಕೆಯಿಂದ ಹೆಚ್ಚು ಆನಂದ ಉಂಟಾಗುವುದೆಂದೂ ಮಧು (ಜೇನುತುಪ್ಪ) ದ್ರಾಕ್ಷಾರಸಯೋಗವು ಯಾರಿಗೆತಾನೇ ರುಚಿಯಾಗಿರದು ? ಸಕಲರಿಗೂ ರುಚಿಕೊಡುವುದೆಂದೂ,

ಪದ್ಯಂ ಯದ್ಯಪಿ ವಿದ್ಯತೇ ಬಹು ಸತಾಂ ಹೃದ್ಯಂ ವಿಗದ್ಯಂ ನ ತತ್
ಗದ್ಯಂ ಚ ಪ್ರತಿಪದ್ಯತೇ ನ ವಿಜಹತ್ಪದ್ಯಂಬುಧಾಸ್ವಾದ್ಯತಾಂ
ಆದತ್ತೇ ಹಿ ತಯೋಃ ಪ್ರಯೋಗ ಉಭಯೋರಾಮೋದಭೂಮೋದಯಂ
ಸಂಗಃ ಕಸ್ಯ ಹಿ ನ ಸ್ವದೇತ ? ಮನಸೇ ಮಾಧ್ವೀಕ ಮೃದ್ವೀಕಯೋಃ ||
ವಿಶ್ವಗುಣಾದರ್ಶ || ೪ ||

ಎಂದು ಹೇಳಿಕೊಂಡಿರುವನು. ಒಂದಾನೊಂದು ಸಮಯದಲ್ಲಿ ಕೃಶಾನು ವಿಶ್ವಾವಸು ಎಂಬ ಇರ್ವರು ಗಂಧರ್ವರು ಸಮಾನವೇಷಧಾರಿಗಳಾಗಿ ಸ್ಥಿರಚರರೂಪ

x ವಿಶ್ವಗುಣಾದರ್ಶ ಮುನ್ನುಡಿ ಪುಟ ೭

ವಾದ ಈ ಲೋಕ (ಮರ್ತ್ಯಲೋಕ)ವನ್ನು ಸುತ್ತಿ ನೋಡಿಕೊಂಡು ಬರಬೇಕೆಂಬ ಉದ್ದೇಶದಿಂದ ವಿಮಾನಾರೂಢರಾಗಿ ಹೊರಟರು.

ವಿಶ್ವಾವಲೋಕಸ್ಪೃಹಯಾ ಕದಾಚಿದ್ವಿಮಾನಮಾರುಹ್ಯ ಸಮಾನವೇಷಂ
ಕೃಶಾನುವಿಶ್ವಾವಸುನಾಮಧೇಯಂ ಗಂಧರ್ವಯುಗ್ಮಂ ಗಗನೇ ಚಚಾರ||೫||

ಇದರಲ್ಲಿ ಕೃಶಾನುವು ಲೋಕದೋಷಗ್ರಹಣಕೌತುಕಿ. ವಿಶ್ವಾವಸುವಾದರೋ ವಿಶ್ವಗುಣಗ್ರಹಣ ಕೌತುಕಿಯಾಗಿದ್ದನು. ಇವರು ವಿಮಾನದಲ್ಲಿ ಸಂಚರಿಸುತ್ತ ತಮಗೆ ಕಂಡುಬಂದ ಗುಣದೋಷ ವಿಮರ್ಶೆಮಾಡುತ್ತ, ಸಕಲಲೋಕದ ಸ್ವಭಾವವರ್ಣನವನ್ನು ಮಾಡುವರಾಗಿ ಪವಿತ್ರಗಳಾದ ತೀರ್ಥಕ್ಷೇತ್ರ ಸೇವನೆಯಿಂದ ಕೃತಾರ್ಥರಾಗಿ, ಪ್ರವಾಸದಿಂದ ದೃಢವೈತ್ರಿಯುಳ್ಳವರಾಗಿ ಆನಂದದಿಂದ ಸ್ವಸ್ಥಾನ ಮಂ ಸಾರ್ದರು ಎಂದು ಕಥೆಯನ್ನು ಕಲ್ಪಿಸಿಕೊಂಡು ಹೇಳಿರುವನು. ಇವನು ಶ್ರೀವೆಂಕಟನಾಥನ ಸಂಕಲ್ಪಸೂರ್ಯೋದಯನಾಟಕವನ್ನೋದಿ ಅದನ್ನು ಮಾದರಿ ಯಾಗಿಟ್ಟುಕೊಂಡು ತನಗೆತೋರಿಬಂದ ವಿಷಯಗಳೆಲ್ಲವನ್ನೂ ಸಮರ್ಥಿಸಿರಬೇಕಾಗಿ ನಮಗೆತೋರುತ್ತದೆ. ಅಲ್ಲದೆ ತಾನು ಹೇಳಬೇಕೆನ್ನುವ ವಿಷಯಸಿದ್ಧಿಗೆ ಇವನುದೇಶಾಟನಕ್ಕಾಗಿಹೊರಟು ಭರತಖಂಡದ ಸಕಲದೇಶ, ತೀರ್ಥಕ್ಷೇತ್ರ, ಜನರ ನಡೆನುಡಿ, ಆಚಾರಮೊದಲಾದವುಗಳೆಲ್ಲವನ್ನೂ ಪ್ರತ್ಯಕ್ಷದಲ್ಲಿನೋಡಿ ಬರೆದಿರಬೇಕಾಗಿ ಭಾಸವಾಗುತ್ತದೆ. ಸಂಕಲ್ಪಸೂರ್ಯೋದಯನಾಟಕದ ಐದನೆಯ ಅಂಕದಲ್ಲಿ ಡಂಭ ಮತ್ತು ದರ್ಪನ ಹೇಳಿಕೆಯ ವಿಚಾರಗಳೂ ಮುಖ್ಯವಾಗಿ ಆರನೆಯ ಅಂಕಪೂರ್ತಿ ಯಾಗಿ ವಿವೇಕ ಮತ್ತು ತರ್ಕರಸಂಭಾಷಣೆಗಳೂ, ವರ್ಣನೆಗಳೂ, ಸ್ಥಳಗಳೂ ಇವೇ ಮೊದಲಾದವು ಈ ಕವಿಗೆ ಸಹಾಯವಾಗಿರಬೇಕಾಗಿ ತಿಳಿಯುತ್ತೇವೆ. ಸಂಕಲ್ಪ ಸೂರ್ಯೋದಯದ ಐದನೆಯ ಅಂಕದಲ್ಲಿ ಮಗಧ ಕಳಿಂಗ ಆಂಧ್ರ ದ್ರಾವಿಡ ಕರ್ಣಾಟ ಕೇರಳ ಕೊಂಕಣ ದೇಶಗಳ ಹೆಸರೂ. ವರ್ಣನೆಗಳೂ ಕಂಡುಬರುತ್ತವೆ. ಪ್ರಾಕೃತ, ಮಹಾರಾಷ್ಟ್ರ ಮಾಗಧ ಪೈಶಾಚ ಅಪಭ್ರಂಶ. ಶೂರಸೇನೀ ಮೊದಲಾದಭಾಷೆಗಳ, ಭಾಷಾಭೇದಗಳ ಹೆಸರುಗಳಿವೆ.

ಇವುಗಳೆಲ್ಲದರ ಪರಶೀಲನದಿಂದ ವಿಶ್ವಗುಣಾದರ್ಶದ ರಚನೆಯು ಸಂಕಲ್ಪ ಸೂರ್ಯೋದಯವನ್ನನುಸರಿಸಿ ಬರೆದಿರಬೇಕಾಗಿ ಬಹುತರಬೋಧೆಯಾಗುತ್ತದೆ. ವಿಶ್ವ ಗುಣಾದರ್ಶದ ಕೆಲವು ಶ್ಲೋಕಗಳನ್ನು ಬರೆದು ಮುಗಿಸುವೆವು.

ಕೃಷ್ಣಾಶ್ಲೇಷ ವಿಶೇಷಿತಾಸಿತರುಚೇ ಕಾಳಿಂದಿ ತುಭ್ಯಂ ನಮಃ
ಕುಂಜೇಭ್ಯಃ ಶ್ರಿತತಾವಕಾಂಬುಕಣಿಕಾಪುಂಜೇಭ್ಯ ಏಷೋಽಂಜಲಿಃ
ಗೋಪೀಭ್ಯಃ ಪರಿರಿಪ್ಸಯಾ ಮುರರಿಪೋಸ್ತೇಷು ಸ್ಥಿತಾಭ್ಯೋ ನತಿ
ರ್ನಾಥಾಯಾಭಿರುಪಾಸಿತಾಯ ಚ ನಮೋವಾಕಾ ನಧೀಯಾಮಹೇ || ೧೨೩

ಶ್ರೀ ಕೃಷ್ಣನ ಆಲಿಂಗನದಿಂದ ಕಪ್ಪು ಬಣ್ಣವುಳ್ಳವಳಾದ ಎಲೌ ಯಮುನೆ ! ನಿನಗೆ ನಮಸ್ಕಾರವು. ನಿನ್ನ ನೀರಿನ ತುಂತುರುಗಳಿಂದ ಆಶ್ರಯಿಸಲ್ಪಟ್ಟುದಾದ ಲತಾ ಕುಂಜಗಳಿಗೆ ಕೈಜೋಡಿಸುತ್ತೇನೆ. ಶ್ರೀಕೃಷ್ಣನ ಆಲಿಂಗನಕಾತರರಾಗಿ ಲತಾ ಕುಂಜಗಳಲ್ಲಿ ಅಡಗಿಕೊಂಡಿರುವ ಗೋಪವಧೂಟಿಯರನ್ನು ವಂದಿಸುತ್ತೇನೆ. ಅವರಿಂದ ಸೇವಿತನಾದ ಒಡೆಯ ಕೃಷ್ಣನನ್ನು ಪುನಃ ಪುನಃ ನಮಸ್ಕರಿಸುತ್ತೇನೆ.

ಲುಂಠಿತ್ವಾ ನವನೀತಮನ್ಯಸದನೇ ಲೋಲೇಕ್ಷಣೋ ಭಕ್ಷಯನ್
ಗೋಪೀಭಿಃ ಪರಿಗೃಹ್ಯ ಮಾತೃಸವಿಧಂ ನೀತೋ ಮುಕುಂದಸ್ತಯಾ
'ಲುಂಠಿರ್ಮಾ ನವನೀತ ಮಿತ್ಯಭಿಹಿತೋಽಪ್ಯೇತದ್ವ್ಯಲುಂಠೀಃ ಕಿಮ್'
ತ್ಯುಕ್ತೋ ಮಾನವನೀತಮೇವ ಹೃತವಾನ್ ತ್ಯಾಗೋ ಜನನ್ಯಾಂ ಸ್ಯಧಾತ್ ||೧೨೪||

ಇತರರ ಮನೆಯಲ್ಲಿ ಬೆಣ್ಣೆಯನ್ನು ಕದ್ದು ತಿನ್ನುವಭರದಲ್ಲಿ ತನ್ನನ್ನು ಯಾರಾದರೂ ನೋಡುವರೆಂಬ ಹೆದರಿಕೆಯಿಂದ ಅತ್ತಿತ್ತನೋಡುತ್ತಿರುವ ಕೃಷ್ಣನನ್ನು ಗೋಪಾಂಗನೆಯರು ಒಡಿದುಕೊಂಡು ತಾಯಿಯಾದ ಯಶೋದೆಯ ಬಳಿಗೆ ಬಂದು ದೂರು ಹೇಳಲು ಯಶೋದೆಯು ಕೃಷ್ಣ ! ' ಲುಂಠಿರ್ಮಾನವನೀತ ಮಿತಿ' ಬೆಣ್ಣೆಯನ್ನು ಕಳುವುಮಾಡಬೇಡವೆಂದು ಹೇಳಿದ್ದಾಗ್ಯೂ ಪುನಃ ನೀನು ಬೆಣ್ಣೆಯನ್ನು ಕದ್ದುದೇಕೆಂದು ಕೇಳಿದುದಕ್ಕೆ ಕೃಷ್ಣನು ಅಮ್ಮಾ ! ನಾನು ಮಾನವ + ನೀತವನ್ನು (ಮನುಷ್ಯರು ಕೊಂಡುಹೋಗುತ್ತಿದ್ದುದನ್ನು) ಕಸುಗೊಂಡೆನು ಹೊರ್ತು ನವನೀತವನ್ನು ತೆಗೆದುಕೊಳ್ಳಲಿಲ್ಲ ಎಂದುತ್ತರಕೊಟ್ಟನು.

ಅಂಸೇ ಸಲೀಲಮಧಿರೋಪ್ಯ ಶುಕಂ ಸ್ವಹಸ್ತಾ
ದ್ಗೋಪ್ಯಾ ಭಯಾಕುಲದೃಶಃ ಕುತುಕೀ ಮುಕುಂದಃ
' ಅಂಸಂಗತಂ ಶುಕ ಮಿಹಾಪನಯೇತಿ ' ವಾಚಂ
ತಸ್ಯಾ ನಿಶಮ್ಯ ಸ ತದಂಶುಕಮಾಚಕರ್ಷ || ೧೨೫ ||

ಕೃಷ್ಣನು ಹುಡುಗತನದಿಂದ ತನ್ನ ಬಳಿಯಲ್ಲಿದ್ದ ಶುಕವನ್ನು ಚಂಚಲನೇತ್ರಳಾದೊಬ್ಬ ಗೋಪಿಯತೋಳಿನಮೇಲೆ ಇರಿಸಲು ಅವಳು ಎಲೈ ಕೃಷ್ಣನೆ! 'ಅಂಸಂಗತಂ ಶುಕಮಿಹಾಪನಯ' ಎಂದು ಹೇಳಿದುದನ್ನು ಕೇಳಿ ಅವಳ ಹೇಳಿಕೆಯನ್ನು ಸಮರ್ಥಿಸಲು ಅವಳ ತೋಳಿನ ಮೇಲಿರುವ ಸೀರೆಯ ಸೆರಗನ್ನು ವಾರೆಮಾಡಿಬಿಟ್ಟನು ಅಥವಾ ಜಾರಿಸಿಬಿಟ್ಟನು (ಇಲ್ಲ ಅವಳು ಹೇಳಿದುದು ಕೃಷ್ಣ ! ನೀನು ತೋಳಿನಮೇಲಿಟ್ಟ ಗಿಳಿಯನ್ನು ತೆಗೆದುಕೋ ಎಂದು. ಇವನು ಅರ್ಥಮಾಡಿಕೊಂಡುದುದು ಅಂ + ಸಂಗತಂಶುಕಂ ಎಂದರೆ ಅಂ ಎಂಬ ಅಕ್ಷರದಿಂದ ಕೂಡಿದ ಶುಕಂ ಎಂದರೆ ಅಂಶುಕ ಎಂದರೆ ವಸ್ತ್ರ ಎಂದು,)

ನೀತ್ವಾ ರಾಧಿಕಯಾ ನಿಶಾಂ ಮುರರಿಪುಃ ಪ್ರಾತರ್ಗೃಹಾನಾಗತಂ
ಕ್ವಾಂಮಾಭೂರಪರಾಧಿಕಃ ಪುನರಿತಿ ಪ್ರೋಕ್ತೋಽಪಿ ಪೂರ್ವಂ ಮಯಾ

ಕಸ್ಮಾದೇವಮಭೂರಿತಿ ಶ್ರುತರುಷಾ ನಿರ್ಭರ್ತ್ಸಿತೋ ಲೀಲಯಾ
ತ್ವದ್ವಾಚೈವ ಸರಾಧಿಕೋಽಹಮಿತಿ ತಾಂ ವ್ಯಾಮೋಹಯನ್ಮಾಯಯಾ || ೧೨೬

ಒಂದು ರಾತ್ರಿ ಒಬ್ಬಾನೊಬ್ಬ ಗೊಲ್ಲತಿಯಿಂದ ಕರೆದು ಹೋಗಲ್ಪಟ್ಟು ಮಾರನೆಯ ಬೆಳಿಗ್ಗೆ ಮನೆಗೆ ಬಂದ ಕೃಷ್ಣನನ್ನು ನೋಡಿ ಎಲೈ ಕೃಷ್ಣನೆ! ನೀನು ಇಂತಹ ತಪ್ಪುಗಳನ್ನು ಮಾಡಬೇಡನೆಂದು ಎಷ್ಟು ಸಲ ಹೇಳಿದಾಗ್ಯೂ ಪುನಃ ಹೀಗೇಕೆ ಮಾಡಿದೆ? ಎಂದು ನೀಳಾದೇವಿಯು ಕೋಪದಿಂದು ಸರಲು ಅಥವಾ ಗದರಿಸಲು ಎಲೌ! ನೀಳೆ! ನೀನು ಮಾಭೂರಪರಾಧಿಕಃ ಎಂದು ಹೇಳಿದ ಪ್ರಕಾರ ನಾನು ಸರಾಧಿಕನಾಗಿದ್ದೆನೆಂದು ನೀಳೆಯನ್ನು ಮರುಳುಮಾಡಿದನು. (ಇಲ್ಲಿ ಮಾಭೂರಪರಾಧಿಕಃ ಎಂದರೆ ತಪ್ಪುಗಾರನಾಗಬೇಡ ಎಂದೂ ರಾಧೆಯಿಂದ ಅಗಲಿದವನಾಗಬೇಡ ಎಂದೂ ದ್ವಯಾರ್ಥಸೂಚಕವಾಗಿರುವುದು.)

ಕಾಂಚೀನಾಮ್ನಿ ಪುರೇ ಸುರೇಂದ್ರಮಹಿತೇ ಪ್ರಾಕ್ಪಶ್ಚಿಮೋದ್ದೇಶಯೋ
ಶ್ಚಿತ್ರಂ ದೈವತಯೋಶ್ಚಿರಂ ನಿವಸತೋ ನೀತಿರ್ವಿರುದ್ಧಾ ಮಿಥಃ
ಏಕೋಽಪಿ ದ್ವಿಜರಾಜಮಪ್ಯಧರಯತ್ಯನ್ಯಸ್ತಮುತ್ತಂಸಯ
ತ್ಯಂಘ್ರಿಪ್ರಾಂತ ಬಿಭರ್ತಿ ಕಶ್ಚಿದಪರಃ ಸ್ವೇಮೂರ್ಧನಿ ಸ್ವರ್ಧುನೀಂ || ೧೨೭ ||

ಅಹಹ! ಈ ಕಾಂಚೀನಗರದಲ್ಲಿ ಪೂರ್ವ (ಮೂಡಣ) ಪಶ್ಚಿಮ (ಪಡುವಣ) ದಿಕ್ಕುಗಳಲ್ಲಿ ಬಹು ಪುರಾತನ ದೇವಮೂರ್ತಿಗಳಿರುವುವಾದರೂ ಒಬ್ಬರ ನಡತೆಯು ಮತ್ತೊಬ್ಬರಿಗೆ ಸರಿ ಹೋಗದಾಗಿದೆ. ಹೇಗೆಂದರೆ ಒಬ್ಬನು ದ್ವಿಜರಾಜ (ಗರುಡ) ನನ್ನು ಕೆಳಭಾಗದಲ್ಲಿ (ಎಂದರೆ ವಾಹನವಾಗಿ) ಇರಿಸಿಕೊಂಡಿದ್ದಾನೆ. ಮತ್ತೊಬ್ಬನು ತಲೆಯ ಮೇಲೆ ಇರಿಸಿಕೊಂಡಿದ್ದಾನೆ. ಗಂಗೆಯನ್ನು ಒಬ್ಬನು ಅಡಿಯಲ್ಲಿಟ್ಟುಕೊಂಡಿದ್ದಾನೆ ಮತ್ತೊಬ್ಬನು ತಲೆಯ ಮೇಲೆ ಹೊತ್ತುಕೊಂಡಿದ್ದಾನೆ. ಇದೆಂತಹ ಚಿತ್ರ!

ಮೋಹೋನ್ಮೂಲನಮೂಲಿಕಾ ಭವಜುಷಾಂ ಮೋಕ್ಷಾಧ್ವನಿಃ ಶ್ರೇಣಿಕಾ
ಚೇತಃ ಶುದ್ಧಿವಿಧಾನಸಿದ್ಧಗುಲಿಕಾ ಚಿಂತಾತಮಶ್ಚಂದ್ರಿಕಾ
ವಿದ್ಯಾವಿಭ್ರಮಸಾರಿಕಾ ಸಿಕಮಲೇ! ವಿಷ್ಣೋರುರೋಮಾಲಿಕಾ
ಮಾತಸ್ತ್ವಂ ಮಮ ಪಾರಿಜಾತಲತಿಕಾನಂದಾಂಬುಧೇರ್ವೀಚಿಕಾ || ೪೧೭ ||

ಅಮ್ಮ! ಕಮಲೆ! (ಲಕ್ಷ್ಮಿಯೇ) ನೀನು ಸಂಸಾರದಲ್ಲಿ ಸಿಕ್ಕಿನರಳುವವರ ಮೋಹವನ್ನು ನಿರ್ಮೂಲಮಾಡುವ ಔಷಧ (ಮೂಲಿಕೆ) ವಾಗಿರುವೆ. ಮುಕ್ತಿಸಾಧನಕ್ಕೆ ಸೋಪಾನದಂತಿರುವೆ. ಚೇತಃ ಶುದ್ಧಿಗೆ ಸಿದ್ಧಗುಳಿಗೆಯಾಗಿರುವೆ. ಚಿಂತೆಯೆಂಬ ಅಂಧಕಾರಕ್ಕೆ ಬೆಳದಿಂಗಳಿನಂತಿರುವೆ. ವಿದ್ಯಾವಿಲಾಸಸ್ಥಾನವಾದುಗಿವೆ ವಿಷ್ಣುವಿನ ವಕ್ಷದಲ್ಲಿ ಮಾಲಿಕೆಯುಂತಿರುವೆ. ನನ್ನ ಕೋರಿಕೆಗಳನ್ನು ಸಲಿಸುವ ಕಲ್ಪವೃಕ್ಷವಾಗಿರುವೆ. ನೀನು ಆನಂದ ಸಮುದ್ರದ ಲಹರಿಯಾಗಿರುವೆ.

ವಿಶ್ವಗುಣಾ ದರ್ಶಗ್ರಂಥಕ್ಕೆ ಬಾಲಕೃಷ್ಣ ಶಾಸ್ತ್ರಿ ವಿರಚಿತ 'ಪದಾರ್ಥ ಚಂದ್ರಿಕಾ' ಎಂಬ ವ್ಯಾಖ್ಯಾನವು ಇರುವುದು.

**ವರದಾಭ್ಯುದಯಚಂಪೂ.** ಇದಕ್ಕೆ ಹಸ್ತಿಗಿರಿಚಂಪೂ, ಕರಿಗಿರಿ ಚಂಪೂ ಎಂದೂ ಕರೆಯುವರು. ಇದು ವರದರಾಜನ ಮಹಿಮಾನು ವರ್ಣನಗ್ರಂಥ. ಇದರಲ್ಲಿ ಐದು ವಿಲಾಸಗಳಿರುವುವು. ಕೇವಲ ಶ್ಲೇಷ, ಯಮಕ, ಶಬ್ದ ಜಾಲರಂಜನದಿಂದಿರುವುದು ಹೊರ್ತು ಶ್ರವಣ ಪಠನಗಳಿಗೆ ಹೆಚ್ಚು ರಮ್ಯವಾಗಿರುವಂತೆ ಕಾಣುವುದಿಲ್ಲ.

ಇದರಗದ್ಯದ ಮಾದರಿ:—

ಅನಂತಸರೋವರ್ಣನ:—

ಏಷಾಪಿಶೇಷಾಪಿ ವರನಿರಂತರ ಸನ್ನಿಧಾನಸಿದ್ಧನಿತ್ಯ ಶುದ್ಧಭಾವಾ, ಸ್ವತೀರಸಮುದಿತ್ವರಕೇಸರ ಸಹಕಾರನಾಳಿಕೇರಮಂದಾರಕುಂದ ಪುನ್ನಾಗಕ್ರಮುಕಪ್ರಮುಖವಿವಿಧಧರಣೀರುಹಧರಣೀಸುರಪ್ರವರವಿಟಪಕರಗೃಹೀತ ಕುಸುಮಬ್ಬಂದಜುಹೂಮುಖಹೂಯಮಾನಮಧುಮಯಘೃತಧಾರಾಸಿಚ್ಯಮಾನವಿಮಲಸಲಿಲಸಂಸ್ಕಾರಿತಾವಭೃಥೇಷ್ಟ್ಯಾಚರಣಪ್ರಕಾರಾ, ಅಂತಃಕೃತಸಂತತಪಿಹರಣವರುಣಾಂತಃ ಪುರಜನಕರನಿಹಿತ ಮಧುಭರಿತಕನಕಚಷಕಮೋಹಮಾವಹದ್ಭಿರಘೇಷ್ಟಿತಲಿಪ್ತಯಾಚಿರಮುಪ್ಲುತಸಸ್ಯತಶ್ಚತಕ್ರತೋರ್ಜನಾರ್ದನ ಧ್ಯಾನಾವಧಾನಾವಸರವಿಧೃತಾನಂದ ಬಾಷ್ಪಾಣಿಸಯನಾಸಿನೂನಮಿತಿಶಂಕಾಮಂಕುರಯದ್ಭಿರಂತರ್ವಸಂತಂ ನಾರಾಯಣಮಾರಾಧ್ಯತದಭಿಷೇಕೋದಕಂ ವಿನಯಾತಿಶಯೇನಯುಗಪದೇವ ಪರಿಪಾತುಕಾಮಾನಾಂ ಪಿತ್ರಸೂರೀಣಾಂ ತತ್ತೀರ್ಥಧಾರಣದಶಾನಿಶ್ಚಲಾನಿ ಹಸ್ತಪುಟಾನಿಧ್ರುವಮಿತಿಸಂಭಾವನಾಂ ಜೃಂಭಯದ್ಭಿಸ್ಸಂಭೃತಮುಧಾಭಿರಂಭೋರುಹೈಃ ಕರಂಭಿತಾ, ಸಂಭೋಗಸಮಯಜೃಂಭಮಾಣಗಾಢಪರಿರಂಭಸಂಭವಂ ವರಟಾನಾಂಶ್ರಮಂ ಶಮಯಿತುಮುತ್ಕಂಠಮಾನ್ಸೈರಪಿ ಯದಿತುಪಕ್ಷವ್ಯಜನಪಿಂಜನೈರ್ನತನುಮಪಿಪವನಮುತ್ಪಾದಯೇಮತದಾತದುಪಚಿತವೀಚಿಕಾಪನೋದನನಿಬಂಧನಂ ಪ್ರಿಯತಮಾಸಮಾಗಮಪ್ರತ್ಯೂಹವಿಷಾದಮಾಸಾದಯೇಮಯದಿತುತಮನಿಲಂ ನಜನಯೇಮತದಾಸುರತಮೃದಿತದಯಿತತ ಮಾಶ್ರಮಾಪನಯನಾಕರಣಾದಕೃತಾರ್ಥತಾಮನುಭವೇಮೇತಿರತಿವಿರತಿವೇಲಾಯಾಂದೋಲಾಯಮಾನಮಾನಸೈರ್ಮಾನಸೌಕೋಯುವಭಿರಭಿಶೋಭಮಾನಾ, ಆಮಧ್ಯಾಹ್ನಸಂಚಾರಶ್ರಮೇಣ ಮಧ್ಯೇಸಲಿಲಮವತೀರ್ಣವತೀನಾಂ ವಿದ್ಯಾಧರಯುವತೀನಾಂ ಚಿಕುರನಿಕುರಂಬೇಷುಶೈವಾಲಜಾಲತೋಪಲಂಭಸ್ಯಸುಂದರ

ಮಂದಹಾಸಸದನೇಷುವದನೇಷುವಿಕಸದಮುಲಕಮುಲವ್ಯಾಮೋಹಸ್ಯಕಿ ಚಿಚ್ಚಂಚಲತಾಪಾತ್ರೇಷು ನೇತ್ರೇಷುಚಂಚೂರ್ಯಮಾಣ ಪೃಥುಲ ಶಫರಭ್ರಮಸ್ಯಮರಂದಸಖೇಷು ಶ್ರವಣಸುಖೇಷುರುಚಿರರಚನೇಷುವಚ ನೇಷುಮದಕಲಮರಾಳಗಳಗಳತ್ಕಲಕಲತಾಧ್ಯಾಸಸ್ಯ ಮುಕ್ತಾಮಂಜುಳ ಕಂಚುಳಿಕಾಸುಪರಸ್ಪರವಿಭಾಗಾನಭಿಜ್ಞಾಸುಘನಸ್ತನಕನಕಕಲಶೀಷ್ವ ದೃಢಾಲಿಂಗನಸುಖಿತರಥಾಂಗಮಿಥುನತಾರೋಪಸ್ಯಮಣಿಮೇಖಲಾಕಲಾ ಪೇಷುಸನ್ನಿಹಿತಶೇಷಸವಿಧಚರಪನ್ನಗವರಭ್ರಾಂತ್ಯೈಶ್ಚಗಂಭೀರೇಷು ನಾಭೀ ಬಿಲೇಷುರವ್ಯಾವರ್ತಬುದ್ಧೇಶ್ಚ ಜನಿನಾದನಾಕಲಿತಕುಸುಮ ಚಾಪಚಾಪ ಲತಯಾನಿರಂತರಚೀರಂತನ ಪುರುಷನಿಥಿಧ್ಯಾಸನೈರ್ಬದ್ಧಾಸನೈಃ ತಾಪಸಜನೈರಧ್ಯಾಸಿತತಟಪ್ರದೇಶಾ (೧) ಸಾರಸಂಗತಾಪಿವಿಸಾರಸಂಗತಾ (೨) ಕೂರ್ಮಿತಾಮುಪಗತಾಪಿಸೂರ್ಮಿತಾಮುಪಗತಾ (೩) ಬಹುಲಾ ಪಾಪ್ಯಪಾಪಾ(೪)ಮರಾಳ್ಯುಪಸೇವಿತಾಪ್ಯಮರಾಳ್ಯುಪಸೇವಿತಾ ಜನಯತಿನ ಯನಯೋರಮಂದಮಾನಂದಮನಂತಸರಸೀ ||

**ಪ್ರದ್ಯುಮ್ನಾನಂದ;**—ಇದು ನಾಟಕವೆಂದೂ, ಕಥಾನಾಯಕನು ಶ್ರೀಕೃಷ್ಣ ನಮಗ ಪ್ರದ್ಯುಮ್ನನೆಂದೂ, ವೀರಶೃಂಗಾರರಸಾತ್ಮಕವೆಂದೂ, ಸರಸವಾಗಿರುವು ದೆಂದೂ ಹೇಳಿದೆ. ಗ್ರಂಥವು ಉಪಲಬ್ಧವಿಲ್ಲ.

ಲಕ್ಷ್ಮೀಸಹಸ್ರಂ :—ಇದು ಲಕ್ಷ್ಮೀಗುಣಾವಯವಸೌಂದರ್ಯಮಹಿಮಾನು ವರ್ಣನಗ್ರಂಥ.

---

## ಮ ಹಾ ದೇ ವ

"ಕೌಂಡಿನ್ಯವಂಶಸಂಭವೋ ಮಹಾಕವಿಃ ಶ್ರೀಮಹಾದೇವೋ ದಕ್ಷಿಣೇನ ಕಾವೇರೀತೀರ ಮೈರಾವತಾರಾಧಿತಸ್ಯಕಾಮಿನೀವಾಮಭಾಗಸ್ಯ ಭಾಗವತೋ ಮಹೇ ಶಸ್ಯ ಸಂನಿಧೌವರ್ತಮಾನೇ ಪಲಮಾರನೇರಿನಾಮನಿಗ್ರಾಮ ಆಸೀತ್ ಎಂಬುದರಿಂದ ಇವನು ಬ್ರಾಹ್ಮಣನು, ದಾಕ್ಷಿಣಾತ್ಯನು, ಕೌಂಡಿನ್ಯಗೋತ್ರದವನು, ಬಾಲಕೃಷ್ಣ ಗುರುವಿನ ಶಿಷ್ಯನು ಕಾವೇರೀತೀರದಲ್ಲಿರುವ ಪಲಮಾರನೇರಿಗ್ರಾಮದವನು. ಎಂಬದು ಸ್ಪಷ್ಟಪಡುತ್ತದೆ.

**ಕಾಲ:**—ಇವನು ನೀಲಕಂಠದೀಕ್ಷಿತನ ಸಮಕಾಲೀನನು. ಕ್ರಿ. ಶ. ೧೭ನೆಯ ಶತಮಾನದವನು.

**ಗ್ರಂಥ:**—ಇವನು 'ಅದ್ಭುತದರ್ಪಣ' ಎಂಬ ನಾಟಕವನ್ನು ಬರೆದಿರುವನು. ಇದರಲ್ಲಿ ಹತ್ತು ಅಂಕಗಳಿರುವುವು. ರೂಪಕಭೇದವಾದ ಪ್ರಕರಣ ಜಾತಿಗೆ ಸೇರಿದದು. ಸೀತಾನ್ವೇಷಣಕ್ಕಾಗಿ ಲಂಕೆಗೆಹೋಗಿದ್ದ ಆಂಜನೇಯನು ಬಂದನಂತರ ರಾಮನು ಯುದ್ಧನಡೆಯಿಸಿದ ವಿಚಾರವೇ ಇದರ ಕಥಾವಸ್ತು. ರಚನೆಯು ಸಾಧಾರಣ. ವಿಷಯವು ಅದ್ಭುತವಾಗಿರುವಂತೆ ಹೇಳಿ ಪಾತ್ರಗಳ ವೇಷಾಂತರ ರೂಪಾಂತರ ನಾಮಾಂತರಗಳಿಂದ ಕೂಡಿ ಅದ್ಭುತದರ್ಪಣವೆಂಬ ಹೆಸರನ್ನು ಸಾರ್ಥಕಮಾಡುವುದಾಗಿದೆ.

---

## ಚಕ್ರಕವಿ

ಇವನ ತಂದೆಯ ಹೆಸರು ಲೋಕನಾಥಸ್ಸುಧೀ. ತಾಯಿ ಹೆಸರು ಅಂಬಾ ಎಂದು. ಈ ವಿಚಾರವು:—

ಯಂ ಸೂನುಂ ಜನಯಾಂಬಭೂವ ಸಹಿತಃ **ಶ್ರೀಲೋಕನಾಥಸ್ಸುಧೀಃ**
ಖ್ಯಾತಂ **ಚಕ್ರಕವಿಂ** ಸತೀಃ ಸಮುದಯ ಸಂಮಾನಿ **ತಾಂಬಾ**ಭಿದಾ ||

ಎಂಬುದರಿಂದ ವ್ಯಕ್ತವಾಗುತ್ತದೆ.

**ಕಾಲ:**—ಇವನು ದೀಕ್ಷಿತನೀಲಕಂಠನ ಸಮಕಾಲೀನನು ಎಂದರೆ ಕ್ರಿ. ಶ. ೧೭ನೆಯ ಶತಮಾನದವನು.

**ಗ್ರಂಥ**—ಇವನು:—

ರುಕ್ಮಿಣೀ ಜಾನಕೀಗೌರೀದ್ರೌಪದೀಪರಿಣೀತಯಃ
ಕೃತಯೋ ಯಸ್ಯ ತಸ್ಯೈಷಾ ಕೃತಿಶ್ಚಕ್ರಕವೇಃ ಶುಭಾ ||

ಎಂಬುದರಿಂದ ಇವನು ರುಕ್ಮಿಣೀಪರಿಣಯ, ಜಾನಕೀಪರಿಣಯ, ಪಾರ್ವತೀಪರಿಣಯ, ದ್ರೌಪದೀಪರಿಣಯ ಎಂಬ ನಾಲ್ಕು ಕಾವ್ಯಗಳನ್ನು ಬರೆದಿರುವನು. ಇದಲ್ಲದೆ ಚಿತ್ರರತ್ನಾಕರ ಎಂಬ ಶಬ್ದಾಲಂಕಾರ ವಿಚಾರಗ್ರಂಥವನ್ನೂ ಬರೆದಿರುವುದಾಗಿಹೇಳಿದೆ. ಇವನ ಕಾವ್ಯವು ಲಲಿತವೂ, ಭಾವಯುಕ್ತವೂ, ಸುಲಭವೂ, ಹೃದಯಂಗಮವಾಗಿರುವುದು.

**ಜಾನಕೀಪರಿಣಯ:**—ಇದು ೮ ಸರ್ಗಗಳುಳ್ಳಕಾವ್ಯ. ಹೆಸರಿಗೆ ತಕ್ಕಂತೆ ಸೀತಾಕಲ್ಯಾಣವನ್ನು ಹೇಳುವುದಾಗಿದೆ. ಉಳಿದ ಗ್ರಂಥಗಳು ದೊರೆಯವು,

ಇದರ ಕೆಲವು ಶ್ಲೋಕಗಳು:—

ಪ್ರಮುದಯಾ ಖಲು ಯಃ ಪ್ರಿಯದುರ್ಲಭೈಃ
ಸ್ಫುಟಮಪೂಜಿ ಯದಾ ಪದತಾಡನೈಃ

ಭುವಿ ತದಾಪ್ರಭೃತಿ ಪ್ರಮುದಾಂಚಿತಂ
ತರುಮಶೋಕ ಇತಿ ಪ್ರವದಂತಿ ತಂ ॥ ೬—೧೩

ತಮ್ಮ ತಮ್ಮ ಪ್ರಿಯವಲ್ಲಭರಿಗೂ ದೊರೆಯಲು ದುರ್ಲಭವಾದ ಪಾದತಾಡನದಿಂದ ಯಾವ ವೃಕ್ಷವು ಪೂಜಿಸಲ್ಪಟ್ಟಿದ್ದೋ ಅಂದಿನಿಂದ ಆ ವೃಕ್ಷವನ್ನು 'ಅಶೋಕ' ಎಂದು ಕರೆಯುತ್ತಾರೆ.

ರತಿಪತೇರಪಿ ವಿಸ್ಮಯಕಾರಿ ಯದ್
ವಿಟಜನೈರಪಿ ಯನ್ನ ವಿಚಾರಿತಂ
ಕವಿಗಿರಾಂ ಚ ನ ಯತ್ಖಲು ಗೋಚರ
ಸ್ತದುದಭೂದ್ ವನಿತಾಭಿಕಯೋ ರತಂ ॥ ೬—೬೪

ಕ್ರೀಡಾವಿಶೇಷಗಳಿಗೆ ಆಚಾರ್ಯನಾದ ಮನ್ಮಥನಿಗೂ ಯಾವುದು ಆಶ್ಚರ್ಯವನ್ನುಂಟುಮಾಡುವುದೋ, ಅನುಭವಿಸುವರಾದ ವಿಟಜನರಿಂದಲೂ ಯಾವುದು ವಿಮರ್ಶಾದೂರವೋ, ಕವಿಯ ವಾಙ್ಮಯಕ್ಕೆ ಯಾವುದು ಅಗೋಚರವೋ ಅಂತಹ ಕ್ರೀಡಾಕೌತುಕವು ಕಾಮುಕ ಕಾಮುಕಿಯರಿಗೋಸ್ಕರವೇ ಆದುದಾಗಿ ತಿಳಿಯಬೇಕು. ಎಂದರೆ ಕ್ರೀಡಾವಿಶೇಷವು ಅನುಭವವೇದ್ಯವೇ ಹೊರತು ಹೇಳಲಸದಳವೆಂದು ಅಭಿಪ್ರಾಯವು.

ವಿರಚಿತಾ ಇವ ಶರ್ಕರಯಾ ಸುಧಾ
ರಸಚಿರಸ್ನಪಿತಾ ಇವ ಸುಭ್ರುವಃ
ಅವಯವಾಃ ಸುರತೇ ಪರಿಚುಂಬಿತಾ
ವಿದಧಿರೇ ದಯಿತಸ್ಯ ನ ಸೌಹಿತೀಂ ॥ ೬—೬೯

ಶರ್ಕರೆಯಿಂದ ತಯಾರಿಸಿ ಅಮೃತರಸದಲ್ಲಿ ಮುಳುಗಿಸಿಡಲ್ಪಟ್ಟಂತಿರುವ ಸುಂದರಿಯರ ಮನೋಹರವಾದ ಸರ್ವಾವಯವಗಳು ರತಿವಿಶೇಷ ಸಮಯಗಳಲ್ಲಿ ವಲ್ಲಭನಿಂದ ಅನೇಕಸಲ ಅನುಭವಿಸಲ್ಪಟ್ಟವುಗಳಾದರೂ (ಇನ್ನೂ ಹೆಚ್ಚುಹೆಚ್ಚಾಗಿ ಅನುಭವಿಸಬೇಕೆನ್ನುವುದು ಹೊರತು) ತೃಪ್ತಿಯನ್ನುಂಟುಮಾಡುವುವಾಗಿರುವುದಿಲ್ಲ.

ಪದಂ ನ್ಯಧತ್ತಾಶ್ಮನಿ ಭಕ್ತಿರೇಖಾ
ವಿರಾಜಿತೇ ಕಾಂತಕರೋದ್ಧೃತಂ ಸಾ
ವಿಡಂಬಯಂತೀ ಕಮಲಾಂ ಮುರಾರೇ
ರುರಸ್ತಟಾರೋಹಣ ಮಾಚರಂತೀಂ ॥ ೭—೭೧

ಸೀತಾದೇವಿಯು ವಿವಾಹದದಿವಸ ಸಪ್ತಪದಿ ಸಮಯದಲ್ಲಿ ಶ್ರೀ ಮಹಾವಿಷ್ಣುವಿನ ಉರಃ ಪ್ರದೇಶಾರೋಹಣವನ್ನು ಆಚರಿಸುತ್ತಲಿರುವ (ಕಮಲೆ) ಲಕ್ಷ್ಮಿಯನ್ನು ಅನುಕರಿಸುವಳಾಗಿ ಪತಿಯ ಕೈಯಿಂದ ಹಿಡಿದುಕೊಳ್ಳಲ್ಪಟ್ಟ ಕಾಲನ್ನು 'ಭಕ್ತಿ' ಎಂಬ ರೇಖೆಗಳಿಂದ ರಾರಾಜಿಸುತ್ತಿರುವ ಕಲ್ಲಿನ ಮೇಲಿಟ್ಟಳು.